# ಹರಿಹರನ ರಗಳೆಗಳ ಸಾಹಿತ್ಯಕ ಅಧ್ಯಯನ

(ಸಂಶೋಧನಾ ಮಹಾಪ್ರಬಂಧ)

**ಡಾ. ಕೆ. ಪಿ. ಮಹಾದೇವಯ್ಯ**

**ಅಭಿರುಚಿ ಪ್ರಕಾಶನ**

ನಂ. 386, 14ನೇ ಮುಖ್ಯರಸ್ತೆ, ಸರಸ್ವತಿಪುರಂ,

ಮೈಸೂರು - 9

**HARIHARANA RAGALEGALA SAHITHYAKA ADHYAYANA**
- A Ph.D. Thesis in Kannada written by Dr. K.P. Mahadevaiah, Mysore
Published by Abhiruchi Prakashana, Fourteenth Main
Saraswathipuram, Mysore - 9, Ph. 340384. Pages : xii + 304



ಮೊದಲ ಮುದ್ರಣ : **1999**

ಸಾದಾ ಪ್ರತಿ ರೂ. **140 . 00**
ಕ್ಯಾಲಿಕೋ ಪ್ರತಿ ರೂ. **200 . 00**

ಮುಖಪುಟ ವಿನ್ಯಾಸ :
ರಫೀಕ್ ಉಪ್ಪಿನಂಗಡಿ

ಫೋಟೋ :
ಪ್ರಕಾಶ್ ಜುಗಾರಿ

ಮುದ್ರಣ :
ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
ಶಿವರಾಂಪೇಟೆ, ಮೈಸೂರು.

# ಅರ್ಪಣೆ

ವಿನಯ ಮತ್ತು ವಿದ್ವತ್ತಿನ ಸಾಗರ

**ಡಾ. ರಾಮೇಗೌಡ ಅವರಿಗೆ**

ಹೃತ್ಪೂರ್ವಕವಾಗಿ

# ಪ್ರಕಾಶಕನ ಮಾತು

ಶ್ರೀ ಕೆ.ಪಿ. ಮಹಾದೇವಯ್ಯನವರು ನನಗೆ "ಅಭಿರುಚಿ ಕನ್ನಡ ಪುಸ್ತಕ ಮಳಿಗೆ" ಪ್ರಾರಂಭವಾಗುವುದಕ್ಕಿಂತಲೂ ಮೊದಲಿನ ಪರಿಚಿತರು. ಅವರ ಜೀವನ ದೃಷ್ಟಿಕೋನ, ಆರೋಗ್ಯ ಪೂರ್ಣ ನಿಲುವು, ಸಂಯಮ, ವಿಸ್ತಾರವಾಗುವಂತಹ ಓದು ನನಗೆ ಮೆಚ್ಚುಗೆಯಾಗಿದೆ. ಸಂಶೋಧನೆಯ ಪ್ರಾರಂಭದ ಹಂತದಿಂದಲೂ ನಾನು ಅವರ ಸಂಶೋಧನಾ ವಿಷಯದ ಬಗ್ಗೆ ಆಸಕ್ತನಾಗಿದ್ದೆ. ಏಕೆಂದರೆ ಇವರು ಆರಿಸಿಕೊಂಡಿರುವ ವಿಷಯ ಭಕ್ತಿಪೂರಿತ ಹರಿಹರನ ರಗಳೆಗಳ ಬಗ್ಗೆ. ಮಹದೇವಯ್ಯನವರು ಮೊದಲೇ ನಾಸ್ತಿಕರು. ಅವರಿಗೂ ವಿಷಯಕ್ಕೂ ಎತ್ತಣಿಂದೆತ್ತ ಸಂಬಂಧ! ಅಂದರೆ ನಾಸ್ತಿಕರಾರೂ ಭಕ್ತಿ ಸಾಹಿತ್ಯ ಓದಬಾರದು, ಆ ಸಾಹಿತ್ಯದ ಬಗ್ಗೆ ವಿಚಾರ ಮಾಡಬಾರದು ಹಾಗೂ ಸಂಶೋಧನೆ ಮಾಡಬಾರದು ಎಂದೇನಲ್ಲ. ಯಾವುದೇ ಓದುಗನಿಗೂ ಅವರವರ ಮೆಚ್ಚಿನ ಸಾಹಿತ್ಯ ಪ್ರಕಾರ ಹಾಗೂ ವಿಷಯಗಳಿರುತ್ತವೆ. ಆದರೆ ಭಕ್ತಿ ಸಾಹಿತ್ಯವನ್ನು ಒಬ್ಬ ನಾಸ್ತಿಕ, ಭಕ್ತಿಯ ಒಂದು ಗರಿಯನ್ನು ಅಲುಗಾಡಿಸದೇ ಇದ್ದು ಭಕ್ತಿಯ ಬಗ್ಗೆ ಬರೆದಿರುವುದು ನನ್ನ ಆಸಕ್ತಿಗೆ ಕಾರಣ. ಜೊತೆಗೆ ಇವರ ನಿಬಂಧ ರಚನಾವಸ್ಥೆಯಲ್ಲಿರುವಾಗಲೇ ಹರಿಹರನ ಒಂದು ರಗಳೆಯಾದ "ಸಂಸಾರ ವ್ಯಾಮೋಹ ನಿರಸನ ರಗಳೆ"ಯ ವಿಶ್ಲೇಷಣೆಯನ್ನು ಓದಿ ಪುಲಕಿತನಾಗಿದ್ದೆ. ಅಲ್ಲದೆ ಸಾಹಿತ್ಯವನ್ನು ಸಾಹಿತ್ಯವಾಗಿಯೇ ಕಾಣುವುದು ಒಳಿತು, ಎಂಬುದನ್ನು ಸಂಶೋಧಕನಾಗಿ, ಸಾಹಿತ್ಯದ ವಿದ್ಯಾರ್ಥಿಯಾಗಿ ಇವರು ತೋರಿಸಿಕೊಟ್ಟಿದ್ದಾರೆ. ಇಂತಹ ನಿಬಂಧವೊಂದು ನಮ್ಮ ಪ್ರಕಾಶನದಿಂದ ಹೊರಬರುತ್ತಿರುವುದು ನನಗೆ ಹೆಮ್ಮೆ. ಈ ಕೃತಿ ಹೊರಬರುವಲ್ಲಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

೨ - ೧ - ೯೯
ಮೈಸೂರು.

ಗಣೇಶ್ ಅಭಿರುಚಿ
ಪ್ರಕಾಶಕ.

# ನನ್ನ ಮಾತು

ಸುಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಆಗ ನಾನಿನ್ನೂ ಹಳೆಂಟು ವರ್ಷದ ಹುಡುಗ. ದೈವಭಕ್ತರಾದ ನಮ್ಮ ತಂದೆ ಹಬ್ಬ - ಹರಿದಿನಗಳು ಬಂದಾಗಲೆಲ್ಲ ಶಿವಪೂಜಾ ಕಾರ್ಯಕ್ರಮವನ್ನು ಇಟ್ಟುಕೊಳ್ಳುತ್ತಿದ್ದರು. ಆ ದಿನಗಳಲ್ಲಿ ನಮಗೆಲ್ಲ ಸ್ನಾನ ಮಾಡಿಸಿ ಹಣೆಗೆ ವಿಭೂತಿ ಬಳಿದು ಶಿವನ ಫೋಟೋ ಎದುರು ಕೈ ಮುಗಿದು ನಿಲ್ಲಿಸಿ ಪೂಜಾ ನಿರತರಾಗುತ್ತಿದ್ದರು. ಪೂಜೆಯ ಮುಕ್ತಾಯದಲ್ಲಿ ಶಿವನ ಸ್ತೋತ್ರಗೀತೆಯೊಂದನ್ನು ಹಾಡುತ್ತಿದ್ದರು. ಅವರ ಜೊತೆಗೆ ನಾವೂ ಹಾಡುತ್ತಿದ್ದೆವು.

ಇದಿಷ್ಟನ್ನು ಬಿಟ್ಟರೆ ನಾನು ಪೂಜೆಯಲ್ಲಿ ನಿರತನಾದ ಇನ್ನಾವ ಸಂದರ್ಭವೂ ಗೊತ್ತಿಲ್ಲ. ಭೂಮಿಯ ಸತ್ಯಗಳ ಅರಿವಾದಂತೆ ಭಕ್ತಿ ಮಾಯವಾಗಿದೆ. ಅದೀಗ ಅಪ್ರಸ್ತುತವೆನಿಸಿದೆ. ಭಕ್ತರ ಮಂದೆಯನ್ನು ಕಂಡಾಗ ನನ್ನಲ್ಲಿ ಅವರ ಬಗ್ಗೆ ಕನಿಕರ ಹುಟ್ಟುತ್ತದೆ. ಭೌತಿಕ ನೆಲೆಯಲ್ಲಿ ಈ ಭಕ್ತಿ ನನ್ನ ನಿರಾಕರಣೆಗೆ ಒಳಗಾಗಿದ್ದರೂ ಸಾಹಿತ್ಯಕ ನೆಲೆಯಲ್ಲಿ ಮಾತ್ರ ಇದು ನನ್ನಲ್ಲಿ ಕುತೂಹಲವನ್ನು ಹುಟ್ಟಿಸುತ್ತದೆ. ಎಷ್ಟೋ ವೇಳೆ ಅದರೊಳಗೆ ನಾನೂ ಸೇರಿಬಿಡುತ್ತೇನೆ. ಈ ಕುತೂಹಲವೇ ಪ್ರಬಂಧದ ಒಡಲು.

ಪ್ರಬಂಧದ ರಚನೆಯ ಸಂದರ್ಭದಲ್ಲಿ ಸಹಕಾರ ನೀಡಿದ ಕೆಲವರನ್ನು ನೆನೆಯುವುದು ನನಗೆ ಸಂತೋಷ, ಕರ್ತವ್ಯ ಕೂಡ. ಅವರಲ್ಲಿ ಮೊದಲಿಗೆ ಮಾರ್ಗದರ್ಶಕರಾದ ಡಾ. ರಾಮೇಗೌಡರ ನಲ್ಮೆ ತುಂಬಿದ ಮಾರ್ಗದರ್ಶನವನ್ನು ನಾನೆಂದೂ ಮರೆಯುವುದಿಲ್ಲ. ಆ ನಲ್ಮೆಯ ನೆನಪಿಗಾಗಿ ಪುಸ್ತಕವನ್ನು ಅವರಿಗೇ ಅರ್ಪಿಸುವ ಮೂಲಕ ಕೃತಾರ್ಥವಾಗಬಯಸುತ್ತೇನೆ.

ನನ್ನ ಪ್ರಬಂಧ ಪುಸ್ತಕ ರೂಪವಾಗಿ ಹೊರಬರಲು ಬಹುಮುಖ್ಯ ಕಾರಣ ತಿರುಪತಿ ತಿರುಮಲ ದೇವಸ್ಥಾನದವರು. ಅವರು 20,000 ರೂಪಾಯಿಗಳನ್ನು ಧನಸಹಾಯ ನೀಡಿದ್ದಾರೆ -

ಪುಸ್ತಕಕ್ಕೆ ಧನಸಹಾಯ ಮಾಡಿದವರಲ್ಲಿ ಮಂಡ್ಯದ ಹೆಸರಾಂತ ಉದ್ಯಮಿ ಶ್ರೀ ಸುರೇಶ್ ಬಾಬು ಅವರೂ ಒಬ್ಬರು. ಅವರ ಪರಿಚಯ ನನಗೆ ಇಂದಿಗೂ ಇಲ್ಲ. ಆದರೆ ಪರೋಕ್ಷವಾಗಿ ನನ್ನ ಬಗ್ಗೆ ತಿಳಿದು ತಾವಾಗಿಯೇ ಸಹಾಯ ಮಾಡಿದ್ದಾರೆ. ಇದಕ್ಕೆ ಕಾರಣಕರ್ತರು ಗೆಳತಿ ಉಷಾರಾಣಿ ಮತ್ತು ಅವರ ತಂದೆ ರೈತ ಸಂಘದ ಶ್ರೀ ಗೋವಿಂದೇಗೌಡ ಅವರು -

ಬರವಣಿಗೆಯ ಜೊತೆಗೆ ಬದುಕಿನ ಸಂದರ್ಭದಲ್ಲೂ ಬೆರೆತು ನಾನು ಹೆಚ್ಚು ಕ್ರಿಯಾಶೀಲನಾಗಿರಲು ಕಾರಣರಾದವರಲ್ಲಿ ಡಾ. ಸಿ. ಪಿ. ಸಿದ್ಧಾಶ್ರಮ, ಡಾ. ಟಿ. ಮಣಿಯನ್, ಡಿ. ಸಿ. ಎಸ್. ರಾಮಚಂದ್ರ, ಶ್ರೀಮತಿ ಜಯಂತಿ ರಾಮಚಂದ್ರ, ಶ್ರೀಮತಿ ಎಂ. ಪುಷ್ಪಾವತಿ, ಡಾ. ವಾಸುದೇವಮೂರ್ತಿ, ಪಿ. ಈಶ್ವರ, ಡಾ. ಎನ್.ಕೆ. ಕೋದಂಡರಾಮ, ಡಾ. ಪ್ರಶಾಂತ್

ನಾಯಕ್, ಸಿ. ಲಿಂಗಯ್ಯ, ಎಸ್. ರೇವಣ್ಣ, ಮಲ್ಲಿಕಾರ್ಜುನಸ್ವಾಮಿ, ಎನ್. ರಮೇಶ್ ಕುಮಾರ್, ಪಿ. ಮಹದೇವಸ್ವಾಮಿ. ಎಚ್.ಆರ್. ತಿಮ್ಮೇಗೌಡ, ರಾಚಯ್ಯ, ಡಿ. ಉಮೇಶ್ ಅವರು ಮುಖ್ಯವಾಗಿದ್ದಾರೆ -

ಈ ಕೃತಿ ಪ್ರಕಟವಾಗಲು ಅಭಿರುಚಿ ಪ್ರಕಾಶನದವರು ಪ್ರಾರಂಭದಿಂದಲೂ ಆಸಕ್ತಿ ವಹಿಸಿ ಕೆಲಸ ಮಾಡಿದ್ದಾರೆ -

ಶ್ರೀ ರಾಜೇಂದ್ರ ಪ್ರಿಂಟರ್ಸ್‌ನ ಮಾಲಿಕರಾದ ಶ್ರೀ ಡಿ. ಎನ್. ಲೋಕಪ್ಪ ಅವರು ತಾಳ್ಮೆ ವಹಿಸಿ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ -

ಪ್ರಕಟಣಾಪೂರ್ವ ಬೆಲೆ ನೀಡಿ ಸಹಾಯ ಮಾಡಿದ ಪ್ರೀತಿಯ ಗೆಳೆಯರಿದ್ದಾರೆ -

ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಮೂಲ್ಯ ಸಹಕಾರ ನೀಡಿದ ಇವರೆಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ನನ್ನ ಹಿತವನ್ನು ಬಯಸುವ ಹತ್ತಿರದ ಮತ್ತು ದೂರದ ಒಡನಾಡಿಗಳು ಹಾಗೂ ನನ್ನ ಬದುಕಿನ ಸುಖ ದುಃಖಗಳ ಜೊತೆ ಸೇರಿ ಬದುಕನ್ನು ರೂಪಿಸುತ್ತಿರುವ ಪ್ರೀತಿಯ ಹೆಂಡತಿ ಡಾ. ಎಸ್. ಇಂದಿರಮ್ಮ ಅವರನ್ನೂ ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುತ್ತೇನೆ.

ಪ್ರಬಂಧದಲ್ಲಿ ಅಕ್ಷರದೋಷ ಇರದಂತೆ ನೋಡಿಕೊಳ್ಳಬೇಕು ಎಂಬುದು ನನ್ನ ಪ್ರಾರಂಭಿಕ ಎಚ್ಚರಿಕೆ ಆಗಿತ್ತು. ಹಾಗಿದ್ದೂ ಅಲ್ಲಲ್ಲಿ ಅಕ್ಷರದೋಷಗಳು ಕಂಡುಬಂದಿವೆ. ಇವುಗಳನ್ನು ಮನ್ನಿಸುವಿರೆಂದು ಭಾವಿಸಿದ್ದೇನೆ.

ಜನವರಿ 1999

ಡಾ. ಕೆ.ಪಿ. ಮಹಾದೇವಯ್ಯ
ಮೈಸೂರು.

# ಪರಿವಿಡಿ

# ಅಭಿಪ್ರಾಯಗಳು

## ಡಾ. ರಾಮೇಗೌಡ

ಇಲ್ಲಿಯ ಬರವಣಿಗೆ ಸಂಶೋಧನೆ ಮತ್ತು ವಿಮರ್ಶೆಯ ಪ್ರವೃತ್ತಿಗಳೆರಡನ್ನೂ ಅಳವಡಿಸಿಕೊಂಡಿರುವಂಥದ್ದು, ಸಾಮಗ್ರಿ ಸಂಗ್ರಹ, ಮಾಹಿತಿ ಅಭ್ಯಾಸ ಮತ್ತು ಸಂಯೋಜನೆಯ ಕ್ರಮದಲ್ಲಿ ಸಂಶೋಧನೆಯ ಶಾಸ್ತ್ರೀಯತೆಯನ್ನೂ, ಅದರ ಸಾಹಿತ್ಯಕ ಮೌಲ್ಯೀಕರಣದಲ್ಲಿ ವಿಮರ್ಶೆಯ ಶಿಸ್ತನ್ನೂ ಕಾಣಬಹುದು. ನಿಬಂಧದ ರಚನೆ, ಗ್ರಹಿಕೆ ಮತ್ತು ನಿರೂಪಣೆಗಳು ಚೇತೋಹಾರಿಯಾಗಿವೆ. ಪ್ರಾಮಾಣಿಕ ಅನಿಸಿಕೆ ಮತ್ತು ಸ್ವಾಗತಾರ್ಹ ಅಭಿರುಚಿಗಳಿಂದ ಸಿದ್ಧಪಡಿಸಿರುವ ಪ್ರಸ್ತುತ ನಿಬಂಧ ಒಂದು ಉಪಾದೇಯ ಕೃತಿಯಾಗಿದೆ.

## ಡಾ. ವೀರಣ್ಣ ರಾಜೂರ

ವಿಷಯದ ಆಯ್ಕೆಯಲ್ಲಿ ಸಮಗ್ರತೆ, ವರ್ಗೀಕರಣದಲ್ಲಿ ಶಿಸ್ತು, ವಿವೇಚನೆಯಲ್ಲಿ ವಸ್ತುನಿಷ್ಠತೆ, ನಿರೂಪಣೆಯಲ್ಲಿ ಪರಿಣಾಮರಮ್ಯತೆ ಮೊದಲಾದ ಗುಣಗಳು ಸಮಷ್ಟಿಗೊಂಡು ಇದೊಂದು ಉತ್ತಮ ಪ್ರಬಂಧವೆನಿಸಿದೆ. ಸಂಶೋಧಕರ ಶ್ರದ್ಧೆ, ಸಂಯಮಗಳು ಪ್ರಬಂಧದುದ್ದಕ್ಕೂ ಎದ್ದು ಕಾಣುತ್ತವೆ. ಸಂಶೋಧನೆಯ ಎಲ್ಲ ಶಿಸ್ತುಗಳನ್ನು ಅಳವಡಿಸಿಕೊಂಡಿರುವ ಈ ಪ್ರಬಂಧ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಒಂದು ಮಹತ್ತರ ಕೊಡುಗೆ.

## ಡಾ. ಎಸ್. ವಿದ್ಯಾಶಂಕರ

ಈ ನಿಬಂಧದಲ್ಲಿ ವಿಶಿಷ್ಟ ಗುಣವೆಂದರೆ, ಹರಿಹರನ ಕುರಿತ ಶ್ರದ್ಧಾಪೂರ್ಣ ಅಧ್ಯಯನ. ಈಗಾಗಲೇ ವಿದ್ವಾಂಸರು ಹರಿಹರನ ಕೃತಿಗಳ ಬಗೆಗೆ ಹೇಳಿರುವ ವಿಶಿಷ್ಟಾಂಶಗಳನ್ನು ಹೆಕ್ಕಿಕೊಂಡು ವ್ಯವಸ್ಥಿತವಾಗಿ ಅಧ್ಯಯನ ಮಾಡಿರುವುದು ಮೆಚ್ಚಬಹುದಾದ ಅಂಶ. ವಿಷಯಗಳು ಚರ್ವಿತ ಚರ್ವಣವಾಗದಂತೆ ಎಚ್ಚರವಹಿಸಿರುವುದು, ಹರಿಹರನ ಕಾಲದೇಶ, ರಗಳೆಗಳ ಸಂಖ್ಯೆ ಇತ್ಯಾದಿಗಳು ಪುನರಾವರ್ತನೆಯಾಗದಂತೆ ನೋಡಿಕೊಂಡಿರುವುದು ಶ್ಲಾಘನೀಯ.

1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ನಾಡಿನ ಇತಿಹಾಸದ ಪುಟಗಳನ್ನು ತಿರುವಿದರೆ ಅನೇಕ ಸಂತರು, ಕವಿಗಳು, ರಾಜ ಮಹಾರಾಜರು, ಸಾಧಕರು, ಸುಧಾರಕರು, ಕಲಾವಿದರು, ವೀರರು, ವೀರಾಗ್ರಣಿಯರು ಕಂಡು ಬರುತ್ತಾರೆ. ಇವರು ತಮ್ಮ ಕ್ಷೇತ್ರಗಳಲ್ಲಿ ಅತ್ಯಂತ ನಿಷ್ಠೆಯಿಂದ ದುಡಿದು ನಾಡಿಗಾಗಿ ತಮ್ಮನ್ನೇ ಅರ್ಪಿಸಿಕೊಳ್ಳಲು ಸಿದ್ಧವಾಗಿದ್ದವರು. ಕನ್ನಡ ನಾಡು ಇಂದು ಸುಂದರ ನಾಡಾಗಿ ಉಳಿಯಲು ಇವರ ನಿಸ್ವಾರ್ಥ ಸೇವೆಯೇ ಕಾರಣ. ಇವರೇ ಕನ್ನಡ ನಾಡಿನ ನಿಜವಾದ ಆಸ್ತಿ. ಇಂಥವರ ಸಾಲಿನಲ್ಲಿ ಕನ್ನಡದ ಅಗ್ರಗಣ್ಯ ಕವಿಗಳಲ್ಲಿ ಒಬ್ಬನಾದ ಹರಿಹರನೂ ಇದ್ದಾನೆ ಎಂದರೆ ಅಚ್ಚರಿ ಪಡಬೇಕಿಲ್ಲ.

ಹರಿಹರ ಹನ್ನೆರಡನೆ ಶತಮಾನದ ಧಾರ್ಮಿಕ ಕ್ರಾಂತಿಯೊಂದರ ಮೆಕ್ಕಲು ಭೂಮಿಯ ಮೇಲೆ ಬೆಳೆದ ಮಹಾವೃಕ್ಷ. ಇವನ ಕಾಲ ಕ್ರಿ.ಶ. 1180 ರಿಂದ ಕ್ರಿ.ಶ. 1220. ವಚನಕಾರರ ಕಾಲಕ್ಕೆ ಹತ್ತಿರದಲ್ಲಿ ಬದುಕಿದ್ದ ಇವನು ಶಿವನ ಪರಮ ಭಕ್ತ. ಭಕ್ತನಾದರೂ ದಿಟ್ಟ ಕ್ರಾಂತಿಕಾರಿ ಮನೋಧರ್ಮವನ್ನು ಹೊಂದಿದವನಾಗಿದ್ದನು. ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ವೀರಶೈವ ಸಾಹಿತ್ಯಕ್ಕೆ ಇವನ ಕೊಡುಗೆ ಅಪಾರ. ಹಲವು ಪ್ರಕಾರಗಳ ಕೃತಿಗಳನ್ನು ರಚಿಸಿದ್ದಾನೆ. ಅವನು ಗಿರಿಜಾ ಕಲ್ಯಾಣ, ಮುಡಿಗೆಯ ಅಷ್ಟಕ, ಪಂಪಾಶತಕ, ರಕ್ಷಾಶತಕ ಮತ್ತು ಅಪಾರ ಸಂಖ್ಯೆಯ ರಗಳೆಗಳನ್ನು ಬರೆದಿರುವುದಲ್ಲದೆ, ಶಿವಸ್ತೋತ್ರಗಳಿಗಷ್ಟೇ ಮೀಸಲಾಗಿರುವ ಅಕ್ಷರಾಂತ್ಯ ಗದ್ಯ ಎಂಬ ಕೃತಿಯನ್ನು ರಚಿಸಿರುವಂತೆ ತಿಳಿದುಬಂದಿದೆ. ಗಿರಿಜಾಕಲ್ಯಾಣ 'ಚಂಪೂ' ರೂಪದಲ್ಲಿ ರಚನೆಯಾಗಿದ್ದರೆ, ಮುಡಿಗೆಯ ಅಷ್ಟಕ 'ಅಷ್ಟಕ' ರೂಪದಲ್ಲಿ ರಚನೆಯಾಗಿದೆ. ಪಂಪಾಶತಕ ಹಾಗೂ ರಕ್ಷಾಶತಕಗಳು 'ಶತಕ' ರೂಪದಲ್ಲಿ ರಚನೆಯಾಗಿವೆ.

ಮೇಲಿನ ಈ ಎಲ್ಲ ಕೃತಿಗಳಲ್ಲಿ ಹರಿಹರನಿಗೆ ಹೆಚ್ಚು ಮಾನ್ಯತೆಯನ್ನು ಹಾಗೂ ಒಂದು ಐಡೆಂಟಿಟಿಯನ್ನು ತಂದುಕೊಟ್ಟ ಕೃತಿಗಳೆಂದರೆ 'ರಗಳೆ' ಮಾದರಿಯನ್ನು ಅನುಸರಿಸಿ ಬರೆದ ಕೃತಿಗಳು. ಇವು ಹರಿಹರ ಕವಿಯನ್ನು ಯುಗಪುರುಷನ ಮಟ್ಟಕ್ಕೆ ಏರಿಸಿವೆ. ಹೀಗೆ ಹರಿಹರನಿಗೆ ಅಪಾರ ಕೀರ್ತಿಯನ್ನು ತಂದುಕೊಟ್ಟ ಈ ರಗಳೆ ಕೃತಿಗಳೇ ಪ್ರಸ್ತುತ ನಿಬಂಧದ ವಿಷಯವಾಗಿದೆ.

ಈಗಿನ ಸಂದರ್ಭದಲ್ಲಿ 'ರಗಳೆ' ಎಂದರೆ ಗಲಾಟೆ ಎಂಬ ಕೀಳು ಅರ್ಥ ಇದೆ. ಆದರೆ ಈ ಅರ್ಥ ಕಾವ್ಯದ ಸಂದರ್ಭದಲ್ಲಿ ಬರುವುದಿಲ್ಲ. ಕಾವ್ಯ ಸಂದರ್ಭದಲ್ಲಿ 'ರಗಳೆ' ಎಂದರೆ ಹಾಡುವ ಒಂದು ಮಟ್ಟು ಎಂದಾಗುತ್ತದೆ. ಹೀಗೆ ಹಾಡುವ ಪದ್ಧತಿ ಹರಿಹರನಿಗೂ ಮೊದಲೇ ಕನ್ನಡ ಕಾವ್ಯಗಳಲ್ಲಿ ಬಳಕೆಯಲ್ಲಿತ್ತು. ಆದರೆ ಅದರ ಉಪಯೋಗವನ್ನರಿತು ಬಳಸುವವರಿಲ್ಲದೆ, ಇದ್ದೂ ಇಲ್ಲದ ಸ್ಥಿತಿಯಲ್ಲಿತ್ತು. ಹೀಗೆ ಇದ್ದೂ ಇಲ್ಲದ ಸ್ಥಿತಿಯಲ್ಲಿದ್ದ ರಗಳೆಯ ಮಹತ್ವವನ್ನು ಮೊದಲಿಗೆ ಕಂಡುಕೊಂಡವನು ಹರಿಹರ. ಹಾಗೆ ಕಂಡುಕೊಂಡು ಹಲವು ಕೃತಿಗಳನ್ನು ರಗಳೆಯಲ್ಲಿ ರಚಿಸಿದ್ದಾನೆ. ಹಾಗಾಗಿ ರಗಳೆಗಳಿಗೆ ಸಂದ ಗೌರವ ಎಂದರೆ ಹರಿಹರನಿಗೆ ಸಂದ ಗೌರವವೇ ಆಗುತ್ತದೆ.

ರಗಳೆಗಳನ್ನು ಕುರಿತಂತೆ ಹಲವಾರು ವಿದ್ವಾಂಸರು ಕೆಲಸ ಮಾಡಿದ್ದಾರೆ, ಮಾಡುತ್ತಲೇ ಇದ್ದಾರೆ. ಹಿರೇಮಲ್ಲೂರ ಈಶ್ವರನ್ ಅವರು 'ಹರಿಹರನ ರಗಳೆಗಳು : ಒಂದು ಸಂಖ್ಯಾ ನಿರ್ಣಯ' ಎಂಬ ಬೃಹತ್ ಕೃತಿಯನ್ನು ರಚಿಸಿದ್ದಾರೆ. ಇದು ಅವರ ಸಂಶೋಧನಾ ಮಹಾ ಪ್ರಬಂಧವೂ ಆಗಿದೆ. ಹರಿಹರನ ರಗಳೆಗಳು ಎಷ್ಟು ಎಂಬುದು ಬಹಳ ಹಿಂದಿನಿಂದಲೂ ಇರುವ ಸಮಸ್ಯೆ. ದೇವೀರಪ್ಪ. ಎಚ್. ಅವರು ಅರವತ್ತೊಂದು ರಗಳೆಗಳನ್ನಷ್ಟೆ ಹರಿಹರನವು ಎಂದು ಒಪ್ಪಿದರೆ, ಡಿ.ಎಲ್.ಎನ್ ಅವರು ತೊಂಬತ್ತೊಂದು ರಗಳೆಗಳನ್ನು ಮಾತ್ರ ಒಪ್ಪಿದ್ದಾರೆ. ಆದರೆ ಇದನ್ನೇ ಖಚಿತ ಎಂದು ನಂಬುವುದು ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಮಹತ್ವದ ಕೆಲಸ ಮಾಡಿರುವ ಹಿರೇಮಲ್ಲೂರ ಈಶ್ವರನ್ ಅವರು ಆಧಾರ ಸಹಿತ ಸುಮಾರು ನೂರ ಆರು ರಗಳೆಗಳು ಹರಿಹರನವು ಎಂದು ತೀರ್ಮಾನಿಸಿದ್ದಾರೆ. ಹಾಗೆ ತೀರ್ಮಾನಿಸುವ ಸಂದರ್ಭದಲ್ಲಿ ಈಶ್ವರನ್ ಅವರು ಹರಿಹರನ ರಗಳೆಗಳಲ್ಲಿ ಬರುವಂಥ ಸಾಹಿತ್ಯಕ ವಿಚಾರಗಳನ್ನೂ ಆಧಾರವಾಗಿಟ್ಟು ಕೊಂಡಿದ್ದಾರೆ. ಆದರೂ ಇದೇ ಖಚಿತ ಎನ್ನುವಂತಿಲ್ಲ. 'ಹರಿಹರನ ಕೃತಿಗಳಲ್ಲಿ ಸ್ತ್ರೀಪಾತ್ರ ದರ್ಶನ' ಎಂಬ ಈ ಕೃತಿಯಲ್ಲಿ ಜವಳಿಯವರು ಹರಿಹರನ ಒಟ್ಟು ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಸ್ತ್ರೀಯರನ್ನು ಮುಖ್ಯವಾಗಿಟ್ಟುಕೊಂಡು, ಆ ಪಾತ್ರಗಳ ಮಹತ್ವವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಆ ಸಂದರ್ಭದಲ್ಲಿ ಸಾಹಿತ್ಯಕ ಅಂಶಗಳ ಕಡೆ ಬೆಳಕು ಚೆಲ್ಲುವ ಕೆಲಸ ಮಾಡಿದ್ದಾರೆ. ಇವರ ನಂತರ ಹರಿಹರನ ಕೃತಿಗಳ ಬಗೆಗೆ ಕೆಲಸ ಮಾಡಿರುವವರಲ್ಲಿ ಎಸ್. ವಿದ್ಯಾಶಂಕರ ಅವರು ಮುಖ್ಯರಾಗುತ್ತಾರೆ. ಇವರು 'ನಂಬಿಯಣ್ಣನ ರಗಳೆ : ಒಂದು ಅಧ್ಯಯನ' ಎಂಬ ಅಮೂಲ್ಯ ಗ್ರಂಥವೊಂದನ್ನು ರಚಿಸಿದ್ದಾರೆ. ಇದರಲ್ಲಿ ನಂಬಿಯಣ್ಣನ ಕಥೆ ಬೇರೆ ಬೇರೆ ಭಾಷೆಗಳಲ್ಲಿ ಹೇಗೆ ರಚನೆಯಾಗಿದೆ ಮತ್ತು ಆ ಕಥೆಗಳಿಗೂ ಹರಿಹರನ ಕೃತಿಗೂ ಇರುವ ವ್ಯತ್ಯಾಸಗಳೇನು ಎಂಬುದನ್ನು ಸೋದಾಹರಣವಾಗಿ ಚರ್ಚಿಸಿದ್ದಾರೆ. ಇದೇ ರಗಳೆಯನ್ನು ಕುರಿತಂತೆ ಎನ್. ಎಸ್. ತಾರಾನಾಥ ಅವರೂ ಒಂದು ಕೃತಿಯನ್ನು ರಚಿಸಿರು ವಂತೆ ತಿಳಿದುಬಂದಿದೆ. ಆದರೆ ಅದು ಇನ್ನೂ ಪ್ರಕಟವಾಗಿಲ್ಲ. ಈ ಪ್ರಮುಖ ವಿದ್ವಾಂಸರು ಗಳನ್ನು ಬಿಟ್ಟರೆ ಪ್ರಸ್ತಾವನೆ, ಲೇಖನ, ಸಂಗ್ರಹಗಳ ರೂಪದಲ್ಲಿ ಹರಿಹರನ ರಗಳೆಗಳನ್ನು ಕುರಿತಂತೆ ಅಧ್ಯಯನ ಮಾಡಿದ ಇನ್ನೂ ಹಲವು ವಿದ್ವಾಂಸರಿದ್ದಾರೆ. ಅವರಲ್ಲಿ ಡಿ. ಎಲ್. ನರಸಿಂಹಾಚಾರ್, ಟಿ. ಎಸ್. ವೆಂಕಣ್ಣಯ್ಯ, ಎಚ್. ದೇವೀರಪ್ಪ, ಎಂ. ಎಸ್. ಸುಂಕಾಪುರ, ಆರ್. ಸಿ. ಹಿರೇಮಠ, ಬಸವಾರಾಧ್ಯ ಮುಂತಾದವರನ್ನು ಮುಖ್ಯವಾಗಿ ಹೆಸರಿಸಬಹುದು.

ಸಾಹಿತ್ಯಕ ದೃಷ್ಟಿಯಿಂದ ಹರಿಹರನ ರಗಳೆಗಳು ತುಂಬ ಮಹತ್ವದವು. ಇವುಗಳನ್ನು ಕೇಂದ್ರವಾಗಿಟ್ಟುಕೊಂಡು ಹರಿಹರನಿಗೂ ವಚನಕಾರರಿಗೂ ಇರುವ ಸಾಮ್ಯ, ಅವರಿಂದ ಪಡೆದ ಪ್ರೇರಣೆ, ಕಾವ್ಯದ ಶೈಲಿ, ರಗಳೆಗಳ ಸೀಮಿತ ಚೌಕಟ್ಟು, ಬಗೆ ಬಗೆಯ ವರ್ಣನೆ, ಅಲಂಕಾರ, ಶಿವನ ವಿವಿಧ ವೇಷ, ಪವಾಡ, ಸನ್ನಿವೇಶವನ್ನು ನಿರ್ಮಿಸುವ ಹರಿಹರನ ಕೌಶಲ, ಭಕ್ತಿಯ ಔನ್ನತ್ಯ, ನಾಟಕೀಯ ಸನ್ನಿವೇಶಗಳ ನಿರ್ಮಾಣ, ಬದುಕಿನ ದ್ವಂದ್ವಗಳ ಚಿತ್ರಣ, ಸಾಮಾಜಿಕ ಹಾಗೂ ವೈಚಾರಿಕ ವಿಚಾರಗಳು, ಕನ್ನಡದ ಪ್ರಜ್ಞೆ, ಲಿಂಗಭೇದವಿಲ್ಲದೆ ಕಾವ್ಯ ನಾಯಕರ ಆಯ್ಕೆ, ಸಂಭಾಷಣೆಗಳ ಸೊಗಸು, ಸ್ತ್ರೀಪಾತ್ರಗಳಿಗೆ ನೀಡಿದ ಪ್ರಾಧಾನ್ಯತೆ, ಕೆಳವರ್ಗದವರಿಗೆ ನೀಡಿದ

ಮಾನ್ಯತೆ, ಭಾವನೆಗಳನ್ನು ಕಟ್ಟುವ ಕಲೆ ಮುಂತಾದ ಸಾಹಿತ್ಯಕ ವಿಚಾರಗಳನ್ನು ಅಧ್ಯಯನ ಮಾಡಬಹುದು.

ಸಾಹಿತ್ಯಕವಾದ ಈ ವಿಚಾರಗಳನ್ನಿಟ್ಟುಕೊಂಡು ಮೇಲೆ ತಿಳಿಸಿರುವ ಹಲವು ವಿದ್ವಾಂಸರು ಚರ್ಚೆ ನಡೆಸಿ, ಬೆಲೆಯುಳ್ಳ ಲೇಖನಗಳನ್ನು ಬರೆದಿದ್ದಾರೆ. ಆದರೆ ಯಾವ ವಿದ್ವಾಂಸರೂ ಸಾಹಿತ್ಯಕವಾದ ಈ ವಿಚಾರಗಳನ್ನೇ ಪ್ರಧಾನವಾಗಿ ಇಟ್ಟುಕೊಂಡು ಕೃತಿಯನ್ನು ರಚಿಸಲು ಪ್ರಯತ್ನ ಮಾಡಿದಂತೆ ಕಂಡುಬರುವುದಿಲ್ಲ. ಕೃತಿಯ ರಚನೆಯ ಸಂದರ್ಭದಲ್ಲಿ ಈ ಬಗೆಯ ವಿಚಾರಗಳನ್ನು ಮಧ್ಯೆ ಮಧ್ಯೆ ಚರ್ಚಿಸಿದ್ದಾರೆ. ಅದರಲ್ಲೂ ಹರಿಹರನ ರಗಳೆಗಳಲ್ಲಿ ಬರುವ ಸಾಹಿತ್ಯಕ ವಿಚಾರಗಳನ್ನೇ ಪ್ರಧಾನವಾಗಿಟ್ಟುಕೊಂಡು ಕೃತಿ ರಚನೆ ಮಾಡಿದವರು ಯಾರೂ ಇಲ್ಲ. ಮಾಡಿರುವ ಪ್ರಯತ್ನದಲ್ಲೂ ಪರಿಪೂರ್ಣತೆಯಿಲ್ಲ. ಇಂಥ ಸಂದರ್ಭದಲ್ಲಿ ಹರಿಹರನ ರಗಳೆಗಳಲ್ಲಿನ ಸಾಹಿತ್ಯಕ ವಿಚಾರಗಳನ್ನು ಕುರಿತಂತೆ ಅಧ್ಯಯನ ಮಾಡಿದರೆ ಅದೊಂದು ಉತ್ತಮ ಕೆಲಸವಾಗಬಲ್ಲದು. ಹರಿಹರನ ರಗಳೆಗಳ ದೃಷ್ಟಿ ಹಾಗೂ ಓದುಗನ ದೃಷ್ಟಿಯಿಂದ ಈ ಅಧ್ಯಯನ ಅತ್ಯಂತ ಪ್ರಯೋಜನಕಾರಿ. ಅದು ಆದಲ್ಲಿ ವೀರಶೈವ ಸಾಹಿತ್ಯಕ್ಕೆ ಅದರಲ್ಲೂ ಹರಿಹರನ ರಗಳೆಯ ಸಾಹಿತ್ಯಕ್ಕೆ ನೀಡುವ ವಿಶಿಷ್ಟ ಕೊಡುಗೆ ಎಂದು ನನ್ನ ಭಾವನೆ. ಒಟ್ಟಾರೆ ಹರಿಹರನ ರಗಳೆಗಳ ಸಮಗ್ರ ಸಾಹಿತ್ಯಕ ನೋಟ ದೊರೆಯಬೇಕೆಂಬುದು ಪ್ರಸ್ತುತ ನಿಬಂಧದ ಮುಖ್ಯ ಉದ್ದೇಶವಾಗಿದೆ.

ಹರಿಹರನ ರಗಳೆಗಳಲ್ಲಿನ ಸಾಹಿತ್ಯಕ ವಿಚಾರಗಳನ್ನು ಕುರಿತಂತೆ ಅಧ್ಯಯನ ಮಾಡುತ್ತಿರುವ ಈ ಸಂದರ್ಭದಲ್ಲಿ, ಹರಿಹರ ಬರೆದಿದ್ದಾನೆ ಎಂದು ಹೇಳಲಾದ ಸುಮಾರು ನೂರ ಆರು ರಗಳೆಗಳನ್ನೂ ಅಧ್ಯಯನದೊಳಗೆ ತರಬೇಕೆಂಬುದಾಗಲೀ ಅಥವಾ ಪ್ರತಿಯೊಂದು ರಗಳೆಯನ್ನೂ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಬೇಕೆಂಬ ಉದ್ದೇಶವಾಗಲೀ ಈ ನಿಬಂಧದಲ್ಲಿಲ್ಲ. ಬದಲಾಗಿ ಯಾವ ರಗಳೆಗಳು ಹರಿಹರನ ಸಾಹಿತ್ಯ ರಚನೆಯ ದೃಷ್ಟಿಯಿಂದ ಪ್ರಮುಖ ಎಂದು ಕಂಡುಬರುತ್ತವೆಯೋ ಅಂಥ ರಗಳೆಗಳನ್ನು ಮಾತ್ರ ವಿಶೇಷವಾಗಿ ಅಧ್ಯಯನ ಮಾಡುವ ವಿಮರ್ಶಾತ್ಮಕ ಪ್ರಯತ್ನ ಇಲ್ಲಿನದು. ಇನ್ನುಳಿದ ರಗಳೆಗಳನ್ನು ಅಧ್ಯಯನಕ್ಕೆ ಅನಿವಾರ್ಯ ಅಥವಾ ಉಚಿತ ಎನ್ನುವ ಸಂದರ್ಭಗಳಲ್ಲಿ ಮಾತ್ರ ಬಳಸಿಕೊಳ್ಳಲಾಗಿದೆ. ಈಗಾಗಲೇ ಮೇಲಿಂದ ಮೇಲೆ ಚರ್ಚೆಯಾಗುತ್ತಲೇ ಇರುವ ಹರಿಹರನ ಕಾಲದೇಶದ ವಿಚಾರಗಳು, ಮತಧರ್ಮದ ವಿಚಾರಗಳು, ತೌಲನಿಕವಾದ ವಿಚಾರಗಳು ಕೂಡ ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಇದು ಮೇಲೆ ತಿಳಿಸಿರುವಂತೆ ಕೃತಿಯೊಳಗಿನ ಸಾಹಿತ್ಯಕ ವಿಚಾರಗಳಿಗೆ ಮಾತ್ರ ಸೀಮಿತವಾದ ಅಧ್ಯಯನವಾಗಿದೆ.



2

# ರಗಳೆಗಳ ಸಾಮಾನ್ಯ ಸ್ವರೂಪ

ಹರಿಹರ ರಗಳೆಗಳನ್ನು ಬರೆದುದರ ಪ್ರಧಾನ ಉದ್ದೇಶ ಭಕ್ತಿಯ ಔನ್ನತ್ಯವನ್ನು ಸಾರುವುದು. ಅವನ ಪ್ರತಿಯೊಂದು ರಗಳೆಯೂ ಶಿವಭಕ್ತರ ಪುಣ್ಯಚರಿತ್ರೆಗಳಿದ್ದಂತೆ. ಇಲ್ಲಿ, ಕವಿ ಆ ಕಾಲದ ಹಲವಾರು ಶಿವಭಕ್ತರನ್ನು ಉದ್ದೇಶಿಸಿ ಅವರ ಭಕ್ತಿಯ ಚರಿತ್ರೆಯನ್ನು ತನ್ನ ಕಾವ್ಯದಲ್ಲಿ ಚಿತ್ರಿಸುತ್ತಾನೆ. ಹಾಗೆ ಚಿತ್ರಿಸುವಾಗ ಪ್ರತಿಯೊಂದು ರಗಳೆಯ ಚಿತ್ರಣದಲ್ಲೂ ಈಗಾಗಲೇ ಸಿದ್ಧಪಡಿಸಿಕೊಂಡಿರುವ ಸ್ವರೂಪವನ್ನು ಕವಿ ಅನುಸರಿಸಿದ್ದಾನೆ. ಆ ಸ್ವರೂಪವನ್ನು ಈ ಕೆಳಕಂಡಂತೆ ಗುರುತಿಸಬಹುದು.

## 2.1 ರಗಳೆಗಳಿಗಿರುವ ಸಾಮಾನ್ಯ ಚೌಕಟ್ಟು

ಹರಿಹರ ಕಾವ್ಯ ಬರೆಯ ಹೊರಟಿದ್ದು ಒಂದು ಚೌಕಟ್ಟಿನ ಅಡಿಯಲ್ಲಿ. ಭಕ್ತಿಯನ್ನು ಪ್ರಧಾನವಾಗಿ ಇಟ್ಟುಕೊಂಡು ಆ ಚೌಕಟ್ಟಿನ ಅಡಿಯಲ್ಲಿಯೇ ಪ್ರತಿಯೊಂದು ರಗಳೆಯನ್ನು ಕಟ್ಟುವ ಪ್ರಯತ್ನ ಮಾಡಿದ್ದಾನೆ. ಕಾವ್ಯಕ್ಕೆ ಯಾವ ವಸ್ತುವನ್ನೇ ಆರಿಸಿಕೊಳ್ಳಲಿ ಅದರ ಮೂಲಕ ಭಕ್ತಿಯನ್ನು ಚಿತ್ರಿಸುತ್ತಾನೆ. ತನ್ನ ಪ್ರತಿಭೆಯಿಂದಾಗಿ ಆ ವಸ್ತುವನ್ನು ಭಕ್ತಿಯ ಕಡೆಗೆ ಪರಿವರ್ತಿಸಿಕೊಳ್ಳುತ್ತಾನೆ. ಇಂಥ ಒಂದು ಚೌಕಟ್ಟಿನ ನಿರ್ಮಾಣದಿಂದ ಕಾವ್ಯದ ವೈವಿಧ್ಯತೆಗೆ ಧಕ್ಕೆಯಾಗುವ ಸಾಧ್ಯತೆಗಳಿರುತ್ತವೆ. ಆದರೆ ಕವಿ ಆ ರೀತಿಯ ತೊಂದರೆಗಳು ಎದುರಾಗದ ಹಾಗೆ ಎಚ್ಚರಿಕೆ ವಹಿಸಿರುವುದು ಅಚ್ಚರಿಯ ಸಂಗತಿ.

ಮಲುಹಣನ ಕಥೆ ವಾಸ್ತವವಾಗಿ ಒಂದು ಸುಂದರ ಪ್ರೇಮ ಕಥೆ. ಆರಂಭದಲ್ಲಿ ಭೌತಿಕ ನೆಲೆಗಟ್ಟಿನಲ್ಲಿ ಸಾಗುತ್ತದೆ. ಇದೇ ಬೆಳವಣಿಗೆ ಅಂತ್ಯದವರೆಗೂ ಮುಂದುವರಿದಿದ್ದರೆ ಬಹುಶಃ ನಾಯಕ ನಾಯಕಿಯರಲ್ಲಿ ಒಬ್ಬರ ಇಲ್ಲವೇ ಇಬ್ಬರ ದುರಂತದಲ್ಲಿ ಕಥೆ ಅಂತ್ಯವಾಗಿ ರೋಮಾಂಚಕವಾಗುವ ಸಾಧ್ಯತೆಯಿತ್ತು. ಆದರೆ ಕವಿಗೆ ಈ ರೀತಿಯ ರೋಮಾಂಚನ ಇಷ್ಟವಿಲ್ಲ. ಅವನಿಗೆ ಬೇಕಾಗಿರುವುದು ಭಕ್ತಿ ಮಾತ್ರ. ಅದಕ್ಕಾಗಿ ಸಂದರ್ಭವೊಂದನ್ನು ಸೃಷ್ಟಿಸುತ್ತಾನೆ. ವಿರಹವೇದನೆಯಿಂದ ನರಳುತ್ತಾ ಬಿದ್ದಿರುವ ಮಲುಹಣನಿಗೆ ಪ್ರಿಯತಮೆ ಮಲುಹಣೆಯ ಮೂಲಕ "ಎನ್ನ ಮೇಲಿಕ್ಕುವಾ ಚಿತ್ತದಾತುರತೆಯಂ/ಪನ್ನಗಾಭರಣನೊಳು ಮಾಳ್ಪುದೆನ್ನೊಲುಮೆಯಂ"[1] ಎಂದು ಹೇಳಿಸುವ ಮೂಲಕ ಇಡೀ ಕಥೆಗೆ ತಿರುವನ್ನು ನೀಡಿದ್ದಾನೆ. ಮಲುಹಣೆಯ ಈ ಮಾತಿನಿಂದ ಕಾಮಾಂಧನಾಗಿದ್ದ ಮಲುಹಣ ಭಕ್ತನಾಗಿ ಪರಿವರ್ತನೆಯಾಗುತ್ತಾನೆ. ಹಲವು ವರ್ಷಗಳ ಧ್ಯಾನದಿಂದ ಶಿವನ ಮೆಚ್ಚುಗೆಗೆ ಪಾತ್ರನಾಗಿ ಮತ್ತೆ ಮಲುಹಣೆಯನ್ನು ಪಡೆಯುತ್ತಾನೆ.

ಪ್ರಭುದೇವರ ರಗಳೆಯಲ್ಲೂ ಇಂಥದೇ ಬದಲಾವಣೆಯನ್ನು ಕವಿ ತರುತ್ತಾನೆ. ಅಲ್ಲಿ ಮಲುಹಣನಂತೆಯೇ ಅಲ್ಲಮ ಕೂಡ ಕಾಮಲತೆಯ ಪ್ರೇಮ ಪಾಶಕ್ಕೆ ಸಿಕ್ಕಿರುತ್ತಾನೆ. ಆದರೆ

ಕಾಮಲತೆಯ ಅನಿರೀಕ್ಷಿತ ಸಾವು ಅಲ್ಲಮನನ್ನು ವಿರಹಯಾತನೆಗೆ ತಳ್ಳುತ್ತದೆ. ಅವನು ಸಾವು ಬದುಕಿನ ನಡುವೆ ಹೋರಾಡುತ್ತಾನೆ. ಆ ಸಂದರ್ಭದಲ್ಲಿ ಗೊಹೇಶ್ವರ ದೇವಾಲಯವೊಂದು ಕಾಣಲಾಗಿ ಪ್ರಭುದೇವ ತನಗೆ ತನುವಿನ ತೊಡಕು ಸಾಕು ಎಂದು ನಿಶ್ಚಯಿಸಿ ದೇವಾಲಯವನ್ನು ಪ್ರವೇಶಿಸುತ್ತಾನೆ. ಆದರೆ ಪ್ರಭುದೇವ ಅಲ್ಲಿ ಕಂಡದ್ದೇ ಬೇರೆ. ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆಯೇ ಅವನಿಗೆ ಗೊಹೇಶ್ವರನ ದರ್ಶನವಾಗುತ್ತದೆ. ಅಂಗೈಯಲ್ಲಿ 'ಅಮೃತಫಳ'ವನ್ನು ಪಡೆಯುತ್ತಾನೆ. ಶಿವಜ್ಞಾನ ಉದಯಿಸಿ ಲಿಂಗ ಎತ್ತೆತ್ತ ಹೋಗುತ್ತದೆಯೋ ಅತ್ತತ್ತ ನಡೆಯುತ್ತಾನೆ.

ಹೀಗೆ ಹರಿಹರನ ಎಲ್ಲ ರಗಳೆಗಳೂ ಭಕ್ತಿಯ ಮಹತ್ವವನ್ನು ಸಾರಲು ಹೊರಟ ರಗಳೆಗಳಾಗಿವೆ. ಭಕ್ತಿಯ ಈ ಚೌಕಟ್ಟಿನ ನಿರ್ಮಾಣದಿಂದಾಗಿ ಕಥೆಯ ಒಟ್ಟು ಓಟವೇ ಬದಲಾವಣೆಯಾಗುವುದನ್ನು ರಗಳೆಗಳಲ್ಲಿ ಕಾಣುತ್ತೇವೆ. ಈ ರೀತಿಯ ಚೌಕಟ್ಟಿನ ನಿರ್ಮಾಣ ದಿಂದಾಗಿ ಹರಿಹರನ ರಗಳೆಗಳು ವೈವಿಧ್ಯತೆಯನ್ನು ಕಳೆದುಕೊಂಡಿವೆ ಎಂಬ ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇವರ ಅಭಿಪ್ರಾಯದಲ್ಲಿ ನಿಜವಿದ್ದರೂ ಈ ಬದಲಾವಣೆ ಕಥೆಗೆ ಮತ್ತಷ್ಟು ಹಿರಿಮೆಯನ್ನು ತಂದುಕೊಟ್ಟಿದೆ ಎಂಬುದರಲ್ಲಿ ಸಂಶಯವಿಲ್ಲ.

## 2.2 ಸಿದ್ಧಮಾದರಿ

ಹರಿಹರನ ರಗಳೆಗಳಿಗೆ ಸಾಮಾನ್ಯವಾದ ಚೌಕಟ್ಟು ಇರುವಂತೆ, ಸಿದ್ಧವಾದ ಮಾದರಿಯೂ ಇದೆ. ಆ ಮಾದರಿಯಲ್ಲೇ ಪ್ರತಿಯೊಂದು ರಗಳೆಗಳೂ ರಚನೆಯಾಗುತ್ತವೆ. ಸಾಮಾನ್ಯವಾಗಿ ಎರಡು ಬಗೆಯ ಮಾದರಿಗಳನ್ನು ಈ ರಗಳೆಗಳಲ್ಲಿ ಕಾಣುತ್ತೇವೆ. ಒಂದು -ಶರಣರು ಕೈಲಾಸದಲ್ಲಿ ಹುಟ್ಟಿ ಅಲ್ಲಿ ಮಾಡಿದ ತಪ್ಪಿಗೆ ಶಾಪಗ್ರಸ್ತರಾಗಿ ಭೂಲೋಕದಲ್ಲಿ ಜನಿಸುವುದು ಮತ್ತು ಅಲ್ಲಿ ತನ್ನ ಸಾಧನೆ ಹಾಗೂ ನಿಷ್ಠೆಯಿಂದ ಶಿವನ ಕರುಣೆಯನ್ನು ಗಳಿಸಿ ಮತ್ತೆ ಕೈಲಾಸ ಸೇರುವುದು. ಇನ್ನೊಂದು - ಭೂಲೋಕದಲ್ಲೇ ಹುಟ್ಟಿ ಶಿವ ಒಡ್ಡಿದ ಹಲವು ಪರೀಕ್ಷೆಗಳನ್ನು ಎದುರಿಸಿ, ಗೆದ್ದು ಕೈಲಾಸ ಸೇರುವುದು.

ಮೊದಲನೆ ಮಾದರಿ 'ಬಸವರಾಜದೇವರ ರಗಳೆ', 'ಮಹಾದೇವಿಯಕ್ಕನ ರಗಳೆ', 'ಪ್ರಭುದೇವರ ರಗಳೆ', 'ನಿಂಬಿಯಕ್ಕಗಳ ರಗಳೆ', 'ರೇವಣಸಿದ್ಧೇಶ್ವರನ ರಗಳೆ' ಮುಂತಾದ ರಗಳೆಗಳಲ್ಲಿ ಕಂಡುಬರುತ್ತದೆ. ಇವೆಲ್ಲವೂ 'ನೂತನರ ರಗಳೆ'ಗಳಾಗಿವೆ. ಪುರಾತನರ ರಗಳೆಗಳಲ್ಲಿ 'ನಂಬಿಯಣ್ಣನ ರಗಳೆ'ಯಲ್ಲಿ ಮಾತ್ರ ಈ ತರಹದ ರಚನೆಯನ್ನು ಕಾಣುತ್ತೇವೆ. ಈ ರಗಳೆಗಳ ಎಲ್ಲ ನಾಯಕರೂ ಹುಟ್ಟುವುದು ಕೈಲಾಸದಲ್ಲೇ. ಆದರೆ ಅವರು ಅಲ್ಲಿ ಮಾಡುವ ಒಂದೊಂದು ತಪ್ಪುಗಳು, ಅವರು ಬೇರೆ ಬೇರೆ ಹೆಸರನ್ನು ಧರಿಸಿ ಭೂಲೋಕದಲ್ಲಿ ಹುಟ್ಟುವಂತೆ ಮಾಡುತ್ತವೆ. ಬಸವಣ್ಣ ಶಿವ ನೀಡಿದ ಪ್ರಸಾದವನ್ನು ನಂದೀಶನಿಗೆ ಕೊಡುವುದನ್ನು ಮರೆತು; ಕೊಟ್ಟೆನೆಂದು ಸುಳ್ಳು ಹೇಳುವ ತಪ್ಪು ಮಾಡಿದರೆ, ಪ್ರಭುದೇವ ಹರನೋಲಗದಲ್ಲಿ ಸುರಸತಿಯೊಬ್ಬಳನ್ನು ಆಸೆಯಿಂದ ನೋಡುವ ತಪ್ಪು ಮಾಡುತ್ತಾನೆ. ಮಹಾದೇವಿಯಕ್ಕ ಗುಪ್ತಗಣನಾಥನೊಬ್ಬನನ್ನು

ಭವಿ ಎಂದು ನುಡಿಯುವ ತಪ್ಪು ಮಾಡುತ್ತಾಳೆ. ಹೀಗೆ ಒಬ್ಬೊಬ್ಬರೂ ಒಂದೊಂದು ತಪ್ಪು ಮಾಡುವ ಮೂಲಕ ಭೂಲೋಕದಲ್ಲಿ ಜನಿಸುತ್ತಾರೆ. ಅಲ್ಲಿ ನಾನಾ ರೀತಿಯ ಸಂಕಟಗಳನ್ನ ನುಭವಿಸುತ್ತಾರೆ. ಶಿವ ಒಡ್ಡಿದ ಎಲ್ಲ ಪರೀಕ್ಷೆಗಳನ್ನೂ ಅಷ್ಟೇ ಧೈರ್ಯದಿಂದ ಎದುರಿಸಿ ಜಯ ಗಳಿಸುತ್ತಾರೆ. ಭಕ್ತರ ಈ ವಿಜಯದಿಂದ ಸಂತಸಗೊಂಡ ಶಿವ, ಮತ್ತೆ ಅವರೆಲ್ಲರನ್ನೂ ಕೈಲಾಸಕ್ಕೆ ಕರೆಸಿಕೊಂಡು ಗಣಪದವಿ ನೀಡಿ ಗೌರವಿಸುತ್ತಾನೆ.

ಎರಡನೆ ಮಾದರಿಯಲ್ಲಿ ಮೇಲಿನ ರಗಳೆಗಳನ್ನು ಬಿಟ್ಟು ಉಳಿದ ಎಲ್ಲ ರಗಳೆಗಳೂ ಸಾಮಾನ್ಯವಾಗಿ ಬರುತ್ತವೆ. ಇವುಗಳಲ್ಲಿ ಪುರಾತನರ ರಗಳೆಗಳೇ ಹೆಚ್ಚು. ಮುಖ್ಯವಾಗಿ ಇಳೆಯಾಂಡ ಗುಡಿಮಾರ, ಮಾದಾರ ಚೆನ್ನಯ್ಯ, ಇಹಃಪ್ಪಗೆಯಾಂಡ, ಕೊಂಡಗುಳಿ ಕೇಶಿರಾಜ, ಹಾವಿನಹಾಳ ಕಲ್ಲಯ್ಯ, ಕೋಳೂರ ಕೊಡಗೂಸು, ಕಾರಿಕಾಲಮ್ಮೆ, ಅತಿಭಕ್ತ ಮುಂತಾದವರ ರಗಳೆಗಳನ್ನು ಹೆಸರಿಸಬಹುದು.

ಈ ಎಲ್ಲರ ರಗಳೆಗಳ ಕಥೆಗಳೂ ಭೂಲೋಕದಲ್ಲಿಯೇ ಪ್ರಾರಂಭವಾಗುತ್ತವೆ. ಎಲ್ಲ ನಾಯಕರೂ ಭೂಲೋಕದಲ್ಲಿ ಹುಟ್ಟಿ ಶಿವಭಕ್ತಿಯಲ್ಲಿ ತಲ್ಲೀನರಾಗುತ್ತಾರೆ. ಅವರ ಭಕ್ತಿಗೆ ಮೆಚ್ಚಿದ ಶಿವ ಅವರಿಗೆ ಹಲವು ಪರೀಕ್ಷೆಗಳನ್ನು ಒಡ್ಡುತ್ತಾನೆ. ಭಕ್ತರು ಶಿವನ ಪರೀಕ್ಷೆಯನ್ನು ಎಳ್ಳಷ್ಟೂ ಅಳುಕದೆ ಎದುರಿಸಿ ಜಯಗಳಿಸುತ್ತಾರೆ. ಅಂತಿಮವಾಗಿ ಶಿವನು ಅವರ ಭಕ್ತಿಯ ಗಾಢ ಸ್ವರೂಪವನ್ನು ಮೆಚ್ಚಿ ಎಲ್ಲರಿಗೂ ಗಣಪದವಿ ನೀಡುತ್ತಾನೆ.

ಹೀಗೆ ಹರಿಹರ ಕವಿಯ ನೂತನರು ಮತ್ತು ಪುರಾತನರನ್ನು ಒಳಗೊಂಡ ಪ್ರತಿಯೊಂದು ರಗಳೆಗಳೂ ಒಂದು ಸಿದ್ಧಮಾದರಿಯನ್ನು ಅನುಸರಿಸಿಕೊಂಡೇ ಸುಂದರ ಕಾವ್ಯವಾಗಿ ನಿಲ್ಲುತ್ತವೆ.

## 2.3 ರಗಳೆಗಳ ರಚನೆಯಲ್ಲಿ ಅನುಸರಿಸುವ ಕ್ರಮ

ಸಿದ್ಧಮಾದರಿಯನ್ನು ಇಟ್ಟುಕೊಂಡು ಕಾವ್ಯ ಬರೆದ ಹಾಗೆ, ಹರಿಹರ ರಗಳೆಗಳನ್ನು ರಚಿಸುವಾಗ ತನ್ನದೇ ಆದ ಕ್ರಮವನ್ನು ಅನುಸರಿಸುತ್ತಾನೆ. ಅಂತೆಯೇ ಎಲ್ಲ ರಗಳೆಗಳೂ ಆ ಕ್ರಮದಲ್ಲಿಯೇ ಸಾಗುತ್ತವೆ.

ಕಾವ್ಯದ ಆದಿ ಮತ್ತು ಅಂತ್ಯದಲ್ಲಿ ಹರಿಹರ ಸಾಮಾನ್ಯವಾಗಿ ಕಂದಪದ್ಯ ಇಲ್ಲವೆ ವೃತ್ತವನ್ನು ರಚಿಸುತ್ತಾನೆ. [ವೃತ್ತಗಳು ಕಡಿಮೆ ಸಂಖ್ಯೆಯಲ್ಲಿ ಬಳಕೆಯಾಗಿವೆ]. ಈ ಪದ್ಯ ಹಾಗೂ ರಗಳೆಯ ಅಂತ್ಯದಲ್ಲಿ ಸಾಧಾರಣವಾಗಿ 'ಹಂಪೆಯ ವಿರೂಪಾಕ್ಷ' ಅಂಕಿತವನ್ನು ಬಳಸುತ್ತಾನೆ. ಇಲ್ಲದಿದ್ದರೆ ಪರ್ಯಾಯ ಪದಗಳಾದ 'ಹಂಪೆಯರಸ' 'ಹಂಪೆಯ ದೇವ' 'ಹಂಪೆಯ ವಿರುಪ' 'ಹಂಪೆಯ ರಾಯ' 'ಶ್ರೀ ವಿರೂಪಾಕ್ಷಲಿಂಗ' ಇವುಗಳಲ್ಲಿ ಒಂದನ್ನು ಬಳಸುತ್ತಾನೆ.

ಆದಿಯ ಪದ್ಯದಲ್ಲಿ ಸಂಬಂಧಪಟ್ಟ ಶರಣನ ಶಿವಭಕ್ತಿಯ ವಿಶಿಷ್ಟ ಸ್ವರೂಪ ಇಲ್ಲವೆ ಪರಶಿವನ ಸ್ವರೂಪ ವಿಲಾಸಗಳನ್ನು ಧ್ವನಿಯುಕ್ತವಾದ ಒಂದೆರಡು ಮಾತುಗಳಲ್ಲಿ ಮೂಡಿಸಿ ಅಂತಹ ಭಕ್ತನನ್ನು ಹಂಪೆಯ ವಿರೂಪಾಕ್ಷನು ಮೆರೆದನು ಎಂದು ಹೇಳುತ್ತಾನೆ. ಜೊತೆಗೆ, ಇಂತಹ ಶರಣನ ಕಥೆಯನ್ನು 'ಅವಧರಿಸು ವಿರೂಪಾಕ್ಷ', 'ಕೇಳಯ್ಯ ಹಂಪೆಯ ವಿರೂಪಾಕ್ಷ',

ಅವಧಾರು ಪಂಪೆಯ ವಿರೂಪಾಕ್ಷ' ಎಂಬ ಬಿನ್ನಪವನ್ನು ಸೇರಿಸುತ್ತಾನೆ. ಅಲ್ಲಿ ಸಂಬಂಧಪಟ್ಟ ಭಕ್ತನ ಹೆಸರನ್ನೂ ಉಲ್ಲೇಖಿಸುತ್ತಾನೆ.

ಅಂತ್ಯದ ಪದ್ಯದಲ್ಲಿ ಕವಿ ಭಕ್ತನ ಹೆಸರು ಹಾಗೂ ಹಿರಿಮೆಗಳನ್ನು ತಿಳಿಸಿ ಅಂತಹ ಮಹಿಮಾನ್ವಿತನ 'ಶಿಶುವೆಂದು', 'ಆಳೆಂದು', 'ಕಿಂಕರನೆಂದು', 'ಸುತನೆಂದು', 'ಭೃತ್ಯನೆಂದು' ತನ್ನನ್ನು ಕರುಣಿಸು, ಸಲಹು ಎಂದು ಬೇಡಿಕೊಳ್ಳುತ್ತಾನೆ. ಇಲ್ಲದಿದ್ದಲ್ಲಿ ಭಕ್ತನ ಹೆಸರು ಹೇಳಿ ಹಂಪೆಯ ನಾಯಕನ ಕರುಣೆಯನ್ನು ಕೋರುತ್ತಾನೆ ಅಥವಾ ಹಂಪೆಯರಸನ ಹೆಸರು ಹೇಳಿ ಭಕ್ತರ ಕೃಪೆ ಯಾಚಿಸುತ್ತಾನೆ.

ಕಂದಪದ್ಯದ ನಂತರ ಕವಿ ನೇರವಾಗಿ ಕಥೆ ಪ್ರಾರಂಭಿಸುತ್ತಾನೆ. ಕಥೆ ಯಾರಿಗೆ ಸಂಬಂಧಿಸಿದ್ದರೂ ಆರಂಭದಲ್ಲಿ ನಾಯಕನ ದೇಶದ ವರ್ಣನೆ, ಅಲ್ಲಿ ಹರಿವ ನದಿ, ಭಕ್ತಿಗೆ ಆಕರವಾದ ಊರು, ದೇವಾಲಯ, ಭಕ್ತನ ಪರಿಚಯ, ಗಿಡಮರ, ಪ್ರಾಣಿ ಪಕ್ಷಿಗಳ ಪರಿಚಯ ಮಾಡಿಕೊಡುತ್ತಾನೆ. ಕಥೆ ಕೈಲಾಸದಲ್ಲಿ ಪ್ರಾರಂಭವಾದರೆ ರಜತಗಿರಿ, ಶಿವನ ಸಭೆ, ವೈಭವ, ಶಿವಗಣದ ಸದಸ್ಯ ಅಥವಾ ಭಕ್ತನಿಂದ ಘಟಿಸುವ ಕ್ಷುಲ್ಲಕ ಅಪರಾಧ, ಶಿವನಿಂದ ಪಡೆವ ಶಾಪ ಮತ್ತು ಮೊದಲಿನಂತೆ ದೇಶ, ಊರುಗಳ ವರ್ಣನೆ ಮಾಡುತ್ತಾನೆ. ಮುಂದಿನ ಹಂತದಲ್ಲಿ ಭಕ್ತನ ಹುಟ್ಟು, ಬಾಲ್ಯ ಮತ್ತು ವೃತ್ತಿ-ಪ್ರವೃತ್ತಿಗಳ ಪರಿಚಯ ಮಾಡುತ್ತಾನೆ. ಇದಾದ ನಂತರ ಭಕ್ತನು ಶಿವನಿಂದ ಪರೀಕ್ಷೆಗೆ ಒಳಪಡುವ, ಪರೀಕ್ಷೆಯಲ್ಲಿ ಭಕ್ತನು ವಿಜಯಗಳಿಸುವ, ವಿಜಯದ ನಂತರ ಭಕ್ತನು ಕೈಲಾಸಕ್ಕೆ ನಡೆಯುವ ವರ್ಣನೆಯಿರುತ್ತದೆ. ಕೊನೆಯಲ್ಲಿ ಕಥಾ ಸಾರಾಂಶವನ್ನು ಹೇಳಿ ಹಂಪೆಯಾಳ್ದನ ಸ್ತುತಿಯೊಂದಿಗೆ ಕಥೆಯನ್ನು ಪೂರ್ಣಗೊಳಿಸುತ್ತಾನೆ.

ಕಥೆಯ ಪ್ರಾರಂಭದಲ್ಲಿ ಭಕ್ತನ ಮಹಿಮೆಯನ್ನು ಸಾಮಾನ್ಯವಾಗಿ ವರ್ಣಿಸುತ್ತಾನೆ. ಸಂಕೀರ್ಣ ರಗಳೆಗಳನ್ನು ಬಿಟ್ಟು ಉಳಿದೆಲ್ಲ ರಗಳೆಗಳಲ್ಲಿಯೂ ಈ ವರ್ಣನೆಗಳು ಇದ್ದೇ ಇರುತ್ತವೆ.

> **ಭಾವಕಿಯ ಭಕ್ತಿ ಚರಿತೆಯ**
> **ಲಾವಣ್ಯದ ತಿರುಳ ತಂಬೆಲರ ತಂಪಿನ ಸಂ**
> **ಜೀವನೆಯೆಂದೆನಿಪ ಮಹಾ**
> **ದೇವಿಯ ಗುಣ ಕಥನಮಂ ವಿವರ್ಣಿಪರಳವೇ.**[2]

ಈ ರೀತಿ ಪ್ರಾರಂಭವಾಗುವ ಮಹಿಮೆಯ ವರ್ಣನೆಗಳು, ಕೆಲವು ರಗಳೆಗಳಲ್ಲಿ ಆರಂಭದಲ್ಲಿಯೇ ಬಂದರೆ, ಮತ್ತೆ ಕೆಲವು ರಗಳೆಗಳಲ್ಲಿ ಭಕ್ತ ಇಲ್ಲವೆ ಭಕ್ತೆಯ ದೇಶ, ಊರು, ತಂದೆ-ತಾಯಿ, ಹುಟ್ಟು— ಇವುಗಳ ವರ್ಣನೆಯ ನಂತರ ಬರುತ್ತವೆ. ಆದರೆ ವರ್ಣನೆಗಳು ಎಲ್ಲಿಯೇ ಬರಲಿ ಅವು ಮಾಡುವ ಕೆಲಸ ಮಾತ್ರ ಒಂದೇ. ಕಥೆಯಲ್ಲಿ ಬರುವ ನಾಯಕನ ಶಿವಭಕ್ತಿಯ ನಿಷ್ಠೆಯನ್ನು ದೈವೀಕರಣಗೊಳಿಸಿ ಹೇಳುವುದು ಒಂದು ರೀತಿಯಲ್ಲಿ ಒಟ್ಟು ಕಥೆಯ ಸಂಕ್ಷಿಪ್ತ ರೂಪ ಎಂದೇ ಹೇಳಬಹುದು.

ಹೀಗೆ ಹರಿಹರ ರಚಿಸುವ ಪ್ರತಿಯೊಂದು ಕಥೆಯೂ ಒಂದು ಕ್ರಮದಲ್ಲಿ, ಮೊದಲಿನಿಂದ

ಕೊನೆಯವರೆಗೂ ಸಾಗಿಬರುತ್ತವೆ. ಈ ಕ್ರಮ ಯಾವ ಹಂತದಲ್ಲೂ ವ್ಯತ್ಯಾಸವಾಗುವುದನ್ನು ಆತನ ರಗಳೆಗಳಲ್ಲಿ ಕಾಣಲು ಸಾಧ್ಯವಿಲ್ಲ. ಕವಿಯ ಈ ಕ್ರಮಬದ್ಧತೆಯ ಕಟ್ಟುನಿಟ್ಟಿನ ಪಾಲನೆ ಕಥೆಯಲ್ಲಿ ಏಕತಾನತೆಯ ದೋಷವನ್ನುಂಟುಮಾಡುವ ಸಾಧ್ಯತೆಯನ್ನು ವಿದ್ವಾಂಸರು ಗುರುತಿಸಿದರೂ ಅದು ಕಥೆಯ ಸೊಗಸಿನಲ್ಲಿ ಮರೆಯಾಗಿದೆ.

## 2.4 ಶಿವಶರಣರ ಜೀವನ ಚರಿತ್ರೆಗಳಾಗಿ ರಗಳೆಗಳು

ಹರಿಹರನ ರಗಳೆಗಳು ಕೇವಲ ಭಕ್ತಿಯನ್ನಷ್ಟೇ ಚಿತ್ರಿಸುವುದಿಲ್ಲ. ಬದಲಾಗಿ, ಶರಣರ ಬದುಕನ್ನು ಕುರಿತಾದ ಕೆಲವು ವಿಚಾರಗಳನ್ನೂ ಚಿತ್ರಿಸುತ್ತವೆ. ರಗಳೆಗಳ ಪ್ರಾರಂಭದ ಸಾಲುಗಳಲ್ಲಿ ಭಕ್ತನ ಊರು, ದೇಶ, ತಂದೆ ತಾಯಿ, ಹುಟ್ಟು, ಬಾಲ್ಯವನ್ನು ಕುರಿತಾದ ಹಲವು ವಿಚಾರಗಳು ಬರುತ್ತವೆ. ಅನಂತರದ ಸಾಲುಗಳಲ್ಲಿ ಭಕ್ತನ ವೃತ್ತಿ, ನಿಷ್ಠೆ, ಆಸಕ್ತಿ, ಶೌರ್ಯ ಮತ್ತು ಸಾಹಸಗಳನ್ನು ಕುರಿತಾದ ವಿಚಾರಗಳ ಚಿತ್ರಗಳು ಬರುತ್ತವೆ. ಅದಕ್ಕೆ ನಿದರ್ಶನ:

ಮಹಾದೇವಿಯಕ್ಕನ ರಗಳೆಯಲ್ಲಿ ಕವಿ ಮಹಾದೇವಿಯಕ್ಕನ ಭಕ್ತಿಯ ಮಹೋನ್ನತಿಯನ್ನು ಚಿತ್ರಿಸುವುದರ ಜೊತೆಗೆ ಅವಳ ಬದುಕಿನ ಅನೇಕ ವಿವರಗಳನ್ನು ದಾಖಲಿಸುತ್ತಾನೆ. ಮಹಾದೇವಿಯಕ್ಕನ ಹುಟ್ಟು, ಬಾಲ್ಯ, ತಂದೆ ತಾಯಿಯರು, ಊರು, ದೇಶ, ಯೌವನ, ಬೆಳವಣಿಗೆ, ಮಲ್ಲಿಕಾರ್ಜುನನಿಗಾಗಿ ಹುಡುಕಾಟ, ಒಲ್ಲದ ಪುರುಷನೊಡನೆ ಮದುವೆಯಾಗಿ ಅನುಭವಿಸಿದ ಸಂಕಟ, ಅರಸ ಮತ್ತು ಅವನ ಮಂತ್ರಿ-ಮಾನ್ಯರ ಅಮಾನವೀಯ ನಡವಳಿಕೆ, ಮಗಳಿಂದಾಗಿ ತಂದೆ ತಾಯಿಯರು ಅನುಭವಿಸಿದ ಸಂಕಟ, ಅಂತಿಮವಾಗಿ ಎಲ್ಲರನ್ನೂ ತ್ಯಜಿಸಿ ಶ್ರೀಗಿರಿಯ ಕಡೆಗೆ ಮಲ್ಲಿಕಾರ್ಜುನನನ್ನು ಅರಸುತ್ತಾ ಹೊರಟಿದ್ದು ಮುಂತಾದ ವಿಚಾರಗಳು ದಾಖಲಾಗಿವೆ. ಅಂತೆಯೇ ಉಳಿದ ರಗಳೆಗಳೂ ಆಯಾಯ ನಾಯಕ ನಾಯಕಿಯರ ಜೀವನ ಚರಿತ್ರೆಗಳನ್ನು ಕೆಲಮಟ್ಟಿಗೆ ಚಿತ್ರಿಸುತ್ತವೆ.

ಇದಿಷ್ಟನ್ನೇ ನಂಬಿ ರಗಳೆಗಳನ್ನು ಭಕ್ತರ ಜೀವನ ಚರಿತ್ರೆಗಳು ಎಂದು ತೀರ್ಮಾನಿಸಿದರೆ ತಪ್ಪಾಗುತ್ತದೆ. ಏಕೆಂದರೆ ಇಲ್ಲಿ ದಾಖಲಾಗಿರುವ ಜೀವನ ಚರಿತ್ರೆಗಳು ಶರಣರ ಭಕ್ತಿಯ ಮಹತ್ವವನ್ನು ತಿಳಿಸಲು ಎಷ್ಟು ಉಪಯುಕ್ತವೋ ಅಷ್ಟಕ್ಕೆ ಮಾತ್ರ ಸೀಮಿತಗೊಂಡಿದ್ದು, ಚರಿತ್ರೆಯು ತಿಳಿಸುವಂತೆ ಅವರ ಬದುಕಿನ ಇನ್ನೂ ಎಷ್ಟೋ ವಿಚಾರಗಳು ಕೈ ಬಿಟ್ಟು ಹೋಗಿವೆ. ಮಿಗಿಲಾಗಿ ಹರಿಹರನಿಗೆ ಜೀವನ ಚರಿತ್ರೆಯನ್ನು ಬರೆಯುವ ಉದ್ದೇಶ ಇರಲಿಲ್ಲ ಎಂಬುದು ಸ್ಪಷ್ಟವಾದ ವಿಚಾರ. ಒಟ್ಟಿನಲ್ಲಿ ಹರಿಹರನ ರಗಳೆಗಳನ್ನು ಶರಣರ ಬದುಕನ್ನು ಚಿತ್ರಿಸುವ ಸಮಗ್ರ ಜೀವನ ಚರಿತ್ರೆಗಳು ಎನ್ನುವುದಕ್ಕಿಂತ, ಅವರ ಬದುಕನ್ನು ಪರಿಚಯಿಸುವ ಸಂಕ್ಷಿಪ್ತ ಜೀವನ ಚರಿತ್ರೆಗಳು ಎಂದು ಕರೆಯಬಹುದು. ಇಂಥ ಸಂಕ್ಷಿಪ್ತ ಜೀವನ ಚರಿತ್ರೆಗಳಲ್ಲಿ ಶರಣರ ಸಾಧನೆಯ ಹಲವು ಮುಖಗಳನ್ನು ಕವಿ ಚಿತ್ರಿಸುತ್ತಾನೆ.

ಹರಿಹರನ ಶಿವಗಣ ಪ್ರಪಂಚ ವೈವಿಧ್ಯಮಯವಾಗಿರುವಂತೆ ಸ್ವಾರಸ್ಯಕರವೂ ಆಗಿದೆ. ಅಲ್ಲಿ 'ಪಚ್ಚಪಸಿಯ' ಒಕ್ಕಲು ಮಕ್ಕಳು, ಕೂಸುಗಳು, ನಡು-ಹರೆಯದವರು, ಮುದುಕರು, ಗಂಡಸರು, ಹೆಣ್ಣುಮಕ್ಕಳು, ಸಂಸಾರಿಗಳು, ವಿರಕ್ತರು, ಮುಕ್ತರು ಮುಂತಾದವರು ಇದ್ದಾರೆ.

ಎಲ್ಲರೂ ಹಲವು ವೃತ್ತಿಯಲ್ಲಿ ತೊಡಗಿ ತಮ್ಮ ನಿಷ್ಠೆಯಿಂದ ಅದೇ ವೃತ್ತಿಯಲ್ಲಿ ಸಾಧನೆಯ ಸಿದ್ಧಿಯನ್ನು ಮುಟ್ಟಿದವರು. ಅವರ ಸಾಧನೆಗಳೂ ವೈವಿಧ್ಯತೆಯಿಂದ ಕೂಡಿವೆ.

ರುದ್ರಪಶುಪತಿ ಮತ್ತು ಕೋಳೂರ ಕೊಡಗೂಸು ಇವರ ಕಥೆಗಳು ಮುಗ್ಧ ಭಕ್ತಿಯನ್ನು ಚಿತ್ರಿಸುತ್ತವೆ. ರುದ್ರಪಶುಪತಿ ಮುಗ್ಧ ಆದರೆ ಅವನ ಮನಸ್ಸು ಪವಿತ್ರ; ಭಕ್ತಿ ಅಚಲ. ದಿನವೂ ಶಿವಧ್ಯಾನದಲ್ಲಿ ತಲ್ಲೀನನಾಗುತ್ತಿದ್ದ ಈ ಮುಗ್ಧ ಶಿವನ ಪರಮ ಸ್ನೇಹರಸವನ್ನು ಸೇವಿಸುತ್ತಿದ್ದ. ಶಿವಲಿಂಗವನ್ನು 'ಪುಟವೇಳ್ವ ಪುಳಕದಿಂ', 'ಉರವಣಿಪ ನಿಷ್ಠೆಯಿಂ' ಪೂಜಿಸುತ್ತಿದ್ದ. ಆದರೆ ಒಮ್ಮೆ ಶಿವಪುರಾಣವನ್ನು ಕೇಳುತ್ತಿದ್ದ ಸಂದರ್ಭದಲ್ಲಿ, ಸಮುದ್ರಮಂಥನದಿಂದ ಹುಟ್ಟಿದ ಹಾಲಾಹಲವನ್ನು ಶಿವನು ಕುಡಿದಿದ್ದು, ಅದು ಇನ್ನೂ ಅವನ ಕಂಠದಲ್ಲಿ ಇದೆ ಎಂಬ ವಿಷಯ ತಿಳಿದು ಚಕಿತನಾಗುತ್ತಾನೆ. ಹರಿ ವಿರಂಚಿಗಳು ವಿಷ ಕುಡಿದ ಶಿವನನ್ನು ಉಳಿಸದೆ ಹೋದರಲ್ಲ ಎಂದು ಚಿಂತಿಸಿದ. ಕಡೆಗೆ ತಾನೇ ಅವನನ್ನು ಉಳಿಸಬೇಕೆಂದು ನಿರ್ಧರಿಸಿದ. ಶಿವನನ್ನು ವಿಷ ಮುಕ್ತಗೊಳಿಸಲು ಸಮುದ್ರದ ದಡಕ್ಕೆ ಬಂದು ಕಂಠದವರೆಗೂ ಸಮುದ್ರದಲ್ಲಿ ಮುಳುಗಿ ಪಂಚಾಕ್ಷರಿ ಮಂತ್ರ ಜಪಿಸತೊಡಗಿದ. ಹೀಗೆ ಧ್ಯಾನಾಸಕ್ತನಾಗಿರಲು ಜಲಚರಗಳು ಅವನ ದೇಹದ ಮಾಂಸವನ್ನೆಲ್ಲ ತಿಂದು ಎಲುಬಿನ ಹಂದರವನ್ನು ಮಾತ್ರ ಉಳಿಸುತ್ತವೆ. ಆದರೂ ಆತನ ನಿಷ್ಠೆ ಕಡಿಮೆಯಾಗಲಿಲ್ಲ. ಭಕ್ತನನ್ನು ಪರೀಕ್ಷಿಸಲೆಂದು ಬಂದ ಶಿವ 'ನೀನೇಕೆ ವಿಷವೇಕೆ ಬಿಡಿಸುವಾಯಸವೇಕೆ' ಎಂದು ಕಟಕಿ ಮಾತುಗಳನ್ನಾಡುತ್ತಾನೆ. ಶಿವನಿಂದೆಯನ್ನು ಕೇಳಿದ ರುದ್ರ ಪಶುಪತಿ ಕೋಪದಿಂದ ಶಿವನಿಗೆ 'ಎಲೆಲೆ ಶಿವನಿಂದಕನೆ ಅಡಗಡಗೆಂದು' 'ಜಲವನಭಿಮಂತ್ರಿಸಿ' ಚಿಮುಕಿಸುತ್ತಾನೆ. ಭಕ್ತನ ಈ ಅಚಲ ನಿಷ್ಠೆಗೆ ಮೆಚ್ಚಿದ ಶಿವ ತನ್ನ ನಿಜರೂಪ ತೋರುತ್ತಾನೆ.

ಕೋಳೂರ ಕೊಡಗೂಸಿನ ಕಥೆಯೂ ಇಂಥದ್ದೇ ಮುಗ್ಧ ಭಕ್ತಿಯನ್ನು ಪ್ರತಿಪಾದಿಸುತ್ತದೆ. ಶಿವನನ್ನೇ ಅರಿಯದ ಕೊಡಗೂಸು ತನ್ನ ಮುಗ್ಧ ಭಕ್ತಿಯಿಂದಾಗಿ ಶಿವನಿಗೆ ಹಾಲುಣಿಸುವಂತಹ ಕಥೆಯನ್ನು ಕವಿ ಇಲ್ಲಿ ಚಿತ್ರಿಸುತ್ತಾನೆ. ಕೊಡಗೂಸಿಗೆ ಶಿವನೆಂದರೆ ಯಾರು? ಅವನು ಹೇಗಿದ್ದಾನೆ ಎಂಬ ಯಾವ ವಿಚಾರಗಳೂ ಗೊತ್ತಿಲ್ಲ. ಆದರೆ ತಾಯಿ ಹೇಳಿದ ಶಿವನ ರೂಪವನ್ನು ನಂಬುತ್ತಾಳೆ. ಮಗಳೆ "ಏನವ್ವ ನಲವಿಂ ಕಲ್ಲಿನಾಥಂಗೆ .....ಹಾಲನೆರೆ ಹೋಗವ್ವ ಸದ್ಗುಣ ನಿಕಾಯಂಗೆ"[3] ಎನ್ನಲು, ಏನೂ ಅರಿಯದ ಕೊಡಗೂಸು ಹಾಲಿನ ಬಟ್ಟಲು ಹಿಡಿದು ಶಿವಾಲಯಕ್ಕೆ ಬಂದು, ಶಿವನನ್ನು ಹಾಲು ಕುಡಿಯುವಂತೆ ಬೇಡುತ್ತಾಳೆ. ಆದರೆ ಎಷ್ಟು ಹೊತ್ತಾದರೂ ಶಿವ ಹಾಲು ಕುಡಿಯುವುದಿಲ್ಲ. ಕೊಡಗೂಸಿಗೆ ಶಿವನ ಮೌನವನ್ನು ಕಂಡು ದುಃಖವಾಗುತ್ತದೆ. ಆ ದುಃಖದಲ್ಲಿ ಹಲವು ರೀತಿಯಲ್ಲಿ ಪ್ರಲಾಪಿಸುತ್ತಾಳೆ. ಮುಗ್ಧೆಯ ಈ ಪ್ರಲಾಪಕ್ಕೆ ಮರುಗಿದ ಶಿವ ಪ್ರತ್ಯಕ್ಷನಾಗಿ ಹಾಲು ಕುಡಿಯುತ್ತಾನೆ.

ಕೊಡಗೂಸು ಮತ್ತು ರುದ್ರಪಶುಪತಿ ಮುಗ್ಧ ಭಕ್ತಿಯಿಂದಾಗಿ ಶಿವನ ಕೃಪೆಗೆ ಪಾತ್ರರಾದರೆ ಓಹಿಲಯ್ಯ, ತಿರುನೀಲಕಂಠ, ಕಾರಿಕಾಲಮ್ಮೆ ಮುಂತಾದವರು ತಮ್ಮ ಉಗ್ರ ಭಕ್ತಿಯಿಂದಲೇ ಶಿವಕೃಪೆಗೆ ಪಾತ್ರರಾದವರು. ಓಹಿಲಯ್ಯ, ಸಾವನ್ನು ಮಣಿಸಬಲ್ಲವನು ಸೌರಾಷ್ಟ್ರದ ಸೋಮನಾಥನೊಬ್ಬನೇ ಎಂದು ಕೇಳಿ, ರಾಜ್ಯ ಸಿರಿಸಂಪತ್ತುಗಳನ್ನು ತ್ಯಜಿಸಿ ಕಾಲುನಡಿಗೆಯಲ್ಲಿ

ಬಂದು ಸೋಮನಾಥನ ಸೇವೆಗೆ ನಿಂತನು. ಅವನ ಭಕ್ತಿಗೆ ಮೆಚ್ಚಿದ ಶಿವ "...... ಪನ್ನೆರಡು ವತ್ಸರಂ ಹಿಗ್ಗಿ ಹೋಜೆಯೇಜ್ ಗುಗ್ಗುಳವನೆಮಗಿಕ್ಕಿ ಬಳಿಕ್ಕಂ ನಿನ್ನ ಮನೋರಥಮಂ ಮಾಳ್ಪೆ"[4] ಎಂದು ಗುಗ್ಗುಳ ಸಲ್ಲಿಸುವ ವ್ರತ ಆಚರಿಸಲು ಅಪ್ಪಣೆ ಮಾಡುತ್ತಾನೆ. ಅವರಂತೆ ಓಹಿಲಯ್ಯ ಹಿಗ್ಗಿ ವ್ರತವನ್ನಾಚರಿಸಲು ಪ್ರಾರಂಭಿಸುತ್ತಾನೆ. ಹನ್ನೆರಡು ವರ್ಷಗಳು ಹೀಗೆ ವ್ರತಾಚರಣೆಯಲ್ಲಿ ಕಳೆಯುತ್ತಿದ್ದಂತೆ, ಶಿವನಿಗೆ ಮತ್ತೆ ಹನ್ನೆರಡು ವರ್ಷಗಳ ಕಾಲ ಓಹಿಲಯ್ಯ ನೀಡುವ ಪ್ರಸಾದವನ್ನು ಸವಿಯಬೇಕೆನಿಸುತ್ತದೆ. ಅಂತೆಯೇ ಇನ್ನೂ ಹನ್ನೆರಡು ವರ್ಷ ಆ ನೇಮ ಸಲ್ಲಿಸಬೇಕೆಂದು ಹೇಳುತ್ತಾನೆ. ಹನ್ನೆರಡು ವರ್ಷಗಳ ಕಾಲ ಸತತವಾಗಿ ಗುಗ್ಗುಳ ಸೇವೆ ಮಾಡಿದ್ದ ಓಹಿಲಯ್ಯ ಮತ್ತೆ ಸೇವೆಯನ್ನು ಆರಂಭಿಸುತ್ತಾನೆ. ಗುಗ್ಗುಳಕ್ಕಾಗಿ ಅಲೆದು ಅಲೆದು ಓಹಿಲಯ್ಯನ "ಬಲವಳಿದು ಪೆಂಪಱಸಿ ಹಚ್ಚೆ ಹುಣ್ಣಂತಾಗಿ 'ಅಂಗಾಲೊಳುರಿಗೆಳ್ವ ಜೊಕ್ಕೆ ನೆತ್ತರನುಗುಳೆ' ಅಂಗದೊಳಗುಳ್ಳ ಸರ್ವತ್ರಾಣಮುಂ ಜಗುಳೆ"[5] ಅವಯವಗಳು ಸಡಿಲವಾಗುತ್ತವೆ. ಆದರೂ ಹಿಡಿದ ನೇಮವನ್ನು ಬಿಡದೆ ಪಾಲಿಸುತ್ತಾ, ಬಂದ ಕಷ್ಟಗಳನ್ನೆಲ್ಲ ಸಹಿಸುತ್ತಾನೆ. ಆಗ ಶಿವ ಓಹಿಲಯ್ಯನ ಭಕ್ತಿಗೆ ಮೆಚ್ಚಿ ಗಣಪದವಿ ನೀಡುತ್ತಾನೆ.

ಚೋಳದೇಶದ ಕಾರಿಕಾಲಮ್ಮೆ ಅತ್ಯಂತ ಗುಪ್ತ ಭಕ್ತೆ. ಈ ಭಕ್ತಿ ಅವಳ ಗಂಡ ಮಾಣಿಕ ಶೆಟ್ಟಿಗೆ ಪ್ರಕಟವಾಗಿ ಅವನು ಹೆಂಡತಿಯನ್ನು ಅಪಾರ ಭಕ್ತಿಯಿಂದ ತಾಯಿಯೆಂದು ಭಾವಿಸಿ ವರ್ತಿಸಿದನು. ಇದರಿಂದ 'ಸಿಗ್ಗಾ'ದ ಕಾರಿಕಾಲಮ್ಮೆ ಮನೆ ಬಿಟ್ಟು ಹೊರಡುತ್ತಾಳೆ. ಅವಳ ಸೌಂದರ್ಯರಾಶಿಗೆ ಮರುಳಾಗಿ ಕಾಮುಕ ಜನ ಅವಳ ಹಿಂದೆ ಬರುತ್ತಾರೆ. ಕೊನೆಗೆ, ಕಾರಿಕಾಲಮ್ಮೆ ಸ್ಥೂಲ ಶರೀರೆಯಾಗಿ ನಡೆಯುತ್ತಾಳೆ. ಎಲುಬಿನ ಹಂದರದ ದೇಹವನ್ನು ಕಂಡು ಜನರೆಲ್ಲ ಪಿಶಾಚಿಯೆಂದು ತಿಳಿದು ಓಡುತ್ತಾರೆ. ಆಗ ಅವಳು ಶಿವನನ್ನು ಪ್ರಾರ್ಥಿಸುತ್ತಾಳೆ. ಪ್ರತ್ಯಕ್ಷನಾದ ಶಿವ 'ನಡೆ ತಾಯೆ ಕೈಲಾಸ ಪುರಕೆ' ಎಂದು ಹೇಳಿ ಲಿಂಗದಲ್ಲಿ ಮಾಯವಾಗುತ್ತಾನೆ. ಕೈಲಾಸ ಪುರದತ್ತ ಕಾರಿಕಾಲಮ್ಮೆ ನಡೆಯುವಾಗ ಶರಣರು ನಡೆದು ಹೋದ ಹೆಜ್ಜೆಯನ್ನು ಕಂಡು ಆ ಹೆಜ್ಜೆಗಳು ತನ್ನ ಶಿರದ ಮೇಲಿರಬೇಕೆಂದು ಬಯಸಿ ತಲೆಕೆಳಗಾಗಿ, ಆ ಒಂದೊಂದು ಹೆಜ್ಜೆಯ ಮೇಲೂ ತನ್ನ ಶಿರವನ್ನಿಡುತ್ತಾ ಕೈಲಾಸಕ್ಕೆ ನಡೆಯುತ್ತಾಳೆ.

ತಿರುನೀಲಕಂಠನದೂ ಇಂಥದ್ದೇ ಉಗ್ರ ಭಕ್ತಿ. ತಪ್ಪು ಕಲ್ಪನೆಯ ಕಾರಣ ನನ್ನನ್ನು 'ಮುಟ್ಟಿದರೆ ಶಿವನಾಣೆ' ಎಂದು ಆಣೆ ಹಾಕಿದ ಪತ್ನಿಯ ಮಾತಿನಂತೆ, ಅವಳನ್ನು ಮುಟ್ಟದೆಯೇ ಜೀವನದ ತೊಂಬತ್ತು ವರ್ಷಗಳನ್ನು ಕಳೆದನು. ಅವರಿಬ್ಬರನ್ನು ಪರಸ್ಪರ ಮುಟ್ಟಿಸುವುದಕ್ಕಾಗಿ ಶಿವ ಹಲವು ಪ್ರಯತ್ನಗಳನ್ನು ನಡೆಸುತ್ತಾನೆ. ಆದರೂ ತಿರುನೀಲಕಂಠ ಹೆಂಡತಿಯನ್ನು ಮುಟ್ಟುವುದಿಲ್ಲ. ಕೊನೆಗೆ ಶಿವನೇ, ಕೋಲು ಹಿಡಿದು ಕೊಳದಲ್ಲಿ ಮುಳುಗಿ ಏಳುವಂತೆ ತಿಳಿಸಲಾಗಿ ಪತಿ ಪತ್ನಿಯರು ಕೋಲು ಹಿಡಿದು ಕೊಳದಲ್ಲಿ ಮುಳುಗುತ್ತಾರೆ. ಮೇಲೆ ಎದ್ದಾಗ ಅವರ ವೃದ್ಧಾಪ್ಯವೆಲ್ಲ ಕಳೆದು ನವ ಯೌವನ ಪಡೆದಿರುತ್ತಾರೆ.

ಹೀಗೆ ಒಬ್ಬೊಬ್ಬರೂ ಒಂದೊಂದು ಸಾಧನೆಗೈಯುತ್ತಾರೆ. ಮಲುಹಣ, ನಂಬಿಯಣ್ಣ ಸಂಥವರು ವೇಶ್ಯಾ-ವಿಟ ಜೀವನದಲ್ಲಿ ಮೊದಲುಗೊಂಡ ಚಿತ್ತದಾತುರದ ಮಹೋನ್ನತೀಕರಣ

ವನ್ನು ಸಾಧಿಸಿ ದೈವೀ ಕೃಪೆಗೆ ಪಾತ್ರರಾಗುತ್ತಾರೆ. ಓಹಿಲಯ್ಯ, ಮಳೆಯರಾಜನಂತಹವರು ಮಾನವ ಜೀವನದಲ್ಲಿ ಸಾವಿನ ಭೀತಿಯನ್ನೇ ಅಳಿಸಿ ಶಿವಕೃಪೆಗೆ ಪಾತ್ರರಾಗುತ್ತಾರೆ. ಉದ್ಭಟದೇವ, ಹಲಾಯುಧ, ಅಮರನೀತಿ ಮುಂತಾದವರು ದೈವೀಶಕ್ತಿಯ ಪ್ರದರ್ಶನ ಸ್ಪರ್ಧೆಯಲ್ಲಿ ಸಜೀವವಾಗಿಯೇ ವಿಮಾನದಲ್ಲಿ ಹೋಗುತ್ತಾರೆ. ಜೊತೆಗೆ ತಮ್ಮ ಕುಟುಂಬ, ದೇಶ ಅಥವಾ ಪುರವನ್ನೋ ಕೈಲಾಸಕ್ಕೆ ತೆಗೆದುಕೊಂಡು ಹೋಗುತ್ತಾರೆ. ಇನ್ನೂ ಕೆಲವರು ವೀರಾವೇಶದಿಂದ ಹೋರಾಡಿ ಶಿವನ ಮೆಚ್ಚುಗೆಗೆ ಪಾತ್ರರಾಗುತ್ತಾರೆ. ಅವರಲ್ಲಿ ಆದಯ್ಯ ಮತ್ತು ಏಕಾಂತರಾಮಯ್ಯನ ಸಾಧನೆಗಳು ಅದ್ಭುತವಾಗಿವೆ. ಕಣ್ಣಪ್ಪ ತನ್ನ ಕಣ್ಣನ್ನೇ ಕಿತ್ತು ಶಿವನಿಗೆ ನೀಡುವುದರ ಮೂಲಕ ತನ್ನ ಉತ್ಕಟ ಭಕ್ತಿಯನ್ನು ಪ್ರಕಟಿಸಿದರೆ , 'ಮೊನೆಯಿಡುವ' ತನ್ನನ್ನೇ ಇರಿದುಕೊಂಡು ತನ್ನ ಭಕ್ತಿಯನ್ನು ಪ್ರಕಟಿಸುತ್ತಾನೆ. ಹಾಗೆಯೇ 'ಅರಿವಾಳ್ತಂಡ' ತನ್ನ ಶಿರವನ್ನೇ ಕತ್ತರಿಸಿಕೊಳ್ಳುತ್ತಾನೆ. 'ಕಣಂಬುಲ್ಲ ನಂಬಿ' ಶಿರಕ್ಕೇ ಬೆಂಕಿ ಹಚ್ಚಿಕೊಳ್ಳುತ್ತಾನೆ. 'ಚಂಡೇಶಪಿಳ್ಳೆ' ತಂದೆಯನ್ನೇ ಕೊಲ್ಲುತ್ತಾನೆ. ಒಲಘಾಂಡಮೂರ್ತಿ ತನ್ನ ಮೊಳಕೈಯನ್ನೇ ಗಂಧವೆಂದು ತೇಯುತ್ತಾನೆ. 'ಸಿರಿಯಾಳ' ಮಗನನ್ನೇ ಕತ್ತರಿಸಿ ಶಿವನಿಗೆ ಉಣಬಡಿಸುತ್ತಾನೆ. ಹೀಗೆ ಒಬ್ಬೊಬ್ಬ ಭಕ್ತನೂ ಶಿವನ ಸಾನ್ನಿಧ್ಯಕ್ಕಾಗಿ ಒಂದೊಂದು ಸಾಧನೆ ಮಾಡಿ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಾರೆ. ಆದರೆ ಈ ಎಲ್ಲರ ಭಕ್ತಿಯ ಸಾಧನೆಗಿಂತಲೂ ಬಸವಣ್ಣನ ಭಕ್ತಿ ಸಾಧನೆ ವಿಶಿಷ್ಟವಾದದ್ದು. ಆತ ಭೂಲೋಕದ ಸುಖ ದೇವಲೋಕದಲ್ಲಿ ದೊರೆಯಲು ಸಾಧ್ಯವೇ? ಎಂದು ಪ್ರಶ್ನಿಸಿ, ಮರ್ತ್ಯಕ್ಕೇ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಾನೆ. ಅಲ್ಲಿದ್ದೇ ಎಲ್ಲವನ್ನೂ ಸಾಧಿಸುತ್ತಾನೆ.

## 2.5 ಕಥಾನಾಯಕನ ಮಹಿಮಾ ಪ್ರಕಾಶನಕ್ಕೆ ಕವಿಯು ಸೃಷ್ಟಿಸುವ ಸಂದರ್ಭ

ಪ್ರಾರಂಭದಲ್ಲಿ ಭಕ್ತರ ಕಥೆಗಳು ಸಾಮಾನ್ಯ ರೀತಿಯಲ್ಲೇ ರಚನೆಯಾಗಿವೆ. ಕಥೆ ಮುಂದು ವರಿದಂತೆ ಭಕ್ತನ ಮಹಿಮೆಯ ಪ್ರಕಾಶನಕ್ಕಾಗಿ ಕವಿ ಹಲವು ಸಂದರ್ಭಗಳನ್ನು ಸೃಷ್ಟಿಸುತ್ತಾನೆ. ಅತ್ಯಂತ ಸಹಜ ಎಂಬಂತೆ ಸೃಷ್ಟಿಯಾಗುವ ಈ ಸಂದರ್ಭಗಳು ಕಾವ್ಯದಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತವೆ.

ಮಲುಹಣನ ರಗಳೆಯಲ್ಲಿ ವಿರಹಿ ಮಲುಹಣನು ಪ್ರೇಯಸಿಗಾಗಿ, ಕೊರೆಯುವ ಚಳಿಯಲ್ಲಿ ಹಿಮದ ರಾಶಿಯ ಮಧ್ಯೆ ಅವಳ ಮನೆಯ ಹಿತ್ತಲಿನಲ್ಲಿ ಕಾಯ್ದು ಕೂರುವ ಸಂದರ್ಭವೊಂದು ಬರುತ್ತದೆ. ಹರಿಹರ ಆ ಸಂದರ್ಭವನ್ನು ಅದ್ಭುತವಾಗಿ ಸೃಷ್ಟಿ ಮಾಡಿದ್ದಾನೆ. ಆ ಸಂದರ್ಭವೇ ಅವನನ್ನು ಲೌಕಿಕದಿಂದ ಅಲೌಕಿಕದ ಕಡೆ ಸರಿಯುವಂತೆ ಮಾಡುತ್ತದೆ. ಆ ವರೆಗೂ ಕೇವಲ ಕಾಮದಾಹಿಯಾಗಿ ಲೌಕಿಕದಲ್ಲಿಯೇ ವ್ಯವಹರಿಸುತ್ತಿದ್ದ ಮಲುಹಣ ಅಲ್ಲಿಂದ ಮುಂದೆ ಮಹಾ ಭಕ್ತನಾಗಿ ಮಾರ್ಪಡುತ್ತಾನೆ. ನನ್ನ ಮೇಲೆ ಇಡುವ ಚಿತ್ತದಾತುರತೆಯನ್ನು ಪನ್ನಗಾಭರಣನಲ್ಲಿ ಇಡು, ಎಂಬ ಮಲುಹಣೆಯ ಮಾತೇ ಅವನ ಪಾಲಿಗೆ ದಿವ್ಯವಾಣಿ ಯಾಗುತ್ತದೆ. ವಿಷಯಾಸಕ್ತನಾಗಿ ಅಲೆಯುತ್ತಿದ್ದ ಅವನು ತನ್ನ ಮನಸ್ಸನ್ನು ಶಿವನೆಡೆಗೆ

ಹರಿಸುತ್ತಾನೆ. ಮಲುಹಣನ ಈ ಶುದ್ಧ ಭಕ್ತಿಗೆ ಶಿವನೊಲಿದು ಮತ್ತೆ ಮಲುಹಣೆಯೊಡನೆ ಹಲವು ಕಾಲ ಬಾಳುವಂತೆ ಮಾಡುತ್ತಾನೆ. ಅವರ ಪ್ರೇಮದ ಬದುಕು ತೀರುತ್ತಾ ಬಂದಂತೆ ಅವರನ್ನು ಕೈಲಾಸಕ್ಕೆ ಕರೆಸಿಕೊಂಡು ಗಣಪದವಿ ನೀಡಿ ಗೌರವಿಸುತ್ತಾನೆ.

'ತಿರುನೀಲಕಂಠನ ರಗಳೆ'ಯಲ್ಲಿ ಭಕ್ತ ತಿರುನೀಲಕಂಠ ಒಬ್ಬ ಸಾಮಾನ್ಯನಾಗಿದ್ದು, ಕಥೆ ಸಾಮಾನ್ಯ ರೀತಿಯಲ್ಲೇ ಸಾಗುತ್ತಿರುತ್ತದೆ. ಆದರೆ ವೇಶ್ಯೆಯೊಬ್ಬಳು ತಿರುನೀಲಕಂಠನ ಮೈಮೇಲೆ ಎಂಜಲು ನೀರೆರಚುವ ಸಂದರ್ಭವನ್ನು ಸೃಷ್ಟಿಸುವ ಮೂಲಕ ಕವಿ ಕಥೆಗೆ ಅದ್ಭುತ ತಿರುವು ನೀಡುತ್ತಾನೆ. ಗಂಡ ತಿರುನೀಲಕಂಠ ನಡುರಾತ್ರಿಯಲ್ಲಿ ಹೊಸ ವಸ್ತ್ರದೊಡನೆ ಆಗಮಿಸಿದ್ದನ್ನು ಕಂಡು ಸಂಶಯಗೊಂಡ ಪತ್ನಿ, ಅವನು ತನ್ನನ್ನು ಮುಟ್ಟಲು ಬಂದಾಗ 'ಮುಟ್ಟಿದೊಡೆ ಶಿವನಾಣೆ' ಎಂದು ನುಡಿಯುತ್ತಾಳೆ. ಪ್ರೀತಿಯ ಹೆಂಡತಿಯ ಈ ಮಾತಿನಿಂದ ತಿರುನೀಲಕಂಠ ವ್ಯಥೆಗೊಳಗಾಗುತ್ತಾನೆ. ಹಲವು ಕಾಲ ಹೆಂಡತಿಯನ್ನು ಮುಟ್ಟದೇ ಬದುಕುತ್ತಾನೆ. ಅತಿಶಯವಾದ ತಿರುನೀಲಕಂಠ ದಂಪತಿಗಳ ನಿಷ್ಠೆಯನ್ನು ಪರೀಕ್ಷಿಸಲು ಶಿವ ಪ್ರತ್ಯಕ್ಷನಾಗುವನು. ಶಿವ ಒಡ್ಡಿದ ಪರೀಕ್ಷೆಯಲ್ಲಿ ಗೆದ್ದ ದಂಪತಿಗಳು ಮತ್ತೆ ತಾರುಣ್ಯ ಪಡೆಯುತ್ತಾರೆ. ಹಲವು ಕಾಲ ಬಾಳಿ ಮತ್ತೆ ಶಿವನ ಸಾನ್ನಿಧ್ಯ ಸೇರುವರು.

'ಕೊಡಗೂಸಿನ ರಗಳೆ'ಯಲ್ಲಿ ಇಂಥದ್ದೇ ಬದಲಾವಣೆಯನ್ನು ಕಾಣುತ್ತೇವೆ. ಕೊಡಗೂಸಿನ ತಾಯಿ ಮುಟ್ಟಾಗುವುದು ಕಥೆಯಲ್ಲಿನ ಮಹತ್ವದ ಬದಲಾವಣೆ. ಆ ವರೆಗೂ ದೇವಸ್ಥಾನಕ್ಕೇ ಹೋಗದಿದ್ದ ಕೊಡಗೂಸು ಅಂದು ದೇವಸ್ಥಾನಕ್ಕೆ ಹೋಗಲು ಕಾರಣವಾದದ್ದು ಈ ಸಂದರ್ಭವೇ ಆಗಿದೆ.

'ಮನುಚೋಳನ ರಗಳೆ'ಯಲ್ಲಿ ಕರುವೊಂದು ರಥದ ಗಾಲಿಗೆ ಸಿಕ್ಕಿ ಸಾಯುವಂಥ ಸಂದರ್ಭವೊಂದನ್ನು ಕವಿ ಸೃಷ್ಟಿಸುತ್ತಾನೆ. ತಂದೆ-ಮಕ್ಕಳ ಪ್ರೀತಿ ವೈಭವಗಳ ಜೊತೆ ಸಾಗಬೇಕಾಗಿದ್ದ ಕಥೆ, ಈ ಘಟನೆಯಿಂದಾಗಿ ಇದ್ದಕ್ಕಿದ್ದಂತೆ ದುಃಖದ ಕಡೆ ಸರಿಯುತ್ತದೆ.

'ಹೇರೂರ ಹೆಂಗೂಸಿನ ರಗಳೆ'ಯಲ್ಲೂ ಇಂಥದ್ದೇ ಒಂದು ಸಂದರ್ಭವಿದೆ. ಹೇರೂರ ಹೆಂಗೂಸು ಶಿವನ ಪರಮಭಕ್ತೆ, ಮದುವೆಯನ್ನೇ ಬಯಸದವಳು. ಆದರೆ ಇದ್ದಕ್ಕಿದ್ದಂತೆ ಬಲವಂತವಾಗಿ ಮದುವೆಯಾಗುತ್ತದೆ. ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ಊಟಕ್ಕಾಗಿ ಬಂಡಿಯನ್ನು ನಿಲ್ಲಿಸುವ ಸಂದರ್ಭವೊಂದನ್ನು ಕವಿ ಇಲ್ಲಿ ಸೃಷ್ಟಿಸುತ್ತಾನೆ. ಇಲ್ಲಿಂದ ಕಥೆ ಇದ್ದಕ್ಕಿದ್ದಂತೆ ಹೊಸ ತಿರುವನ್ನು ಪಡೆಯುತ್ತದೆ. ಗಂಡನ ಮನೆಯವರು ಊಟದ ತಯಾರಿಯಲ್ಲಿ ನಿರತರಾಗಿರುವ ಸಂದರ್ಭದಲ್ಲಿ ಹೇರೂರ ಹೆಂಗೂಸು ಶಿವಮಂದಿರವನ್ನು ಹುಡುಕುತ್ತಾ ಹೋಗುತ್ತಾಳೆ. ದೂರದ ಶಿವಾಲಯದಲ್ಲಿ ಶಿವನಿಗಾಗಿ ಪ್ರಾರ್ಥಿಸುತ್ತಾಳೆ. ಶಿವನು ಹೆಂಗೂಸಿನ ಆರ್ತನಾದಕ್ಕೆ ಮರುಗಿ ಅವಳನ್ನು ಗಂಡಾಗಿ ಪರಿವರ್ತಿಸುತ್ತಾನೆ. ಇದರೊಡನೆ ಅವಳ ಮುಂಬಾಳಿನ ದುರಂತಗಳೆಲ್ಲವೂ ತಪ್ಪುತ್ತವೆ. ಸಂಸಾರಿಯಾಗಿ ಬದುಕಬೇಕಾದವಳು ಅಪ್ರತಿಮ ಶಿವಭಕ್ತೆಯಾಗಿ ಕಾಣಿಸಿಕೊಳ್ಳುತ್ತಾಳೆ.

ಇಂಥ ಸಂದರ್ಭಗಳು ಹರಿಹರ ಕವಿಯ ಇನ್ನೂ ಅನೇಕ ರಗಳೆಗಳಲ್ಲಿ ಬರುತ್ತವೆ. ಅವು ಕಥೆಯ ಕೇಂದ್ರ ಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ.

## 2.6 ಭಕ್ತಿಯ ಪ್ರದರ್ಶನಕ್ಕೆ ಕಲ್ಪಿತವಾಗುವ ಪರೀಕ್ಷಾವಕಾಶ

ಕಥಾನಾಯಕನ ಭಕ್ತಿಯ ಮಹಿಮೆಯನ್ನು ಪ್ರದರ್ಶಿಸಲು ಕವಿ ಸೃಷ್ಟಿಸುವ ಹಲವು ಸಂದರ್ಭಗಳಂತೆ, ಶಿವನೂ ಕೆಲವು ಪರೀಕ್ಷೆಗಳನ್ನು ಭಕ್ತನಿಗೆ ಒಡ್ಡುತ್ತಾನೆ. ಶಿವಕೃಪೆ ಬಯಸಿದ ಭಕ್ತ ಸಾಮಾನ್ಯನಿರಲಿ, ಅಸಾಮಾನ್ಯನಿರಲಿ, ಶಿವ ಒಡ್ಡುವ ಪರೀಕ್ಷೆಗಳಿಗೆ ಒಳಗಾಗಲೇಬೇಕು. ಅವನೆದುರು ತಮ್ಮ ಭಕ್ತಿಯ ಮಹಿಮೆಯನ್ನು ಪ್ರದರ್ಶಿಸಬೇಕು. ಆ ಪರೀಕ್ಷೆಯಲ್ಲಿ ಜಯಗಳಿಸಿದನೆಂದರೆ ಅವನು ಶಿವನ ಸಾನ್ನಿಧ್ಯ ಪಡೆಯುವುದು ಖಚಿತ. ಅದಕ್ಕಾಗಿಯೇ ಶಿವನು, ಅತ್ಯಂತ ಕಠಿಣ ಪರೀಕ್ಷೆಗಳನ್ನು ಭಕ್ತನಿಗೆ ಒಡ್ಡಿ, ಎಲ್ಲಿಯವರೆಗೆ ತನಗೆ ಆ ಭಕ್ತನಲ್ಲಿ ವಿಶ್ವಾಸ ಮೂಡುತ್ತದೆಯೋ ಅಲ್ಲಿಯವರೆಗೂ ಪರೀಕ್ಷಿಸುತ್ತಾನೆ. ಭಕ್ತನ ನಂಬಿಕೆ ಶುದ್ಧವಾದದ್ದು ಎಂದು ಗೊತ್ತಾದಾಗ ಪರೀಕ್ಷೆಯನ್ನು ನಿಲ್ಲಿಸುತ್ತಾನೆ.

ಶಿವ ನೀಡುವ ಪರೀಕ್ಷೆಗಳು ಎಷ್ಟೇ ಕಠಿಣವಾಗಿರಲಿ ಸಾಮಾನ್ಯವಾಗಿ ಭಕ್ತನೇ ಜಯ ಗಳಿಸುವವನು. ಹರಿಹರನ ಯಾವ ಕಥೆಯಲ್ಲೂ ಭಕ್ತನು ಶಿವನಿಗೆ ಸೋತ ಉದಾಹರಣೆಗಳಿಲ್ಲ. ಭಕ್ತನ ಈ ವಿಜಯಗಳಿಂದ ಶಿವ ಆನಂದಪರವಶನಾಗುತ್ತಾನೆ. ಆ ಆನಂದದಲ್ಲಿ ತನ್ನ ಆಪ್ತರನ್ನೆಲ್ಲ ಕರೆದು ಭಕ್ತನ ಮಹಿಮೆಯನ್ನು ಅತಿಶಯವಾಗಿ ಪರಿಚಯಿಸುತ್ತಾನೆ. ಅನಂತರ ಎಲ್ಲ ಭಕ್ತರಿಗೂ ಗಣಪದವಿ ನೀಡಿ ಗೌರವಿಸುತ್ತಾನೆ. ಈ ಒಂದು ಚಿತ್ರ ಹರಿಹರನ ಎಲ್ಲ ಪುರಾತನರ ರಗಳೆಗಳಲ್ಲೂ ಕಂಡುಬರುತ್ತದೆ. ಆ ನಿಟ್ಟಿನಲ್ಲಿ ಪ್ರಮುಖ ರಗಳೆಗಳನ್ನು ಇಲ್ಲಿ ಗಮನಿಸಬಹುದು.

'ತಿರುನೀಲಕಂಠ ರಗಳೆ'ಯಲ್ಲಿ ಬರುವ ಒಂದು ಸಂದರ್ಭ: ಇಲ್ಲಿ ತಿರುನೀಲಕಂಠ ಎಂಬ ಅಪ್ರತಿಮ ಭಕ್ತನೊಬ್ಬ 'ಮುಟ್ಟಿದೊಡೆ ಶಿವನಾಣೆ' ಎಂಬ ಪತ್ನಿಯ ಮಾತಿನಂತೆ ಹಲವು ಕಾಲ ಪತ್ನಿಯನ್ನು ಮುಟ್ಟದೆಯೇ ಬಾಳುತ್ತಿದ್ದ. ಈ ಇಬ್ಬರ ವ್ರತಾಚರಣೆ ಬಾಹ್ಯಗೋಚರ ವಾಗಿರಲಿಲ್ಲ. ಅದನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಶಿವನು ತಿರುನೀಲಕಂಠನನ್ನು ಪರೀಕ್ಷಿಸಲು ಮುಂದಾಗುತ್ತಾನೆ. ಭಕ್ತರ ಬಳಿ ಬಂದು, ನನ್ನ ಹತ್ತಿರ ಒಂದು ಪಾತ್ರೆ ಇದೆ ಇದನ್ನು ಬಚ್ಚಿಟ್ಟು ಕೊಂಡು ನಾನು ಕೇಳಿದಾಗ ಕೊಟ್ಟರೆ ಸಾಕು. ಈ ಪಾತ್ರೆ ಸಾಮಾನ್ಯವಾದುದೆಂದು ತಿಳಿದೀರಿ! ಇದು ನಮ್ಮ ಭಕ್ತರು ಕೊಟ್ಟ ಪಾತ್ರೆ. ಶಿವನೂ ಬಯಸುತ್ತಿರುವ ಶ್ರೇಷ್ಠ ವಸ್ತು. ಇದು ಬೇಡಿದುದನ್ನು ಕೊಡುವ ಮಹಾ ಸಿದ್ಧಿಯುಳ್ಳದ್ದು! ಎಂದು ಎಚ್ಚರಿಸಿ ಅವರಲ್ಲಿ ಪಾತ್ರೆಯನ್ನಿಟ್ಟು ಹೊರಟುಹೋಗುತ್ತಾನೆ. ಸತಿಪತಿಯರಿಬ್ಬರೂ ಪಾತ್ರೆಯನ್ನು ಎಚ್ಚರಿಕೆಯಿಂದ ಕಾಯುತ್ತಾರೆ. ಮರುದಿನವೇ ಬಂದ ಶಿವ ಪಾತ್ರೆಯನ್ನು ಕೊಡುವಂತೆ ಕೇಳುತ್ತಾನೆ. ಆದರೆ ಆ ಹೊತ್ತಿಗೆ ಸತಿಪತಿಯರು ಬಚ್ಚಿಟ್ಟಿದ್ದ ಪಾತ್ರೆ ಮಾಯವಾಗಿರುತ್ತದೆ. ಅವರಿಬ್ಬರ ಮೇಲೂ ಕಳ್ಳತನದ ಆರೋಪ ಹೊರಿಸಿದ ಶಿವ, ಇಬ್ಬರನ್ನೂ ಪಂಚಾಯತಿಗೆ ಕೂರಿಸುತ್ತಾನೆ. ತಿರುನೀಲಕಂಠ ದಂಪತಿಗಳು ಪಂಚಾಯತಿಯಲ್ಲೂ ಸರಿಯಾದ ಉತ್ತರ ನೀಡುವುದಿಲ್ಲ. ಆಗ ಶಿವನು ತಾವೇ ಪಾತ್ರೆಯನ್ನು ಬಚ್ಚಿಟ್ಟುಕೊಂಡು ನಿರಪರಾಧಿಗಳಂತೆ ನಟಿಸುತ್ತಿದ್ದಾರೆ ಎಂದು ಕೂಗಾಡ ತೊಡಗುತ್ತಾನೆ. 'ಮೂವಾಯಿಲರು' ಸಮಸ್ಯೆಯನ್ನು ಬಗೆಹರಿಸಲಾರದವರಾಗುತ್ತಾರೆ. ಆಗ

ಶಿವನೇ ಒಂದು ಮಾರ್ಗವನ್ನು ಸೂಚಿಸುತ್ತಾನೆ. "........ತಮ್ಮರಸಿಯರ ಕೈವಿಡಿದು ಕೊಂಡದೊಳು ಮುಳುಗಿಯೀ ನೆರೆದವರ ಮುಂತೆ ಸೂರುಳಿತಪದು ಸಾಲ್ಗೆಂದು"[6] ನುಡಿಯುತ್ತಾನೆ. ಮೂವಾಯಿಲರಿಗೂ ಇದು ಸರಿ ಎಂಬಂತೆ ಕಾಣುತ್ತದೆ. ಆದರೆ ದಂಪತಿಗಳು ಇಕ್ಕಟ್ಟಿಗೆ ಸಿಕ್ಕುತ್ತಾರೆ. "ಪಿಡಿಯೆನೆನ್ನಯ ಸತಿಯ ಕಯ್ಯನೇನಾದೊಡಂ/ಪಿಡಿಯೆನೀಧರೆ ಮೇಲೆ ಕೆಡೆದೊಡಂ ಸತ್ತೊಡಂ"[7] ಎಂದು ತಿರುನೀಲಕಂಠ ನುಡಿಯುತ್ತಾನೆ. ಶಿವ ಎಲ್ಲರ ಎದುರು ಇವರು ಕಳ್ಳರು, ಸುಳ್ಳರು ಎಂದು ಕೂಗಾಡುತ್ತಾನೆ. ಪರಿಸ್ಥಿತಿಯನ್ನು ಬಿಡಿಸಲು ತಿಳಿಯದೆ ಪಂಚಾಯಿತಿಯು ಏಳುವುದಕ್ಕೆ ಸಿದ್ಧವಾಗುತ್ತದೆ. ಆಗ ಶಿವನು ಮತ್ತೊಂದು ಪರೀಕ್ಷೆ ಒಡ್ಡುತ್ತಾನೆ. ಕೈಯಲ್ಲಿದ್ದ ಕೋಲನ್ನು ತೋರುತ್ತಾ, ಈ ಕೋಲಿನ ಎರಡೂ ತುದಿಗಳನ್ನು ಹಿಡಿದು ದಂಪತಿಗಳಿಬ್ಬರೂ ಕೊಂಡದಲ್ಲಿ ಮುಳುಗಲಿ ಎನ್ನುತ್ತಾನೆ. ಹಾಗೆಯೇ ತಿರುನೀಲಕಂಠ ದಂಪತಿಗಳು ಕೋಲಿನ ಎರಡು ತುದಿಗಳನ್ನು ಹಿಡಿದು ಕೊಂಡದಲ್ಲಿ ಮುಳುಗುತ್ತಾರೆ. ಮತ್ತೆ ಕೊಂಡದಿಂದ ಮೇಲೆ ಏಳುವಾಗ ಹದಿನಾರರ ಹರಯದ ಯುವಕ ಯುವತಿಯರಾಗಿರುತ್ತಾರೆ.

ಇಲ್ಲಿ, ತಿರುನೀಲಕಂಠ ದಂಪತಿಗಳು ಪರಸ್ಪರ ಕೈ ಹಿಡಿಯುವಂತೆ ಶಿವ ತನ್ನ ಕೈಲಾದ ಎಲ್ಲಾ ಪ್ರಯತ್ನಗಳನ್ನು ನಡೆಸುತ್ತಾನೆ. ಆದರೂ ಆ ದಂಪತಿಗಳು ಹಿಡಿದ ವ್ರತಾಚರಣೆಗೆ ಬದ್ಧರಾಗಿದ್ದಾರೆ. ಶಿವ ಎಷ್ಟೇ ಅವಮಾನ ಮಾಡಿದರೂ ಸ್ವಲ್ಪವೂ ತಮ್ಮ ನಿರ್ಧಾರವನ್ನು ಬದಲಿಸುವುದಿಲ್ಲ. ಅಂತಿಮವಾಗಿ ಅವರ ವ್ರತ ನಿಷ್ಠೆಗೆ ಶಿವನೇ ಸೋಲುತ್ತಾನೆ. ತಾನು ನೀಡುವ ಪರೀಕ್ಷೆಯ ವಿಧಾನಗಳನ್ನು ಸಡಿಲಗೊಳಿಸುತ್ತಾನೆ. ಶಿವನ ಕಠಿಣ ಪರೀಕ್ಷೆಯಲ್ಲಿ ಭಕ್ತ ವಿಜಯ ಗಳಿಸುತ್ತಾನೆ. ಇದರಿಂದ ಶಿವನಿಗೆ ಸಂತಸವಾಗುತ್ತದೆ. ಆ ಸಂತಸದಲ್ಲಿ ಆಪ್ತನಾದ ನಂದೀಶನನ್ನು ಕರೆದ ಶಿವ ಅವನಿಗೆ-

ಏಗೆಯ್ಯರೆನ್ನ ಭಕ್ತರು ನೋಡಿದೊಂದರಿದು
ಹದಿನಾಱು ವರುಷವಂದಾಣೆಯಿಡಲೀ ಭಕ್ತಿ
ಅದಿರದಂದಿಂದುವರೆ ಮೀಱಿದಿಹುದತ್ಯುಕ್ತಿ
ಆನೊರೆದೊರೆದು ನೋಡೆ ಸೋಲದವರಿಂತಿವರು
ಈನೆಲದೊಳಾರುಮಂ ಪೋಲದವರಿಂತಿವರು.[8]

ಎಂದು ತಿರುನೀಲಕಂಠನ ಭಕ್ತಿಯ ಮಹಿಮೆಯನ್ನು ಪರಿಚಯಿಸುತ್ತಾ, ನೀಲಕಂಠನಿಗೆ ಗಣಪದವಿ ನೀಡಿ ಗೌರವಿಸುತ್ತಾನೆ.

ಇಹಃಪ್ಪಗೆಯಾಂಡನ ರಗಳೆಯಲ್ಲಿ ಬರುವ ಶಿವನ ಪರೀಕ್ಷೆ ಇನ್ನೊಂದು ರೀತಿಯದು. ಇಹ:ಪ್ಪಗೆಯಾಂಡ, ಬಂದ ಭಕ್ತರಿಗೆ ಅವರು ಕೇಳಿದುದನ್ನು ಇಲ್ಲವೆನ್ನದೆ ಕೊಡುವ ವ್ರತ ಹಿಡಿದಿದ್ದ. ಆತ ನಡೆಸುತ್ತಿದ್ದ ದಾಸೋಹವೂ ಅಪೂರ್ವವಾಗಿತ್ತು. ಸಂಪತ್ತಿನಲ್ಲಿ ಕುಬೇರನನ್ನೂ ಭಕ್ತಿಯಲ್ಲಿ ಈಶಕಾರುಣ್ಯವನ್ನೂ ಉದಾರತೆಯಲ್ಲಿ ಬಲಿ ಕರ್ಣರನ್ನೂ ಮೀರಿಸುತ್ತಿದ್ದ. ಅವನ ಈ ಗುಣಗಳನ್ನು ಪರೀಕ್ಷಿಸಲೆಂದು ಬಂದ ಶಿವ ಸುಂದರೆಯೂ ಮುಗ್ಧೆಯೂ

ಸದ್ಗುಣಾಭರಣೆಯೂ ಆದ ಇಹಃಪ್ಪಗೆಯಾಂಡನ ಪತ್ನಿ ಪತಿಹಿತವೆಯನ್ನು ತನ್ನ ಪರಿಚರ್ಯೆಗಾಗಿ ಬೇಕೆಂದು ಕೇಳುತ್ತಾನೆ. ತನ್ನ ಪರಿಚರ್ಯೆಗಾಗಿ ಪತ್ನಿಯನ್ನೇ ಕೇಳುವ ಶಿವನ ಈ ಕಠೋರ ಪರೀಕ್ಷೆಗೆ ಇಹಃಪ್ಪಗೆಯಾಂಡ ಸ್ವಲ್ಪವೂ ಅಳುಕಲಿಲ್ಲ. ಜಂಗಮನ ಬೇಡಿಕೆ ಅಸಾಧ್ಯವಾದುದೆಂದು ತೋರಲಿಲ್ಲ. ಪ್ರೀತಿಯಿಂದಲೇ ಪತಿಹಿತವೆಯನ್ನು ಕರೆದು ಶಿವನಿಗೆ ಒಪ್ಪಿಸುತ್ತಾನೆ.

ಇಹಃಪ್ಪಗೆಯಾಂಡನ ವ್ರತವನ್ನು ಕೆಡಿಸಲು ಮಾಡಿದ ಶಿವನ ಎಲ್ಲ ಪ್ರಯತ್ನಗಳು ಅವನ ಅಸಾಧಾರಣ ಭಕ್ತಿಯ ಎದುರು ನಿಲ್ಲಲಾರದೆ ಹೋಗುತ್ತವೆ. ಅಂತಿಮವಾಗಿ ಶಿವ ತನ್ನ ಸೋಲನ್ನು ಒಪ್ಪಿಕೊಳ್ಳುತ್ತಾನೆ. ಭಕ್ತನ ಈ ವಿಜಯದಿಂದ ಸಂತಸಗೊಂಡ ಶಿವ ತನ್ನ ಆಪ್ತರಾದ ನಂದೀಶ್ವರ, ವೀರಭದ್ರಾದಿ ಗಣೇಶ್ವರರಲ್ಲಿ ನಂದೀಶ್ವರನನ್ನು ಕರೆದು –

ತನ್ನ ಮನದಬಲೆಯು ಬೇಡಲಿತ್ತವರುಂಟೆ
ಎನ್ನ ಶೀಘ್ರದ ವಿಷಮಘಾತಿಗಾಂತವರುಂಟೆ[೮]

ಎಂದು ಇಹಃಪ್ಪಗೆಯಾಂಡನ ಗುಣಾತಿಶಯಗಳನ್ನು ಹೊಗಳಿ ನಂದೀಶ್ವರನಿಗೆ ಪರಿಚಯಿಸುತ್ತಾನೆ. ರನ್ನದ ವಿಮಾನವನ್ನು ಕರೆಯಿಸಿ ಭಕ್ತನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡುತ್ತಾನೆ.

'ಇಳೆಯಾಂಡಗುಡಿಮಾರನ ರಗಳೆ'ಯಲ್ಲಿ ಬರುವ ಶಿವನ ಪರೀಕ್ಷೆ ಇನ್ನೊಂದು ರೀತಿಯದು. ಇಲ್ಲಿನ ಕಥಾನಾಯಕ ಇಳೆಯಾಂಡಗುಡಿಮಾರ ಪರಮ ಶಿವಭಕ್ತನಾಗಿದ್ದು ಒಕ್ಕಲುತನ ಮಾಡುತ್ತಿದ್ದನು. ಬಂದ ಭಕ್ತರಿಗೆ ಊಟವಿಕ್ಕಿ ತೃಪ್ತಿ ಪಡಿಸಿ ಅವರು ಬಯಸಿದುದನ್ನು ನೀಡಿ ತಣಿಸುವುದು ಅವನ ನಿಯಮವಾಗಿತ್ತು. ಶಿವ ಭಕ್ತನ ಈ ನಿಷ್ಠೆಯನ್ನು ಪರೀಕ್ಷಿಸು ವುದಕ್ಕಾಗಿ ಒಮ್ಮೆ ವೃದ್ಧನ ವೇಷದಲ್ಲಿ (ಧಾರಾಕಾರವಾಗಿ ಸುರಿವ ಮಳೆಯ ನಡುರಾತ್ರಿಯಲ್ಲಿ) ಭಕ್ತನ ಮನೆಗೆ ಬರುತ್ತಾನೆ. ಬೆಂಕಿ ಕಾಯಬೇಕೆಂದು ಬಯಸುತ್ತಾನೆ. ಆ ನಡುರಾತ್ರಿಯಲ್ಲಿ ಇಳೆಯಾಂಡಗುಡಿಮಾರ ದಂಪತಿಗಳು, ಇಲ್ಲದ ಸೌದೆಗೆ ಚಿಂತಿಸದೆ, ಮನೆಯ ಸೂರನ್ನೇ ಕಿತ್ತು ಬೆಂಕಿ ಹಚ್ಚಿ ಶಿವನ ಕೈಕಾಲು ತೊಡೆಗಳನ್ನು ಕಾಯಿಸಿ ಉಜ್ಜುತ್ತಾರೆ. ಚಳಿ ಕಡಿಮೆಯಾದಂತೆಲ್ಲ ಶಿವ ಊಟವನ್ನು ಬಯಸುತ್ತಾನೆ. ಆದರೆ ಗುಡಿಮಾರನ ಮನೆಯಲ್ಲಿ ಊಟವೂ ಇರುವುದಿಲ್ಲ. ಕೂಡಲೇ ಹೊಲಕ್ಕೆ ಹೋಗಿ ಆಗ ತಾನೇ ಬಿತ್ತಿದ್ದ ಭತ್ತವನ್ನು ಆಯ್ದಾಯ್ದು ತುಂಬಿಕೊಂಡು ಬಂದು ಹೆಂಡತಿಗೆ ನೀಡುತ್ತಾನೆ. 'ಮೊಳೆವಿತ್ತ'ನ್ನು ಹುರಿದು ಅಮೃತಮಯವಾದ ಓಗರವನ್ನೂ ಕೀರೆಯ ಸೊಪ್ಪಿನ ಮೇಲೋಗರವನ್ನೂ ಹೆಂಡತಿ ಸಿದ್ಧಪಡಿಸುತ್ತಾಳೆ. ಎರಡೂ ಪರೀಕ್ಷೆಯಲ್ಲೂ ಗುಡಿಮಾರ ವಿಜಯಗಳಿಸುತ್ತಾನೆ. ಆದರೂ ಶಿವನಿಗೆ ಸಮಾಧಾನವಿಲ್ಲ. ಮತ್ತೆ ಭಕ್ತನನ್ನು ಪರೀಕ್ಷಿಸುತ್ತಾನೆ. ಊಟಕ್ಕಾಗಿ ಬಾಳೆಎಲೆ ತರಲು ಹೋದ ಗುಡಿಮಾರನ ಕುವರನನ್ನು ಹಾವು ಕಚ್ಚಿ ಸಾಯುವಂತೆ ಮಾಡುತ್ತಾನೆ. ಊಟಕ್ಕಾಗಿ ಕುಳಿತುಕೊಂಡು ಬಾಲಕನಿಲ್ಲದೆ ಊಟ ಮಾಡಲು ಹಿಂಜರಿಯುತ್ತಾನೆ. ತನ್ನ ಮಗನ ಸಾವಿನಿಂದಾದ ದುಗುಡವನ್ನು ಸ್ವಲ್ಪವೂ ತೋರಗೊಡದ ಗುಡಿಮಾರ ಕೊರಗುತ್ತ 'ಮಗನನ್ನು ಕರೆದು ನೋಡುತ್ತೇನೆ'. ಬರದಿದ್ದರೆ ಊಟಮಾಡಲು

ಒಲ್ಲದ ಶಿವನಿಗೆ ತನ್ನ ಶಿರವನ್ನರ್ಪಿಸುತ್ತೇನೆ ಎಂದುಕೊಳ್ಳುತ್ತಾ, ಸತ್ತ ಮಗನ ಬಳಿ ಬಂದು "ತತ್ಸುತನ ಹತ್ತಿರ ನಿಂದು ತನುಜ ಏಳ್ಮಗನೆ ಹರನುಣಲೊಲ್ಲನೆನುತಂದು"[10] ಕರೆಯುತ್ತಾನೆ. ಕೂಡಲೇ ಬಾಲಕ ನಿದ್ದೆಯಿಂದೇಳುವಂತೆ ಏಳುತ್ತಾನೆ.

ಹೀಗೆ ಶಿವ ಒಡ್ಡಿದ ಎಲ್ಲ ಬಗೆಯ ಪರೀಕ್ಷೆಗಳಲ್ಲೂ ಗುಡಿಮಾರ ಜಯಗಳಿಸುತ್ತಾನೆ. ಗುಡಿಮಾರನ ಭಕ್ತಿಸಾಧನೆಯ ಮುಂದೆ ಶಿವ ಸೋಲಲೇಬೇಕಾಗುತ್ತದೆ. ಅವನ ಭಕ್ತಿ ಮಹಿಮೆಗೆ ಮೆಚ್ಚಿದ ಶಿವ ಆಪ್ತನಾದ ನಂದೀಶನನ್ನು ಕರೆದು –

> **ಕಂಡೆವಿಲ್ಲಿಂತಪ್ಪ ನೇಹಮಂ ಪೊಸತಯ್ಯ**
> **ಈ ಮಳೆಯೊಳೀ ಚಳಿಯೊಳಿಂತು ಹೋದವರುಂಟೆ**
> **ಮಗನ ಸಾವಂ ನೋಡದುಣಲಿಕ್ಕಿದವರುಂಟೆ**[11]

ಎಂದು ಭಕ್ತನ ಮಹಿಮಾತಿಶಯಗಳನ್ನು ಕೊಂಡಾಡಿ ಪರಿಚಯಿಸುತ್ತಾನೆ. ಭಕ್ತನನ್ನು ಕೈಲಾಸಕ್ಕೆ ವಿಮಾನದಲ್ಲಿ ಕೊಂಡೊಯ್ದು ಗಣಪದವಿಯನ್ನಿತ್ತು ಗೌರವಿಸುತ್ತಾನೆ.

'ಮಾನಕಂಜಾರನ ರಗಳೆ'ಯಲ್ಲಿ ಬರುವ ಪರೀಕ್ಷೆಯೊಂದು ಹೀಗಿದೆ; ಇಲ್ಲಿ ಸುಂದರವಾದ ಕೇಶರಾಶಿಯನ್ನುಳ್ಳ ಮಾನಕಂಜಾರನ ಮಗಳಾದ ತಿರುಮುಡಿಯೊಡೆಯಳು ಸುಂದರವಾಗಿ ಅಲಂಕರಿಸಿಕೊಂಡು ಮದುವೆಗೆ ಸಿದ್ಧವಾಗಿ ನಿಂತಿರುತ್ತಾಳೆ. ಆ ಸಂದರ್ಭದಲ್ಲಿ ಆಗಮಿಸಿದ ಶಿವ ಅವಳ ಜಡೆಯನ್ನು ಕತ್ತರಿಸಿಕೊಡುವಂತೆ ಕೇಳುತ್ತಾನೆ. ಶಿವನ ಈ ಬಯಕೆಗೆ ಅಂಜದ ಶಿವಭಕ್ತ ಮಾನಕಂಜಾರ, ಆ ಸಭೆಯ ನಡುವೆಯೇ ಶಿವಪುತ್ರಿ ತಿರುಮುಡಿಯೊಡೆಯಳ ಜಡೆಯನ್ನು ಕತ್ತರಿಸಿ ಶಿವನಿಗೆ ಅರ್ಪಿಸುತ್ತಾನೆ. ಮಾನಕಂಜಾರನ ಅಪ್ರತಿಮ ಭಕ್ತಿಗೆ ಮೆಚ್ಚಿದ ಶಿವನು ಹರ್ಷಚಿತ್ತನಾಗುತ್ತಾನೆ. ಆ ಸಂತಸದಲ್ಲಿ ಆಪ್ತನಾದ ನಂದೀಶ ಮತ್ತು ಪಾರ್ವತಿ ದೇವಿಯರನ್ನು ಕರೆದು -

> **ಹಸೆಯ ಮೇಲಣ ಮಗಳ ಮುಡಿಯನಿತ್ತವರುಂಟೆ**
> **ಶಶಿವದನೆಯಂ ನೋಡದಿಂತು ಮಾಡಿದರುಂಟೆ**[12]

ಎಂದು ಅವರಿಗೆ ಪರಿಚಯಿಸುತ್ತಾನೆ. ಅನಂತರ, ವಿಮಾನವನ್ನು ತರಿಸಿ ಭಕ್ತನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ನೀಡುತ್ತಾನೆ.

'ಅಮರನೀತಿಯ ರಗಳೆ'ಯಲ್ಲಿ ಭಕ್ತ ಅಮರನೀತಿಯನ್ನು ಪರೀಕ್ಷಿಸುವ ಸಲುವಾಗಿ ಅವನಲ್ಲಿಗೆ ಬಂದ ಶಿವ, ಅಮರನೀತಿಗೆ ಕೌಪೀನವೊಂದನ್ನು ನೀಡಿ ನಾನು ಕೇಳುವವರೆಗೆ ಎಚ್ಚರಿಕೆಯಿಂದ ಅದನ್ನು ಇಡುವಂತೆ ತಿಳಿಸುತ್ತಾನೆ. ಅದರಂತೆ ಅಮರನೀತಿ ಆ ಕೌಪೀನವನ್ನು ಎಚ್ಚರಿಕೆ ಯಿಂದಿಡುತ್ತಾನೆ. ಮರು ದಿನ ಶಿವನು ಅಮರ ನೀತಿಯಲ್ಲಿಗೆ ಬಂದು ಕೌಪೀನವನ್ನು ಕೊಡುವಂತೆ ಕೇಳುತ್ತಾನೆ. ಆ ಹೊತ್ತಿಗೆ ಕೌಪೀನ ಮಾಯವಾಗಿರುತ್ತದೆ. ಇದೇ ಅವಕಾಶವನ್ನು

ಬಳಸಿಕೊಂಡ ಶಿವ ಕೌಪೀನಕ್ಕಾಗಿ ಬಲವಂತ ಮಾಡುತ್ತಾನೆ. ಮಾಯವಾದ ಕೌಪೀನವನ್ನು ತಂದುಕೊಡಲಾಗದ ಅಮರನೀತಿ ಅದಕ್ಕೆ ಬದಲಾಗಿ ಬೇರೊಂದು ವಸ್ತ್ರ ನೀಡಲು ಹೋಗುತ್ತಾನೆ. ಆದರೆ ಶಿವ ಇದನ್ನು ಒಪ್ಪುವುದಿಲ್ಲ. ಕೊನೆಗೆ ತಾನೇ ಒಂದು ನಿರ್ಧಾರಕ್ಕೆ ಬಂದು ಆ ಕೌಪೀನದಷ್ಟು ತೂಕದ ವಸ್ತ್ರವನ್ನು ನೀಡುವಂತೆ ಕೇಳುತ್ತಾನೆ. ಅದಕ್ಕೊಪ್ಪಿದ ಅಮರನೀತಿ ತಕ್ಕಡಿಯನ್ನು ತರಿಸಿ ಕೌಪೀನದಷ್ಟು ತೂಕದ ಬಟ್ಟೆಗಳನ್ನು ಇಡುತ್ತಾನೆ. ಎಷ್ಟು ಬಟ್ಟೆಯನ್ನು ಇಟ್ಟರೂ ಕೌಪೀನದ ತೂಕಕ್ಕೆ ಸಮನಾಗುವುದಿಲ್ಲ. ಇರುವ ಬಟ್ಟೆಯೆಲ್ಲ ಮುಗಿದುಹೋಗುತ್ತದೆ. ಭಕ್ತ ಸೋಲುವುದು ಖಚಿತವಾಗುತ್ತದೆ. ಆ ಸಂದರ್ಭದಲ್ಲಿ ಭಕ್ತನಾದ ಅಮರನೀತಿ ಅಂತಿಮವಾಗಿ ತನ್ನನ್ನೇ ಅರ್ಪಿಸಿಕೊಳ್ಳಲು ಸಿದ್ಧನಾಗುತ್ತಾನೆ. ಧನ, ಸತಿ, ಸುತರೊಡನೆ ತಾನೂ ತಕ್ಕಡಿಯಲ್ಲಿ ಕೂರುತ್ತಾನೆ. ಆಗ ತಕ್ಕಡಿ ಒಂದು ಸಮನಾಗಿ ನಿಲ್ಲುತ್ತದೆ. ಇದರೊಡನೆ ಭಕ್ತನು ವಿಜಯಗಳಿಸುತ್ತಾನೆ. ಭಕ್ತನ ಈ ಅಸಾಧಾರಣ ಭಕ್ತಿಗೆ ಶಿವ ಒಲಿದು ಹಿಗ್ಗುತ್ತಾನೆ. ಆ ಸಂತಸದಲ್ಲಿ ನಂದೀಶನನ್ನು ಕರೆದು –

> **ಎನಗೆ ಸರಿತೂಕಮಂ ತೂಗಿ ಸಂದವರುಂಟೆ**
> **ಎನಗೆ ಧನಸತಿಸುತರನಿಕ್ಕಿ ತೂಗಿದರುಂಟೆ**
> ..........................................
> **ಎನ್ನೊರೆಗೆ ಸರಿಮುಚ್ಚವಾಗಿ ತೋಜಿದರುಂಟೆ**[13]

ಎಂದು ಪರಿಚಯ ಮಾಡಿಕೊಡುತ್ತಾನೆ. ಭಕ್ತನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತು ಗೌರವಿಸುತ್ತಾನೆ. ಪುರಾತನ ರಗಳೆಗಳೆಲ್ಲವೂ ಇದೇ ಮಾದರಿಯನ್ನು ಅನುಸರಿಸಿ ಬರೆದ ರಗಳೆಗಳಾಗಿವೆ. ಆದರೆ ನೂತನರ ರಗಳೆಗಳ ಸಂದರ್ಭದಲ್ಲಿ ಹರಿಹರ ಕೊಂಚ ಬದಲಾವಣೆ ಮಾಡಿಕೊಂಡಿದ್ದಾನೆ. ಅಲ್ಲಿ ಭಕ್ತರ ಪರೀಕ್ಷೆಗಳು ಒಂದೆರಡು ಕಡೆ ಕಾಣಿಸಿಕೊಂಡರೂ ಅದೇ ಪ್ರಧಾನವಾಗಿರುವುದಿಲ್ಲ. ಇಲ್ಲಿ ಭಕ್ತನಾದವನು ತಾನಾಗಿಯೇ ಕಷ್ಟಗಳಿಗೆ ಎದುರಾಗುತ್ತಾನೆ. ಅಂತಿಮವಾಗಿ ಶಿವನ ಕರುಣೆಯಿಂದ ಪಾರಾಗುತ್ತಾನೆ. ಆದರೆ ಪುರಾತನರ ರಗಳೆಗಳಲ್ಲಿ ಶಿವನೇ ಕಷ್ಟಗಳನ್ನು ಸೃಷ್ಟಿಸುತ್ತಾನೆ. ಅದರಲ್ಲಿ ಗೆದ್ದ ನಂತರ ಅವನಿಗೆ ಕೈಲಾಸ ಪದವಿ ನೀಡುತ್ತಾನೆ.

## 2.7 ಕೈಲಾಸದಲ್ಲಿ ಮಾಡಿದ ತಪ್ಪಿಗೆ ಮರ್ತ್ಯದಲ್ಲಿ ಅವತರಿಸುವುದು ಮತ್ತು ಶಿವನು ನಿರ್ದೇಶಿಸಿದ ಕಾರ್ಯವನ್ನು ಭಕ್ತನು ಭೂಮಿಯಲ್ಲಿ ಸಾಧಿಸಿ ಮತ್ತೆ ಕೈಲಾಸಕ್ಕೆ ಹೊರಡುವುದು.

ಹರಿಹರನು ಚಿತ್ರಿಸುವ ಶರಣರಲ್ಲಿ ಕೆಲವರು, ಮೊದಲು ಕೈಲಾಸದಲ್ಲಿ ಶಿವನ ಸಮ್ಮುಖದಲ್ಲಿಯೇ ಇದ್ದವರು. ಆದರೆ ಅಲ್ಲಿ ಮಾಡಿದ ತಪ್ಪಿನಿಂದಾಗಿ ಶಿವನಿಂದ ಶಾಪಗ್ರಸ್ತರಾಗಿ ಭೂಮಿಯಲ್ಲಿ ಜನಿಸುತ್ತಾರೆ. ಭೂಮಿಯಲ್ಲಿ ಶಿವನು ನಿರ್ದೇಶಿಸಿದ ಕೆಲಸದಲ್ಲಿ ಮಗ್ನ ರಾಗುತ್ತಾರೆ. ಆ ಕೆಲಸ ಪೂರ್ಣಗೊಳ್ಳುತ್ತಿದ್ದಂತೆಯೇ ಮತ್ತೆ ತಮ್ಮ ನೆಲೆಯಾದ ಕೈಲಾಸಕ್ಕೆ ಹಿಂದಿರುಗುತ್ತಾರೆ.

ಈ ಬಗೆಯ ರಚನಾ ವಿಧಾನ ಹರಿಹರನ ನೂತನರ ರಗಳೆಗಳಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಪುರಾತನರ ರಗಳೆಯಲ್ಲಿ ಒಂದೇ ಒಂದು ರಗಳೆಯನ್ನು ಮಾತ್ರ ಕಾಣಬಹುದು. ಅದೇ ನಂಬಿಯಣ್ಣನ ರಗಳೆ. ನೂತನರಲ್ಲಿ ಬಸವಣ್ಣ, ಪ್ರಭುದೇವ, ರೇವಣಸಿದ್ಧೇಶ್ವರ, ಅಕ್ಕಮಹಾದೇವಿ, ನಿಂಬಿಯಕ್ಕನ ರಗಳೆಗಳು ಈ ಮಾದರಿಯವು. ಉದಾಹರಣೆಗೆ ಪ್ರಭುದೇವರ ರಗಳೆಯನ್ನು ಗಮನಿಸಬಹುದು.

ಪ್ರಭುದೇವ ಮೊದಲು ಕೈಲಾಸದಲ್ಲಿ ನಿರ್ಮಾಯನೆಂಬ ಗಣನಾಗಿದ್ದನು. ಅಲ್ಲಿ ಒಮ್ಮೆ ಸುರಸತಿಯೊಬ್ಬಳನ್ನು ಆಸೆಯಿಂದ ನೋಡುತ್ತಾನೆ. ಆಗ ಶಿವನು –

> ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ
> ಕಾವಂಗೆ ವಶವಾದ ಸಕಲಸುಖಮುಂ ಮುಟ್ಟಿ[14]

ಎಂದು ಭೂಮಿಯಲ್ಲಿ ಅವರ ಕಾರ್ಯವನ್ನು ನಿರ್ದೇಶಿಸಿ ಶಾಪವೀಯುತ್ತಾನೆ.

ಶಿವನ ಶಾಪದಂತೆ ನಿರ್ಮಾಯ ಅಲ್ಲಮನಾಗಿ ಮಲ್ಲಿಕಾಪುರದ ನಾಗವಾಸಾಧಿಪತಿಯ ಸತಿಯ ಬಸುರಲ್ಲಿ ಜನಿಸಿದರೆ, ಸುರಸತಿ ಆ ಪುರದ ಧನದತ್ತನೆಂಬವನ ಸತಿಯ ಬಸುರಲ್ಲಿ ಕಾಮಲತೆಯೆಂಬ ಹೆಸರನ್ನು ಪಡೆದು ಭೂಮಿಯಲ್ಲಿ ಜನಿಸುವಳು.

ಮದ್ದಳೆ ವಿದ್ಯೆಯಲ್ಲಿ ಪ್ರವೀಣನಾದ ಸುಂದರಾಂಗ ಅಲ್ಲಮ, ಒಮ್ಮೆ ದೇವಸ್ಥಾನ ವೊಂದರಲ್ಲಿ ಮದ್ದಳೆ ನುಡಿಸುತ್ತಿರಲು, ಅಲ್ಲಿಗೆ ಬಂದ ಕಾಮಲತೆ ಮದ್ದಳೆ ಬಾರಿಸುವ ಅಲ್ಲಮನ ಮೋಹಕ್ಕೆ ಒಳಗಾಗುತ್ತಾಳೆ. ಇಬ್ಬರಲ್ಲೂ ಪ್ರೇಮಾಂಕುರವಾಗುತ್ತದೆ. ಇಬ್ಬರನ್ನೂ ಗಮನಿಸಿದ ಸಖಿಯರು ಅಲ್ಲಮ ಕಾಮಲತೆಯರನ್ನು ಸೆಜ್ಜೆಮನೆಗೆ ಕರೆದೊಯ್ದು ಸಿರಿಮಂಚದೊಳಗೆ ಇಬ್ಬರನ್ನೂ ಕುಳ್ಳಿರಿಸಿ ತಾವು ಮರೆಯಾಗುತ್ತಾರೆ. ಅಲ್ಲಿ —

> ಪರಿಪರಿಯ ಹೊಸ ಸುಖದ ಸವಿಗಳರಳುತ್ತಮಿರೆ
> ಆಲಿಂಗನದೊಳಿರ್ವರೊರ್ವರಾಗುತ್ತಮಿರೆ
> ಸೋಲದ ಸೊಗಸು ಮನಮನೋಲಾಡಿಸುತ್ತಮಿರೆ
> ಕಣ್ಗಳರೆಮುಗಿವುತಿರೆ ಕರತಳಂ ನಡುಗುತಿರೆ
> ......................................
> ಬಲ್ಲುದಂ ಕಂಡುದಂ ಕಾಮಲತೆಗೀವುತಂ [15]

ಹೀಗೆ ಇಬ್ಬರೂ ಕಾಮಾನುರಾಗದಲ್ಲಿ ತೊಡಗುತ್ತಾರೆ. ಆ ಅನುರಾಗದಲ್ಲಿ ಹಲವು ವರ್ಷಗಳು ಅವರಿಗೆ ನಿಮಿಷಗಳಾಗುತ್ತವೆ. ಅಲ್ಲಮ ತನ್ನ ತನು, ಮನ, ಧನವೆಲ್ಲವನ್ನೂ ಕಾಮಲತೆಗೆ ಮೀಸಲಿಡುತ್ತಾನೆ. ಕಾಮಸುಖದಲ್ಲಿ ಇಬ್ಬರೂ ಪರಸ್ಪರ ಮೈಮರೆತಂಥ ಈ ಸ್ಥಿತಿಯಲ್ಲಿ, ಇದ್ದಕ್ಕಿದ್ದಂತೆ ಕಾಮಲತೆ ಜ್ವರಪೀಡಿತಳಾಗಿ ಸಾಯುತ್ತಾಳೆ. ಕಾಮಲತೆಯ ನೆನಪುಗಳ ಮಧ್ಯೆ

ಸಿಕ್ಕ ಅಲ್ಲಮ ವಿರಹಿಯಾಗಿ ಅಲೆಯುತ್ತಾನೆ. ಪರಿಪರಿಯ ವಿರಹಾಗ್ನಿಯಿಂದ ಬೆಂದ ಅಲ್ಲಮನಿಗೆ ಬದುಕು ಬೇಡವೆನಿಸುತ್ತದೆ. ಆಕಸ್ಮಿಕವಾಗಿ ಕಾಣಿಸಿಕೊಂಡ ದೇವಾಲಯವನ್ನು ಪ್ರವೇಶಿಸಲು ಎಲ್ಲರೂ ಹಿಂಜರಿದು ನಿಂತಾಗ ಮನದಲ್ಲಿ ಅತಿಯಾದ ವಿರಕ್ತಿಯನ್ನು ಕೈಗೊಂಡ ಅಲ್ಲಮ -

> **ಬೆರಲಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ**
> **ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ**
> **ಇನ್ನೇಕೆ ದೇಹದಭಿಲಾಷೆ ಚಿಃ ತೆಗೆಯೆಂದು**[16]

ಎಂದು ನಿರ್ಧರಿಸಿ ದೇವಾಲಯದೊಳಗೆ ಪ್ರವೇಶಿಸಲು ಮುಂದಾಗುವನು. ಆಗ ಬದುಕಿಗೆ ವಿದಾಯ ಹೇಳ ಹೊರಟ ಅಲ್ಲಮನಿಗೆ ಅಲ್ಲಿ ಶಿವನ ದರ್ಶನವಾಗುತ್ತದೆ. 'ಅಂಗೈಯೊಳಗಮೃತ ಫಳಮಂ' ಪಡೆದ ಅಲ್ಲಮನಿಗೆ ಪರಮಜ್ಞಾನ ಉದಯಿಸುತ್ತದೆ. ದೇಹಾದಿ ಕರಣಗಳನ್ನು ಮೀರಿ ಪರಬ್ರಹ್ಮನಾಗುತ್ತಾನೆ.

ಪರಮಜ್ಞಾನಿಯಾದ ಅಲ್ಲಮ ಮುಂದೆ ದೇಶಪರ್ಯಟನೆಯಲ್ಲಿ ತೊಡಗುತ್ತಾನೆ. ಬಸವಣ್ಣ ನವರನ್ನು ಕಂಡು ಮಾತನಾಡಿ, ಅವರಿಗೆ ಹರನ ನಿಲುವಿನ ಪರಿಯನ್ನು ತೋರುತ್ತಾನೆ. ಸೊನ್ನಲಿಗೆಯ ಪುರಕ್ಕೆ ಬಂದು ಸಿದ್ಧರಾಮನನ್ನು ಕಂಡು 'ಕಲಿಯುಗಂ ಪೊಲ್ಲೆಂದು' ಬುದ್ಧಿ ಹೇಳಿ 'ಗೊಪೆಗೆ' ಕರೆದೊಯ್ಯುತ್ತಾನೆ. ಹೀಗೆ ಹಲವು ಶರಣರನ್ನು ಸಂದರ್ಶಿಸಿ ಶ್ರೀಪರ್ವತಾಭಿಮುಖವಾಗಿ ನಡೆಯುತ್ತಾನೆ. ನಡುವೆ ಅನೇಕ ಅದ್ಭುತಗಳನ್ನು ನೋಡುತ್ತ ಕದಳೀವನದ ದಾರಿ ಹಿಡಿದು ಮುಂದೆ ಸಾಗಿದಂತೆ ಕೈಲಾಸ ದರ್ಶನವಾಗುತ್ತದೆ. ಅಲ್ಲಿ 'ಸಸಿಯ ತಾಯ್ಮನೆಯಂತಿ'ರುವ ರಜತಗಿರಿಯಲ್ಲಿ ನಾಗೇಂದ್ರ, ಅಮರೇಂದ್ರ, ಕಿನ್ನರ, ಖೇಚರ, ಮುಂತಾದ ಹರಿಯಜ ಸುರಾವಳಿಯ ಸಂದಣಿಯೊಡನೆ ಹರನೋಲಗದ ಹಿರಿಯ ಬಾಗಿಲಲ್ಲಿ ನಿಲ್ಲುತ್ತಾನೆ. ದೂರದಿಂದಲೇ ಅಲ್ಲಮನನ್ನು ವೀಕ್ಷಿಸಿದ ಶಿವ ಅವನನ್ನು ಕರೆದು 'ಇತ್ತ ಬಾ ಬಾಯೆನು'ತ ಪಕ್ಕದಲ್ಲಿ ಕೂರಿಸಿಕೊಳ್ಳುತ್ತಾನೆ. ಅಲ್ಲಮ ಶಿವನ ಚರಣಕ್ಕೆರಗುತ್ತಾನೆ. ಮನದಲ್ಲಿ ಅಕ್ಕರೆಯಿಂದ ಸಂತೋಷವನ್ನು ಪಡೆದ ಪರಮೇಶ್ವರ, ಅಲ್ಲಮನಿಗೆ ಮೊದಲಿನ ಹಾಗೆ ನಿರ್ಮಾಯನೆಂಬ ಹೆಸರನ್ನಿಟ್ಟು, ಮನ್ನಿಸಿ ಗಣಪದವಿ ನೀಡುತ್ತಾನೆ.

ಅಲ್ಲಮ ಕೈಲಾಸಕ್ಕೆ ಹೋಗುವುದು ಮತ್ತು ಅಲ್ಲಿ ಗಣಪದವಿಯನ್ನು ಗಳಿಸುವುದು ಬೇರೆ ರಗಳೆಗಳಿಗಿಂತ ಭಿನ್ನವಾಗಿದೆ. ಇಲ್ಲಿ ಅಲ್ಲಮ ತಾನೇ ಕೈಲಾಸಕ್ಕೆ ಹೋಗುತ್ತಾನೆ ಮತ್ತು ಅಲ್ಲಿ ನೆರೆದಿರುವ ಹರಿಯಜರ ಸಂದಣಿಯಲ್ಲಿ ಸೇರುತ್ತಾನೆ. ಮುಂದೆ ಹರಿಯಜರ ನಡುವೆ ಇದ್ದ ಅಲ್ಲಮನನ್ನು ಶಿವನೇ ಕರೆದು ಕುಳ್ಳಿರಿಸಿ ಸಂತಸಗೊಂಡು ಅವನಿಗೆ ಗಣಪದವಿ ನೀಡುತ್ತಾನೆ. ಆದರೆ ಇನ್ನುಳಿದ ರಗಳೆಗಳಲ್ಲಿ ಈ ಭಾಗ ಹೀಗೆ ರಚನೆಯಾಗುವುದಿಲ್ಲ. ಅಲ್ಲಿ ಭಕ್ತನ ಪರೀಕ್ಷೆಯೆಲ್ಲವೂ ಮುಗಿದ ಮೇಲೆ ಶಿವನು ನಂದೀಶನನ್ನೋ ಅಥವಾ ಪಾರ್ವತಿಯನ್ನೋ ಕರೆದು ಅವರಿಗೆ ಭಕ್ತನನ್ನು ಪರಿಚಯಿಸಿ, ವಿಮಾನವನ್ನು ತರಿಸಿ, ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಹೋಗುತ್ತಾನೆ. ಅಲ್ಲಿ ಗಣಪದವಿ ನೀಡಿ ಗೌರವಿಸುತ್ತಾನೆ. ಬಸವರಾಜದೇವರ ರಗಳೆಯಲ್ಲಿ

ಬಸವಣ್ಣನು ಕೈಲಾಸದಿಂದ ಶಾಪಗ್ರಸ್ತನಾಗಿ ಭೂಮಿಗೆ ಬಂದದ್ದು, ಭೂಮಿಯಲ್ಲಿ ಶಿವ ನಿರ್ದೇಶಿಸಿದ ಕಾರ್ಯವನ್ನು ನಿರ್ವಹಿಸುವುದು ಇದ್ದರೆ, ಅವನು ಕೈಲಾಸಕ್ಕೆ ಹೋದ ವಿಚಾರ ಇಲ್ಲ. ಅಷ್ಟಕ್ಕೆ ಕಥೆ ಮುಕ್ತಾಯವಾಗಿದೆ.

## 2.8 ಮರ್ತ್ಯಕ್ಕೆ ನೀಡಿದ ಪ್ರಾಮುಖ್ಯತೆ

ಕೈಲಾಸವೆಂದರೆ ಶಿವನ ಹಾಗೂ ಶಿವಗಣಸದಸ್ಯರ ವಾಸಸ್ಥಾನ. ಇವರನ್ನು ಬಿಟ್ಟರೆ ಯಾವೊಬ್ಬ ಭಕ್ತ ತನ್ನ ಸಾಧನೆಯಿಂದ ಶಿವನ ಕೃಪೆಗೆ ಒಳಗಾಗುತ್ತಾನೆಯೋ ಅವನಿಗೆ ಇಲ್ಲಿ ನೆಲೆಸುವಂಥ ಅವಕಾಶ ದೊರೆಯುತ್ತದೆ. ಕವಿಯ ದೃಷ್ಟಿಯಲ್ಲಿ ಮಾನವನ ಬದುಕು ಸಾರ್ಥಕವಾಗಬೇಕೆಂದರೆ ಈ ಕೈಲಾಸ ಪದವಿಯನ್ನು ಪಡೆಯಬೇಕು. ಇಂಥ ಕೈಲಾಸದ ಬಗ್ಗೆ ಹರಿಹರನಿಗೆ ವಿಶೇಷ ನಂಬಿಕೆ. ಹಾಗಾಗಿ ಅವನು ತನ್ನ ಕಾವ್ಯದಲ್ಲಿ ಕೈಲಾಸಕ್ಕೆ ಹೆಚ್ಚಿನ ಮಹತ್ವ ನೀಡುತ್ತಾನೆ. ಅಂತೆಯೇ ಹರಿಹರನ ಎಲ್ಲ ಕಥೆಗಳೂ ಕೈಲಾಸದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತವೆ. ಒಟ್ಟಿನಲ್ಲಿ ಕೈಲಾಸದ ಪ್ರಾಧಾನ್ಯತೆಯನ್ನು ಸಾರುವುದೇ ಅವನ ರಗಳೆಗಳ ಪ್ರಮುಖ ಉದ್ದೇಶ. ಅಂದಮಾತ್ರಕ್ಕೆ ಕವಿ ಮರ್ತ್ಯವನ್ನು ಕಡೆಗಣಿಸಿದ್ದಾನೆ ಎಂದು ಹೇಳಲು ಬರುವುದಿಲ್ಲ. ಕವಿ ಕೈಲಾಸಕ್ಕೆ ಎಷ್ಟು ಪ್ರಾಮುಖ್ಯತೆ ನೀಡಿದ್ದಾನೋ ಅಷ್ಟೇ ಪ್ರಾಮುಖ್ಯತೆಯನ್ನು ಮರ್ತ್ಯಕ್ಕೂ ನೀಡಿದ್ದಾನೆ. ಕೈಲಾಸದ ಬೀಜ ಇರುವುದೇ ಮರ್ತ್ಯದಲ್ಲಿ. ಯಾವುದೇ ಭಕ್ತ ಕೈಲಾಸದಲ್ಲಿ ಶಿವಗಣ ಸಮೂಹದ ಸದಸ್ಯನಾಗಬೇಕೆಂದರೆ ಆತ ಮೊದಲು ಭೂಮಿಗೆ ಬರಬೇಕು. ಈ ಭೂಮಿಯಲ್ಲಿ ತನ್ನ ಭಕ್ತಿಯ ಸಾಧನೆಯಲ್ಲಿ ತೊಡಗಬೇಕು. ಎದುರಾಗುವ ಎಲ್ಲ ಸುಖ-ದುಃಖಗಳಿಗೂ ಮುಖಾಮುಖಿಯಾಗಬೇಕು. ಶಿವನು ಬೇಕೆಂದೇ ಸೃಷ್ಟಿ ಮಾಡುವ ಹಲವು ಅಸಾಧ್ಯ ಪರೀಕ್ಷೆಗಳಿಗೆ ಮೈಯೊಡ್ಡಬೇಕು. ಆ ಎಲ್ಲ ಪರೀಕ್ಷೆಗಳಲ್ಲೂ ಭಕ್ತ ಜಯಗಳಿಸಿದ್ದೇ ಆದರೆ ಆತನಿಗೆ ಕೈಲಾಸ ಪದವಿ ಸಿಗುವುದು ಖಚಿತ. ಇಲ್ಲದಿದ್ದಲ್ಲಿ ಆತನ ಭಕ್ತಿ ಕಪಟ ಎಂದು ನಿರ್ಧಾರವಾಗಿ ಕೈಲಾಸ ಪದವಿ ದೊರೆಯುವುದಿಲ್ಲ. ಉದಾ : ಓಹಿಲಯ್ಯ ಎಂಬ ಭಕ್ತ ತನಗೆ ಶಿವ ವಹಿಸಿದ ಹನ್ನೆರಡು ವರ್ಷಗಳ ಧೂಪದ ಕಾಯಕವನ್ನು ಬೇರೊಬ್ಬರಿಂದ ಮಾಡಿಸಿದ್ದಕ್ಕಾಗಿ, ಶಿವನು ಅವನಿಗೆ ಕೈಲಾಸ ಪದವಿ ನೀಡದೆ ಮತ್ತೆ ಹನ್ನೆರಡು ವರ್ಷಗಳ ಕಾಲ ಧೂಪದ ಕಾಯಕವನ್ನು ನೆರವೇರಿಸುವಂತೆ ಮಾಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಒಟ್ಟಿನಲ್ಲಿ ಹರಿಹರನ ದೃಷ್ಟಿಯಲ್ಲಿ ಮರ್ತ್ಯವೆಂದರೆ ಕೈಲಾಸ ಪದವಿಯನ್ನು ಪಡೆಯಲು ಹೊರಟವರ ಸಾಧನೆಯ ರಂಗ. ಈ ಸಾಧನೆಯ ರಂಗದಲ್ಲಿ ಭಕ್ತನಾದವನು ಶ್ರೇಷ್ಠನಾಗಿರಲಿ ಅಥವಾ ಕನಿಷ್ಠನಾಗಿರಲಿ ದುಡಿಯಬೇಕು. ಆ ದುಡಿಮೆ ಪರಿಪೂರ್ಣಗೊಳ್ಳುತ್ತಿದ್ದಂತೆಯೇ ಕೈಲಾಸ ಪದವಿ ದೊರೆಯುವುದು.

ಕೈಲಾಸದಲ್ಲಿ ಹುಟ್ಟಿ ಭೂಮಿಗೆ ಬಂದು ಸಾಧನೆಯಲ್ಲಿ ತೊಡಗಿ, ಮತ್ತೆ ಕೈಲಾಸಕ್ಕೆ ನಡೆದವರ ಬಗ್ಗೆ ನಾವು ಈಗಾಗಲೇ ತಿಳಿದಿದ್ದೇವೆ. ಮುಖ್ಯವಾಗಿ ಹೇಳಬೇಕೆಂದರೆ ಈ ಎಲ್ಲ ರಗಳೆಗಳ ಬಹು ಮುಖ್ಯ ಉದ್ದೇಶ - ವ್ಯಕ್ತಿ ಎಷ್ಟೇ ಶ್ರೇಷ್ಠನಾಗಿರಲಿ, ಮಹಾಮಹಿಮನಾಗಿರಲಿ,

ಅಂಥವನೂ ಕೂಡ ಭೂಮಿಯಲ್ಲಿ ಬಂದು ಸಾಧನೆ ಗೈಯದಿದ್ದರೆ ಕೈಲಾಸ ಪ್ರವೇಶಕ್ಕೆ ಅರ್ಹವಾಗುವುದಿಲ್ಲ ಎಂಬುದನ್ನು ತಿಳಿಸುವುದು. ಅಂತೆಯೇ ಕಥಾ ನಾಯಕರುಗಳಾದ ಬಸವಣ್ಣ, ಅಕ್ಕಮಹಾದೇವಿ, ಪ್ರಭುದೇವ, ನಂಬಿಯಣ್ಣಗಳು ಮಹಾಮಹಿಮರೆನ್ನಿಸಿಕೊಂಡಿದ್ದರೂ ಭೂಮಿಗೆ ಬಂದು ಅಲ್ಲಿನ ಸುಖ-ದುಃಖಗಳ ಜೊತೆ ಬಾಳುತ್ತಾರೆ.

ಭೂಮಿಯಲ್ಲಿಯೇ ಹುಟ್ಟಿ ತಮ್ಮ ನಿರಂತರ ಸಾಧನೆಯ ಫಲದಿಂದ ಕೈಲಾಸಕ್ಕೆ ಹೋದವರು ಹರಿಹರನ ರಗಳೆಗಳಲ್ಲಿ ಹಲವರು ಇದ್ದಾರೆ. ಇವರ ಭಕ್ತಿ ಸಾಧನೆಗಳು ಬಸವಣ್ಣ, ಅಕ್ಕನನ್ನೂ ಮೀರಿದ ಸಾಧನೆಗಳು ಇರಬಹುದು, ಇಲ್ಲದಿರಲೂಬಹುದು. ಆದರೆ ಬಸವಣ್ಣ ಮತ್ತು ಅಕ್ಕನ ಎತ್ತರಕ್ಕೆ ಏರಿದ ವ್ಯಕ್ತಿಗಳಲ್ಲ ಎಂದು ಹೇಳಬಹುದು. ಇವರೆಲ್ಲ ಮರ್ತ್ಯ ಮಾನವರು, ಮರ್ತ್ಯದಲ್ಲಿದ್ದೇ ಸಾಧನೆ ಮಾಡಿ ಕೈಲಾಸ ಪದವಿ ಪಡೆದವರು. ಬೇಡರ ಕಣ್ಣಪ್ಪ, ತಿರುನೀಲಕಂಠ, ಇಳೆಯಾಂಡಗುಡಿಮಾರ, ಮಾದಾರ ಚೆನ್ನಯ್ಯ, ಕೋಳೂರ ಕೊಡಗೂಸು, ಹೇರೂರ ಹೆಂಗೂಸು, ಕೇಶಿರಾಜ ದಣ್ಣಾಯಕ ಮುಂತಾದ ಸಾಧಕರು ಈ ಗುಂಪಿಗೆ ಸೇರುತ್ತಾರೆ. ಅವರೆಲ್ಲರೂ ಶಿವನ ಸಾನ್ನಿಧ್ಯ ಪಡೆಯಲಿಕ್ಕಾಗಿ ಕಠಿಣ ಪರೀಕ್ಷೆಗಳಿಗೆ ಎದುರಾಗಿ ಗೆದ್ದು, ಕೈಲಾಸಕ್ಕೆ ನಡೆದುದನ್ನು ಅವರ ಕಥೆಯಲ್ಲಿ ಕಾಣುತ್ತೇವೆ.

ಹರಿಹರನ ಪ್ರಕಾರ ಮರ್ತ್ಯವಿಲ್ಲದೆ ಅಮರ್ತ್ಯವಿಲ್ಲ, ಅಮರ್ತ್ಯವಿಲ್ಲದೆ ಮರ್ತ್ಯವಿಲ್ಲ. ಒಂದು ಮತ್ತೊಂದನ್ನು ಅವಲಂಬಿಸಿದೆ. ಹಾಗಾಗಿ ಅಮರ್ತ್ಯದಷ್ಟೇ ಮಹತ್ವವನ್ನು ಮರ್ತ್ಯಕ್ಕೂ ನೀಡಿದ್ದಾನೆ.

## 2.9 ಅತಿಮಾನುಷ ಚಿತ್ರಗಳು

ಮೇಲಿನ ಎಲ್ಲ ಅಂಶಗಳ ಜೊತೆಗೆ ರಗಳೆಗಳಲ್ಲಿ ಕಂಡುಬರುವ ಇನ್ನೊಂದು ಅಂಶ, ಮೇಲಿಂದ ಮೇಲೆ ಬಳಕೆಯಾಗುವ ಪವಾಡ ಹಾಗೂ ಅತಿಮಾನುಷ ಚಿತ್ರಗಳು. ಅತಿಮಾನುಷ ಎಂದರೆ ಮಾನವಾತೀತವಾದದ್ದು; ದೈವೀ ಶಕ್ತಿಯನ್ನು ಒಳಗೊಂಡದ್ದು ಎಂದು ಅರ್ಥವಾಗುತ್ತದೆ. ಅಂದರೆ ಯಾವುದನ್ನು ಮಾನವನಿಂದ ಮಾಡಲು ಸಾಧ್ಯವಿಲ್ಲವೋ ಅಂಥದ್ದೊಂದು ಘಟನೆ ಘಟಿಸಿದ್ದೇ ಆದರೆ ಆ ಘಟನೆಯನ್ನು ಪವಾಡ ಇಲ್ಲವೆ ಅತಿಮಾನುಷ ಶಕ್ತಿ ಎಂದು ಕರೆಯುತ್ತೇವೆ. ಇಲ್ಲಿ ಬಹಳ ಮುಖ್ಯವಾಗಿ ತಿಳಿಯಬೇಕಾದ ವಿಚಾರವೆಂದರೆ ಪವಾಡ ಮತ್ತು ಅತಿಮಾನುಷ ಶಕ್ತಿಗಳಿಗಿರುವ ವ್ಯತ್ಯಾಸ. ಒಂದರ್ಥದಲ್ಲಿ ಇವೆರಡರ ಅರ್ಥವು ಒಂದೇ ಎನ್ನಬಹುದು. ಆದರೂ ಅತಿಮಾನುಷ ಶಕ್ತಿ ಎಂಬುದು ಪವಾಡಕ್ಕಿಂತ ಸ್ವಲ್ಪ ಭಿನ್ನವಾದುದೇ. ಒಂದು ರೀತಿಯಲ್ಲಿ ಪವಾಡಗಳ ಮುಂದುವರಿದ ಬೆಳವಣಿಗೆ ಎನ್ನಬಹುದು. ಪವಾಡಗಳು ಮಾನವ ಆವರಣದೊಳಗೆಯೇ ನಡೆಯಬಹುದಾದವುಗಳಾಗಿದ್ದರೆ, ಅತಿಮಾನುಷ ಘಟನೆಗಳು ದೈವೀಶಕ್ತಿಯನ್ನು ತನ್ನದಾಗಿಸಿಕೊಂಡ ಮಾನವರಿಂದ ನಡೆಯಬಹುದಾದವುಗಳಾಗಿರುತ್ತವೆ. ಅಂದರೆ ಯಾವ ಪವಾಡಗಳು ದೈವೀಶಕ್ತಿಯನ್ನು ತನ್ನದಾಗಿಸಿಕೊಂಡವರಿಂದ ನಡೆಯಲ್ಪಡುತ್ತವೆಯೋ ಅವು ಅತಿಮಾನುಷ ಶಕ್ತಿ ಎನಿಸಿಕೊಳ್ಳುತ್ತವೆ.

ಇಂಥ ಅತಿಮಾನುಷ ಚಿತ್ರಗಳು ಹರಿಹರನ ರಗಳೆಗಳಲ್ಲಿ ಹಲವು ಕಡೆ ಕಂಡುಬರುತ್ತವೆ.

ನಿರ್ಧಾರಾತ್ಮಕವಾಗಿ ಹೇಳುವುದಾದರೆ 'ರೇವಣಸಿದ್ಧೇಶ್ವರನ ರಗಳೆ', 'ಬಸವರಾಜದೇವರ ರಗಳೆ' ಮತ್ತು 'ನಂಬಿಯಣ್ಣನ ರಗಳೆ'ಗಳಲ್ಲಿ ಇವು ಕಂಡುಬರುತ್ತವೆ. ಅದರಲ್ಲೂ ರೇವಣಸಿದ್ಧೇಶ್ವರನ ರಗಳೆ' ಸಂಪೂರ್ಣವಾಗಿ ಅತಿಮಾನುಷ ಪವಾಡಗಳಿಂದ ತುಂಬಿದೆ. ಇಲ್ಲಿ ರೇವಣಸಿದ್ಧೇಶ್ವರ ವೀರ್ಯವನ್ನು ತೆಗೆದು ಜಿನನ ಪ್ರತಿಮೆಗೆ 'ಮೂರ್ಧ್ನಿಘ್ರಾಣ'ಗೊಳಿಸಿ ಮಾತನಾಡುವಂತೆ ಮಾಡುವುದು, ರಾಜಕುಮಾರಿಯ ಬಸುರು ಇಳಿಸಿ ಆ ಬಸುರನ್ನು ಒಂಭತ್ತು ತಿಂಗಳ ನಂತರ ಮತ್ತೆ ಮಗುವಾಗುವಂತೆ ಮಾಡುವುದು, ತಿಗಣೆಗಳೆರಡನ್ನು ಸುಟ್ಟು ಬೂದಿ ಮಾಡಿ ಆ ಬೂದಿಯಿಂದ ಖಡ್ಗಗಳನ್ನು ಮಾಡಿಸುವುದು ಮುಂತಾದ ಅತಿಮಾನುಷ ಪವಾಡಗಳು ಬರುತ್ತವೆ. 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನ ಜೀವವು (ಆತ್ಮ) ಮಹೇಶ್ವರರ ಹಿಂದೆಯೇ ಹೋಗುವ ಅತಿಮಾನುಷ ಪವಾಡ ಬಂದರೆ ನಂಬಿಯಣ್ಣನ ರಗಳೆಯಲ್ಲಿ ಮೊಸಳೆಯೊಂದು ನುಂಗಿದ್ದ ಮಗುವೊಂದನ್ನು ಮೂರು ವರ್ಷಗಳ ನಂತರ ಹೊರಕ್ಕೆ ತೆಗೆಯುವ ಅತಿಮಾನುಷ ಪವಾಡವೊಂದು ಬರುತ್ತದೆ.

ಈ ಅತಿಮಾನುಷ ಪವಾಡಗಳನ್ನು ಹರಿಹರ ತನ್ನ ಕಾವ್ಯಗಳಲ್ಲಿ ಸಮಯೋಚಿತವಾಗಿ ತಂದಿದ್ದಾನೆ. ಯಾವ ಸಂದರ್ಭದಲ್ಲೂ ಈ ಪವಾಡಗಳು ಕಥೆಗೆ ಭಾರವೆಂದು ಕಂಡು ಬರುವುದಿಲ್ಲ. ಅದಕ್ಕೆ ಬದಲಾಗಿ ಅವು ಪಾತ್ರದ ಮಹತ್ವವನ್ನು ಸುಂದರವಾಗಿ ಕಟ್ಟಿಕೊಡುತ್ತವೆ.

ಹೀಗೆ ಹರಿಹರ ತಾನು ಬರೆಯುವ ಕಥೆಗಳಿಗೆ ಪ್ರಾರಂಭದಲ್ಲಿಯೇ ಒಂದು ಸ್ವರೂಪವನ್ನು ಗುರುತಿಸಿಕೊಂಡು ಅದರಂತೆಯೇ ಪ್ರತಿಯೊಂದೂ ಕಥೆಗಳನ್ನು ಹೆಣೆಯುತ್ತಾನೆ. ಕವಿಯ ಈ ಬಗೆಯ ಪೂರ್ವ ನಿಲುವಿನಿಂದಾಗಿಯೇ ಅವನ ಕಥೆಗಳು ಏಕತಾನತೆಯ ದೋಷವನ್ನು ಒಳಗೊಂಡಿವೆ ಎಂಬ ಟೀಕೆ ವಿಮರ್ಶೆಯ ಕ್ಷೇತ್ರದಲ್ಲಿದೆ. ಆದರೆ ಹರಿಹರನ ಒಟ್ಟು ಸಾಧನೆಯನ್ನು ಗಣನೆಗೆ ತೆಗೆದುಕೊಂಡಾಗ ಈ ಟೀಕೆ ಅಷ್ಟು ಗಟ್ಟಿಯಾಗಿ ನಿಲ್ಲುವುದಿಲ್ಲ. ಒಂದೇ ಉದ್ದೇಶವನ್ನು ಇಟ್ಟುಕೊಂಡು ಹಲವು ಕಥೆಗಳನ್ನು ರಚಿಸಬೇಕಾದರೆ ಇಂಥದ್ದು ಸಾಮಾನ್ಯ ಎಂದು ಪರಿಗಣಿಸಬೇಕಾಗುತ್ತದೆ. ಈ ಸ್ವರೂಪದ ಅನಿವಾರ್ಯವೂ ಇದೆ ಎನಿಸುತ್ತದೆ.

* * * * *

**ಅಡಿ ಟಿಪ್ಪಣಿಗಳು**

1. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 117
2. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 1
3. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ

ರಗಳೆಗಳು : ಪುಟ 207

4. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇಪ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 70

5 ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 76

6. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ XXXV

7. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ 22

8. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ 26

9. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ 45

10. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 61

11. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 62

12. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 301

13. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ 103-104

14. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 1

15. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 8

16. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 12

# ರಗಳೆಗಳ ಕಥಾವಸ್ತು

ಹರಿಹರ ಕಾವ್ಯವನ್ನು ರಚಿಸಿದ ಕಾಲ ಹನ್ನೆರಡನೆ ಶತಮಾನ. ಈ ಹೊತ್ತಿಗಾಗಲೇ ಕನ್ನಡ ಸಾಹಿತ್ಯದಲ್ಲಿ ಚಂಪೂ ಮತ್ತು ವಚನ ಎಂಬ ಎರಡು ಸಾಹಿತ್ಯ ಪ್ರಕಾರಗಳು ಪ್ರಜ್ವಲಿಸಿದ್ದುವು. ಚಂಪೂ ಸಾಹಿತ್ಯ ಒಂಭತ್ತು, ಹತ್ತನೆ ಶತಮಾನದಲ್ಲಿ ಪ್ರಾರಂಭವಾಗಿ ಹನ್ನೊಂದನೆ ಶತಮಾನದ ಅಂತ್ಯದ ವೇಳೆಗೆ ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತಾ ಬಂದರೆ, ವಚನ ಸಾಹಿತ್ಯ ಹನ್ನೊಂದನೆ ಶತಮಾನದಲ್ಲಿ ಪ್ರಾರಂಭವಾಗಿ, ಹನ್ನೆರಡನೆಯ ಶತಮಾನದ ಅಂತ್ಯದ ವೇಳೆಗೆ ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತಾ ಬಂದಿರುವುದು ಸಾಹಿತ್ಯ ಚರಿತ್ರೆಯಿಂದ ವೇದ್ಯವಾಗುತ್ತದೆ. ಈ ಎರಡು ಸಾಹಿತ್ಯ ಪ್ರಕಾರಗಳ ಅನಂತರದಲ್ಲಿ ಹುಟ್ಟಿಕೊಂಡದ್ದು ಹರಿಹರನ ಸಾಹಿತ್ಯ ಪ್ರಕಾರ. ಹರಿಹರನ ಈ ಸಾಹಿತ್ಯ ಮೇಲಿನ ಎರಡು ಸಾಹಿತ್ಯ ಪ್ರಕಾರಗಳಿಗಿಂತಲೂ ವಿಭಿನ್ನವಾದದ್ದು. ವಸ್ತು, ಭಾಷೆ ಹಾಗೂ ತಂತ್ರಗಳ ವಿಚಾರಗಳಲ್ಲಿ ಅದು ಹಿಂದಿನ ಸಾಹಿತ್ಯ ಪ್ರಕಾರಗಳಿಗಿಂತ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

## 3.1 ಪಂಪಯುಗದ ಕಥಾವಸ್ತು

ವಸ್ತುವಿನ ಆಯ್ಕೆಗೆ ಸಂಬಂಧಪಟ್ಟಂತೆ ಪ್ರಾಚೀನ ಪರಂಪರೆಗಳು ಅನುಸರಿಸಿದ ಮಾರ್ಗಗಳು ಬೇರೆ ಬೇರೆ. ಚಂಪೂ ಯುಗದ ಕವಿಗಳು ತಮ್ಮ ಕಾವ್ಯಕ್ಕೆ ಆರಿಸಿಕೊಳ್ಳುತ್ತಿದ್ದಂತಹ ವಸ್ತು ಇತರೆ ಸಂಸ್ಕೃತ ಗ್ರಂಥಗಳಿಂದ ತೆಗೆದುಕೊಂಡಂಥದ್ದಾಗಿರುತ್ತಿತ್ತು. ಜೈನಧರ್ಮ ಪ್ರಚಾರ ಈ ಎಲ್ಲ ಕಾವ್ಯಗಳ ಕೇಂದ್ರ ಉದ್ದೇಶವಾಗಿರುತ್ತಿತ್ತು.

ಚಂಪೂ ಯುಗದ ಮೊದಲ ಕವಿಯೂ ಕನ್ನಡದ ಆದಿಕವಿಯೂ ಆದ ಪಂಪ ಹತ್ತನೆ ಶತಮಾನದಲ್ಲಿ ಜೀವಿಸಿದ್ದನು. ಕವಿ ಮಾತ್ರವಲ್ಲದೆ ಕಲಿಯೂ ಆಗಿದ್ದ ಅವನು ಸಾಮಂತ ಚೂಡಾಮಣಿ ಎನಿಸಿದ ಚಾಲುಕ್ಯ ಅರಸ ಅರಿಕೇಸರಿಯ ಆಸ್ಥಾನದಲ್ಲಿದ್ದನು. ಜೈನನಾದ ಅವನು ರಚಿಸಿದ ಕೃತಿಗಳು 'ಆದಿ ಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ'. ಪಂಪನೇ ಹೇಳುವಂತೆ ಒಂದು ಆಗಮಿಕವಾದರೆ ಇನ್ನೊಂದು ಲೌಕಿಕ.

ಆಗಮಿಕ ಕೃತಿಯಾದ 'ಆದಿ ಪುರಾಣ' ಮೊದಲನೆಯ ತೀರ್ಥಂಕರನಾದ ಆದಿನಾಥನ ಜೀವನವನ್ನು ಚಿತ್ರಿಸುತ್ತದೆ. ಈ ಪುರಾಣ ಒಬ್ಬ ವ್ಯಕ್ತಿಯ ಒಂದು ಜನ್ಮದ ಕಥೆ ಆಗಿರದೆ, ಹಲವು ಜನ್ಮಗಳ ಕಥೆಯಾಗಿದೆ. ಈ ಹಲವು ಜನ್ಮಗಳಲ್ಲಿ ಬದುಕಿನ ಅನುಭವ ಪಡೆದು ಭೋಗದಿಂದ ತ್ಯಾಗಕ್ಕೆ ತೆರಳಿ, ಕೊನೆಯ ಜನ್ಮದಲ್ಲಿ ವೈರಾಗ್ಯವುಂಟಾಗಿ, ತಪಸ್ಸು ಮಾಡಿ ಮುಕ್ತಿಯನ್ನು ಪಡೆದ ಆದಿದೇವ ಮತ್ತು ಇತರ ವ್ಯಕ್ತಿಗಳ ಕಥೆ ಇದರಲ್ಲಿದೆ. ಇಲ್ಲಿ ಮನುಷ್ಯನು ಪರಿಪೂರ್ಣತೆಗಾಗಿ ಜನ್ಮದಿಂದ ಜನ್ಮಕ್ಕೆ ವಿಕಾಸಗೊಳ್ಳುತ್ತ ನಡೆಯುವ ಜನ್ಮಯಾತ್ರೆಯ

ಪ್ರತೀಕವಿದೆ. ಕವಿಯು ಜಿನಸೇನಾಚಾರ್ಯರ 'ಪೂರ್ವಪುರಾಣ'ದಿಂದ ವಸ್ತುವನ್ನು ಆರಿಸಿಕೊಂಡು ತನ್ನದೇ ಆದ ಶೈಲಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ.

ಪಂಪನ ಇನ್ನೊಂದು ಕೃತಿ 'ವಿಕ್ರಮಾರ್ಜುನ ವಿಜಯ' ಒಂದು ಲೌಕಿಕ ಕೃತಿ. ಈ ಕೃತಿಗೆ ಕವಿ ವ್ಯಾಸಭಾರತದಿಂದ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದಾನೆ. ಕವಿ ತನ್ನ ನಾಯಕನಾದ ಅರಿಕೇಸರಿಯನ್ನು ಅರ್ಜುನನೊಡನೆ ಹೋಲಿಸಿ ಸಮಸ್ತ ಭಾರತವನ್ನು ರಚಿಸಿದ್ದಾನೆ. ಸಂಕೀರ್ಣವಾದ ಭಾರತದ ಕಥೆಯನ್ನು ಆಯ್ಕೆ ಮಾಡಿಕೊಂಡು, ಸುಸಂಬದ್ಧವಾಗಿ ಅದರ ರೂಪು ಕೆಡದಂತೆ ಸಂಕ್ಷಿಪ್ತವಾಗಿ ರಚಿಸಿದ್ದಾನೆ. ಇದರಲ್ಲಿಯೇ ಪಂಪಭಾರತದ ಅಪೂರ್ವತೆಯಿದೆ.

ಪಂಪನ ನಂತರ ಕಾವ್ಯ ರಚನೆಯಲ್ಲಿ ತೊಡಗಿದವರೆಂದರೆ ಪೊನ್ನ ಮತ್ತು ರನ್ನ. ಈ ಇಬ್ಬರೂ ಕವಿಗಳು ಪಂಪನ ಮಾರ್ಗವನ್ನೇ ಅನುಸರಿಸಿದ್ದಾರೆ. ಉಭಯಕವಿ ಚಕ್ರವರ್ತಿ ಎಂಬ ಬಿರುದನ್ನು ಪಡೆದಿದ್ದ ಪೊನ್ನ ರಾಷ್ಟ್ರಕೂಟ ಚಕ್ರವರ್ತಿಯಾದ ಮೂರನೇ ಕೃಷ್ಣನ ಆಸ್ಥಾನ ದಲ್ಲಿದ್ದನು. ಇವನು 'ಭುವನೈಕ ರಾಮಾಭ್ಯುದಯ' ಮತ್ತು 'ಶಾಂತಿ ಪುರಾಣ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. 'ಭುವನೈಕ ರಾಮಾಭ್ಯುದಯ' ಲೌಕಿಕವಾದರೆ 'ಶಾಂತಿ ಪುರಾಣ' ಆಗಮಿಕ ಕೃತಿಯಾಗಿದೆ. ಇವುಗಳಲ್ಲಿ 'ಶಾಂತಿ ಪುರಾಣ' ಮಾತ್ರ ಲಭ್ಯವಾಗಿದ್ದು 'ಭುವನೈಕ ರಾಮಾಭ್ಯುದಯ' ಬಿಡಿಯಾಗಿ ಕೆಲವು ಪದ್ಯಗಳಲ್ಲಿ ಮಾತ್ರ ದೊರೆತಿದೆ. ಲಭ್ಯವಿರುವ 'ಶಾಂತಿ ಪುರಾಣ' ಶಾಂತಿನಾಥ ತೀರ್ಥಂಕರನ ಪುರಾಣವಾಗಿದೆ. ಶಾಂತಿನಾಥನ ಹನ್ನೊಂದು ವಿಸ್ತಾರವಾದ ಕಥೆಯನ್ನು ಕವಿ ಈ ಕಾವ್ಯದಲ್ಲಿ ಹೇಳಿದ್ದಾನೆ.

ಪೊನ್ನನ ನಂತರದ ಕವಿ ರನ್ನ. ಚಾಲುಕ್ಯ ಚಕ್ರವರ್ತಿಯಾದ ಸತ್ಯಾಶ್ರಯ ಇರಿವಬೆಡಂಗನ ಆಸ್ಥಾನದಲ್ಲಿ ಈತ ಕವಿಯಾಗಿದ್ದನು. ಇವನು 'ಅಜಿತ ತೀರ್ಥಂಕರ ಪುರಾಣ' ಮತ್ತು 'ಸಾಹಸ ಭೀಮ ವಿಜಯ'ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಪಂಪನ ಸರಣಿಯಲ್ಲಿ 'ಅಜಿತ ತೀರ್ಥಂಕರ ಪುರಾಣ' ಆಗಮಿಕ ಕಾವ್ಯವಾದರೆ, 'ಸಾಹಸಭೀಮ ವಿಜಯ' ಲೌಕಿಕ ಕೃತಿಯಾಗಿದೆ. 'ಅಜಿತ ತೀರ್ಥಂಕರ ಪುರಾಣ' ಎರಡನೇ ತೀರ್ಥಂಕರನಾದ ಅಜಿತ ಸ್ವಾಮಿಯ ಮತ್ತು ಎರಡನೇ ಚಕ್ರವರ್ತಿಯಾದ ಸಗರ ಚಕ್ರವರ್ತಿಯ ಕಥೆಯಾಗಿದೆ. ಜೈನ ಪುರಾಣದಿಂದ ವಸ್ತುವನ್ನು ಆಯ್ದುಕೊಂಡಿರುವ ರನ್ನ ಕಥೆಯನ್ನು ನವಿರಾಗಿ ಚಿತ್ರಿಸುತ್ತಾನೆ.

ಎರಡನೆಯ ಕೃತಿಯಾದ 'ಸಾಹಸಭೀಮ ವಿಜಯ' ವ್ಯಾಸ ಭಾರತದಲ್ಲಿನ ಗದಾಪರ್ವ ಮತ್ತು ಸೌಪ್ತಿಕ ಪರ್ವಗಳನ್ನು ಆಧರಿಸಿ ಬರೆದ ಕೃತಿ. ಕೃತಿಯನ್ನು ಓದಿದಾಗ 'ಪಂಪಭಾರತ'ವೇ ಇದಕ್ಕೆ ನೇರವಾದ ಪ್ರೇರಣೆಯನ್ನು ಒದಗಿಸಿರಬೇಕು ಎನಿಸುತ್ತದೆ. ಏಕೆಂದರೆ 'ಪಂಪಭಾರತ'ದ ಹಲಕೆಲವು ಮಾತುಗಳನ್ನು ಕವಿ ಯಥಾವತ್ತಾಗಿ ತೆಗೆದುಕೊಂಡಿರುವುದನ್ನು ಅಲ್ಲಿ ಕಾಣುತ್ತೇವೆ. ಹಾಗೆ ತೆಗೆದುಕೊಂಡು ಕೆಲವಕ್ಕೆ ಸ್ವಂತಿಕೆಯ ಮೆರಗು ಕೊಟ್ಟಿದ್ದಾನೆ. ಪಂಪ ಅರಿಕೇಸರಿಯನ್ನು ತನ್ನ ಕಾವ್ಯದ ನಾಯಕನನ್ನಾಗಿ ಮಾಡಿಕೊಂಡು ಅರ್ಜುನನೊಡನೆ ಹೋಲಿಸಿದರೆ, ಇವನು ಸತ್ಯಾಶ್ರಯನನ್ನು 'ಗದಾಯುದ್ಧ'ದ ನಾಯಕ ಪಟ್ಟಕ್ಕೇರಿಸಿ, ಭೀಮನೊಡನೆ ಹೋಲಿಸಿ, ಕಾವ್ಯ ಬರೆದಿದ್ದಾನೆ.

ಹೀಗೆ ರತ್ನತ್ರಯರೆನಿಸಿದ ಈ ಮೂವರು, ಜೈನ ಪುರಾಣಗಳು ಮತ್ತು ರಾಮಾಯಣ

ಮಹಾಭಾರತಗಳಿಂದ ವಸ್ತುವನ್ನು ಆರಿಸಿಕೊಂಡು ಕಾವ್ಯರಚನೆ ಮಾಡಿದರೆ, ಇವರ ನಂತರದಲ್ಲಿ ಬಂದ ಕವಿಗಳೂ ಅವರ ಮಾರ್ಗವನ್ನೇ ಅನುಸರಿಸಿ ಕಾವ್ಯ ಬರೆಯುತ್ತಾರೆ. ಆದರೆ ಇವರಲ್ಲಾದ ಒಂದು ಸಣ್ಣ ಬದಲಾವಣೆಯೆಂದರೆ ವಸ್ತುವನ್ನು ರಾಮಾಯಣ ಮಹಾಭಾರತಗಳಿಂದಲ್ಲದೆ ಇತರ ಸಂಸ್ಕೃತ ಗ್ರಂಥಗಳಿಂದಲೂ ತೆಗೆದುಕೊಂಡಿರುವುದು.

ಪಂಪ ಮತ್ತು ರನ್ನರ ನಂತರದಲ್ಲಿ ಕಾವ್ಯ ರಚನೆ ಮಾಡಿದ ಕವಿಗಳಲ್ಲಿ ಚಾವುಂಡರಾಯ, ಒಂದನೆಯ ನಾಗವರ್ಮ, ದುರ್ಗಸಿಂಹ, ನಾಗಚಂದ್ರ, ನಯಸೇನ, ಬ್ರಹ್ಮಶಿವ ಮುಂತಾದವರು ಪ್ರಮುಖರಾಗಿದ್ದಾರೆ.

ಚಾವುಂಡರಾಯನು 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಅಥವಾ 'ಚಾವುಂಡರಾಯ ಪುರಾಣ' ಎಂಬ ಗ್ರಂಥ ಬರೆದಿದ್ದಾನೆ. ಇಲ್ಲಿ 24 ತೀರ್ಥಂಕರರು ಮೊದಲಾದ 63 ಜನ ಶಲಾಕ ಪುರುಷರ ಕಥೆಗಳಿವೆ. ಈ ಕಥೆಗೆ ವಸ್ತುವನ್ನು ಕವಿ ಜೈನ ಪರಂಪರೆಯಲ್ಲಿ ಪ್ರಸಿದ್ಧವಾದ ಸಂಸ್ಕೃತ ಮಹಾಪುರಾಣದಿಂದ ಆರಿಸಿಕೊಂಡಿದ್ದಾನೆ.

ನಾಗವರ್ಮ 'ಛಂದೋಂಬುಧಿ' ಮತ್ತು 'ಕರ್ಣಾಟಕ ಕಾದಂಬರಿ' ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಕರ್ಣಾಟಕ ಕಾದಂಬರಿ ಒಂದು ರಮ್ಯ ಕಥೆ. ಇದರ ಮೂಲ ಬಾಣನ 'ಕಾದಂಬರಿ'. ಸಂಸ್ಕೃತದಲ್ಲಿರುವ ಕಾದಂಬರಿಯನ್ನು ನಾಗವರ್ಮ ಕನ್ನಡಕ್ಕೆ ತರುವಲ್ಲಿ ಯಶಸ್ವಿಯಾಗಿದ್ದಾನೆ. ಮೂಲದ ಕಥಾಸಾರ, ಪಾತ್ರಗಳ ಜೀವಾಳ, ವರ್ಣನೆಗಳ ಸ್ವಾರಸ್ಯ, ಕಲ್ಪನೆಗಳ ಸೌಂದರ್ಯ ಇವಾವುದಕ್ಕೂ ಕುಂದು ಬಾರದ ಹಾಗೆ ಮೂಲವನ್ನು ಮನಸ್ಸಿನಲ್ಲಿಟ್ಟು ಕೊಂಡು ತಾನೇ ಕಾವ್ಯ ನಿರ್ಮಾಣ ಮಾಡಿದಂತೆ ಕಾವ್ಯ ರಚಿಸಿದ್ದಾನೆ.

ಸಂಸ್ಕೃತದಿಂದ ಕನ್ನಡಕ್ಕೆ ವಸ್ತುವನ್ನು ತಂದು ಕಾವ್ಯರಚನೆ ಮಾಡಿದವರಲ್ಲಿ ದುರ್ಗ ಸಿಂಹನೂ ಒಬ್ಬ. 'ಪಂಚತಂತ್ರ' ಇವನ ಕೃತಿ. ಇದು ಮೊದಲು ಪೈಶಾಚಿಕ ಭಾಷೆಯಲ್ಲಿದ್ದು ಅದನ್ನು ಗುಣಾಢ್ಯನೆಂಬವನು ರಚಿಸಿದ್ದನು. ಗುಣಾಢ್ಯನ ಈ ಪಂಚತಂತ್ರದ ಕಥೆಗಳನ್ನು ವಸುಭಾಗ ಭಟ್ಟ ಎಂಬುವವನು ಸಂಸ್ಕೃತಕ್ಕೆ ತಂದರೆ, ವಸುಭಾಗ ಭಟ್ಟನ ಈ ಕೃತಿಯನ್ನೇ ಆಧಾರ ವಾಗಿಟ್ಟುಕೊಂಡು ದುರ್ಗಸಿಂಹ ಕನ್ನಡದಲ್ಲಿ 'ಪಂಚ ತಂತ್ರ' ಕೃತಿಯನ್ನು ರಚಿಸಿದ್ದಾನೆ.

ದುರ್ಗಸಿಂಹನ ನಂತರದ ಕವಿ ನಾಗಚಂದ್ರ. ಇವನು 'ಮಲ್ಲಿನಾಥ ಪುರಾಣ' ಮತ್ತು ' ರಾಮಚಂದ್ರ ಚರಿತ ಪುರಾಣ' ಎಂಬ ಕೃತಿಗಳನ್ನು ರಚಿಸಿದ್ದಾನೆ. 'ಮಲ್ಲಿನಾಥ ಪುರಾಣ' ಪಂಪನ ಆದಿಪುರಾಣ ಹಾಗೂ ಜೈನ ಪುರಾಣದ ಮಾದರಿಯಲ್ಲಿ ರಚನೆಗೊಂಡಿದೆ. ಇದು 19ನೆ ತೀರ್ಥಂಕರನಾದ ಮಲ್ಲಿನಾಥನ ಚರಿತ್ರೆಯನ್ನು ಚಿತ್ರಿಸುತ್ತದೆ. ಅವನ ಎರಡನೆ ಕೃತಿಯಾದ 'ರಾಮಚಂದ್ರಚರಿತ ಪುರಾಣ' ಪ್ರಚಲಿತ ರಾಮಾಯಣಗಳಲ್ಲಿ ವಿಮಲಸೂರಿಯ ಸಂಪ್ರದಾಯ ವನ್ನು ಹೋಲುತ್ತದೆ. ವಿಮಲಸೂರಿಯ 'ಪಉಮಚರಿಯ' ಎಂಬ ಪ್ರಾಕೃತ ಗ್ರಂಥವನ್ನು ನಾಗಚಂದ್ರ ದಟ್ಟವಾಗಿ ಅನುಸರಿಸಿದ್ದಾನೆ.

ಕೊನೆಯದಾಗಿ ನಯಸೇನ ಮತ್ತು ಬ್ರಹ್ಮಶಿವ. ನಯಸೇನ 'ಧರ್ಮಾಮೃತ' ಎಂಬ ಗ್ರಂಥವನ್ನು ಬರೆದರೆ, ಬಹ್ಮಶಿವ 'ಸಮಯ ಪರೀಕ್ಷೆ' ಎಂಬ ಗ್ರಂಥವನ್ನು ಬರೆದಿದ್ದಾನೆ. ನಯಸೇನನ 'ಧರ್ಮಾಮೃತ' ಜೈನಧರ್ಮದಲ್ಲಿ ಹದಿನಾಲ್ಕು ಮಹಾರತ್ನಗಳೆಂದು ಹೆಸರಾಗಿರುವ

ಅಣುವ್ರತಗಳಲ್ಲಿ ಒಂದೊಂದನ್ನು ಆಚರಿಸಿ ಸದ್ಗತಿಯನ್ನು ಪಡೆದ ಮಹಾಪುರಷರ ಕಥೆಗಳನ್ನು ಒಳಗೊಂಡಿದ್ದರೆ, ಬ್ರಹ್ಮಶಿವನ 'ಸಮಯ ಪರೀಕ್ಷೆ' ಇತರ ಮತ ಹಾಗೂ ಪುರಾಣಗಳಲ್ಲಿನ ದೋಷಗಳನ್ನು ಎತ್ತಿ ತೋರಿಸಿ, ಜೈನಮತವೇ ಶ್ರೇಷ್ಠವೆಂದು ಬೌದ್ಧಿಕ ನೆಲೆಯಲ್ಲಿ ಹೇಳುವ ಕಥೆಯಾಗಿದೆ.

ಹೀಗೆ ಈ ಕಾಲಮಾನದ ಪ್ರತಿಯೊಬ್ಬ ಕವಿಯೂ ರಾಮಾಯಣ, ಮಹಾಭಾರತ ಹಾಗೂ ಪುರಾಣ ಪ್ರಸಿದ್ಧ ಗ್ರಂಥಗಳಿಂದ ವಸ್ತುವನ್ನು ಆರಿಸಿಕೊಂಡು ಕಾವ್ಯ ರಚನೆ ಮಾಡಿರುವುದನ್ನು ಕಾಣುತ್ತೇವೆ. ಇದಕ್ಕೆ ಮುಖ್ಯ ಕಾರಣ ಆ ಕಾಲದ ಕವಿಗಳಿಗೆ ಬೇರೆ ವಸ್ತುಗಳನ್ನು ಆರಿಸಿಕೊಂಡು ಕಾವ್ಯ ಬರೆಯಲು ಗೊತ್ತಿರಲಿಲ್ಲ ಎಂಬುದಕ್ಕಿಂತ ಆ ಕಾಲದ ಒತ್ತಡ ಮತ್ತು ಅವಶ್ಯಕತೆಗಳು ಅವರನ್ನು ಹೀಗೆ ಬರೆಯುವಂತೆ ಮಾಡಿದ್ದವು ಎಂದು ಹೇಳಬಹುದು. ಅಂಥ ಒತ್ತಡಗಳಾದರು ಏನು? ಯಾವುವು? ಎಂಬುದನ್ನು ಗುರುತಿಸ ಹೋದರೆ ಬಹುಮುಖ್ಯವಾಗಿ ನಮಗೆ ಕಂಡು ಬರುವುದು, ಆ ಕವಿಗಳು ಪಡೆದಿದ್ದ ರಾಜ ಮಹಾರಾಜರುಗಳ ಆಶ್ರಯ ಎಂದು ಹೇಳಬಹುದು.

ಈ ಯುಗದ ಎಲ್ಲ ಕವಿಗಳು ಸಾಮಾನ್ಯವಾಗಿ ರಾಜ ಮಹಾರಾಜರುಗಳ ಆಶ್ರಯ ಪಡೆದಿದ್ದರು ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಇದು ಅಂದಿನ ಕವಿಗಳಿಗೆ ಅಗತ್ಯವೂ ಆಗಿತ್ತು. ಏಕೆಂದರೆ ಆ ಕಾಲದಲ್ಲಿ ಈಗಿನಂತೆ ಅಚ್ಚಿನ ಸೌಲಭ್ಯವಾಗಲೀ ಪ್ರಕಟಿಸುವ ಸೌಲಭ್ಯ ವಾಗಲೀ ಇರಲಿಲ್ಲ. ಸಾಮಾನ್ಯರಾರೂ ಈ ಕೆಲಸಕ್ಕೆ ಮುಂದಾಗುತ್ತಿರಲಿಲ್ಲ. ಕವಿಗಳಿಗಂತು ಆ ಸಾಮರ್ಥ್ಯ ಇರಲೇ ಇಲ್ಲ. ಹಾಗಾಗಿ ರಾಜನ ಆಶ್ರಯ ಕವಿಗಳಿಗೆ ಅನಿವಾರ್ಯವಾಯಿತು. ಇದರ ಜೊತೆಗೆ ಪ್ರತಿಯೊಬ್ಬ ರಾಜನೂ ತನ್ನ ಶಕ್ತಿ, ಶೌರ್ಯ, ಸಾಹಸಗಳನ್ನು ಮೆಚ್ಚಿ ಬರೆಯುವ ಕವಿ ಗಳನ್ನು ಇಷ್ಟಪಡುತ್ತಿದ್ದನು. ಪಂಡಿತ ಕವಿಗಳನ್ನು ಕರೆಯಿಸಿ ತನ್ನ ಆಸ್ಥಾನದಲ್ಲಿಟ್ಟುಕೊಂಡು ಅವರಿಗೆ ವಿಶೇಷ ಬಿರುದು ಬಾವಲಿಗಳನ್ನು ನೀಡಿ ಗೌರವಿಸುತ್ತಿದ್ದನು. ಯಾವಾಗ ಈ ಕವಿಗಳು ರಾಜನ ಹಂಗಿಗೆ ಒಳಗಾದರೋ ಆಗ ತನಗನಿಸಿದಂತೆ ಕಾವ್ಯ ಬರೆಯುವುದನ್ನು ಬಿಡ ಬೇಕಾಯಿತು. ರಾಜ ಮತ್ತು ಅವನ ಆಸ್ಥಾನ ಪಂಡಿತರ ವರ್ಗವನ್ನು ಮೆಚ್ಚಿಸುವಂಥ ಕಾವ್ಯವನ್ನು ರಚಿಸಬೇಕಾಯಿತು. ಆಶ್ರಯ ನೀಡಿದವನನ್ನು ಹೊಗಳುವುದಕ್ಕಾಗಿ ಕವಿಗಳು ರಾಮಾಯಣ ಮಹಾಭಾರತ ಮುಂತಾದ ಪ್ರಸಿದ್ಧ ಕೃತಿಗಳಿಂದ ಕಾವ್ಯವಸ್ತುವನ್ನು ಆರಿಸಿಕೊಂಡು ಅಲ್ಲಿಯ ಕಥಾನಾಯಕರೊಡನೆ ತಮ್ಮ ನಾಯಕರನ್ನು ಹೋಲಿಸಿ ಕಾವ್ಯ ರಚಿಸಿದರು. ತಮ್ಮ ಆಶ್ರಯ ದಾತರ ಶೌರ್ಯ, ಸಾಹಸ, ಅರಮನೆ, ಕೋಟೆ-ಕೊತ್ತಲ, ರಾಣಿಯರು ಮತ್ತವರ ಸಖಿಯರು, ಅವರ ವೈಭವೋಪೇರಿತ ಜೀವನ ಮುಂತಾದುವೆಲ್ಲವನ್ನು ಕವಿಗಳು ತಮ್ಮ ಕಾವ್ಯಕ್ಕೆ ತಂದುಕೊಂಡರು. ಪಂಡಿತರನ್ನು ಮೆಚ್ಚಿಸಲಿಕ್ಕಾಗಿ ಛಂದಸ್ಸು, ಅಲಂಕಾರ, ವರ್ಣನೆ ಮುಂತಾದ ಅನೇಕ ನಿಯಮಗಳನ್ನು ಕಠಿಣವಾಗಿ ಪಾಲಿಸಿದರು. ಹೀಗಾಗಿ ಒಟ್ಟು ಸಾಹಿತ್ಯವೇ ರಾಜ ಮಹಾರಾಜರುಗಳ ವೈಭವದ ಕಥೆಯಾಗಿ ಉಳಿಯಿತು. ಜೊತೆಗೆ ಪಂಡಿತ ಪಾಮರರಿಗಷ್ಟೇ ಸೀಮಿತವಾಯಿತು.

## 3.2 ವಚನಯುಗದ ಕಥಾವಸ್ತು

ಪಂಪಯುಗದ ನಂತರ ಪ್ರಚಲಿತಕ್ಕೆ ಬಂದ ಯುಗವನ್ನು ವಚನಯುಗ ಎಂದು ಕರೆಯುವರು. ಈ ಯುಗ, ಕನ್ನಡ ಸಾಹಿತ್ಯ ಹಾಗೂ ಕರ್ನಾಟಕ ಇತಿಹಾಸದ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದುದು. ಈ ಯುಗದಲ್ಲಿ ವಚನಗಳ ಮಹಾಪೂರವೇ ಹರಿಯಿತು. ಸಾಮಾಜಿಕವಾಗಿಯೂ ಅತ್ಯಂತ ಮಹತ್ವದ ಮಾರ್ಪಾಟುಗಳಾದವು.

ವಚನಕಾರರೆಂದರೆ ಅವರೆಲ್ಲ ಅಸಾಮಾನ್ಯರು, ವಿದ್ವತ್ತುಳ್ಳ ಜನರು, ರಾಜ ಮಹಾರಾಜರ ಆಸ್ಥಾನದಲ್ಲಿ ವಾಸಿಸುವ ಜನ ಎಂದೇನೂ ಗ್ರಹಿಸಬೇಕಾಗಿಲ್ಲ. ಬಸವಣ್ಣನೊಬ್ಬನನ್ನು ಬಿಟ್ಟರೆ ಉಳಿದೆಲ್ಲರೂ ಸಾಮಾನ್ಯರೇ. ಅವರೆಲ್ಲ ಸಾಮಾನ್ಯ ವರ್ಗಗಳಿಂದ ಬಂದವರು. ವಿವಿಧ ಜಾತಿ, ವರ್ಗ, ಕುಲ, ಮತಗಳಿಂದ ಬಂದವರು. ಅತ್ಯಂತ ಸರಳ ಜೀವಿಗಳು. ಎಲ್ಲ ಬಗೆಯ ನೋವುಂಡವರು. ಇವರು ಬದುಕಿದ್ದ ಕಾಲ ಸಾಮಾಜಿಕವಾಗಿ ಅತ್ಯಂತ ಹಿಂದುಳಿದಿದ್ದು ಸಮಾಜ ದಲ್ಲಿ ಕುಲ, ಜಾತಿ, ಮತ, ಧರ್ಮ, ಮೇಲು - ಕೀಳು, ಗಂಡು - ಹೆಣ್ಣು ಮುಂತಾದ ಸಾಮಾಜಿಕ ಅನಿಷ್ಟಗಳು ಬೇರೂರಿದ್ದವು. "ಸಾಮಾಜಿಕ ಏಣಿಯ ಮೇಲ್ತುದಿಯಲ್ಲಿ ಬ್ರಾಹ್ಮಣರು, ತೀರ ಕೆಳಗೆ - ನೆಲದಲ್ಲಿ ಹೂತು ಹೋಗಿರುವ ಭಾಗದಲ್ಲಿ ಅಸ್ಪೃಶ್ಯರು; ಇದು ಆ ಕಾಲದ ಚಿತ್ರಣ. ಈ ಎರಡರ ಅಂತರವಲ್ಲಿ ಬೇರೆ ಬೇರೆ ಜಾತಿಗಳು; ಆಯಾ ಜಾತಿಯಲ್ಲೆ ಶ್ರೀಮಂತರು, ಮಧ್ಯಮ ವರ್ಗದವರು, ಬಡವರು ಎಂಬ ಭೇದಗಳಿದ್ದವು. ಸ್ತ್ರೀ ಒಟ್ಟಾರೆ ಗಂಡಿಗಿಂತ ಕೀಳು ಎಂಬ ಸಾರ್ವತ್ರಿಕ ಭಾವನೆ ಎಲ್ಲ ಜಾತಿಗಳಲ್ಲೂ ಸಾಮಾನ್ಯವಾಗಿತ್ತು."[1] ಇಂಥ ಸಂದರ್ಭದಲ್ಲಿ ಎಲ್ಲ ಶರಣರೂ ಸಮಾನತಾ ತತ್ವದಡಿಯಲ್ಲಿ ಒಂದುಗೂಡಿ ಸಮಸಮಾಜದ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ತಾವು ನಂಬಿದ ತತ್ವ, ಭಾವನೆ ಹಾಗೂ ಉದ್ದೇಶಗಳನ್ನು ಜನತೆಯ ಮುಂದಿಟ್ಟರು. ಹಾಗೆ ಜನತೆಯ ಮುಂದೆ ಇಟ್ಟ ಶರಣರ ಈ ಭಾವಗಳೇ ವಚನಗಳಾದವು. ಅವು ಶರಣರ ಅಂತರಂಗದ ನುಡಿಗಳು. ಆ ವಚನಗಳನ್ನು ಶರಣರು ಪ್ರಯತ್ನಪೂರ್ವಕವಾಗಿ ಕಟ್ಟಿದವರಲ್ಲ. ಹಾಗೆ ವಚನಗಳನ್ನು ಕಟ್ಟಿ ಹಾಡಲು ಅವರು ಕವಿಗಳೂ ಅಲ್ಲ. ಅಷ್ಟೇ ಏಕೆ ಅವರಿಗೆ ನಾವು ಕವಿಗಳು ; ನಾವು ಹೇಳುತ್ತಿರುವುದು ಕಾವ್ಯ ಎಂಬ ಕಲ್ಪನೆಯೂ ಇರಲಿಲ್ಲ. ಆದರೂ ಆ ವಚನಗಳಿಗೆ ಕಾವ್ಯದ ನಾದವಿರುವುದನ್ನು ಅಲ್ಲಗಳೆಯುವಂತಿಲ್ಲ. ಅವರ ಈ ವಚನಗಳು ಅತ್ತ ಗದ್ಯವೂ, ಇತ್ತ ಪದ್ಯವೂ ಅಲ್ಲದ ಮುಕ್ತಕಗಳ ಹಾಗೆ ಕನ್ನಡ ಕಾವ್ಯಗಳ ಮಧ್ಯೆ ಶೋಭಿಸುತ್ತವೆ.

ಶರಣರು ವಚನಗಳನ್ನೇನೋ ರಚಿಸಿದರು. ಆದರೆ ಅವರು ತಮ್ಮ ವಚನಗಳಿಗೆ ಆರಿಸಿಕೊಂಡ ವಸ್ತು ಯಾವುದು? ಇದು ಕ್ಲಿಷ್ಟವಾದ ವಿಚಾರ. ಪೂರ್ವ ಕವಿಗಳ ಹಾಗೆ ಇದೇ ವಸ್ತು ಎಂದು ಖಚಿತವಾಗಿ ಹೇಳಲು ಆಗುವುದಿಲ್ಲ. ಏಕೆಂದರೆ ಶರಣರು ವಚನಗಳನ್ನು ರಚಿಸಿದ್ದು ಕಾವ್ಯವನ್ನು ರಚಿಸಬೇಕೆಂಬ ಉದ್ದೇಶದಿಂದಲ್ಲ; ಸಮಾಜವನ್ನು ಬದಲಾಯಿಸಬೇಕು ಎಂಬ ಉದ್ದೇಶದಿಂದ. ಇದರಿಂದಾಗಿ ಅವರ ವಚನಗಳಲ್ಲಿ ನಿರ್ದಿಷ್ಟವಾದ ವಸ್ತು ಎಂಬುದು ಇಲ್ಲದೆ ಹೋಯಿತು. ಅವರು ಇಡೀ ಸಮಾಜವನ್ನೇ ಆಧಾರವಾಗಿಟ್ಟುಕೊಂಡು, ಅದರೊಳಗಿನ ನೀತಿ - ಅನೀತಿಗಳ ಬಗ್ಗೆ ವಚನಗಳನ್ನು ಹಾಡಿದರು. ವಿಶೇಷವಾಗಿ ಅಧ್ಯಾತ್ಮದ ಕಡೆಗೆ ಹೆಚ್ಚಿನ

ಒಲವು ತೋರಿದರು. ಹಾಗಾಗಿ ಸಮಾಜ ವಿಶ್ಲೇಷಣೆ ಮತ್ತು ಆತ್ಮವಿಚಾರಗಳೇ ವಚನಕಾರರ ವಸ್ತುಗಳಾಗಿದ್ದವು.

## 3.3 ಹರಿಹರನ ಕಥಾವಸ್ತು

ಮೇಲಿನ ಈ ಎರಡೂ ಪರಂಪರೆಗಳಿಗಿಂತ ಕಥಾವಸ್ತುವಿನ ಆಯ್ಕೆಯಲ್ಲಿ ಕೆಲಮಟ್ಟಿನ ವಿಶಿಷ್ಟತೆಯನ್ನು ತೋರಿದವನು ಹರಿಹರ. ಹರಿಹರ ಸ್ವತಂತ್ರ ಮನೋವೃತ್ತಿಯವನು. ಯಾರ ಹಂಗಿಗೂ ಒಳಗಾದವನಲ್ಲ. ಯಾರಿಗೂ ಅಂಜಿದವನಲ್ಲ. ನಿರ್ದಾಕ್ಷಿಣ್ಯ ಪ್ರವೃತ್ತಿ ಅವನದು. ಬಾಳಿನಲ್ಲಿ ಹೇಗೋ ಕಾವ್ಯದಲ್ಲಿಯೂ ಹಾಗೆಯೇ. ಹಾಗಾಗಿ ಆತ ತನ್ನ ಹಿಂದಿನ ಪರಂಪರೆಯನ್ನು ಕಟುವಾಗಿ ಟೀಕಿಸಿದ. ಕಾವ್ಯವಸ್ತುವನ್ನು ಕುರಿತಂತೆ-

> ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯುಕ್ಕಟಾ
> ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
> ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
> ನೆನೆ ಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ [2]

ಎಂಬುದು ಅವನ ಧೋರಣೆ. ಇಂಥದೊಂದು ಬದಲಾವಣೆ ಅವನಿಗೆ ಸಾಧ್ಯವಾದದ್ದು, ಬಹುಮುಖ್ಯವಾಗಿ ವಚನಕಾರರ ಕ್ರಾಂತಿಯಿಂದ ಎಂಬುದನ್ನು ಇಲ್ಲಿ ಗುರುತಿಸಿ ಹೇಳಬೇಕಾಗಿದೆ. ಜೊತೆಗೆ, ಹರಿಹರನ ದೈನಂದಿನ ಬದುಕು ಮತ್ತು ಬವಣೆಯೂ ಕಥಾವಸ್ತುವಿನ ಆಯ್ಕೆಯಲ್ಲಿ ಪ್ರಮುಖ ಪಾತ್ರ ವಹಿಸಿತ್ತೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

"ಹರಿಹರ ತನಗೆ ಸಮೀಪಕಾಲೀನರಾದ ಬಸವ ಅಲ್ಲಮರಂಥ ಮಹಾಪುರುಷರನ್ನು ಕುರಿತು ಬರೆದ ರಗಳೆಗಳನ್ನು ಬಿಟ್ಟು ಇನ್ನುಳಿದ ಚಿಕ್ಕ ಚಿಕ್ಕ ರಗಳೆಗಳನ್ನು ನೋಡಿದರೆ, ವಸ್ತುವಿನಲ್ಲಿ ಆತ ಮಾಡಿಕೊಂಡ ಬದಲಾವಣೆ ಏನೆಂಬುದು ಗೊತ್ತಾಗುತ್ತದೆ. ಉದಾತ್ತ ವ್ಯಕ್ತಿಗಳನ್ನು, ಇತಿಹಾಸ - ಪುರಾಣಗಳನ್ನು ಕುರಿತು ಕಾವ್ಯ ಬರೆಯಬೇಕೆನ್ನುವ ಪರಂಪರೆಯಲ್ಲಿ ಮೊಟ್ಟ ಮೊದಲಿಗೆ ಹರಿಹರ ಕಾವ್ಯ ಬರೆಯಲು ಆರಿಸಿಕೊಂಡ ಶಿವಶರಣರು ಸಾಮಾಜಿಕವಾಗಿ ಜನ ಸಾಮಾನ್ಯರು ಎಂಬುದು ಬಹು ಮುಖ್ಯವಾದ ಸಂಗತಿ. ಹರಿಹರನ ಬೇಡರ ಕಣ್ಣಪ್ಪ, ಇಳೆಯಾಂಡ ಗುಡಿಮಾರ, ತಿರುನೀಲಕಂಠ, ಮಾದಾರ ಚೆನ್ನಯ್ಯ, ಕುಂಬರ ಗುಂಡಯ್ಯ ಇವರೆಲ್ಲ ಸಾಮಾಜಿಕವಾಗಿ ಶೂದ್ರ ವರ್ಗದವರು"[3] ಹಾಗೂ ಬೇರೆ ದೇಶ, ಜಾತಿ ಮತ್ತು ವೃತ್ತಿಗಳಿಂದ ಬಂದವರು. ಅವನ ಒಟ್ಟು ರಗಳೆಗಳಲ್ಲಿ ಸುಮಾರು ಇಪ್ಪತ್ತೆಂಟು ಜನ ಶರಣರು ಕನ್ನಡ ನಾಡಿನವರಾದರೆ, ಅರುವತ್ತಕ್ಕಿಂತ ಹೆಚ್ಚು ಶರಣರು ತಮಿಳುನಾಡು ಮತ್ತು ನೆರೆಯ ರಾಜ್ಯಗಳಿಂದ ಬಂದವರು. ಅಲ್ಲದೆ "ಮುಗ್ಧ ಭಕ್ತಿಯಿಂದ ಅಸಾಮಾನ್ಯ ಕಾರ್ಯದಲ್ಲಿ ತೊಡಗಿ ಕೃತಕೃತ್ಯರಾದ ರುದ್ರಪಶುಪತಿ,. ಕೋಳೂರ ಕೊಡಗೂಸು, ಇವರ ಚಿತ್ರಗಳಿವೆ. ಉಗ್ರ ನಿಷ್ಠಾವಂತರಾಗಿ ಸುತ್ತಲಿನ ಮಾನವರನ್ನು ಬೆರಗುಗೊಳಿಸಿ ಶಿವನ ಮೆಚ್ಚುಗೆ ಪಡೆದ ಕಾರಿಕಾಲಮ್ಮೆ,

ತಿರುನೀಲಕಂಠರಂತಹವರಿದ್ದಾರೆ. ವೇಶ್ಯಾ ವಿಟ ಜೀವನದಲ್ಲಿ ಮೊದಲುಗೊಂಡು ಚಿತ್ತದಾತುರದ ಮಹೋನ್ನತೀಕರಣ ವನ್ನು ಸಾಧಿಸಿ ದೈವೀ ಕೃಪೆಗೆ ಪಾತ್ರರಾದ ನಂಬಿಯಣ್ಣ, ಮಲುಹಣರಿದ್ದಾರೆ. ಮಾನವ ಜೀವನದಲ್ಲಿ ಸಾವಿನ ಭೀತಿಯನ್ನು ಅಳಿಸಿದ ಓಹಿಲಯ್ಯ, ಮಳೆಯರಾಜನಂತಹವ ರಿದ್ದಾರೆ."[4] ಪದ್ಮಾವತಿಯಂಥ ವೇಶ್ಯೆಯರು, ಮಹಾದೇವಿಯಂಥ ವಿರಾಗಿಣಿಯರು, ವೈಜಕವ್ವೆ, ಹೇರೂರ ಹೆಂಗೂಸಿನಂಥ ಪರಮ ಪತಿವ್ರತೆಯರೂ ಹರಿಹರನ ಈ ಕಥಾಸಾಗರದೊಳಗೆ ಸೇರಿ ಹೋಗಿದ್ದಾರೆ. ಇವುಗಳಲ್ಲದೆ ಪ್ರಕೃತಿ ಮತ್ತು ಧರ್ಮಗಳನ್ನು ಕುರಿತಂತೆ ಪುಷ್ಪ ರಗಳೆ, ವಿಭೂತಿಯ ರಗಳೆ, ನಮಃಶಿವಾಯ ರಗಳೆ, ಮಹಿಮಾ ರಗಳೆ ಮುಂತಾದ ರಗಳೆಗಳನ್ನು ಕೂಡ ಹರಿಹರ ಬರೆದಿದ್ದಾನೆ. ಹೀಗೆ "ಸಾಮಾಜಿಕವಾಗಿ ಸಾಮಾನ್ಯರಾದವರು ಕಾವ್ಯಕ್ಕೆ ವಸ್ತುವಾದದ್ದು ಮತ್ತು ನಾಯಕರಾದದ್ದು ಇಡೀ ಕನ್ನಡ ಸಾಹಿತ್ಯದಲ್ಲಿಯೆ ಇದು ಮೊದಲ ಸಲ. ಆದರೆ, ಹರಿಹರ ಚಿತ್ರಿಸುವ ಪ್ರಕಾರ ಅವರೆಲ್ಲ ಅಪ್ರತಿಮ ಶಿವ ಭಕ್ತರು; ಶಿವನನ್ನೊಲಿಸಿ ನೇರವಾಗಿ ಗಣಪದವಿಗೇರಿದವರು. ಈ ದೃಷ್ಟಿಯಿಂದ ಇವರು ಅಸಾಮಾನ್ಯರೇ ಆಗುತ್ತಾರೆ. ಈ ಸಾಮಾನ್ಯರ 'ಅಸಾಮಾನ್ಯತೆ' ಸಾಮಾಜಿಕವಾಗಿ ಸ್ಥಾಪಿತವಾಗುವುದಿಲ್ಲ, ಶಿವಶರಣರೆಂಬ ಕಾರಣದಿಂದ ಸ್ಥಾಪಿತ ವಾಗುತ್ತದೆ. ಎಂದರೆ ಮೂಲತ: ಇಲ್ಲೂ 'ಅಸಾಮಾನ್ಯರೇ' ಕಾವ್ಯದ ವಸ್ತುವಾದಂತಾಯಿತು. ಈ ಒಂದು ಪರಿಮಿತಿಯನ್ನು ಮರೆತರೆ ಕಾವ್ಯವಸ್ತುವಿನಲ್ಲಿ ಹರಿಹರ ತಂದ ಬದಲಾವಣೆ ಅಸಾಧಾರಣವಾದದ್ದು."[5]

ಕಥಾವಸ್ತುವಿನ ಆಧಾರದ ಮೇಲೆ ಹರಿಹರನ ರಗಳೆಗಳನ್ನು 1. ಪುರಾತನರ ರಗಳೆಗಳು, 2. ನೂತನರ ರಗಳೆಗಳು, 3. ಸಂಕೀರ್ಣ ರಗಳೆಗಳು ಎಂದು ಮೂರು ಭಾಗಗಳಾಗಿ ವಿಂಗಡಿಸ ಬಹುದು. ಈ ಮೂರು ಭಾಗಗಳಲ್ಲೂ ಕವಿ ಆರಿಸಿಕೊಂಡಿರುವ ವಸ್ತು ಬೇರೆ ಬೇರೆ ಕಡೆ ಯಿಂದ ತೆಗೆದುಕೊಂಡದ್ದು ಎಂಬುದನ್ನು ಅವುಗಳ ಪ್ರತ್ಯೇಕ ಅಧ್ಯಯನದಿಂದ ತಿಳಿಯಬಹುದು.

### 3.3.1 ಪುರಾತನರ ರಗಳೆಗಳು

ಪುರಾತನರು ಎಂದು ಈಗ ಕರೆಯುತ್ತಿರುವ ಶರಣರು ಕ್ರಿ. ಶ. 5ನೇ ಶತಮಾನದಿಂದ 9ನೇ ಶತಮಾನದ ಅವಧಿಯಲ್ಲಿ ತಮಿಳುನಾಡಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಬಾಳಿದಂತಹವರಾಗಿದ್ದಾರೆ. "ತಮಿಳುನಾಡಿನಲ್ಲಿ ಇವರನ್ನು 'ತಿರುತ್ತೊಂಡರ್', 'ನಾಯನ್ಮಾರರು', 'ನಾಯನಾರರು' ಎಂದೂ ಕನ್ನಡನಾಡಿನಲ್ಲಿ ಅರುವತ್ತುಮೂವರು, ತ್ರಿಷಷ್ಟಿ ಪುರಾತನರು, ಎಂದೂ"[6] ಕರೆಯುತ್ತಾರೆ. ಈ ಪುರಾತನರು ತಮಿಳು ದೇಶದ ಪ್ರಾಚೀನ ಧರ್ಮಗಳಲ್ಲೊಂದಾದ ಶೈವಮತ ಊರ್ಜಿತಾವಸ್ಥೆಯನ್ನು ಹೊಂದಲು ಪ್ರಮುಖ ಪಾತ್ರ ವಹಿಸಿದವರಾಗಿದ್ದಾರೆ.

ಇವರ ಜೀವಿತ ಕಾಲದಲ್ಲಿ ಶೈವಮತಾವಲಂಭಿಗಳಾದ ಚೋಳರು ರಾಜ್ಯಭಾರ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಪ್ರವರ್ಧಮಾನಕ್ಕೆ ಬಂದ ಶರಣರು ದೇಶದ ಧಾರ್ಮಿಕ ಕ್ಷೇತ್ರದಲ್ಲಿ ಶೈವ ಸಿದ್ಧಾಂತ ಯುಗವನ್ನು ಸ್ಥಾಪನೆ ಮಾಡಿದರು. ಪೂರ್ವ ಜನ್ಮದಲ್ಲಿಯೇ ಶಿವನ ಅನುಗ್ರಹ ಪಡೆದು ಬಂದ ಈ ಮಹಾಪುರುಷರು ತಮ್ಮ ಜೀವನದುದ್ದಕ್ಕೂ ಶೈವ ಸಿದ್ಧಾಂತವನ್ನು ದೈವೀ ಘಟನೆಗಳ ಮೂಲಕ ಪ್ರಸ್ತಾಪಿಸುತ್ತ ಶಿವ ಪಾರಮ್ಯವನ್ನು ಮೆರೆದರು.

ಹಾಗೆ ಶಿವ ಪಾರಮ್ಯವನ್ನು ಮೆರೆದವರಲ್ಲಿ ಸುಮಾರು ಅರುವತ್ತಮೂರು ಜನ ಶರಣರಿದ್ದಾರೆ. ಅವರುಗಳೆಂದರೆ; ಅತಿಭಕ್ತ, ಅಮರನೀತಿ, ಅರಿವಾಳ್ತಂಡ, ಅ:ಪ್ಪೋತಿ, ಆನಾಯನಾರ, ಇರಿಭಕ್ತ, ಇಹ:ಪ್ಪಗೆಯಾಂಡ, ಇಳೆಯಾಂಡಗುಡಿಮಾರ, ಎಡೆಗಣೆಯ ಪೆರುಮಾಳೆ, ಏಣಾದಿನಾಥ, ಒಲಘಾಂಡ ಮೂರ್ತಿ, ಕಡವೂರಕಾರಿ, ಕಣಂಬುಲ್ಲ, ಕಣ್ಣಪ್ಪ, ಕಲಿಕಂಪ, ಕಲಿಕಾಮದೇವ, ಕಲಿಯನಾಯ್ನಾರ, ಕಳಚೆಂಗ ಚೋಳ, ಕಳಚೆಂಗ ಪೆರುಮಾಳೆ, ಕಾರಿಕಾಲಮ್ಮೆ, ಕುಲಚ್ಚರಿ, ಕೊಂಗುಲಿಯ ಕಲಿಯ, ಕೊಲ್ಬುಲಿ, ಗಣನಾಥದೇವ, ಚಂಡೇಶಪಿಳ್ಳೆ, ಚಿರುತೊಣೆಯಾಂಡ, ಚೇರಮ, ಜೆಡೆಯನಾಯ್ನಾರ ಮತ್ತು ಯಸ್ಯಜ್ಞಾನ ದೇವಿ, ತಿರುನೀಲಕಂಠ ಪಾಣ, ತಿರುನೀಲ ನಕ್ಕ, ತಿರುಕುರುಂಪೆ ತೊಂಡ, ತಿರುನಾಳ್ಪೋವ, ತಿರುಮೂಲ ದೇವ, ನಂಬಿಯಣ್ಣ, ನಮ:ಶಿವಾಯ ಮುರುಘ, ನಮಿನಂದಿ, ನರಸಿಂಗ ಮೊನೆಯ, ನಿಡುಮಾರದೇವ, ನೈಶ, ಪೊಗಲ್ತೊಣೆಯಾಂಡ, ಪಾಂಡ್ಯಮಹಾದೇವಿ, ಪೂಸಲೆಯಾಂಡ, ಪೆರುಮಳಲಿಯ ಕುರುಂಬ, ಮಾನಕಂಜಾರ, ಮೂರ್ಖ, ಮೆರೆಮಿಂಡದೇವ, ಮೊನೆಯಿಡುವ, ರುದ್ರಪಶುಪತಿ, ವರದಂಡಿಭಕ್ತಿ, ವರಕೃತಾಂತ, ವರಶಕ್ತಿಯಾರ, ವಾಗೀಶ್ವರ, ವಾಯಿಲಾರ, ಸಾಂಖ್ಯ ತೊಂಡ, ಸಿರಿಯಾಳ, ಸೇದಿರಾಜ, ಸೊಮಾಸಿಮಾರ, ನಿಂಬಿಯಕ್ಕ, ತಿಲ್ಲೈವೇಳಾಂಧರರು, ಪೊಯ್ಯಡಿ, ಮಾದಾರ ಚೆನ್ನಯ್ಯ ಮತ್ತು ಮನುಚೋಳ.

ಇವರೆಲ್ಲ "ಜೀವನದ ವಿವಿಧ ವೃತ್ತಿಗಳನ್ನು ಕುಲಗೋತ್ರಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು. ಇವರಲ್ಲಿ ನಾಲ್ವರು ಶೈವರು, ಹದಿಮೂರು ಮಂದಿ ಬ್ರಾಹ್ಮಣರು, ಆರು ಮಂದಿ ದೊರೆಗಳು, ಐವರು ಮಾಂಡಲಿಕರು, ಐವರು ಬಣಜಿಗರು, ಹದಿಮೂರು ಮಂದಿ ಒಕ್ಕಲಿಗರು, ಇಬ್ಬರು ಕುರುಬರು, ಒಬ್ಬ ಕುಂಬಾರ, ಒಬ್ಬ ಮಂತ್ರಿ, ಒಬ್ಬ ಮೀನುಗಾರ, ಒಬ್ಬ ಬೇಡ, ಒಬ್ಬ ಜೇಡ, ಒಬ್ಬ ಗಾಣಿಗ, ಒಬ್ಬ ಅಗಸ, ಒಬ್ಬ ಪುಲಯ, ಜಾತಿಯೇ ಗೊತ್ತಿಲ್ಲದ ಆರುಜನ ಶರಣರಿದ್ದಾರೆ."[7] ಭಿನ್ನ ಕುಲ ಭಿನ್ನ ವೃತ್ತಿಗಳನ್ನು ಪ್ರತಿನಿಧಿಸುವ ಇವರುಗಳೆಲ್ಲ ತಮ್ಮ ಒಮ್ಮುಖವಾದ ನಡೆ - ನುಡಿಗಳಿಂದ ತಿಳಿಯಾದ ಚಾರಿತ್ರ್ಯದಿಂದ ಜನಮನವನ್ನು ಆಕರ್ಷಿಸಿದರು. ಜೈನ, ಬೌದ್ಧಮತಗಳ ನಿರೀಶ್ವರವಾದವನ್ನು ಬಲವಾಗಿ ಖಂಡಿಸಿ ತೇಜ ಗೆಡುತ್ತಿದ್ದ ಶೈವಧರ್ಮವನ್ನು ಬೆಳಗಿ ಜನತೆಯಲ್ಲಿ ಭಗವದ್ಭಕ್ತಿ ಬೆಳೆಯುವಂತೆ ಮಾಡಿದರು. ಅಲ್ಲದೆ "ತಮ್ಮ ಸುತ್ತಣ ಸಮಾಜವನ್ನು ಸಮಾನ ಮನೋಭಾವದಿಂದ ಕಂಡರು. ಗುಣಗಳನ್ನು ಗೌರವಿಸಿದರು. ಶಿವನ ಸಾಮ್ರಾಜ್ಯದಲ್ಲಿ ಮೇಲು ಕೀಳುಗಳಿಲ್ಲವೆಂದೂ ಎಲ್ಲರೂ ದೇವರ ಮಕ್ಕಳೆಂದು ಸಾರಿಸಾರಿ ಹೇಳಿದರು. ಹೆರವರ ಕಲ್ಯಾಣಕ್ಕಾಗಿ ಸ್ವಂತ ಸುಖವನ್ನು ತ್ಯಜಿಸುವುದಕ್ಕಿಂತ ಮಿಗಿಲಾದ ಧರ್ಮ ಇನ್ನೊಂದಿಲ್ಲವೆಂಬುದನ್ನು ತಮ್ಮ ದಿನನಿತ್ಯಾಚರಣೆಯ ಮೂಲಕ ಮಾಡಿ ತೋರಿದರು."[೮] 'ದೇವನೊಬ್ಬ ನಾಮ ಹಲವು', 'ಪ್ರೇಮವೇ ಶಿವನು', 'ಶಿವನು ಬೆಳಗಿನ ಬೆಳಗು' ,'ಚೆಲುವಿನ ಚೆಲುವು' ಎಂದು ಮುಂತಾದಾಗಿ ವಿಶ್ವಮಾನವ ತತ್ವಗಳನ್ನು ಹಾಡುತ್ತ ನಾಡಿನಲ್ಲೆಲ್ಲ ಸಂಚರಿಸಿದರು. ಅವರು ತುಳಿದ ನೆಲ ಪಾವನವಾಯಿತು. ನಿಂತ ನೆಲ ಪುಣ್ಯಕ್ಷೇತ್ರವಾಯಿತು. ಆಡಿದ ಮಾತು ವೇದವಾಯಿತು. ಇವರ ಕೀರ್ತನೆಗಳು ತಮಿಳು ದೇಶದಲ್ಲಿ ಮಾತ್ರವಲ್ಲ ಕನ್ನಡ ದೇಶದಲ್ಲಿಯೂ ಹಬ್ಬಿ ಶೈವಧರ್ಮವು ಕವಲೊಡೆದು ವೀರಶೈವಧರ್ಮ ಸಂಸ್ಥಾಪಿತವಾಗುವುದಕ್ಕೆ

ಅವಕಾಶವನ್ನು ಮಾಡಿಕೊಟ್ಟಿತು.

ಸತ್ಯ ಶುದ್ಧ ಶರಣರನ್ನು ಕುರಿತಂತೆ ಅವರ ಬದುಕನ್ನು ಪರಿಚಯಿಸುವ ಹಲವು ಕೃತಿಗಳು ತಮಿಳು ಭಾಷೆಯಲ್ಲಿವೆ. ಅವುಗಳಲ್ಲಿ ಒಂಭತ್ತನೆಯ ಶತಮಾನದಲ್ಲಿ ತಮಿಳುನಾಡಿನ ಸುಂದರ ಮೂರ್ತಿನಾಯನಾರರು ಬರೆದ 'ತಿರುತ್ತೊಂಡತ್ತೊಗೈ' ಮೊದಲನೆಯದು. ಇಲ್ಲಿ ಸುಂದರ ಮೂರ್ತಿನಾಯನಾರರು ತಮ್ಮ ಹನ್ನೊಂದು ಪದ್ಯಗಳ ಕಾವ್ಯದಲ್ಲಿ ಅರವತ್ತುಮೂವರು ಪುರಾತನರನ್ನು ಸ್ತುತಿಸಿದ್ದಾರೆ. ಮುಂದೆ ಇದೇ ಕಾವ್ಯವನ್ನು ಆಧರಿಸಿ ಹನ್ನೊಂದನೆ ಶತಮಾನದಲ್ಲಿ ನಂಬಿ ಅಂಡಾರ್ ನಂಬಿ ಎಂಬ ಹೆಸರಿನ ತಮಿಳು ಕವಿಯೊರ್ವನು 'ತಿರುತ್ತೊಂದರ್ ತಿರುವನ್ತಾದಿ' ಎಂಬ ಹೆಸರಿನ ಪುರಾತನರ ಸ್ತೋತ್ರವನ್ನು ಬರೆದಿರುವನು. ಇದರಲ್ಲಿ ತೊಂಬತ್ತು ಪದ್ಯಗಳಿದ್ದು ಇವು 'ವೆಣ್ಬಾ' ಎಂಬ ಹೆಸರಿನ ವೃತ್ತದಲ್ಲಿ ರಚನೆಯಾಗಿವೆ. ನಂಬಿ ಅಂಡಾರ್ ನಂಬಿಯ 'ತಿರುತ್ತೊಂಡತ್ತೊಗೈ'ಯಲ್ಲಿ ಹೇಳಲಾದ ಅರವತ್ತೆರಡು ಮಂದಿ ಭಕ್ತರ ಜೊತೆಗೆ ಸುಂದರ ಮೂರ್ತಿಗಳ ಚರಿತ್ರೆಯನ್ನು ಹೇಳುವ ಸ್ತುತಿ ಪದ್ಯಗಳನ್ನು ಈ ಕೃತಿಯಲ್ಲಿ ಸೇರಿಸಿದ್ದಾನೆ."[9] ಈ ಕಾವ್ಯಗಳ ಜೊತೆಗೆ ತಿರುಜ್ಞಾನ ಸಂಬಂಧರ್, ತಿರುನಾವುಕ್ಕರಸರ್, ಸುಂದರ ಮೂರ್ತಿ ಸ್ವಾಮಿಗಳ್ - ಇವರುಗಳ ತೇವಾರಗಳೂ ಪುರಾತನ ಶರಣರನ್ನು ಕುರಿತಂತೆ ರಚನೆಯಾಗಿವೆ.

ಮೇಲಿನ ಈ ಎಲ್ಲಾ ಕೃತಿಗಳ ಜೊತೆಗೆ ಪ್ರತೀತಿಯಲ್ಲಿದ್ದ ಪುರಾತನರ ಬಗೆಗಿನ ಕಥೆ, ಶಾಸನ, ತೇವಾರಗಳನ್ನೂ ಆಧರಿಸಿ ಹನ್ನೆರಡನೆ ಶತಮಾನದ ಮಧ್ಯ ಭಾಗದಲ್ಲಿದ್ದ ತಮಿಳು ಕವಿ ಶೆಕ್ಕಿಳಾರ್ ಎಂಬುವವನು 'ಪೆರಿಯ ಪುರಾಣಂ' ಎಂಬ ಬೃಹತ್ ಗ್ರಂಥವನ್ನು ರಚಿಸಿದ್ದಾನೆ.

"ಪೆರಿಯ ಪುರಾಣವೆಂದರೆ ದೊಡ್ಡವರ ಪುರಾಣವೆಂದರ್ಥ. ಇಲ್ಲಿ ಪುರಾಣವನ್ನು ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತೆ ಎಂಬ ಪಂಚಲಕ್ಷಣಗಳಿಂದ ಕೂಡಿದ ಪುರಾಣ ವೆಂಬರ್ಥವಲ್ಲಿ ಉಪಯೋಗಿಸಿಲ್ಲ. ಹಳೆಯ ಧಾರ್ಮಿಕ ಗ್ರಂಥ ಎಂಬರ್ಥವಲ್ಲಿ ಮಾತ್ರ ಉಪಯೋಗಿಸಲಾಗಿದೆ. ಇದು ಭಕ್ತರ ಚರಿತ್ರೆಯನ್ನೊಳಗೊಂಡ ಬೃಹತ್ ಗ್ರಂಥ"[10] "ಎರಡು ಕಾಂಡಗಳಿಂದಲೂ ಹದಿಮೂರು ಸರ್ಗಗಳಿಂದಲೂ ಕೂಡಿದೆ. ಇದರಲ್ಲಿರುವ ಪದ್ಯಗಳ ಸಂಖ್ಯೆ 4286. ಆದರೆ ಇವುಗಳಲ್ಲಿ 4253 ಮಾತ್ರ ಶೆಕ್ಕಿಳಾರನದೆಂದೂ ಉಳಿದ 33 ವೃತ್ತಗಳು ಪ್ರಕ್ಷಿಪ್ತವೆಂದೂ ತಿಳಿದು ಬಂದಿದೆ."[11] ಇಲ್ಲಿ "ಪ್ರತಿಯೊಬ್ಬ ಭಕ್ತನ ಕಥೆಯನ್ನೂ ಒಂದೊಂದು ಪುರಾಣವಾಗಿ, ಪ್ರತ್ಯೇಕವಾಗಿ ಪರಿಗಣನೆ ಮಾಡಲಾಗಿದೆ."[12]

ಇದು ಪ್ರಧಾನವಾಗಿ ಒಂದು ಧಾರ್ಮಿಕ ಗ್ರಂಥವಾದರೂ ಉತ್ತಮ ಕಾವ್ಯವೆನಿಸಿಕೊಂಡಿದೆ. ಸ್ವಾರಸ್ಯವಾದ ಸುಂದರರ ಜೀವನ ಚರಿತೆ ಈ ಕಾವ್ಯದ ಸೂತ್ರವೆಂದೆಣಿಸಲ್ಪಟ್ಟಿದೆ. "ಅಂತೆಯೇ ಸುಂದರರ ಚರಿತೆಯಿಂದ ಪುರಾಣವು ಪ್ರಾರಂಭವಾಗುವುದು. ಸುಂದರರ ಜೀವನವೂ ಈ ಗ್ರಂಥಕ್ಕೆ ಬೇಕಾದ ವಿಪುಲ ವಿಷಯಗಳನ್ನು ದೊರಕಿಸಿದೆ."[13] ಕಾವ್ಯದ ಪ್ರಾರಂಭದಲ್ಲಿ ಕವಿ ಸುಂದರರ ಬಾಲ್ಯವನ್ನು ಕುರಿತಂತೆ ಚೆನ್ನಾಗಿ ಹಾಡಿದ್ದಾನೆ. "ಆಮೇಲೆ ತಿರುತ್ತೊಂಡರ ಚರಿತೆಗಳನ್ನು ಒಂದಾದ ಮೇಲೆ ಒಂದರಂತೆ ಹೇಳುತ್ತಾನೆ. ಅವರ ಚರಿತೆಗಳನ್ನೆಲ್ಲ ಹಾಡಿ ಮುಗಿಸಿದ ಮೇಲೆ ಸುಂದರರ ಉಳಿದ ಜೀವನವನ್ನು ನಿರೂಪಣೆ ಮಾಡಿ"[14] ಗ್ರಂಥವನ್ನು ಕೊನೆಗೊಳಿಸುತ್ತಾನೆ.

ಮೇಲಿನ ಈ ಆಧಾರಗಳನ್ನೇ ಬಳಸಿಕೊಂಡು ಹರಿಹರ 'ಪುರಾತನರ ರಗಳೆ'ಗಳನ್ನು ಬರೆದಿದ್ದಾನೆ. ಆದರೆ ಪ್ರಧಾನವಾಗಿ ಈ ರಗಳೆಗಳಿಗೆ ಯಾವ ಆಕರವನ್ನು ಬಳಸಿಕೊಂಡಿದ್ದಾನೆ ಎಂಬುದನ್ನು ಮಾತ್ರ ಈವರೆಗೂ ನಿಖರವಾಗಿ ಹೇಳಲಾಗಿಲ್ಲ. ಏಕೆಂದರೆ ಶೆಕ್ಕಿಳಾರ್ ಕವಿಯ ಪೆರಿಯ ಪುರಾಣ ಮತ್ತು ಹರಿಹರನಲ್ಲಿ ಬರುವ ಅನೇಕ ಹೋಲಿಕೆಗಳು 'ಪೆರಿಯ ಪುರಾಣ' ದಿಂದಲೇ ಆತ ವಸ್ತುವನ್ನು ಆರಿಸಿಕೊಂಡಿದ್ದಾನೆ ಎಂಬುದನ್ನು ಸಮರ್ಥಿಸಿದರೆ, ಸುಂದರ ಮೂರ್ತಿ ಹಾಗೂ ನಂಬಿಯಾಂಡಾರ್ ನಂಬಿಯ ಕೃತಿಗಳು ಮತ್ತು ರಗಳೆಗಳಲ್ಲಿ ಕಂಡುಬರುವ ಹೋಲಿಕೆಗಳು, ಹರಿಹರ ಇವುಗಳಿಂದಲೂ ಕಾವ್ಯವಸ್ತುವನ್ನು ತೆಗೆದುಕೊಂಡಿರುವುದನ್ನು ಸಮರ್ಥಿಸುತ್ತವೆ. ಕೆಲವು ಕಡೆ 'ತಿರುವಂದಾದಿ'ಯ ಪದಪುಂಜಗಳೇ ಅನಾಮತ್ತಾಗಿ ಹರಿಹರನ ರಗಳೆಗಳಲ್ಲಿ ಕಂಡುಬರುವುದರಿಂದ ಅದೂ ಕೂಡ 'ತಿರುವಂದಾದಿ'ಯಿಂದಲೇ ಆಕರವನ್ನು ಬಳಸಿಕೊಂಡಿದ್ದಾನೆ ಎಂಬುದನ್ನು ಸಮರ್ಥಿಸುತ್ತದೆ. ಇವೆಲ್ಲವುಗಳ ಜೊತೆಗೆ ಹರಿಹರನೇ ತಮಿಳುನಾಡಿಗೆ ಹೋಗಿ ಕಥೆಗಳನ್ನು ಸಂಗ್ರಹಿಸಿದ್ದಾನೆ ಇಲ್ಲವೆ, ತಮಿಳುನಾಡಿನಿಂದ ಬಂದ ಭಕ್ತರಿಂದ ಈ ಕಥೆಗಳನ್ನು ಸಂಗ್ರಹಿಸಿ ಬರೆದಿದ್ದಾನೆ ಎಂಬ ಸಾಧ್ಯತೆಯನ್ನೂ ತಳ್ಳಿಹಾಕಲಾಗದು. ಈ ಸಂಬಂಧವಾಗಿ ಹಲವು ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸುವುದು ಸೂಕ್ತ.

ಡಿ. ಎಲ್. ನರಸಿಂಹಾಚಾರ್ಯರು ಹೇಳುವಂತೆ "...... ಆಕರದ ದೃಷ್ಟಿಯಿಂದ ಹರಿಹರನ ಪುರಾತನರ ರಗಳೆಗಳು ಕನ್ನಡಿಗರಿಗೆ ಎಷ್ಟು ಸಮಸ್ಯೆಯಾಗಿವೆಯೋ ತಮಿಳರಿಗೂ ಅಷ್ಟೇ ಸಮಸ್ಯೆಗಳಾಗಿವೆ. ಕನ್ನಡ ಬಲ್ಲ ತಮಿಳು ವಿದ್ವಾಂಸ ಹರಿಹರನ ಕೃತಿಗಳನ್ನು ಓದಿದಾಗ ಅವನಿಗೆ ಪರಿಚಿತವಾಗಿರುವ ಕಥೆಗಳಿಗೂ ಈ ಕಥೆಗಳಿಗೂ ಇರುವ ವ್ಯತ್ಯಾಸವನ್ನೂ ನೋಡಿ ಚಕಿತನಾಗು ತ್ತಾನೆ. ಹರಿಹರನ ಕಥೆಗಳಿಗೆ ತಮಿಳಿನಲ್ಲಿ ಮೂಲವಿಲ್ಲವಲ್ಲ ಎಂದು ಬೆರಗಾಗುತ್ತಾನೆ. ತಮಿಳನ್ನು ಬಲ್ಲ ಕನ್ನಡ ವಿದ್ವಾಂಸರಿಗೂ ಹೀಗೆಯೇ ಆಗುತ್ತದೆ. ...."[15] ಆರ್.ಸಿ. ಹಿರೇಮಠರವರು "ಹರಿಹರನ ಹದಿನೇಳು ರಗಳೆಗಳನ್ನು ಪೆರಿಯ ಪುರಾಣದ ಕಥೆಗಳೊಂದಿಗೆ ಹೋಲಿಸಿನೋಡಿ 'ರಗಳೆ' ಮತ್ತು 'ಪೆರಿಯ ಪುರಾಣ'ಗಳ ನಡುವೆ ನಿಕಟ ಸಂಬಂಧವಿದ್ದರೂ ಹರಿಹರ ದೇವನ" ಕಥೆಗಳು ಎಷ್ಟೋ ಕಡೆಗೆ ಮಾರ್ಪಟ್ಟಿವೆ ....."[16] ಎಂದಿದ್ದಾರೆ. ಎಚ್. ದೇವೀರಪ್ಪನವರು "ಹರಿಹರನ ಪುರಾತನರ ರಗಳೆಗಳನ್ನು 'ತಿರುತ್ತೊಂಡತ್ತೊಗ್ಕೆ', 'ತಿರುತ್ತೊಂಡರ್ ತಿರುವಂದಾದಿ', 'ತೇವಾರ' ಗೀತೆಗಳೇ ಮೊದಲಾದ ಶೈವ ಕೃತಿಗಳನ್ನು ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದಂತಹ ಕಥೆಗಳನ್ನು ಓದಿ ಕೇಳಿ ಅರಿತು ಅರಗಿಸಿಕೊಂಡು ಭಾವದಿಂದ ಬೆಳೆಯಿಸಿ ಬುದ್ಧಿಯಿಂದ ಬಲಿಯಿಸಿ ಕಲ್ಪನೆಯಿಂದ ಅರಳಿಸಿ ಪ್ರತಿಭೆಯಿಂದ ರಸದುಂಬಿಸಿ ಶಿವಭಕ್ತಿಯ ದೃಷ್ಟಿಯಿಟ್ಟು ಕನ್ನಡ ಕುಲ ರಸಿಕರಿಗೆ ಒಪ್ಪಿಸಿರುವನು"[17] ಎಂದು ಅಭಿಪ್ರಾಯಪಟ್ಟಿದ್ದಾರೆ. ಡಿ. ಎಲ್. ನರಸಿಂಹಾಚಾರ್ಯರೇ ಇನ್ನೊಂದು ಕಡೆ ".....ಹರಿಹರ 'ಪೆರಿಯ ಪುರಾಣ'ದಿಂದ ಕಥೆಗಳನ್ನು ಮಾತ್ರ ತೆಗೆದುಕೊಂಡು, ಅವುಗಳನ್ನು ತನಗೆ ತೋಚಿದ ರೀತಿಯಲ್ಲಿ ಮಾರ್ಪಾಟು ಮಾಡಿ ಕಾವ್ಯ ರಚಿಸಿದ್ದಾನೆ ಎಂದು ಸಧ್ಯಕ್ಕೆ ಗ್ರಹಿಸಬಹುದು"[18] ಎಂದು ಹೇಳುತ್ತಾ ಮತ್ತೆ ".....ಈ ಕಥಾ ವಸ್ತುಗಳನ್ನು ಸೃಷ್ಟಿಸಿದವನು ಶೆಕ್ಕಿಳಾರ್ ಕವಿಯಲ್ಲ. ಅವನಿಗಿಂತ ಹಿಂದಿನ ತಮಿಳು ಸಾಹಿತ್ಯದಲ್ಲಿ ಈ ಕಥೆಗಳಿದ್ದಿರಬಹುದು ಅಥವಾ ಈ ಕಥೆಗಳು ಜನರ ಮಾತಿನಲ್ಲಿ (ಬಾಯ್ಮಾತು)

ಪ್ರಚಾರದಲ್ಲಿದ್ದಿರಬಹುದು. ಇವನಿಗೂ ಹರಿಹರನಿಗೂ, ಈಗ ನಷ್ಟವಾಗಿರುವ ಸಮಾನ ತಮಿಳು ಮೂಲವೊಂದಿರಬಹುದು. ಈ ಮೂಲವನ್ನು ಇಬ್ಬರೂ ತಮಗೆ ಉಚಿತವೆನಿಸುವ ರೀತಿಯಲ್ಲಿ ಉಪಯೋಗಿಸಿಕೊಂಡಿರಬಹುದು. ಇದೆಲ್ಲ ಬಹುದು ಎಂಬ ಸಂದೇಹಗ್ರಸ್ತ ಊಹಾ ಪ್ರಪಂಚ....."[19] ಎಂದಿದ್ದಾರೆ. ಹಿರೇಮಲ್ಲೂರ ಈಶ್ವರನ್ ಅವರು 'ಪೆರಿಯ ಪುರಾಣ'ವೇ ಹರಿಹರನ ಕಥೆಗಳ ಮೂಲ ಆಕರ ಎಂದು ಅಭಿಪ್ರಾಯಿಸಿದರೆ, ಎಸ್. ವಿದ್ಯಾಶಂಕರ ಅವರು ನಂಬಿಯಣ್ಣನ ರಗಳೆಯ ಮೂಲಕ ಹಲವು ಉದಾಹರಣೆಗಳನ್ನು ನೀಡಿ 'ಪೆರಿಯ ಪುರಾಣ'ದಿಂದ ಹರಿಹರನು ಆಕರವನ್ನು ಪಡೆದುಕೊಂಡಿಲ್ಲ ಎನ್ನುತ್ತಾರೆ.

ವಿದ್ವಾಂಸರುಗಳಲ್ಲೇ ಇರುವ ಇಂಥ ಅನೇಕ ಅಭಿಪ್ರಾಯಭೇದಗಳು, ಮೊದಲೇ ತೊಡಕಾಗಿರುವ ಹರಿಹರನ ಕಥೆಗಳ ಮೂಲ ಆಕರಗಳ ನಿರ್ಧಾರವನ್ನು ಮತ್ತಷ್ಟು ತೊಡಕಾಗುವಂತೆ ಮಾಡಿವೆ. ಇದಕ್ಕೆ ಕಾರಣವೂ ಹರಿಹರನೇ. ಆತ ಮೂಲ ಆಕರಗಳ ವಿಚಾರದಲ್ಲಿ ಯಾವ ಸುಳಿವನ್ನೂ ನೀಡಿಲ್ಲ. ಆದರೆ 'ಪೆರಿಯ ಪುರಾಣ' ಮತ್ತು ಹರಿಹರನ ರಗಳೆಗಳನ್ನು ಪರಸ್ಪರ ಹೋಲಿಸಿ ನೋಡಿದಾಗ ಅಲ್ಲಿರುವ ಹೋಲಿಕೆ ಮತ್ತು ವ್ಯತ್ಯಾಸಗಳು, ಹರಿಹರ 'ಪೆರಿಯ ಪುರಾಣ' ದಿಂದ ಆಕರವನ್ನು ತೆಗೆದುಕೊಂಡಿದ್ದಾನೆಂಬುದನ್ನು ಸಮರ್ಥಿಸುವಂತೆ ಕಂಡುಬರುತ್ತದೆ.

**ಅಮರನೀತಿಯ ರಗಳೆ :** ಅಮರನೀತಿ ಚೋಳನಾಡಿನ ಪಜೈಯಾಜೈ ಎಂಬ ಗ್ರಾಮದಲ್ಲಿ ಹುಟ್ಟಿ ಆನಂತರ ತಿರುನಲ್ಲೂರಿಗೆ ಬಂದನು. ಅವನದು ವೈಶ್ಯಕುಲ ಎಂದು ಪೆರಿಯ ಪುರಾಣ ತಿಳಿಸಿದರೆ ಹರಿಹರ ತಿರುನಲ್ಲೂರನ್ನು ಮಾತ್ರ ಹೇಳುತ್ತಾನೆ. ಪಜೈಯಾಜೈ ಗ್ರಾಮದ ಪ್ರಸ್ತಾಪವಾಗಲೀ ವೈಶ್ಯ ಕುಲದ ಪ್ರಸ್ತಾಪವಾಗಲೀ ಹರಿಹರ ಮಾಡುವುದಿಲ್ಲ. ಕೌಪೀನದ ಪ್ರಸಂಗ ಎರಡೂ ಕಡೆಗಳಲ್ಲಿ ಬರುತ್ತದೆ. ಆದರೆ ಕೌಪೀನವನ್ನು ಇಡುವ ರೀತಿಯಲ್ಲಿ ಮಾತ್ರ ಸ್ವಲ್ಪ ಬದಲಾವಣೆ ಇದೆ. ಪೆರಿಯ ಪುರಾಣದಲ್ಲಿ ಶಿವನು— ಸ್ನಾನ ಮಾಡಿ ಬರುವಾಗ ಮಳೆ ಬಂದುಬಿಟ್ಟರೆ ಆಗ ಒದಗುವಂತೆ ಬೆಚ್ಚಗಾದ ಈ ಕೋವಣವನ್ನು ಇಟ್ಟಿರುವಂತೆ ಅಮರನೀತಿಗೆ ಹೇಳುತ್ತಾನೆ. ಆದರೆ ಹರಿಹರನ ರಗಳೆಯಲ್ಲಿನ ಕೌಪೀನ ಬೇಡಿದ್ದನ್ನು ಕೊಡುವಂಥದ್ದು. ಭಕ್ತರ ಮನೆಗೆ ಔತಣಕ್ಕೆ ಹೋಗಿ ಬರುವವರೆಗೆ ಇದನ್ನು ಎಚ್ಚರಿಕೆಯಿಂದ ಕಾಪಾಡುವಂತೆ ಶಿವ ಅಮರನೀತಿಗೆ ಹೇಳಿ ಹೋಗುತ್ತಾನೆ. ಇಲ್ಲಿ ಮಳೆಯ ಸಂದರ್ಭ ಬರುವುದೇ ಇಲ್ಲ. ಶಿವ ಸ್ನಾನ ಮಾಡಿಕೊಂಡು ನಡುಗುತ್ತಾ ಬರುತ್ತಾನಷ್ಟೆ.

ತಕ್ಕಡಿಯಲ್ಲಿ ಕೌಪೀನವನ್ನಿಟ್ಟು ತೂಗುವ ಸಂದರ್ಭ ಎರಡೂ ಕಡೆ ಬರುತ್ತದೆ. ದೊಡ್ಡ ಕಂಬವನ್ನು ತಂದು ತಕ್ಕಡಿಯನ್ನು ಸಿದ್ಧಪಡಿಸುವುದು, ಕೌಪೀನದ ತೂಕ ಹೆಚ್ಚಾದಾಗ ವಸ್ತುಗಳಿಗೆ ಬದಲಾಗಿ ಆಭರಣಗಳನ್ನು ಇಡುವುದು ಎಲ್ಲವೂ ಒಂದೇ ತೆರನಾಗಿವೆ.

**ಆನಾಯನಾರ ರಗಳೆ :** ಪೆರಿಯ ಪುರಾಣದಲ್ಲಿ ಆನಾಯನಾರನ ಊರು ತಿರುಮಂಗಲ ಎಂದಿದ್ದು ಪ್ರಾರಂಭದಲ್ಲಿ ಆ ಊರಿನ ವರ್ಣನೆ ಮೂರ್‍ನಾಲ್ಕು ಪದ್ಯಗಳಲ್ಲಿ ವಿಸ್ತಾರವಾಗಿ ಬರುತ್ತದೆ. ಆದರೆ ಹರಿಹರ ಆನಾಯನಾರನ ಊರನ್ನು ಮಂಗಲಪುರ ಎಂದಿದ್ದು ಅದನ್ನು ಕುರಿತಂತೆ ಯಾವ ವರ್ಣನೆಯನ್ನೂ ಮಾಡುವುದಿಲ್ಲ.

ಕಥೆ ಮುಂದುವರಿದಂತೆ ಪೆರಿಯ ಪುರಾಣದಲ್ಲಿ ಪ್ರಕೃತಿಯ ವರ್ಣನೆ ಯಥೇಚ್ಛವಾಗಿ

ಬರುತ್ತದೆ. ಆದರೆ ಹರಿಹರ ಇಂಥ ಪ್ರಕೃತಿಯ ವರ್ಣನೆಗಳಿಗೆ ಕೊಂಡಿ ಹಾಕಿದ್ದಾನೆ. ಬದಲಾಗಿ ಪಂಚಾಕ್ಷರಿಯ ವರ್ಣನೆ ಮಾಡುತ್ತಾನೆ.

ಕಥೆಯ ಕೊನೆಯ ಭಾಗದಲ್ಲಿ, ಆನಾಯನಾರನ ಭಕ್ತಿಗೆ ಮೆಚ್ಚಿದ ಶಿವ ವೃಷಭವನ್ನೇರಿ ಬಂದು ಆನಾಯನಾರನಿಗೆ ಪ್ರತ್ಯಕ್ಷವಾದಂತೆ ಪೆರಿಯ ಪುರಾಣವು ಚಿತ್ರಿಸಿದರೆ ಹರಿಹರ, ಶಿವ ಮರದ ಮೇಲೆ ಕುಳಿತುಕೊಂಡಿರುವುದನ್ನು ಆನಾಯನಾರ ಕಂಡನು ಎಂದು ಚಿತ್ರಿಸುತ್ತಾನೆ. ಆನಾಯನಾರ ಕೊಳಲಿನಿಂದ ಪಂಚಾಕ್ಷರಿಯನ್ನು ನುಡಿಸುವುದು ಎರಡೂ ಕಡೆ ಬರುತ್ತದೆ.

**ರುದ್ರ ಪಶುಪತಿಯ ರಗಳೆ :** ರುದ್ರ ಪಶುಪತಿಯ ಬಗೆಗೆ ಪೆರಿಯ ಪುರಾಣ ಹೆಚ್ಚು ಹೇಳುವುದೇ ಇಲ್ಲ. ಕೇವಲ ಹತ್ತು ಪದ್ಯಗಳಲ್ಲಿ ಇಡೀ ಕಥೆ ನಿರೂಪಣೆಗೊಂಡಿದೆ. ಆದರೆ ಹರಿಹರ ರುದ್ರ ಪಶುಪತಿಯ ರಗಳೆಯನ್ನು ಸ್ವಲ್ಪ ವಿಸ್ತರಿಸಿ ಬರೆದಿದ್ದಾನೆ. ಪೆರಿಯ ಪುರಾಣವು ರುದ್ರ ಪಶುಪತಿಯ ಊರನ್ನು ತಿರುತ್ತಲೆಯೂರು ಎಂದು ಹೇಳಿ ಮುಂದೆ ಪ್ರಕೃತಿಯ ವರ್ಣನೆಗೆ ತೊಡಗುತ್ತದೆ. ಆದರೆ ಹರಿಹರ ಇಂಥ ಪ್ರಕೃತಿಯ ವರ್ಣನೆಯನ್ನೇನು ಹೇಳುವುದಿಲ್ಲ. ಇವನು ರುದ್ರಪಶುಪತಿಯ ಊರನ್ನು ತಿರಿತಲೆವೂರು ಎನ್ನುತ್ತಾನೆ.

ಪೆರಿಯ ಪುರಾಣದಲ್ಲಿ ರುದ್ರಪಶುಪತಿಯ ತಂದೆ ತಾಯಿಗಳ ಪ್ರಸ್ತಾಪ ಬರುವುದಿಲ್ಲ. ಆದರೆ ಹರಿಹರ ರುದ್ರಪಶುಪತಿಯ ತಂದೆ ರುದ್ರಪ್ರಭು ಹಾಗೂ ತಾಯಿ ಶಚಿ ಎಂದೂ ಪ್ರಸ್ತಾಪ ಮಾಡಿದ್ದಾನೆ.

ಶಿವಲಿಂಗದ ಮೇಲೆ ಇರುವೆಯೊಂದು ಹರಿದಾಡುವ ಪ್ರಸಂಗವನ್ನು ಹರಿಹರ ತಂದಿದ್ದಾನೆ. ಹಾಗೆಯೇ ಶಿವಗೋಷ್ಠಿಯೊಂದರಲ್ಲಿ ಶಿವನು ಗರಳಧರನೆಂಬುದನ್ನು ತಿಳಿದು ರುದ್ರಪಶುಪತಿ ಶಿವನ ಕಂಠದಲ್ಲಿರುವ ವಿಷವನ್ನು ತೊಡೆಯಲು ಸಮುದ್ರದ ಮಧ್ಯಕ್ಕೆ ಹೋಗಿ ಪಂಚಾಕ್ಷರಿ ಜಪದಲ್ಲಿ ತೊಡಗುವ ಪ್ರಸಂಗವನ್ನು ಚಿತ್ರಿಸುತ್ತಾನೆ. ಆದರೆ ಪೆರಿಯ ಪುರಾಣದಲ್ಲಿ ಇಂಥ ಪ್ರಸಂಗಗಳು ಬರುವುದೇ ಇಲ್ಲ. ಅವೆಲ್ಲ ಹರಿಹರನ ಕಲ್ಪನೆಯಿಂದ ಮೂಡಿದ ಪ್ರಸಂಗಗಳಾಗಿವೆ.

**ಇಳೆಯಾಂಡ ಗುಡಿಮಾರನ ರಗಳೆ :** ಇಳೆಯಾಂಡ ಗುಡಿಮಾರನ ಊರು, ಹೆಸರು ಮತ್ತು ವೃತ್ತಿಯ ವಿಚಾರಗಳು ಪೆರಿಯ ಪುರಾಣ ಮತ್ತು ರಗಳೆಗಳಲ್ಲಿ ಒಂದೇ ತೆರನಾಗಿದೆ. ಪೆರಿಯ ಪುರಾಣವು ಇಳೆಯಾಂಡನ ವೃತ್ತಿನಿಷ್ಠೆಯನ್ನು ಸಾಧಾರಣ ಮಟ್ಟದಲ್ಲಿ ಚಿತ್ರಿಸಿದ್ದರೆ, ಹರಿಹರ ಇಳೆಯಾಂಡನ ವೃತ್ತಿಯನ್ನು ವೈಭವೀಕರಿಸಿ ಆ ವೃತ್ತಿಯನ್ನು ಆಧ್ಯಾತ್ಮಿಕ ಕ್ರಿಯೆಗೆ ಹೋಲಿಸಿದ್ದಾನೆ.

ಇಳೆಯಾಂಡ ಗುಡಿಮಾರನಿಗೆ ದಾರಿದ್ರ್ಯ ಬರುವಂತೆ ತಿಲ್ಲೆಯಲ್ಲಿರುವ ಪರಮೇಶ್ವರನು ಸಂಕಲ್ಪ ಮಾಡಿದನು ಎಂದು ಪೆರಿಯ ಪುರಾಣ ಚಿತ್ರಿಸಿದರೆ, ಅತಿಯಾದ ದಾನದಿಂದ ಅವನ ಸಂಪತ್ತು ಹೋಯಿತು ಎಂದು ಹರಿಹರ ಚಿತ್ರಿಸುತ್ತಾನೆ. ಇಳೆಯಾಂಡ ಗುಡಿಮಾರನ ಈ ದಾನ ಗುಣವನ್ನು ಹರಿಹರ ಬಹಳ ವೈಭವದಿಂದ ಚಿತ್ರಿಸಿದ್ದಾನೆ. ಇಂಥ ವೈಭವ ಪೆರಿಯ ಪುರಾಣದಲ್ಲಿ ಕಂಡುಬರುವುದಿಲ್ಲ. ದಾನಕ್ಕೆ ಏನೂ ಇಲ್ಲದೆ ಹೆಂಡತಿಯ ತಾಳಿಯನ್ನೂ ಮಾರುವ ಸ್ಥಿತಿಗೆ ಇಳೆಯಾಂಡ ಗುಡಿಮಾರ ಬಂದ ಎಂದು ಹರಿಹರ ಚಿತ್ರಿಸಿದರೆ, ಪೆರಿಯ ಪುರಾಣದಲ್ಲಿ ಈ ಚಿತ್ರ ಬರುವುದೇ ಇಲ್ಲ.

ಪೆರಿಯ ಪುರಾಣದಲ್ಲಿ, ಹಸಿದು ಬಂದ ಶಿವನಿಗೆ ಅಡುಗೆ ಮಾಡಲು ಸೌದೆ ಮುಗಿದಿರಲು

ಮನೆಯ ಸೂರನ್ನೇ ಕಿತ್ತು ಸೌದೆ ಮಾಡಿ ಗುಡಿಮಾರ ದಂಪತಿಗಳು ಅಡುಗೆ ಮಾಡಿದ ಸನ್ನಿವೇಶ ಬರುತ್ತದೆ. ಈ ಸನ್ನಿವೇಶ ಹರಿಹರನಲ್ಲಿ ಬೇರೆ ರೀತಿ ಇದೆ. ಇಲ್ಲಿ, ಚಳಿಯಲ್ಲಿ ನಡುಗುತ್ತಾ ಬಂದ ಶಿವನಿಗೆ ಬೆಂಕಿ ಕಾಯಿಸಲು ಇಳೆಯಾಂಡ ಗುಡಿಮಾರ ಮನೆಯ ಸೂರನ್ನೇ ಕೀಳುತ್ತಾನೆ.

ಮೊಳಕೆಯ ಬತ್ತವನ್ನು ತಂದು ಅಡುಗೆ ಮಾಡುವಾಗ ಸಾರಿಗಾಗಿ ಸೊಪ್ಪನ್ನು ತರುವಂತೆ ಗುಡಿಮಾರನನ್ನು ಅವನ ಪತ್ನಿ ಕಳಿಸುವ ಪ್ರಸಂಗ ಪೆರಿಯ ಪುರಾಣದಲ್ಲಿ ಬರುತ್ತದೆ. ಆದರೆ ಈ ಪ್ರಸಂಗ ಹರಿಹರನಲ್ಲಿ ಬರುವುದಿಲ್ಲ.

ಪೆರಿಯ ಪುರಾಣದಲ್ಲಿ ಇಲ್ಲದ ಇನ್ನೊಂದು ಪ್ರಸಂಗ ಹರಿಹರನಲ್ಲಿ ಬರುತ್ತದೆ. ಊಟಕ್ಕಾಗಿ ಎಲೆಯನ್ನು ತರಲು ಹೋದ ಇಳೆಯಾಂಡ ಗುಡಿಮಾರನ ಮಗ ಹಾವು ಕಚ್ಚಿ ಸಾಯುತ್ತಾನೆ. ಮಗ ಸತ್ತ ದು:ಖವನ್ನು ತೋರಿಕೊಳ್ಳದೆ ಗುಡಿಮಾರ ದಂಪತಿಗಳು ಊಟಕ್ಕೆ ಸಿದ್ಧಪಡಿಸುತ್ತಾರೆ. ಮಗನಿಲ್ಲದೆ ಊಟ ಮಾಡುವುದಿಲ್ಲ ಎಂದು ಶಿವ ಹಠ ಮಾಡುತ್ತಾನೆ. ಆಗ ನಿಶ್ಚಯಿಸಿಕೊಂಡ ಗುಡಿಮಾರ ಸತ್ತ ಮಗನ ಹತ್ತಿರ ಬಂದು ಮಗನನ್ನು ಕರೆಯಲು, ಮಗ ಎದ್ದು ಬರುತ್ತಾನೆ. ಇಡೀ ಪ್ರಸಂಗ ಪೆರಿಯ ಪುರಾಣದಲ್ಲಿ ಬರುವುದಿಲ್ಲ. ಇದು ಹರಿಹರನ ಸ್ವಂತ ಸೃಷ್ಟಿಯಾಗಿದೆ.

**ತಿರುನಾಳ್ಪೋವರ ರಗಳೆ :** ತಿರುನಾಳ್ಪೋವರ ಕಥೆ ಪೆರಿಯ ಪುರಾಣದಲ್ಲಿ ಬಹಳ ವಿಸ್ತಾರವಾಗಿ ಬಂದಿದೆ. ಅಲ್ಲಿ ಚೋಳಮಂಡಲದಲ್ಲಿರುವ ಮೇರ್ಕಾಡಿನ ಆದನೂರಿನಲ್ಲಿ ಹೊಲೆಯರ ಜಾತಿಯಲ್ಲಿ ತಿರುನಾಳ್ಪೋವ ಜನಿಸಿದನೆಂದು ಹೇಳಿದೆ. ಆದರೆ ಹರಿಹರ ಆದನೂರಿನಲ್ಲಿ ಜನಿಸಿದನು ಎಂಬಷ್ಟನ್ನೆ ತಿಳಿಸಿ ಅವನ ಕುಲವನ್ನು ಪಿರಿಯ ಕುಲ ಎಂದು ಪ್ರಸ್ತಾಪಿಸುತ್ತಾನೆ.

ಪೆರಿಯ ಪುರಾಣದಲ್ಲಿ ತಿರುನಾಳ್ಪೋವನ ವೃತ್ತಿಯ ಬಗೆಗೆ ವಿವರಣೆ ಇದೆ. ಆದರೆ ಹರಿಹರ ತಿರುನಾಳ್ಪೋವನ ವೃತ್ತಿಯನ್ನು ಕುರಿತಂತೆ ಏನನ್ನೂ ಹೇಳುವುದಿಲ್ಲ.

ತಾನು ಹೊಲೆಯನಾದ್ದರಿಂದ ಪೊನ್ನಾಂಬಲಕ್ಕೆ ಹೋಗುವ ಕಾರ್ಯಕ್ರಮವನ್ನು ಮುಂದಕ್ಕೆ ಹಾಕುತ್ತಿದ್ದ ತಿರುನಾಳ್ಪೋವನಿಗೆ ಒಮ್ಮೆ ಶಿವ ಅವನ ಕನಸಿನಲ್ಲಿ ಬಂದು "ಈ ಜನ್ಮವಾದ ಶರೀರವು ತೊಲಗುವಂತೆ ಬೆಂಕಿಯಲ್ಲಿ ಪ್ರವೇಶಿಸಿ ಮೂರೆಳೆಯ ಉಪವೀತವನ್ನು ಕೊಂಡು ವೇದಿಯರೊಡನೆ ಸೇರಿ ನೀನು ಬಾ"[20] ವೆಂದು ಹೇಳಿ ಅನುಗ್ರಹಿಸುತ್ತಾನೆ. ಇದೇ ಪ್ರಸಂಗ ಹರಿಹರನಲ್ಲಿ ಬೇರೆ ರೀತಿಯಲ್ಲಿ ಬಂದಿದೆ. ಇಲ್ಲಿ ಪೊನ್ನಾಂಬಲನಾಥನ ಕರುಣೆಯಿಂದ ಪೊನ್ನಾಂಬಲದಲ್ಲಿ ನಡೆಯುವ ಪಂಗುನಿ ತಿರುನಾಳ್ ಮಹೋತ್ಸವಕ್ಕೆ 'ನೆಲ್ಲುಮೂಡೆ'ಗಳನ್ನು ಹೊತ್ತುಕೊಂಡು ಹೋಗುವ ಅವಕಾಶ ಸಿಗುವಂತೆ ಹರಿಹರ ಬದಲಿಸಿದ್ದಾನೆ.

**ಕಾರಿಕಾಲಮ್ಮೆಯ ರಗಳೆ :** ಪೆರಿಯ ಪುರಾಣದಲ್ಲಿ, ಕಾರಿಕಾಲಮ್ಮೆ ಚೋಳ ದೇಶದ ಕಾರೈಕ್ಕಾಲಿನಲ್ಲಿದ್ದ ವೈಶ್ಯ ಕುಲದ ಧನದತ್ತನೆಂಬ ಸಿರಿವಂತನ ಮಗಳು, ಅವಳ ಹೆಸರು ಪುನೀತವತಿ ಎಂಬುದಾಗಿ ಬಂದಿದೆ. ಆದರೆ ಹರಿಹರ ಕಾರಿಕಾಲೆಂಬ ಪುರದಲ್ಲಿ ಕಾರಿಕಾಲಮ್ಮೆ ಇದ್ದಳೆಂದು ಮಾತ್ರ ಹೇಳುತ್ತಾನೆ.

ಕಾರಿಕಾಲಮ್ಮೆಯ ಗಂಡನ ಹೆಸರು ಪೆರಿಯ ಪುರಾಣದಲ್ಲಿ ಸ್ಪಷ್ಟವಾಗಿ ಬಂದಿದೆ. ಹರಿಹರ ಅವಳ ಮದುವೆಯ ಬಗೆಗೆ 'ತನಗೆ ಪತಿಯೆಂದೆನಿಪ ಮಾಣಿಕ ಶೆಟ್ಟಿ' ಎಂದು ಒಂದೇ ಸಾಲಿನಲ್ಲಿ ತಿಳಿಸುತ್ತಾನೆ. ಕಾರಿಕಾಲಮ್ಮೆ ದಂಪತಿಗಳು ಬದುಕಲು ಧನದತ್ತನು ಸುಂದರವಾದ ಮಹಡಿ

ಮನೆಯನ್ನು ಕಟ್ಟಿ ಕೊಟ್ಟ ಎಂಬ ವಿಚಾರ ಪೆರಿಯ ಪುರಾಣದಲ್ಲಿದ್ದರೆ ಹರಿಹರನಲ್ಲಿ ಇದು ಕಂಡುಬರುವುದಿಲ್ಲ.

ಗಂಡನಿಂದ ಪಡೆದುಕೊಂಡ ಮಾವಿನ ಹಣ್ಣುಗಳಲ್ಲಿ ಒಂದನ್ನು ಹಸಿದು ಬಂದ ಶಿವಭಕ್ತನಿಗೆ ಕಾರಿಕಾಲಮ್ಮೆ ನೀಡಿದಳು ಎಂದು ಪೆರಿಯ ಪುರಾಣದಲ್ಲಿ ಇದ್ದರೆ ಹರಿಹರನ ರಗಳೆಯಲ್ಲಿ ಹಸಿದು ಬಂದ ಶಿವನಿಗೆ ನೀಡಿದಳು ಎಂದು ಇದೆ. ಹಾಗೆಯೇ ಮಾವಿನ ಹಣ್ಣು ತಿಂದ ಅಭ್ಯಾಗತನನ್ನು ಕಾರಿಕಾಲಮ್ಮೆಯ ಪತಿ ನೋಡಿದಂತೆ ಪೆರಿಯ ಪುರಾಣದಲ್ಲಿ ಕಂಡು ಬರುವುದಿಲ್ಲ. ಆದರೆ ಹರಿಹರ ಅಭ್ಯಾಗತನನ್ನು ಗಂಡ ನೋಡಿದಂತೆ ಚಿತ್ರಿಸುತ್ತಾನೆ.

ಕಾರಿಕಾಲಮ್ಮೆಯ ಪತಿ ಊಟಕ್ಕೆ ಎರಡನೆಯ ಹಣ್ಣು ಕೇಳಿದಾಗ ಕಾರಿಕಾಲಮ್ಮೆ ಶಿವನ ಕರುಣೆಯಿಂದ ತಂದು ಕೊಡುತ್ತಾಳೆ. ಆ ಹಣ್ಣನ್ನು ಹೇಗೆ ಪಡೆದೆ ಎಂದು ಕಾರಿಕಾಲಮ್ಮೆಯನ್ನು ಅವಳ ಪತಿ ಕೇಳಿದಾಗ ಅವಳು ನಡೆದ ವೃತ್ತಾಂತವನ್ನೆಲ್ಲ ತಿಳಿಸುತ್ತಾಳೆ. ಆದರೆ ಕಾರಿಕಾಲಮ್ಮೆಯ ಮಾತು ಅವಳ ಪತಿಗೆ ಒಪ್ಪಿಗೆಯಾಗುವುದಿಲ್ಲ. ಆಗ ಇನ್ನೂ ಒಂದು ಹಣ್ಣನ್ನು ತಂದು ನಿಜವನ್ನು ತೋರುವಂತೆ ತಿಳಿಸುತ್ತಾನೆ. ಅದರಂತೆ ಕಾರಿಕಾಲಮ್ಮೆ ಮೂರನೆಯ ಹಣ್ಣನ್ನು ಪಡೆದು ತನ್ನ ಗಂಡನಿಗೆ ನೀಡುವ ಮೂಲಕ ನಿಜವನ್ನು ತೋರುತ್ತಾಳೆ ಎಂಬುದಾಗಿ ಪೆರಿಯ ಪುರಾಣ ಚಿತ್ರಿಸುತ್ತದೆ. ಆದರೆ ಹರಿಹರನ ಕಾರಿಕಾಲಮ್ಮೆಯ ಕಥೆಯಲ್ಲಿ ಮೂರನೆಯ ಹಣ್ಣಿನ ಪ್ರಯೋಗ ಬರುವುದಿಲ್ಲ. (ಎರಡು ಹಣ್ಣುಗಳನ್ನು ಮಾತ್ರ ಬಳಸಿಕೊಂಡಿದ್ದಾನೆ.)

ಕಾರಿಕಾಲಮ್ಮೆ ನಿಜವನ್ನು ತೋರಿದ ನಂತರ ಅವಳ ಪತಿ ಪಾಂಡ್ಯ ದೇಶಕ್ಕೆ ಹೋಗಿ ಅಲ್ಲಿ ಇನ್ನೊಂದು ಮದುವೆಯಾಗಿ ಪುನೀತವತಿ ಎಂಬ ಮಗಳನ್ನು ಪಡೆದನೆಂದು ಪೆರಿಯ ಪುರಾಣ ಚಿತ್ರಿಸುತ್ತದೆ. ಈ ಚಿತ್ರಣ ಹರಿಹರನ ರಗಳೆಗಳಲ್ಲಿ ಕಂಡುಬರುವುದಿಲ್ಲ.

ಕಾರಿಕಾಲಮ್ಮೆಯು ತಲೆಯಲ್ಲಿ ನಡೆದುಕೊಂಡು ಹೋದ ಚಿತ್ರಣ ಎರಡೂ ಕಥೆಗಳಲ್ಲಿ ಬರುತ್ತದೆ. ಆದರೆ ಎರಡೂ ಕಥೆಯ ಸನ್ನಿವೇಶಗಳು ಬೇರೆ ಬೇರೆಯಾಗಿ ಚಿತ್ರಣಗೊಂಡಿವೆ.

**ತಿರುನೀಲಕಂಠನ ರಗಳೆ :** ಪೆರಿಯ ಪುರಾಣದ ಪ್ರಕಾರ ತಿರುನೀಲಕಂಠರು ಹುಟ್ಟಿದ್ದು ಚಿದಂಬರ ಕ್ಷೇತ್ರದಲ್ಲಿ. ಹರಿಹರನ ಪ್ರಕಾರ ಚೋಳ ದೇಶದ ಪೊನ್ನಾಂಬಲದಲ್ಲಿ.

ಪೆರಿಯ ಪುರಾಣವು ತಿರುನೀಲಕಂಠನು "ಇಳಮೈಮೀ ತೂರ ಇನ್‌ಪತ್ತುತ್ಯೈಯಿನಿಲ್ ಎಳಿಯರ್ ಆನಾರ್"[21] (ಶ್ರೇಷ್ಠವಾದ ತಾರುಣ್ಯದ ಅಲ್ಪಸುಖದ ಕಾಮದ ಲೀಲೆಗಳಲ್ಲಿ ಈಡು ಪಟ್ಟವನಾಗಿದ್ದನು) ಎಂದು ಚಿತ್ರಿಸುತ್ತದೆ. ಈ ಚಿತ್ರಣ ಹರಿಹರನ ರಗಳೆಯಲ್ಲಿ ಇಲ್ಲ. ಸಮುದ್ರ ಮಂಥನದ ಸಂದರ್ಭದಲ್ಲಿ ಲೋಕದ ಹಿತದೃಷ್ಟಿಯಿಂದ ಶಿವನು ವಿಷವನ್ನು ಕುಡಿದಿರಲು ತಿರುನೀಲಕಂಠ ಅವನನ್ನು ತಿರುನೀಲಕಂಠ ಎಂಬ ಹೆಸರಿನಲ್ಲಿ ಪೂಜಿಸುತ್ತಿರುತ್ತಾನೆ ಎಂದು ಪೆರಿಯ ಪುರಾಣ ಚಿತ್ರಿಸುತ್ತದೆ. ಇದನ್ನು ಕುರಿತು ಹರಿಹರ ಮೌನ ತಾಳಿದ್ದಾನೆ. ಹರಿಹರ ಕವಿ ತಿರುನೀಲಕಂಠನ ಪತ್ನಿಯ ಹೆಸರನ್ನು ಮುತ್ತೈದೆ ಎಂದು ಉಲ್ಲೇಖಿಸಿದ್ದಾನೆ. ಆದರೆ ಈ ಹೆಸರಿನ ಪ್ರಸ್ತಾಪ ಪೆರಿಯ ಪುರಾಣದಲ್ಲಿ ಇಲ್ಲ. ತಿರುನೀಲಕಂಠನು ಗಣಿಕೆಯೊಬ್ಬಳ ಮನೆಗೆ ಹೋಗಿದ್ದ, 'ಆ ಕಾರಣಕ್ಕಾಗಿ ಅವನ ಹೆಂಡತಿ ಮುಟ್ಟಿದರೆ ಶಿವನಾಣೆ' ಎಂದು ಆಣೆ ಇಟ್ಟಳು ಎಂದು ಪೆರಿಯ ಪುರಾಣ ಚಿತ್ರಿಸುತ್ತದೆ. ಹರಿಹರ ಇದನ್ನು ಪರಿವರ್ತಿಸಿಕೊಂಡು; ತಿರುನೀಲಕಂಠ

ಶಿವಪೂಜೆ ಮುಗಿಸಿ ಬರುವಾಗ ದಾರಿಯಲ್ಲಿ ಗಣಿಕೆಯೊಬ್ಬಳು ತಿರುನೀಲಕಂಠನ ಮೇಲೆ ಎಂಜಲು ನೀರನ್ನು ಚೆಲ್ಲುವಳು. ತಾನು ಚೆಲ್ಲಿದ ನೀರು ತಿರುನೀಲಕಂಠರ ಮೇಲೆ ಬಿದ್ದಿದೆ ಎಂದು ಗೊತ್ತಾದಾಗ ಅವಳು ತಿರುನೀಲಕಂಠರನ್ನು ಮನೆಯ ಒಳಗೆ ಕರೆದು, ಸ್ನಾನ ಮಾಡಿಸಿ, ಸುಗಂಧವನ್ನು ಹಚ್ಚಿ ಕಳುಹಿಸಿದಳು. ಈ ಸುಗಂಧ ಮುತ್ತೈದೆಗೆ ತಿಳಿಯಲು ಅವಳು, ಗಂಡ ಸೂಳೆಯ ಮನೆಗೆ ಹೋಗಿ ಬಂದಿದ್ದಾನೆ ಎಂದು ತಪ್ಪಾಗಿ ಭಾವಿಸಿ ಶಿವನಾಣೆ ಇಟ್ಟಳು ಎಂದು ಚಿತ್ರಿಸುತ್ತಾನೆ. ಹರಿಹರ ವ್ರತನಿಷ್ಠ ತಿರುನೀಲಕಂಠ ದಂಪತಿಗಳಿಗೆ ತೊಂಬತ್ತೈದು ವರ್ಷಗಳು ಆಗಿದ್ದುವು ಎಂದು ತಿಳಿಸಿದರೆ ಪೆರಿಯ ಪುರಾಣದಲ್ಲಿ ಈ ವಯಸ್ಸಿನ ವಿಚಾರ ಬರುವುದೇ ಇಲ್ಲ. ಅಲ್ಲಿ ಮುಪ್ಪು ಕವಿದ ವಿಚಾರ ಮಾತ್ರ ತಿಳಿಯುತ್ತದೆ.

**ಕಣ್ಣಪ್ಪನ ರಗಳೆ :** ಕಣ್ಣಪ್ಪನ ಭೇಟಿಯ ಪೂರ್ವ ವಿಚಾರಗಳು ಪೆರಿಯ ಪುರಾಣದಲ್ಲಿ ತುಂಬ ದೀರ್ಘವಾಗಿ ಚಿತ್ರಣಗೊಂಡಿದೆ. ಈ ಚಿತ್ರಣವನ್ನು ಹರಿಹರ ಸಂಪೂರ್ಣ ಕೈ ಬಿಟ್ಟಿದ್ದಾನೆ. ಪೆರಿಯ ಪುರಾಣ ಕಣ್ಣಪ್ಪನು ಹಂದಿಯನ್ನು ಬೆನ್ನಟ್ಟಿ ಹೋದ ಎಂದು ತಿಳಿಸಿದರೆ ಹರಿಹರ ಹುಲ್ಲೆಯನ್ನು ಬೆನ್ನಟ್ಟಿಹೋದ ಎಂದು ಚಿತ್ರಿಸುತ್ತಾನೆ. ಹರಿಹರ ಅರ್ಚಕನ ಹೆಸರನ್ನು ಹೇಳುವುದಿಲ್ಲ. ಪೆರಿಯ ಪುರಾಣದಲ್ಲಿ ಅರ್ಚಕನ ಹೆಸರು ಶಿವಗೋಚರಿ ಎಂದು ಉಲ್ಲೇಖ ವಾಗಿದೆ. ಕಣ್ಣಪ್ಪ ಮಾಡಿದ್ದ ಹೊಲಸನ್ನು ಸ್ವಚ್ಛಮಾಡಿ ಅರ್ಚಕ ಬಾಗಿಲು ಹಾಕಿಕೊಂಡು ಹೋದ ಎಂದು ಹರಿಹರ ಚಿತ್ರಿಸುತ್ತಾನೆ. ಈ ವಿಚಾರ ಪೆರಿಯ ಪುರಾಣದಲ್ಲಿಲ್ಲ. ಪೆರಿಯ ಪುರಾಣದಲ್ಲಿ ಶಿವನು ಅರ್ಚಕನ ಕನಸಿನಲ್ಲಿ ಬಂದು "ಉನ್ನಕ್ಕವನ್‌ಐನ್ ಚೆಯಲ್‌ಕಾಟ್ಟ ನಾಳೈನೀ ಒಳಿತ್ತರುನ್ನಾಲ್ ಎನಕ್ಕವನ್‌ಐನ್ ಪರಿವಿರುಕ್ಕುಮ್ ಪರಿಚೆಲ್ಲಾ ....."[22] (ನಾಳೆ ನನ್ನ ಪಕ್ಕದಲ್ಲಿ ಮರೆಯಾಗಿದ್ದರೆ, ಅವನ ಕಾರ್ಯಗಳನ್ನು ನಾನು ಕಾಣಿಸಲು ಆ ಕೃತ್ಯಗಳಿಂದ ನನ್ನೆಡೆಯಲ್ಲಿ ಅವನ ಭಕ್ತಿಯಿರುವ ಸ್ವಭಾವವೆಲ್ಲವನ್ನು ನೋಡುವೆ) ಎಂದು ಹೇಳಿದ ಚಿತ್ರಣ ಬರುತ್ತದೆ. ಈ ಚಿತ್ರಣ ಹರಿಹರನಲ್ಲಿ ಬರುವುದಿಲ್ಲ. ಹರಿಹರ, ಶಿವನ ಕಣ್ಣಿನಲ್ಲಿ ರಕ್ತ ಸುರಿಯುತ್ತಿರು ವುದನ್ನು ನೋಡಿದ ಬ್ರಾಹ್ಮಣ ಊರಿನವರನ್ನೆಲ್ಲ ಕರೆದು ತೋರುವಂತೆ ಚಿತ್ರಿಸಿದ್ದಾನೆ. ಈ ಚಿತ್ರಣ ಪೆರಿಯ ಪುರಾಣದಲ್ಲಿ ಇಲ್ಲ.

ಇಂಥ ಹಲವು ಸಾಮ್ಯತೆ ಮತ್ತು ವ್ಯತ್ಯಾಸಗಳು ಹರಿಹರನ ಎಲ್ಲ ರಗಳೆಗಳಲ್ಲೂ ಕಂಡುಬರುತ್ತವೆ. ಎಲ್ಲವನ್ನೂ ಉದಾಹರಿಸುವುದು ಇಲ್ಲಿನ ಉದ್ದೇಶವಲ್ಲವಾದ್ದರಿಂದ ಕೆಲವೊಂದು ಕಥೆಗಳನ್ನು ಮಾತ್ರ ಮೇಲೆ ಕಾಣಿಸಿರುವಂತೆ ಉದಾಹರಿಸಲಾಗಿದೆ.

ಹುಡುಕುತ್ತಾಹೋದಂತೆ ಪ್ರತಿಯೊಂದು ರಗಳೆಯಲ್ಲೂ ಈ ಬಗೆಯ ವ್ಯತ್ಯಾಸಗಳು ದೊರೆಯುತ್ತಲೇ ಇರುತ್ತವೆ. ಆದರೆ ಈ ವ್ಯತ್ಯಾಸಗಳನ್ನೇ ಆಧಾರವಾಗಿಟ್ಟಕೊಂಡು ನಾವು ಹರಿಹರ ಪೆರಿಯ ಪುರಾಣದಿಂದ ಕಾವ್ಯವಸ್ತುವನ್ನು ತೆಗೆದುಕೊಂಡಿಲ್ಲ ಎಂದು ತೀರ್ಮಾನಿಸಲು ಆಗುವುದಿಲ್ಲ. ಏಕೆಂದರೆ ಈ ವ್ಯತ್ಯಾಸಗಳು ಕೇವಲ ಸಾಂದರ್ಭಿಕ ಬದಲಾವಣೆಗಳು, ಹೆಚ್ಚಾಗಿ ರೂಪ ಪರಿವರ್ತನೆ ಆಗಿರುವಂಥವುಗಳು ಎನ್ನಬಹುದು. ಕವಿ ತನ್ನ ಮನೋಧರ್ಮಕ್ಕೆ ಅನುಗುಣವಾಗಿ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಇಂಥ ಪರಿವರ್ತನೆ ಮಾಡಿಕೊಂಡಿದ್ದಾನೆ. ಆ ಪರಿವರ್ತನೆಯ ಕ್ರಿಯೆಯಲ್ಲಿ ಪೆರಿಯ ಪುರಾಣದಲ್ಲಿ ಯಾವುದು ಇದೆಯೋ ಅದನ್ನು

ಇಲ್ಲವೆಂದಾಗಲೀ ಅಥವಾ ಅದನ್ನೇ ತನ್ನ ಕಲ್ಪನಾ ಶಕ್ತಿಯಿಂದ ಇನ್ನೊಂದು ರೀತಿಯಲ್ಲಿ ಹೇಳುವ ಪ್ರಯತ್ನವನ್ನಾಗಲೀ ಅಥವಾ ಹೊರಗಡೆಯಿಂದ ಏನಾದರೂ ದೊರೆತರೆ (ಅನ್ಯಪುಸ್ತಕಗಳ, ಜನವಾಣಿಗಳು) ಅವುಗಳನ್ನು ಸೇರಿಸುವುದನ್ನಾಗಲಿ ಮಾಡಿದ್ದಾನೆ. ಹಾಗೆ ಇಲ್ಲದೆ ಇರುವುದನ್ನು ಕಲ್ಪನಾ ಶಕ್ತಿಯಿಂದಾಗಲಿ ಅಥವಾ ಇನ್ನಿತರ ಆಕರಗಳಿಂದ್ಹಾಗಲಿ ಪಡೆದು, ಇದೆ ಎನ್ನುವ ಕೆಲಸವನ್ನು ಮಾಡಿದ್ದಾನೆ ಎನ್ನುವುದು ಸ್ಪಷ್ಟವಾಗಿದೆ. ಇಡೀ ವಸ್ತುವನ್ನು ಪೆರಿಯ ಪುರಾಣದಿಂದಲೇ ತೆಗೆದುಕೊಂಡು ಹರಿಹರ ಕಾವ್ಯ ಬರೆದಿದ್ದಾನೆ ಎನ್ನಲು ಸಾಧ್ಯವಾಗದಿದ್ದರೂ ಪೆರಿಯ ಪುರಾಣದ ಪ್ರಭಾವ ಹರಿಹರನ ಮೇಲೆ ದಟ್ಟವಾಗಿ ಆಗಿದೆ ಎಂಬುದನ್ನು ಈ ಉದಾಹರಣೆಗಳು ಸಾಬೀತುಪಡಿಸುತ್ತವೆ.

### 3.3.1.1 ಮೂಲವನ್ನು ಮರೆಯದೆ ಹರಿಹರ ಮೆರೆಯುವ ವಿಶಿಷ್ಟತೆ

ಹರಿಹರ ರಗಳೆಯನ್ನು ಬರೆದದ್ದು ಭಕ್ತಿಯ ಮಹತ್ವವನ್ನು ತಿಳಿಸುವುದಕ್ಕಾಗಿ. ಭಕ್ತಿ ಬಿಟ್ಟರೆ ಉಳಿದಾವುದೂ ಅವನಿಗೆ ಮುಖ್ಯವಲ್ಲ. ಚಾರಿತ್ರಿಕ ಸಂಗತಿಗಳನ್ನು ಅಗತ್ಯ ಬಿದ್ದರೆ ಮಾತ್ರ ಸೇರಿಸುತ್ತಾನೆ; ಇಲ್ಲದಿದ್ದರೆ ಇಲ್ಲ. ಅವನಿಗೆ ಚರಿತ್ರೆ ಮುಖ್ಯವೇ ಅಲ್ಲ. ಆದರೆ ಶೆಕ್ಕಿಳಾರ್ ಚಾರಿತ್ರಿಕ ಕಥೆಗೆ ಮಹತ್ವ ಕೊಟ್ಟಿದ್ದಾನೆ. " ಕವಿಯು ಆ ಕಾಲದ ರಾಜಕೀಯ ಹೋರಾಟದ ವಿವರಗಳನ್ನು ಅವಕ್ಕೆ ಸಂಬಂಧಿಸಿದ ವಿವರಗಳನ್ನು ತನ್ನ ಕಥೆಯಲ್ಲಿ ಸಂದರ್ಭೋಚಿತವಾಗಿ ಕೊಡುತ್ತಾನೆ. ಕಥಾನಾಯಕರ ಊರುಗಳನ್ನು, ಅವರ ತಂದೆ ತಾಯಿಯರ ಹೆಸರುಗಳನ್ನು, ಅವರು ಜನಿಸಿದ ಕಾಲ ನಕ್ಷತ್ರಾದಿಗಳನ್ನೂ ಅಲ್ಲಲ್ಲಿ ಸೂಚಿಸಿರುವನು."[23] "ಆದರೆ ಶೆಕ್ಕಿಳಾರನ್ನ ಈ ಐತಿಹಾಸಿಕ ದೃಷ್ಟಿ ಹರಿಹರನಿಗೆ ಇಲ್ಲ. ಆತನಿಗೆ ಕಥಾನಾಯಕನೊಬ್ಬನ ಹೆಸರು ಚಿರಪರಿಚಿತ. ಆತನ ತಂದೆ ತಾಯಿಯರ ಹೆಸರನ್ನು ಕೂಡ ತಿಳಿಯುವ ಇಚ್ಛೆ ಅವನಿಗಿರಲಿಲ್ಲ. ಭಕ್ತನ ತಾಯಿ ಶಿವಭಕ್ತೆ, ತಂದೆ ಶಿವಭಕ್ತ. ಒಮ್ಮೊಮ್ಮೆ ಭಕ್ತನ ಊರನ್ನೂ ಅವನು ಹೇಳ ಬಯಸುವುದಿಲ್ಲ."[24] "ಇವುಗಳನ್ನು ತಿಳಿಯುವುದರಿಂದ ಕಥೆಗೆ ಏನಾಗಬೇಕಾಗಿದೆ. ಭಕ್ತಿಯ ಹೆಚ್ಚಳಕ್ಕೆ ಯಾವ ದೃಷ್ಟಿಯಿಂದ ಅದು ನೆರವಾಗಬಲ್ಲದು? ಆದ್ದರಿಂದಲೇ ಅವನು ಇಂಥ ಸಂಗತಿಗಳನ್ನು ತನ್ನ ಕೃತಿಯಲ್ಲಿ ತರಲು ಇಚ್ಛಿಸುವುದಿಲ್ಲ."[25] ಇಂಥ ಸಂದರ್ಭಗಳಲ್ಲಿ ಕಥೆಯಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ.

ಭಕ್ತಿಯನ್ನು ಚಿತ್ರಿಸುವಂಥ ಸಂದರ್ಭಗಳಲ್ಲಿ ಕೂಡ ಹರಿಹರನ ಕಾವ್ಯ ಪೆರಿಯ ಪುರಾಣಕ್ಕಿಂತ ಭಿನ್ನವಾಗಿರುವುದನ್ನು ಕಾಣಬಹುದು. "ಹರಿಹರ ಭಾವ ಜೀವಿ. ಆತನ ಕಾವ್ಯ ಎತ್ತರದ ಬೆಟ್ಟದಿಂದ ಹರಿದು ಬಂದು ಆಳವಾದ ಕೊಳ್ಳಕ್ಕೆ ಧುಮ್ಮಿಕ್ಕುವ ಶರಾವತಿಯಿದ್ದ ಹಾಗೆ. ಅಲ್ಲಿ ಭಕ್ತಿಯ ಆವೇಶವೇ ಆವೇಶ."[26] ಆದರೆ ಇಂಥ ಆವೇಶ ಶೆಕ್ಕಿಳಾರನಲ್ಲಿಲ್ಲ. "ಅವನು ತುಂಬಾ ಸಮಾಧಾನಿ. ಆತನ ಕಾವ್ಯ ವಿಸ್ತಾರವಾದ ಕಡಲು. ಅಲ್ಲಿ ತೆರೆಗಳು ಬೇಗ ಎದ್ದು ಮುಳುಗುವುದಿಲ್ಲ. ಅವು ದೂರದಿಂದ ಸಾಗಿ ಬಂದು ದಂಡೆಗೆ ಅಪ್ಪಳಿಸಿದಾಗ ಕಡಲು ಉಕ್ಕಿದಂತೆ ಕಂಡುಬರುತ್ತದೆ."[27] ಉದಾಹರಣೆಗೆ ಕಣ್ಣಪ್ಪನ ಕಥೆಯ ಒಂದೆರಡು ದೃಷ್ಟಾಂತ ಗಳನ್ನು ನೋಡಬಹುದು. "ಬೇಟೆಗೆಂದು ಹೊರಟ ಬೇಡಪಡೆಯ ವರ್ಣನೆ ಪೆರಿಯ ಪುರಾಣ

ದಲ್ಲಿಯೂ ರಗಳೆಯ ಕಥೆಯಲ್ಲಿಯೂ ಬಂದಿದೆ. ಶೆಕ್ಕಿಳಾರನು ಕಣ್ಣಪ್ಪನನ್ನು ಬೇಡರ ಜಾತಿಗೆ ಒಪ್ಪುವಂತೆ ಚಿತ್ರಿಸಿದ್ದಾನೆ. ರಗಳೆಯಲ್ಲಿ ಬೇಟೆಗೆಂದು ಹೊರಡುವ ಕಣ್ಣಪ್ಪನನ್ನು ಕಂಡ ಕವಿಯ ದೃಷ್ಟಿ ಅನುಪಮವೂ ಸುಂದರವೂ ಆಗಿದೆ. ಆತನ ಹಣೆಯ ಮೇಲೆ ಹಚ್ಚಿದ ವಿಭೂತಿಯಿಂದ ತುಂತುರುಗಳೆಸೆಯುತ್ತಿದ್ದವಂತೆ! ಆತನು ತೊಟ್ಟ ಕೂರಂಬುಗಳ ಹೊಗರು ಪಂಚಾಕ್ಷರಿ ಗಳನುಗುಳುತ್ತಿದ್ದವಂತೆ! ಹರಿಹರನು ಆವ ಚಿತ್ರಣಕ್ಕೆ ಬಣ್ಣವನ್ನೇ ಕೊಡಲಿ, ಆವ ಸನ್ನಿವೇಶ ಸೃಷ್ಟಿಗೆಂದು ಗೆರೆಯನ್ನೆ ಎಳೆಯಲಿ ಅಲ್ಲಿ ಅವನ ಸ್ವಂತ ಚಮತ್ಕಾರವಿರುತ್ತದೆ, ಸುಂದರ ಕಲ್ಪನಾ ವಿಲಾಸವಿರುತ್ತದೆ, ವ್ಯಕ್ತಿತ್ವ ಮೂಡಿದ ಮುದ್ರೆ ನಿಚ್ಚಳವಾಗಿ ಕಂಡುಬರುತ್ತದೆ"[28] ಇಂಥ ವ್ಯತ್ಯಾಸಗಳು ಹರಿಹರನಲ್ಲಿ ಸಾಮಾನ್ಯ. ಆದರೆ ಈ ವ್ಯತ್ಯಾಸಗಳು ಮೂಲದಿಂದ ದೂರ ಸರಿಯುವುದಿಲ್ಲ. ಕವಿ, ಮೂಲ ಏನಿದೆಯೋ ಅದನ್ನು ಮರೆಯದ ಹಾಗೆ ತನ್ನ ವಿಶಿಷ್ಟತೆಯನ್ನು ಮೆರೆಯುತ್ತಾನೆ. ಉದಾಹರಣೆಗೆ : ಇಹ:ಪ್ಪಗೆಯಾಂಡರ ಕಥೆಯಲ್ಲಿ ಬರುವ ಯುದ್ಧಾನಂತರದ ಒಂದು ಸಂದರ್ಭವನ್ನು ನೋಡಬಹುದು. ಪೆರಿಯ ಪುರಾಣದಲ್ಲಿ ಇದು ಸಾಧಾರಣವಾಗಿದೆ. ಯುದ್ಧದಲ್ಲಿ ಗೆದ್ದನಂತರ ಇಹ:ಪ್ಪಗೆಯಾಂಡ ಶಿವನನ್ನು ಬಿಟ್ಟು ಬರಲು ಕಾಡಿನವರೆಗೂ ಹೋಗುತ್ತಾನೆ. ಪೂಂಪುಗಾರ್ ಎಂಬ ನದಿಯ ಬಳಿ ಇರುವ ಒಂದು ಸ್ಮಶಾನದ ಹತ್ತಿರ ಬರುತ್ತಿದಂತೆಯೇ ಶಿವ ಇಹ:ಪ್ಪಗೆಯಾಂಡನಿಗೆ ಹಿಂತಿರುಗುವಂತೆ ಸೂಚಿಸುತ್ತಾನೆ. ಶಿವನಾಜ್ಞೆ ಯಂತೆ ಹಿಂತಿರುಗಿದ ಭಕ್ತ ಹೋಗುವಾಗ ಒಮ್ಮೆಯೂ ಹಿಂದೆ ತಿರುಗದೆ ನಡೆಯುತ್ತಿರುವುದನ್ನು ಕಂಡು, ಶಿವ ಮತ್ತೆ ಅವನನ್ನು ಕರೆದು ಅವನ ನಿಷ್ಠೆಗೆ ಮೆಚ್ಚಿ ದಂಪತಿಗಳೊಡನೆ ಕೈಲಾಸಕ್ಕೆ ಕರೆದೊಯ್ಯುತ್ತಾನೆ.

ಆದರೆ, ಹರಿಹರ ಈ ಭಾಗದಲ್ಲಿ ಸ್ವಲ್ಪ ಭಾವವನ್ನು ತುಂಬಿದ್ದಾನೆ. ಇಹ:ಪ್ಪಗೆಯಾಂಡನ ಭಕ್ತ ಹೃದಯವನ್ನು ತೆರೆದಿಡುವಂತೆ ಮಾಡುತ್ತಾನೆ. ಇಲ್ಲಿ, ಯುದ್ಧದಲ್ಲಿ ಗೆದ್ದನಂತರ ಭಕ್ತನು ಶಿವನಿಗೆ, ಇನ್ನಾರ ಭಯವೂ ಇಲ್ಲ ಅಂಜದೆ ನಡೆಯಿರಿ ಎಂದು ಕರೆದೊಯ್ಯುತ್ತಾನೆ. ಹಾಗೆ ಹೋಗುವಾಗ ಶಿವನು ಪತಿಹಿತವೆಗೆ ತನ್ನ ನಿಜರೂಪವನ್ನು ತೋರುತ್ತಾನೆ. ಶಿವನ ನಿಜರೂಪವನ್ನು ಕಂಡ ಪತಿಹಿತವೆ ಗಂಡನನ್ನು ಕರೆದು 'ನೋಡು ದೇವರಿವರೆ' ಎಂದು ಸಂಭ್ರಮದಿಂದ ನುಡಿಯುತ್ತಾಳೆ. ಆಗ ಇಹ:ಪ್ಪಗೆಯಾಂಡ 'ಮರುಳೆ ಮುನ್ನಾರೆಂದು ಕೊಟ್ಟೆನು' ಎನ್ನುತ್ತಾನೆ. ಅನಂತರ, ಶಿವ ಇಬ್ಬರನ್ನೂ ಕೈಲಾಸಕ್ಕೆ ಕರೆದೊಯ್ದು ಗಣ ಪದವಿ ನೀಡುತ್ತಾನೆ. ಹೀಗೆ ಕವಿ ಇರುವ ಮೂಲವನ್ನೇ ಬಳಸಿಕೊಂಡು ಆ ಮೂಲವನ್ನು ಮರೆಯದೆ ಅದರಲ್ಲೇ ತನ್ನ ವಿಶಿಷ್ಟತೆಯನ್ನು ಸಾಧಿಸುವ ಪ್ರಯತ್ನ ಮಾಡಿದ್ದಾನೆ.

### 3.3.2 ನೂತನರ ರಗಳೆಗಳು

ಹರಿಹರ ತನ್ನ ಸಮೀಪಕಾಲೀನ ಶರಣರನ್ನು ಕುರಿತು ಬರೆದ ಕಥೆಗಳನ್ನು ನೂತನರ ಕಥೆ ಅಥವಾ ರಗಳೆಗಳು ಎಂದು ಕರೆಯುತ್ತೇವೆ. ಇಲ್ಲಿ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಕೊಂಡಗುಳಿ ಕೇಶಿರಾಜ ಮುಂತಾದ ಇಪ್ಪತ್ತೆಂಟು ಜನರ ಕಥೆಗಳಿವೆ. ಇವರೆಲ್ಲ ಕನ್ನಡನಾಡಿ ನವರು. ವಿವಿಧ ಕಾಯಕಗಳಲ್ಲಿ ತೊಡಗಿ ಸಾಮಾಜಿಕ ಚಳವಳಿಯಲ್ಲಿ ಸಾಮೂಹಿಕವಾಗಿ

ಪಾಲ್ಗೊಂಡವರು. ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಡಿ ಸಾಮಾಜಿಕ ಸಮಾನತೆಯನ್ನು ಎತ್ತಿ ಹಿಡಿದವರು. ನುಡಿದಂತೆ ನಡೆದವರು. ಹಿಡಿದ ಕಾಯಕವನ್ನೇ ತಮ್ಮ ಆಧ್ಯಾತ್ಮ ಸಾಧನೆಯ ಮಾರ್ಗವನ್ನಾಗಿ ಮಾಡಿಕೊಂಡ ಸಾಧಕರು. ಅವರ ಬದುಕು -ಭಾವನೆ -ಸಾಧನೆಗಳ ಸಂಗಮವೇ ನೂತನರ ರಗಳೆ. ಶರಣರ ಬದುಕನ್ನು ವೈಯಕ್ತಿಕವಾಗಿ ಬಹಳಷ್ಟು ಪ್ರೀತಿಸಿದ ಹರಿಹರ ಇತಿಹಾಸ, ಜನವದಂತಿ, ಪವಾಡ, ಕಲ್ಪನೆ, ಉತ್ಪ್ರೇಕ್ಷೆಗಳನ್ನು ಬಳಸಿಕೊಳ್ಳುವ ಮೂಲಕ ಅವರ ಕಥೆಗಳನ್ನು ಬರೆದಿದ್ದಾನೆ.

### 3.3.2.1 ಕಥಾವಸ್ತುವಾಗಿ ವಾಸ್ತವಿಕ ಹಾಗೂ ಐತಿಹಾಸಿಕ ಸಾಮಗ್ರಿ

ಹರಿಹರ ತನ್ನ ಕಥೆಗಳಿಗೆ ಆರಿಸಿಕೊಂಡ ವಸ್ತು ಕಲ್ಪನೆಗಳಿಗಿಂತ ಹೆಚ್ಚಾಗಿ ವಾಸ್ತವಿಕ ಹಾಗೂ ಐತಿಹಾಸಿಕವಾದಂಥವುಗಳು. ಆ ಎಲ್ಲ ಪಾತ್ರಗಳು ಈ ನೆಲದ ಪಾತ್ರಗಳೇ. ಅವರೆಲ್ಲ ಹರಿಹರನು ಬದುಕಿದ್ದ ಕಾಲಕ್ಕೆ ಬಹಳ ಹತ್ತಿರವಾದವರು. ಅತ್ಯಂತ ಪರಿಶುದ್ಧವಾಗಿ ಬದುಕಿದಂಥವರು. ಅವರ ಬದುಕನ್ನೇ ಕವಿ ಕಥೆಗಳ ಮೂಲಕ ಚಿತ್ರಿಸಿದ್ದಾನೆ. ಹಾಗೆ ಚಿತ್ರಿಸುವಾಗ ಕಲ್ಪನೆಯನ್ನು ಬಳಸಿಕೊಂಡಿದ್ದಾನೆ. ಒಂದು ಉದಾಹರಣೆಯ ಮೂಲಕ ಶರಣರ ವಾಸ್ತವಿಕ ಬದುಕು ಕಥೆಯಲ್ಲಿ ಹೇಗೆ ಬಂದಿದೆ ಎಂಬುದನ್ನು ಗಮನಿಸಬಹುದು. ಉದಾ : 'ಬಸವರಾಜ ದೇವರ ರಗಳೆ'–

ಈ ಕಥೆಯಲ್ಲಿ ಹರಿಹರ ಬಸವಣ್ಣನ ಬದುಕಿನ ಅನೇಕ ಸಂಗತಿಗಳನ್ನು ತಂದಿದ್ದಾನೆ. ಕವಿ ತಿಳಿಸುವಂತೆ ಬಸವಣ್ಣ ಕೈಲಾಸದಲ್ಲಿ ಮಾಡಿದ ತಪ್ಪಿಗೆ ಶಿವನಿಂದ ಶಾಪಗ್ರಸ್ತನಾಗಿ ಭೂಲೋಕದಲ್ಲಿ ಹುಟ್ಟುತ್ತಾನೆ. ಮಗುವಿಗೆ ತಂದೆ ತಾಯಿಗಳು ಬಸವರಾಜನೆಂದು ನಾಮಕರಣ ಮಾಡುತ್ತಾರೆ. ಕೆಲ ದಿನಗಳ ನಂತರ ತಂದೆ ತಾಯಿಗಳು ಮರಣವನ್ನಪ್ಪುತ್ತಾರೆ. ನಂತರ ಬಸವರಾಜ ತನ್ನ ಮುತ್ತಜ್ಜಿಯ ಹತ್ತಿರ ಬೆಳೆಯುತ್ತಾನೆ. ಯೌವನಕ್ಕೆ ಬರುತ್ತಿದಂತೆ ತಂದೆ ತಾಯಿ ಕಟ್ಟಿಸಿದ ಜನಿವಾರವನ್ನು ಕಿತ್ತು ಬಿಸುಟು ಕಪ್ಪಡಿ ಸಂಗಮಕ್ಕೆ ಬರುತ್ತಾನೆ. ಅಲ್ಲಿ ಶಿವಾಲಯವೊಂದರಲ್ಲಿ ಧ್ಯಾನಕ್ಕೆ ಕೂರುತ್ತಾನೆ. ಈಶಾನ್ಯ ಗುರುಗಳ ಭೇಟಿ ಆಗುತ್ತದೆ. ಆನಂತರ ಮಂಗಳವಾಡಕ್ಕೆ ಬರುತ್ತಾನೆ. ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಭಂಡಾರಿಯಾಗಿದ್ದ ಸಿದ್ಧನಂಜೇಶ ಲೆಕ್ಕದಲ್ಲಿ ಮಾಡಿದ ತಪ್ಪನ್ನು ತೋರುತ್ತಾನೆ. ಬಸವಣ್ಣನ ಬುದ್ಧಿಗೆ ಮೆಚ್ಚಿ ಬಿಜ್ಜಳನು ತನ್ನ ಭಂಡಾರಿಯನ್ನಾಗಿ ನೇಮಿಸಿಕೊಳ್ಳುತ್ತಾನೆ. ಬಿಜ್ಜಳನ ಆಸ್ಥಾನ ಸೇರಿದ ಮೇಲೆ ಬಸವಣ್ಣ ಹಲವು ಜನೋಪಯೋಗಿ ಕಾರ್ಯಗಳಲ್ಲಿ ತೊಡಗುತ್ತಾನೆ. ಹಲವು ಶರಣರು ಬಸವಣ್ಣನ ಆಕರ್ಷಣೆಗೆ ಒಳಗಾಗುತ್ತಾರೆ. ದೇಶವಿದೇಶಗಳಿಂದ ಕಪ್ಪಡಿ ಸಂಗಮಕ್ಕೆ ಆಗಮಿಸುತ್ತಾರೆ. ಬಸವಣ್ಣನ ಏಳ್ಗೆಯನ್ನು ಸಹಿಸದಾದ ಮಂತ್ರಿಗಳು ಬಸವಣ್ಣನ ಮೇಲೆ ಚಾಡಿ ಹೇಳುತ್ತಾರೆ. ಅವರ ಚಾಡಿ ಮಾತನ್ನು ಕೇಳಿದ ಬಿಜ್ಜಳ, ಬಸವಣ್ಣನನ್ನು ವಿಚಾರಣೆಗೆ ಒಳಪಡಿಸುತ್ತಾನೆ. ಆ ವಿಚಾರಣೆಯಲ್ಲಿ ಬಿಜ್ಜಳ ಸೋಲನ್ನನುಭವಿಸುತ್ತಾನೆ. ಅನಂತರ, ಬಸವಣ್ಣ ಮಂಗಳವಾಡವನ್ನು ಬಿಟ್ಟು ಹೊರಡುತ್ತಾನೆ. ಇದರಲ್ಲಿ ಮೊದಲ ಒಂದನ್ನು ಬಿಟ್ಟು ಉಳಿದೆಲ್ಲ ಅಂಶಗಳು ಬಸವಣ್ಣನ ಬದುಕಿನ ವಾಸ್ತವತೆಗಳಾಗಿದ್ದು ಹರಿಹರ ಎಲ್ಲವನ್ನು ಚಿತ್ರಿಸುತ್ತಾನೆ. ಹರಿಹರ

ಚಿತ್ರಿಸುವಂತಹ ಈ ಕಥೆಯಲ್ಲಿ ವಾಸ್ತವದ ಜೊತೆಗೆ ಕಲ್ಪನೆ, ಉತ್ಪ್ರೇಕ್ಷೆ, ಪವಾಡಗಳೂ ಇವೆ. ಆದರೆ ಆ ಅಂಶಗಳು ಬಸವಣ್ಣನ ವಾಸ್ತವ ಬದುಕನ್ನು ಚಿತ್ರಿಸುವಲ್ಲಿ ಪೋಷಕವಾಗಿವೆ ಎಂಬುದನ್ನು ಮರೆಯಲಾಗದು. ಹಾಗೆಯೇ ಕವಿ ಬಸವಣ್ಣನ ಇನ್ನುಳಿದ ಬದುಕನ್ನು ಸಹ ತನ್ನ ಕಥೆಯಲ್ಲಿ ಚಿತ್ರಿಸುತ್ತಾನೆ.

ಈ ವಾಸ್ತವ ಸಂಗತಿಗಳ ಜೊತೆಗೆ ಐತಿಹಾಸಿಕ ವಿಚಾರಗಳೂ ಹರಿಹರನ ಕಥೆಗಳಲ್ಲಿ ಬರುತ್ತವೆ. ಆದರೆ ಹರಿಹರ ಐತಿಹಾಸಿಕತೆಗೆ ಹೆಚ್ಚಿನ ಒತ್ತು ಕೊಡುವುದಿಲ್ಲ. ಕೆಲವೊಮ್ಮೆ ಈ ಐತಿಹಾಸಿಕ ವಿಚಾರಗಳು ಅನಿವಾರ್ಯವಾಗಿ ಬಂದು ಸೇರಿವೆ. ಬಸವರಾಜದೇವರ ರಗಳೆಯನ್ನೇ ತೆಗೆದುಕೊಂಡರೆ ಅಲ್ಲಿ ಬಿಜ್ಜಳ ಮತ್ತು ಬಸವಣ್ಣನವರ ನಡುವಿನ ಸಂಬಂಧ - ವಿರಸ - ವಿಚಾರಣೆ - ದೂರವಾಗುವಿಕೆ ಮುಂತಾದ ವಿಚಾರಗಳು ದೊರೆಯುತ್ತವೆ. ಅಲ್ಲಮನ ರಗಳೆಯಲ್ಲಿ ತೋಟದೊಳಗೆ ಹೂತುಹೋಗಿದ್ದ ದೇವಸ್ಥಾನವನ್ನು ಅರಸನೊಬ್ಬನು ಅಗೆಯಿಸಿ ಹೊರಗೆ ತೆಗೆಯಿಸಿದ ಪ್ರಸಂಗವನ್ನು ಕವಿ ಚಿತ್ರಿಸುತ್ತಾನೆ. ಆದರೆ ಆ ಅರಸ ಯಾರು ಎಂಬುದನ್ನು ಮಾತ್ರ ಉಲ್ಲೇಖಿಸಿದಂತೆ ಕಂಡುಬರುವುದಿಲ್ಲ.

'ಅಕ್ಕ ಮಹಾದೇವಿಯ ರಗಳೆ'ಯಲ್ಲಿ ಅಕ್ಕ ಮತ್ತು ಕೌಶಿಕ ಮಹಾರಾಜನ ಸಂಬಂಧಗಳು, ಅಕ್ಕ ಮತ್ತು ಕೌಶಿಕನ ಮದುವೆಗಾಗಿ ಮಂತ್ರಿಗಳು ಮಾಡಿದ ನಿತ್ಯ ಪ್ರಯತ್ನ ಚಿತ್ರಣಗೊಂಡಿವೆ. ಹಾಗೆಯೇ 'ಕೇಶಿರಾಜ ದಣ್ಣಾಯಕರ ರಗಳೆ'ಯಿಂದ ಕೆಲವೊಂದು ಐತಿಹಾಸಿಕ ವಿಚಾರಗಳು ದೊರೆಯುತ್ತವೆ. ಇದರಿಂದ "ಚಾಳುಕ್ಯಾನ್ವಯದಲ್ಲಿ ಸುಪ್ರಸಿದ್ಧ ಪೆರ್ಮಾಡಿ ರಾಯನ (ತ್ರಿಭುವನ ಮಲ್ಲ ಆರನೇ ವಿಕ್ರಮಾದಿತ್ಯ ಕ್ರಿ. ಶ. ೧೦೭೬ -೧೧೨೬) ರಾಜ್ಯದಲ್ಲಿ ದಂಡನಾಯಕನಾಗಿ, ಶ್ರೇಷ್ಠ ಶರಣನಾಗಿ ಕೇಶಿರಾಜ ಇದ್ದ ವಿವರಗಳು ದೊರೆಯುತ್ತದೆ. ಕೇಶಿರಾಜ ದಣ್ಣಾಯಕನ ಚಾರಿತ್ರಿಕತೆಗೆ ಇದು ಖಚಿತ ಆಧಾರವಾಗಿದೆ."[29] ಬಾಹೂರ ಬೊಮ್ಮಯ್ಯನ ರಗಳೆಯಿಂದ ರಾಜ ಪೆರ್ಮಾಡಿರಾಯನ ವಿಷ್ಣು ಭಕ್ತಿ, ಆತನ ಹೆಂಡತಿಯಾದ ಲಕುಮಾದೇವಿಯ ಶಿವಭಕ್ತಿಯ ನಿಷ್ಠೆ ದೊರೆಯುತ್ತದೆ. ಇವುಗಳ ಹಾಗೆಯೇ ಶಂಕರ ದಾಸಿಮಯ್ಯ, ರೇವಣಸಿದ್ಧೇಶ್ವರ, ಏಕಾಂತರಾಮಿತಂದೆ, ಹಾವಿನಹಾಳ ಕಲ್ಲಯ್ಯ, ಬಾಣ, ಮಾದಾರ ಚೆನ್ನಯ್ಯ ಮುಂತಾದವರ ಕಥೆಗಳಲ್ಲೂ ಐತಿಹಾಸಿಕ ವಿಚಾರಗಳು ದೊರೆಯುತ್ತವೆ. ಇಂಥ ಐತಿಹಾಸಿಕ ವಸ್ತುವನ್ನು ಬಳಸಿಕೊಳ್ಳುವಾಗ ಹರಿಹರನಿಗೆ ಇದ್ದ ಉದ್ದೇಶ ಕೇವಲ ಭಕ್ತನ ಭಕ್ತಿಯ ಮಹತ್ವವನ್ನು ತಿಳಿಸಿಕೊಡುವುದಾಗಿತ್ತೇ ಹೊರತು ಐತಿಹಾಸಿಕ ವಿವರಗಳನ್ನು ಕಟ್ಟಿಕೊಡುವುದು ಮುಖ್ಯವಾಗಿರಲಿಲ್ಲ. ಹಾಗಾಗಿ ಐತಿಹಾಸಿಕತೆಗೆ ಸಂಬಂಧಪಟ್ಟಂತೆ ಹರಿಹರನಲ್ಲಿ ಹೆಚ್ಚು ಮಾಹಿತಿ ದೊರೆಯುವುದಿಲ್ಲ.

### 3.3.2.2 ವಚನಗಳು ಒದಗಿಸುವ ಸಾಮಗ್ರಿ

ನೂತನರ ರಗಳೆಗಳ ರಚನೆಯ ಸಂದರ್ಭದಲ್ಲಿ ಹರಿಹರ ವಚನಕಾರರ ವಚನಗಳಿಂದಲೂ ವಸ್ತುವನ್ನು ಪಡೆದುಕೊಂಡಿರುವುದು, ಅವನು ತನ್ನ ಕಾವ್ಯದಲ್ಲಿ ಬಳಸಿಕೊಂಡಿರುವ ವಚನಗಳ

ಮೂಲಕ ತಿಳಿದುಬರುತ್ತದೆ. ಇಲ್ಲಿ ಕವಿ ವಚನಕಾರರ ವಚನಗಳನ್ನು ಬಳಸಿಕೊಳ್ಳುವಾಗ ವಚನಗಳನ್ನು ಯಥಾವತ್ತಾಗಿ ತಂದುಕೊಳ್ಳುವುದಕ್ಕೆ ಬದಲಾಗಿ, ತೆಗೆದುಕೊಂಡ ವಚನಗಳನ್ನು ಕಾವ್ಯದ ಛಂದಸ್ಸು ಮತ್ತು ಲಯಕ್ಕೆ ಅನುಗುಣವಾಗಿ ಗದ್ಯ ಹಾಗೂ ರಗಳೆಯ ರೂಪಕ್ಕೆ ಪರಿವರ್ತನೆ ಮಾಡಿಕೊಂಡಿದ್ದಾನೆ. ಮತ್ತೆ ಕೆಲವು ಕಡೆ ವಚನಗಳ ಭಾವಗಳನ್ನು ಸ್ವೀಕರಿಸಿ ಕೃತಿ ರಚನೆ ಮಾಡಿದ್ದಾನೆ. ಅವನು ಮಾಡಿಕೊಂಡಿರುವ ವ್ಯತ್ಯಾಸ ತೋರುವುದು ರೂಪದಲ್ಲಿಯೇ ಹೊರತು ಭಾವ - ಭಾಷೆಗಳಲ್ಲಲ್ಲ. ಇದಕ್ಕೆ ನಿದರ್ಶನ ಅವನ 'ಬಸವರಾಜ ದೇವರ ರಗಳೆ' ಮತ್ತು 'ಮಹಾದೇವಿಯಕ್ಕನ ರಗಳೆ'.

ಬಸವರಾಜದೇವರ ರಗಳೆ'ಯಲ್ಲಿ ಕಳ್ಳರು ಆಕಳುಗಳನ್ನು ಕದ್ದೊಯ್ಯುವ ಸಂದರ್ಭ ಬರುತ್ತದೆ. ಆಗ ಕವಿ 'ಸಂಗನೆ ಉಂಬವಂ ಸಂಗನೇ ಉಡುವವಂ' ಎಂಬುದಾಗಿ ಬಳಸುತ್ತಾನೆ. ಈ ಸಾಲನ್ನು –

ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ

-----------------------------------------------

ಅಲ್ಲಿ ಉಂಬಡೆ ಸಂಗ ಇಲ್ಲಿ ಉಂಬಡೆ ಸಂಗ
ಕೂಡಲ ಸಂಗಮದೇವ ಏಕೋ ಭಾವ [30]

ಎಂಬ ಬಸವಣ್ಣನ ವಚನದ 'ಅಲ್ಲಿ ಉಂಬಡೆ ಸಂಗ ಇಲ್ಲಿ ಉಂಬಡೆ ಸಂಗ' ಎಂಬ ಸಾಲಿನೊಡನೆ ಸಮೀಕರಿಸಿ ನೋಡಿದಾಗ ಹರಿಹರ ಇದೇ ವಚನದಿಂದ ಪ್ರೇರಣೆ ಪಡೆದು ರಚಿಸಿದ್ದಾನೆ ಎಂಬುದನ್ನು ಸೂಚ್ಯವಾಗಿ ಗಮನಿಸಬಹುದು. ಬಸವಣ್ಣನ ಇನ್ನೊಂದು ವಚನ -

ದೇವ ದೇವಾ, ಬಿನ್ನಪ ಅವಧಾರು;
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರೆಲ್ಲರನೊಂದೆ ಎಂಬೆ
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರೆಲ್ಲರನೊಂದೆ ಎಂಬೆ
ಹೀಂಗೆಂದು ನಂಬೂದೆನ್ನ ಮನ
ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹವುಳ್ಳಡೆ
ಹಲುದೋರೆ ಮೂಗ ಕೊಯಿ, ಕೂಡಲ ಸಂಗಮ ದೇವಾ[31]

ಹೀಗೆ ಬರುತ್ತದೆ. ಈ ವಚನದಿಂದ ಹರಿಹರ ಪ್ರಭಾವಿತನಾಗಿರುವುದು ಅವನ ಬಸವರಾಜದೇವರ ರಗಳೆಯ ಸಂಬೋಳಿನಾಗಿದೇವನ ಪ್ರಸಂಗದಿಂದ ತಿಳಿದುಬರುತ್ತದೆ. ಈ ಪ್ರಸಂಗವನ್ನು ಚಿತ್ರಿಸುವಾಗ ಹರಿಹರ "ದೇವ, ಭಕ್ತ ದೇಹಿಕ ದೇವ, ನೀಂ ಪೊಕ್ಕಲ್ಲಿ ಪೊಕ್ಕಪರೊಕ್ಕುವಂ

ಕೊಂಡೆ, ನೀನಿರ್ದಕುಲವೆ ಸತ್ಕುಲಂ ನಿನ್ನಿಂದ ನಾಂ ಕುಲಜನೆ ಕೂಡಲ ಸಂಗ ಕರುಣಿಸು
ಗೀತಮಂ ಪಾಡುತುಂ"[32] ಎಂಬ ಗದ್ಯವನ್ನು ರಚಿಸುತ್ತಾನೆ. "ಪ್ರಾರಂಭದಲ್ಲಿ ವಚನ
ತೋರುವ ಇದು ಮುಂದೆ ವಚನದ ಭಾವವನ್ನು ಸಾಕ್ಷಾತ್ಕರಿಸಿಕೊಂಡಿದೆ. ಅಲ್ಲದೇ 'ಕ
.ಸಂಗ' ಎಂಬ ಅಂಕಿತವೂ ಇಲ್ಲಿ ಸ್ಪಷ್ಟವಾಗಿ ಉಕ್ತವಾಗಿದ್ದು ವಚನದಿಂದಲೇ
ಪ್ರಭಾವಿತವಾಗಿರುವುದನ್ನು ಸ್ಪಷ್ಟಪಡಿಸುತ್ತದೆ."[33]

ಮಹದೇವ ಶೆಟ್ಟಿಯ ಒಂದು ಪ್ರಸಂಗದಲ್ಲಿ - "ಬೇಡಿಬೇಡಿದ ಶರಣಂಗೆ ನೀಡದಿ
ತಲೆದಂಡ ಕೂಡಲ ಸಂಗ, ಅವಧಾರು"[34] ಎಂಬ ವಾಕ್ಯವೊಂದನ್ನು ಹರಿಹರ ಬಳಸಿದ
ಈ ವಾಕ್ಯದಲ್ಲಿ ಬಸವಣ್ಣನ –

**ತನುವಬೇಡಿದಡೀವೆ, ಮನವ ಬೇಡಿದಡೀವೆ**
**ಧನವ ಬೇಡಿದಡೀವೆ, ಬೇಡು ಬೇಡಲೆ ಹಂದೇ**[35]

ಎಂಬ ವಚನದ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು. ಇಲ್ಲಿ ಹರಿಹರ ಇಡೀ ವಚ
ಭಾವವನ್ನು ಹೊಸ ರೀತಿಯಲ್ಲಿ ಹೇಳಿದ್ದಾನೆ.

ಮಹಾದೇವಿಯಕ್ಕನ ವಚನಗಳಿಂದಲೂ ಹರಿಹರ ಪ್ರಭಾವಿತನಾಗಿ ರಗಳೆಯ
ರಚಿಸಿರುವುದು ಕಂಡುಬರುತ್ತದೆ. ಉದಾ:ಮಹಾದೇವಿಯಕ್ಕನು ಶ್ರೀ ಶೈಲಕ್ಕೆ ಹೋ
ಅಲ್ಲಿಗೂ ಬಂದ ಕೌಶಿಕ 'ನಾನು ಭಕ್ತನಾಗಿದ್ದೇನೆ ನನ್ನನ್ನು ಒಲಿ' ಎಂದು ಅವಳನ್ನು ಕೇಳಿಕೊ
ಪ್ರಸಂಗ.

ಈ ಪ್ರಸಂಗದಲ್ಲಿ 'ಬಿಟ್ಟೆಪೆನೆಂದೊಡಂ ಬಿಡದು ನಿನ್ನಯ ಮಾಯೆ' ಎಂದು ಮುಂತಾ
ಅವಳು ನುಡಿದಳೆಂದು ಹರಿಹರ ವರ್ಣಿಸುತ್ತಾನೆ. ಈ ವರ್ಣನೆ -

**ಬಿಟ್ಟೆನೆಂದಡೆ ಬಿಡದೀ ಮಾಯೆ**
**ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ**[36]

ಎಂಬ ಮಹಾದೇವಿಯಕ್ಕನ ಈ ವಚನಕ್ಕೆ ತೀರ ಹತ್ತಿರವಾಗಿದೆ.

ಮೇಲಿನ ಉದಾಹರಣೆಗಳು ಹರಿಹರ ವಚನಗಳಿಂದ ಹೇಗೆ ತನ್ನ ಕಾವ್ಯಕ್ಕೆ ವಸ್ತು
ಪಡೆದುಕೊಂಡಿದ್ದಾನೆ ಎಂಬುದನ್ನು ಸಾದರಪಡಿಸುತ್ತವೆ.

### 3.3.3 ಸಂಕೀರ್ಣ ರಗಳೆಗಳು

ಹರಿಹರ ಶರಣರ ಜೀವನ ಬರೆದು ಅವರ ಭಕ್ತಿಯ ಮಹಿಮೆಯನ್ನು ಕನ್ನಡ ನಾಡಿ
ಸೂರೆಗೊಳ್ಳುವುದರ ಜೊತೆಗೆ, ಪ್ರಕೃತಿ ಮತ್ತು ಧರ್ಮವನ್ನು ಕುರಿತ ಹಾಗೆಯೂ ಕೆಲವು
ಚಿಕ್ಕ ರಗಳೆಗಳನ್ನು ರಚಿಸಿದ್ದಾನೆ. ಇಂಥ ರಗಳೆಗಳು ಸುಮಾರು ಹನ್ನೆರಡು ಇದ್ದು, ಅವುಗಳ
'ಸಂಕೀರ್ಣ ರಗಳೆ'ಗಳು ಎಂದು ಕರೆಯಲಾಗಿದೆ. ಈ ಸಂಕೀರ್ಣ ರಗಳೆಗಳಲ್ಲಿ ಪ್ರಕೃತಿಯ

ಕುರಿತಂತೆ ಬರೆದದ್ದು ಕೇವಲ ಒಂದು ರಗಳೆ ಮಾತ್ರ. ಅದೇ ಪುಷ್ಪರಗಳೆ. ಅದನ್ನು ಬಿಟ್ಟರೆ ಉಳಿದೆಲ್ಲ ರಗಳೆಗಳು ಧರ್ಮ ಮತ್ತು ಇತರ ವಿಚಾರಗಳಿಗೆ ಸಂಬಂಧಪಟ್ಟ ವಸ್ತುವನ್ನು ಒಳಗೊಂಡಿವೆ.

ಪ್ರಕೃತಿಯನ್ನು ಕುರಿತಂತೆ ಹರಿಹರ ಬರೆದಿದ್ದು ಒಂದೇ ಒಂದು ರಗಳೆಯಾದರೂ ಅದು ಆತನ ಉತ್ಕೃಷ್ಟ ಕೃತಿಗಳಲ್ಲಿ ಒಂದು. ಅಷ್ಟೇ ಅಲ್ಲ ಕನ್ನಡ ಸಾಹಿತ್ಯದಲ್ಲಿಯೂ ಅದು ಮಹತ್ವವನ್ನು ಪಡೆದುಕೊಂಡಿದೆ.

"ಪ್ರಾತ:ಕಾಲದಲ್ಲಿ ಶಿವಪೂಜೆಗೆ ಹೂ ತರಲು ತೋಟಕ್ಕೆ ನಡೆದಾಗ, ಅಲ್ಲಿ ತನಗುಂಟಾದ ಭಾವಗಳನ್ನು ಕವಿ ಮೂಡಿಸಿದ್ದಾನೆ ಇಲ್ಲಿ. ಹರಿಹರನ ಭಕ್ತಿಯ ಉತ್ಸಾಹ, ಪುಷ್ಪಗಳನ್ನು ಕಂಡು ಅವನಿಗಾದ ಆನಂದ, ಆ ಹೂಗಳ ಬಗ್ಗೆ ಅವನಲ್ಲಿ ಮೂಡಿದ ಭಾವ - ಇವು ಮೂರೂ ಅವಿರುದ್ಧವಾಗಿ ಸೇರಿ ಒಂದು ವಿಶಿಷ್ಟ ಅನುಭವವನ್ನು ಹರಿಹರನಲ್ಲಿ ಪ್ರಚೋದಿಸುವ ಪರಿಯನ್ನಿಲ್ಲಿ ಕಾಣುತ್ತೇವೆ."[37]

ಹೂವಿನ ವರ್ಣನೆಯಲ್ಲಂತೂ ಹರಿಹರನ ಸೌಂದರ್ಯ ದೃಷ್ಟಿ ಅನುಪಮವಾದದ್ದು. ಈ ರಗಳೆ ಒಂದು ತೆರನಾದ ಪುಷ್ಪ ವಿಮರ್ಶೆ ಎನ್ನಬಹುದು. ಇಲ್ಲಿ ನೂರಾರು ಬಗೆಯ ಪುಷ್ಪಗಳನ್ನು ಕವಿ ವರ್ಣಿಸುತ್ತಾನೆ. ಬೆಲ್ಲವತ್ತ, ಕಕ್ಕೆ, ಕೇದಗೆ, ಸಂಪಿಗೆ, ಜಾಜಿ, ಮರುಗ, ಮಡಿವಾಳ, ಹೊನ್ನೆ, ನೈದಿಲೆ, ಕಣಗಿಲೆ, ಸೇವಂತಿಗೆ, ಮಲ್ಲಿಗೆ .... ಹೀಗೆ ಒಂದೊಂದು ಹೂವಿನಲ್ಲೂ ಆತನಿಗೆ ಸಮಾನ ಗೌರವ, ಭಾವ. ಈ ಹೂಗಳನ್ನು ಕಂಡರೆ ಅವನಿಗೆ ಶಿವನನ್ನು ಕಂಡಷ್ಟೇ ಸಂತೋಷ. ಪ್ರತಿ ಹೂವಿನಲ್ಲೂ ಆತ ಶಿವನನ್ನು ಕಾಣುತ್ತಾನೆ. ಹಾಗಾಗಿ ಅವನಿಗೆ ಹೂ ಒಂದು ನಿರ್ಜೀವ ವಸ್ತುವಾಗಿ ಕಾಣಲೇ ಇಲ್ಲ. ಅದೂ ಕೂಡ ಒಂದು ಜೀವ ವಸ್ತುವಿದ್ದಂತೆ!

ಮುಂಬೆಳಗಿನಲ್ಲೇ ಎದ್ದು ಒಂದೊಂದು ಹೂಗಿಡದ ಬಳಿಗೂ ತೆರಳಿ ಶಿವನ ಮುಡಿಗೆ ಹೂಗಳನ್ನು ಕರುಣಿಸುವಂತೆ ಬೇಡುತ್ತ ನಡೆಯುವ ದೃಶ್ಯ ಪುಳಕಗೊಳಿಸುವಂಥದ್ದು. ಆತ ಹೂ ತೋಟದಲ್ಲಿ ಬೆಲ್ಲವತ್ತ, ಕಕ್ಕೆ ಹೂಗಳನ್ನು ಕಂಡು 'ಶರಣು' 'ನಮೋ' ಎನ್ನುತ್ತಾನೆ. ದುಂಬಿ ಮುಟ್ಟದ, ರವಿ ಕಿರಣ ಸೋಂಕದ ಸೇವಂತಿಗೆಯ ಹತ್ತಿರ ಬಂದು 'ಪರಶಿವಂಗೋಲೈಪ ಪೂವ ನೀಡೌ' ಎಂದು ಬೇಡುತ್ತಾನೆ. ಮಲ್ಲಿಗೆಯ ಹತ್ತಿರ ಬಂಧು ಅದನ್ನು 'ಕಂಪಿನ ನಿಧಿ' ಎಂದು ಬಣ್ಣಿಸಿ ಪಡೆಯುತ್ತಾನೆ. ಜಾಜಿಯ ಹತ್ತಿರ ಬಂದು 'ಜಾತಿ ನೀನೇ ಸಕಲ ಪುಷ್ಪ ಜಾತಿಗೆ ಜಾತಿ' ಎಂದು ಹೊಗಳಿ ಅದರ ಕುಸುಮಗಳನ್ನು ಪಡೆಯುತ್ತಾನೆ.

ಹೀಗೆ ಪ್ರತಿಯೊಂದು ಹೂಗಳನ್ನು ಪಡೆದು ತುಂಗಾ ತೀರದ ಬಳಿಗೆ ಬರುತ್ತಾನೆ. ತುಂಗಾತೀರದಲ್ಲಿ ನಳನಳಿಸಿ ಬೆಳೆದ 'ಬಾಲಚೂತ'ವೊಂದು ಮೆರೆಯುತ್ತಿರಲು, ಆ ವೃಕ್ಷದ ಕೆಳಗೆ ಬಾಳೆಎಲೆ ಹಾಸಿ, ಅದರ ಮೇಲೆ ಹೂಗಳನ್ನು ಸುರಿಯುತ್ತಾನೆ. ಸನಿಹದ ಸರೋವರದಲ್ಲಿ ಬೆಳೆದ ಸರಸಿಜದ ಸೂತ್ರಗಳನ್ನು ತಂದು ಮಾಲೆಗಟ್ಟಲು ಅಣಿಯಾಗುತ್ತಾನೆ. ಆ ಹೊತ್ತಿಗೆ ಭ್ರಮರಗಳು ಹೂವಿಗಾಗಿ ಧಾಳಿ ಮಾಡುತ್ತವೆ. ಆ ಸಂದರ್ಭದಲ್ಲಿ ಸಂಪಿಗೆಯ ಹೂವನ್ನು ಅವು ಬರುವ ದಾರಿಯಲ್ಲಿ ಇಡುವ ಮೂಲಕ ದುಂಬಿಗಳು ಬರದಂತೆ ಮಾಡುತ್ತಾನೆ. ಸುಂದರವಾದ ಹೂಮಾಲೆ ಕಟ್ಟಿ ಶಿವಪೂಜೆಯಲ್ಲಿ ನಿರತನಾಗುತ್ತಾನೆ.

ಇಲ್ಲಿ ಹರಿಹರನು ವರ್ಣಿಸುವ ಮುಂಬೆಳಗು, ದುಂಬಿಗಳ ಝೇಂಕಾರ, ತುಂಗಾತೀರದಲ್ಲಿ

ನಳನಳಿಸುವ 'ಬಾಲಚೂತ'ದ ಗಿಡ, ಸುಗಂಧವನ್ನು ಸೂಸುವ ಹಲವು ಜಾತಿಯ ಹೂವು ಎಲ್ಲವೂ ಅಸ್ವಾದ್ಯದೃಶವಾದವುಗಳಾಗಿವೆ.

'ಪುಷ್ಪ ರಗಳೆ'ಯನ್ನು ಬಿಟ್ಟರೆ ಪ್ರಕೃತಿಯನ್ನು ಕುರಿತಂತೆ ಹೇಳುವ ಇನ್ನೊಂದು ರಗಳೆ 'ಪಂಪಾಕ್ಷೇತ್ರದ ರಗಳೆ'. ಈ ರಗಳೆಯಲ್ಲಿ ಹಂಪೆಯ ಮಹತ್ವ ವಿವರಿಸಲ್ಪಟ್ಟಿದೆ. ಅಂದಿನ ಹಂಪೆಯ ಭೌಗೋಳಿಕ ಸ್ವರೂಪದ ಪರಿಚಯ ಇಲ್ಲಿ ದೊರೆಯುತ್ತದೆ. ಹಂಪೆಯನ್ನು ವ್ಯಾಪಿಸಿದ್ದ ಅಸಂಖ್ಯಾತ ದೇವಸ್ಥಾನ, ತೀರ್ಥ ಮತ್ತು ಪವಿತ್ರ ಸ್ಥಳಗಳನ್ನು ಹರಿಹರನು ಸವಿವರ ಮತ್ತು ಕರಾರುವಾಕ್ಕಾಗಿ ಚಿತ್ರಿಸಿದ್ದಾನೆ.

ಕವಿಯ ಜೀವಿತಾವಧಿಯಲ್ಲಿ ಹಲವು ಧರ್ಮಗಳು ಪ್ರಚಾರದಲ್ಲಿದ್ದುವು. ಅವುಗಳಲ್ಲಿ ವೀರಶೈವ ಧರ್ಮವೂ ಒಂದು. ಹರಿಹರನ ಅನೇಕ ರಗಳೆಗಳು ವೀರಶೈವ ಧರ್ಮದ ಪ್ರತಿಪಾದನೆ ಮಾಡುತ್ತವೆ. ಈ ಪ್ರತಿಪಾದನೆ ಕವಿಯ ಸಂಕೀರ್ಣ ರಗಳೆಗಳಲ್ಲಿ ಇತರ ಎಲ್ಲ ರಗಳೆಗಳಿಗಿಂತ ಭಿನ್ನವಾಗಿದೆ. ಇಲ್ಲಿ ಆ ಧರ್ಮದ ಆಚರಣೆ ಮತ್ತು ಅವುಗಳ ಮಹತ್ವವನ್ನು ನೇರವಾಗಿಯೇ ತಿಳಿಸುತ್ತಾನೆ. ಕಥಾ ಕಾವ್ಯದಲ್ಲಿ ಪಾತ್ರಗಳ ಮೂಲಕ ವ್ಯಕ್ತವಾಗುವ ಧಾರ್ಮಿಕ ನಂಬಿಕೆ ಇಲ್ಲಿ ಸ್ಪಷ್ಟವಾಗಿ ಪ್ರಕಟಗೊಂಡಿದೆ.

ಪಂಚಾಕ್ಷರಿ ಅಷ್ಟಾವರಣಗಳಲ್ಲಿ ಒಂದು. ಶಿವಭಕ್ತರಿಗೆ ಪಂಚಾಕ್ಷರಿ ಮಂತ್ರವು ಅತ್ಯಂತ ಮಹತ್ವವಾದದ್ದು. ಆ ಮಹತ್ವವನ್ನು ಕವಿ ಈ ರಗಳೆಯಲ್ಲಿ ವಿವರಿಸುತ್ತಾನೆ. ಶಿವಭಕ್ತಿ ಮಹಿಮಾ ರಗಳೆಯಲ್ಲಿ ಶಿವನ ಮಹಿಮೆಯನ್ನು ಬಣ್ಣಿಸಲಾಗಿದೆ. ಶಿವನು ಶರಣರ ಮೂಲಕ ಮೆರೆದ ಭಕ್ತಿಯ ಮಹಾತ್ಮೆಯು ಇಲ್ಲಿ ನಿರೂಪಿತವಾಗಿದ್ದು, ಅದಕ್ಕೆ ಪೋಷಕವಾಗಿ ಪುರಾಣ ಪುರಾತನರ ಹಾಗೂ ನೂತನರ ಚರಿತ್ರೆಯಿಂದ ದೃಷ್ಟಾಂತಗಳನ್ನು ಕೊಟ್ಟಿದ್ದಾನೆ. ಎಲ್ಲ ದೇವತೆಗಳಿಗಿಂತಲೂ ಶಿವನೇ ಶ್ರೇಷ್ಠ ಎಂಬುದನ್ನು ಕವಿ ಪುರಾಣದ ಘಟನೆಗಳ ಮೂಲಕ ವಿವರಿಸುತ್ತಾನೆ. "ಲಿಂಗಾರ್ಚನೆಯ ರಗಳೆಯಲ್ಲಿ ಹರಿಹರ ಕ್ರಮಬದ್ಧವಾಗಿ ವಿರೂಪಾಕ್ಷನ ಪೂಜಾವೈಭವವನ್ನು ಭಕ್ತಿ ಭಾವದಿಂದ ವಿವರಿಸಿದ್ದಾನೆ. ನಡುನಡುವೆ ಶಿವನ ಮಹಿಮೆಗಳನ್ನು ಶಿವಭಕ್ತರ ಕಥೆಗಳ ಮೂಲಕ ನೆನಪಿಸಲಾಗಿದೆ. ಬಹಳಷ್ಟು ಜನ ಪುರಾತನ ಮತ್ತು ನೂತನ ಶಿವಶರಣರ ಪ್ರಸ್ತಾಪ ಇಲ್ಲಿ ಬಂದಿದೆ. 'ವಿಭೂತಿ ರಗಳೆ' ಮತ್ತು 'ರುದ್ರಾಕ್ಷಿ ರಗಳೆ'ಗಳ ಗುಣ ಧರ್ಮ ಒಂದೇ ಆಗಿದೆ. ಅವೆರಡರ ಮಹತ್ವ, ಪಾವಿತ್ರ್ಯ, ಶಕ್ತಿಗಳನ್ನು ಅತ್ಯುತ್ಸಾಹದಿಂದ ವರ್ಣಿಸಲಾಗಿದೆ. ಪುರಾಣ ಘಟನೆಗಳನ್ನು ಉದಾಹರಿಸಿ, ಅವುಗಳ ಯೋಗ್ಯತೆಯನ್ನು ಹರಿಹರ ಸಮರ್ಥಿಸಿಕೊಂಡಿದ್ದಾನೆ. 'ನಮ:ಶಿವಾಯ ರಗಳೆ' ಶಿವನನ್ನು ಅನನ್ಯ ಭಕ್ತಿ ಭಾವದಿಂದ ವರ್ಣಿಸುವ ಪ್ರಾರ್ಥನಾರೂಪದ ಸುಂದರ ರಚನೆ"[38]ಯಾದರೆ, 'ಪ್ರಾರ್ಥನ ರಗಳೆ'ಯು ವಿರೂಪಾಕ್ಷನ ಸ್ತುತಿಗೆ ಮೀಸಲಾದ ರಗಳೆಯಾಗಿದ್ದು, ಸಹಸ್ರ ನಾಮದ ಮಾದರಿಯಲ್ಲಿ ಶಿವನ ಲೀಲಾ ವಿಲಾಸಗಳನ್ನೆಲ್ಲ ಉಲ್ಲೇಖಿಸಲಾಗಿದೆ. 'ಜಯ ರಗಳೆ' ಮಂಗಳ ಗೀತೆಯ ಸ್ವರೂಪದ ರಗಳೆಯಾಗಿದೆ.

## 3.4 ಪವಾಡ ಹಾಗೂ ಜನವದಂತಿಗಳು

ವೀರಶೈವ ಮಹಾಪುರುಷರ ಚರಿತೆ ಮತ್ತು ಇದೇ ಬಗೆಯ ಇತರ ಧಾರ್ಮಿಕ ಗ್ರಂಥಗಳಲ್ಲಿ

ಕೆಲವು ಮಹಿಮಾಪುರುಷರ 'ಅಲೌಕಿಕ ಮಹಿಮೆಯ' ಪ್ರದರ್ಶನಗಳು ಕಂಡುಬರುತ್ತವೆ. ಇವುಗಳನ್ನೇ ಪವಾಡ ಎಂದು ಕರೆಯುತ್ತೇವೆ. ಇಂಥ ಪವಾಡಗಳಿಂದ ಮಹಾಪುರಷರ ಅಲೌಕಿಕ ಸಾಧಕ ಬದುಕನ್ನು ಚಿತ್ರಿಸುವುದು ಸಾಧ್ಯವಾಗುತ್ತದೆ. ಈ ಪವಾಡಗಳು ಬಳಕೆಯಾಗುವುದೇ "ಮುಖ್ಯವಾಗಿ ನಾಯಕನ ವ್ಯಕ್ತಿತ್ವದ ಹಿರಿಮೆಯನ್ನು ಪ್ರಕಾಶಗೊಳಿಸು ವುದಕ್ಕೆ; ಮತ್ತು ಆ ಮೂಲಕ ಪ್ರತಿವಾದಿಗಳ ಸಂದೇಹವನ್ನು ಬಗೆಹರಿಸಿ ನಾಯಕನಲ್ಲಿಯೂ ಅವನು ಪ್ರತಿಪಾದಿಸುವ ತತ್ವದಲ್ಲಿಯೂ ನಂಬಿಕೆಯನ್ನುಂಟುಮಾಡುವುದಕ್ಕೆ."[39] ಅಂಥ ಕಾರ್ಯವನ್ನು ಇವು ಸಮರ್ಪಕವಾಗಿ ನಿರ್ವಹಿಸುತ್ತವೆ. ಪವಾಡಗಳ ಹಾಗೆಯೇ ಜನವದಂತಿಗಳೂ ಕೂಡ. ಜನವದಂತಿ ಎಂದರೆ ಬಾಯಿಯಿಂದ ಬಾಯಿಗೆ ಬಂದಂಥವು ಎಂದರ್ಥ. ಮಹಾಪುರುಷರ ಕಥೆಗಳು ಕಾಲದಿಂದ ಕಾಲಕ್ಕೆ ಬಾಯಿಯಿಂದ ಬಾಯಿಗೆ ತಲುಪುತ್ತಾ ಹೋದಂತೆ, ರೂಪ ಪಡೆಯುತ್ತಾ ಹೋಗುತ್ತವೆ. ಅಂತಿಮವಾಗಿ ಅವುಗಳ ಮೂಲರೂಪವೇ ಮಾಯವಾಗಿ ದೈವೀಕರಣಗೊಂಡುಬಿಡುತ್ತವೆ. ಇಂಥ ಜನವದಂತಿಗಳೂ ಮಹಿಮಾ ಪುರುಷರ ಅಲೌಕಿಕ ಮಹಿಮೆಯ ಪ್ರದರ್ಶನದಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಹಾಗಾಗಿ ಪವಾಡ ಮತ್ತು ಜನವದಂತಿಗಳು ಹೆಚ್ಚು ಕಡಿಮೆ ಜೊತೆ ಜೊತೆಯಲ್ಲಿಯೇ ಇರುವಂಥವು.

ಇಂಥ, ಅನೇಕ ಪವಾಡ ಮತ್ತು ಜನವದಂತಿಗಳು ಹರಿಹರನ ಕಾವ್ಯದಲ್ಲಿ ಸೇರಿಹೋಗಿವೆ. ಅಲ್ಲಿ ಯಾವುದು ಪವಾಡ ಯಾವುದು ಜನವದಂತಿ ಎಂದು ವಿಂಗಡಿಸಿ ಹೇಳುವುದೂ ಕಷ್ಟವಾಗುತ್ತದೆ. ಏಕೆಂದರೆ ಪವಾಡಗಳು ಜನವದಂತಿಗಳೂ ಆಗಿರಬಹುದು. ಉದಾ : 'ಬಸವರಾಜದೇವರ ರಗಳೆ'ಯಲ್ಲಿ ಬರುವ ಕೇದಗೆ ಹೂವಿನ ಪ್ರಸಂಗ :

ಒಮ್ಮೆ ಬಿಜ್ಜಳ ರಾಜನ ಸಭೆಯಲ್ಲಿ ಬಸವಣ್ಣನು ಕೇದಗೆ ಹೂವನ್ನು ಶಿವಾರ್ಪಣ ಮಾಡುತ್ತಾನೆ. ಅದು ಶಿವಾಗಮಕ್ಕೆ ಸಲ್ಲದೆಂದು ನಾರಾಯಣ ಭಟ್ಟ ವಿರೋಧಿಸುತ್ತಾನೆ. ಆಗ ಬಸವಣ್ಣ ಎಲೆ "ಮರುಳ ವಿಪ್ರ, ಎಲೆ ದ್ವಿಜಾಧಮಾ ಎಲೆ ಕರ್ಮದ ಕಡುಜಡನೆ ದೇವಂ ಭಕ್ತರ್ ಕೊಟ್ಟೊಡೆ ಕೊಳ್ಳ"[40]ನೆಂದು ಹೇಳಿ, ತನ್ನ ಮಾತನ್ನು ದೃಢಪಡಿಸುವುದಕ್ಕಾಗಿ ಅಕ್ಕಪಕ್ಕ ದಲ್ಲಿದ್ದ ಮಾಹೇಶ್ವರರ ಕಕ್ಷಾಪುಟಗಳ ಸೆಜ್ಜೆಯನ್ನು ತೆರೆದು ತೋರಿಸುತ್ತಾನೆ. ಎಲ್ಲ ಲಿಂಗಗಳ ಶಿರ[illegible]ಯೂ ಬಸವಣ್ಣ ಅರ್ಪಿಸಿದ ಕೇದಗೆಯ ಎಸಳನ್ನು ಹೋಲುವ ಎಸಳುಗಳಿರುತ್ತವೆ.

ಅದೇ ರಗಳೆಯಲ್ಲಿ ಬರುವ ಇನ್ನೊಂದು ಪ್ರಸಂಗ ಬದನೆಕಾಯಿ ಲಿಂಗವಾದದ್ದು. ಒಮ್ಮೆ ಬಸವಣ್ಣನ ಜಂಗಮ ಭಕ್ತಿಯನ್ನು ಪರೀಕ್ಷಿಸುವ ಸಲುವಾಗಿ ಕೆಲವು ಕುಹಕಿಗಳು ಜಂಗಮ ವೇಷ ಧರಿಸಿ ಲಿಂಗಕ್ಕೆ ಬದಲಾಗಿ ಬದನೆಕಾಯಿ ಕಟ್ಟಿಕೊಂಡು ಬಂದಿರುತ್ತಾರೆ. ಆದರೆ ಬಸವಣ್ಣನ ಭಕ್ತಿಯ ಮಹಿಮೆಯಿಂದ ಅವರು ಕಟ್ಟಿಕೊಂಡಿದ್ದ ಬದನೆಕಾಯಿಗಳೂ ಲಿಂಗವಾಗುತ್ತವೆ. ಇಂಥ ಹಲವು ಪವಾಡಗಳು 'ಬಸವರಾಜದೇವರ ರಗಳೆ'ಯಲ್ಲಿ ಬರುತ್ತವೆ.

'ರೇವಣಸಿದ್ಧೇಶ್ವರನ ರಗಳೆಯಲ್ಲಿಯೂ ಅನೇಕ ಪವಾಡಗಳು ಬರುತ್ತವೆ. ಒಟ್ಟು ಕತೆಯೇ ಪವಾಡಗಳಿಂದ ತುಂಬಿಹೋಗಿದ್ದು ಅವುಗಳಲ್ಲಿ ಒಂದು ಪವಾಡವನ್ನು ಇಲ್ಲಿ ಉದಾರಿಸ ಬಹುದು. ಒಮ್ಮೆ ವೈಷ್ಣವನೆನಿಸಿದ ಚೋಳನೊಬ್ಬ ವಿಷ್ಣು ಪ್ರತಿಮೆಯೊಂದನ್ನು ತಂದು ಆ ಪ್ರತಿಮೆಯನ್ನು ಬಾಯ್ದೆರೆದು ಮಾತನಾಡಿಸುವಂತೆ ಮಾಡುವ ಸಮರ್ಥನನ್ನು ಹುಡುಕುತ್ತಿರು

ತ್ತಾನೆ. ಆಗ ಅವನಿಗೆ ರೇವಣಸಿದ್ಧನ ಬಗೆಗೆ ತಿಳಿಯುತ್ತದೆ. ರೇವಣಸಿದ್ಧನಿರುವಲ್ಲಿಗೆ ಹೋಗಿ ಅವನನ್ನು ವಿಷ್ಣು ಪ್ರತಿಮೆಯನ್ನು ನುಡಿಸುವಂತೆ ಕೇಳುತ್ತಾನೆ. ಆಗ ಚೋಳನು ನಿರ್ವಹಿಸಿದ ಕಾರ್ಯವನ್ನು ಪೂರೈಸಲು ಸಿದ್ಧನಾದ ರೇವಣಸಿದ್ಧ, ವಿಷ್ಣು ಪ್ರತಿಮೆ ಇದ್ದಲ್ಲಿಗೆ ಬಂದು ಆ ಪ್ರತಿಮೆಯ ಮೇಲೆ ತನ್ನ ವೀರ್ಯವನ್ನು ತೆಗೆದು ಮೂರ್ಧ್ನಿಘ್ರಾಣ ಗೊಳಿಸುತ್ತಾನೆ. ಕೂಡಲೇ ವಿಷ್ಣುಪ್ರತಿಮೆ ಮಾತನಾಡುತ್ತದೆ.

'ಹಾವಿನಹಾಳ ಕಲ್ಲಯ್ಯನ ರಗಳೆ'ಯಲ್ಲಿ ಕಲ್ಲಯ್ಯ ಶುನಕನಿಂದ ವೇದ ಪಠನ ಮಾಡಿಸಿದ ಪ್ರಸಂಗ, 'ಮುಸುಟೆಯ ಚೌಡಯ್ಯನ ರಗಳೆ'ಯಲ್ಲಿ ಎಂದೋ ಸತ್ತಿದ್ದ ಗೂಳಿಯನ್ನು ಬದುಕಿಸಿದ ಪ್ರಸಂಗ, 'ಬಾಹೂರ ಬೊಮ್ಮಯ್ಯನ ರಗಳೆ'ಯಲ್ಲಿ ಜೋಳದ ರಾಶಿಯಿಂದ ಓಂ ಎಂಬ ಧ್ವನಿಯನ್ನು ಕೇಳಿಸಿ 'ಶಂಕರಗಂಡ' ಎಂಬ ಅಪರ ಹೆಸರನ್ನು ಸಮರ್ಥಿಸಿದ ಸಂದರ್ಭ, 'ತೆಲುಗು ಜೊಮ್ಮಯ್ಯನ ರಗಳೆ'ಯಲ್ಲಿ ಪುರಾಣದ ಭಟ್ಟನನ್ನು ಕೊಂದು ಮತ್ತೆ ಬದುಕಿಸಿದ ಪ್ರಸಂಗ, ಹೇರೂರ ಹೆಣ್ಣಿನ ರಗಳೆಯಲ್ಲಿ ಹೆಣ್ಣು ಗಂಡಾದ ಪ್ರಸಂಗ - ಮುಖ್ಯವಾಗಿ ಇವುಗಳನ್ನು ಹೇಳಬಹುದು.

ಹೀಗೆ ಪ್ರತಿಯೊಂದು ರಗಳೆಯಲ್ಲೂ ಇಂಥ ಹಲವಾರು ಪವಾಡಗಳು ಕಂಡುಬರುತ್ತವೆ. ಇವೆಲ್ಲವೂ ಆಯಾಯ ಕಥಾನಾಯಕರ ಮಹಿಮೆಯನ್ನು ಪ್ರಕಾಶಿಸುವ ಸಂಕೇತವಾಗಿ ಕೆಲಸಮಾಡುತ್ತವೆ

## 3.5 ಕಲ್ಪನೆ ಮತ್ತು ಉತ್ಪ್ರೇಕ್ಷೆ

ರಗಳೆಯ ಕಥೆಗಳು ಹನ್ನೆರಡನೆ ಶತಮಾನದಲ್ಲಿ ಬಾಳಿದ ಶಿವಶರಣರ ವಾಸ್ತವದ ಕಥೆಗಳು ಎಂಬುದೇನೋ ನಿಜ. ಆದರೆ ಕವಿ ಆ ವಾಸ್ತವ ಬದುಕನ್ನು ಚಿತ್ರಿಸುವ ಸಂದರ್ಭದಲ್ಲಿ ಕಥೆಯ ನಡುನಡುವೆ ತನ್ನ ಅದ್ಭುತ ಕಲ್ಪನೆಯನ್ನು ಬೆಸೆಯುವ ಮೂಲಕ ಕಥೆ ಮತ್ತಷ್ಟು ರಂಜಿಸುವಂತೆ ಮಾಡುತ್ತಾನೆ. ಇಂಥ ಕಲ್ಪನೆಗಳನ್ನು ಸೇರಿಸುವ ಮೂಲಕ ಕಥಾನಾಯಕನ ವ್ಯಕ್ತಿತ್ವವನ್ನು ಬೆಳಗುತ್ತಾನೆ. ಇದೇ ಕಲ್ಪನೆಗಳು ಕೆಲವು ಕಡೆ ಉತ್ಪ್ರೇಕ್ಷೆಯಾಗಿಯೂ ಆತನ ಕಾವ್ಯದಲ್ಲಿ ಕಂಡುಬರುತ್ತವೆ. ಒಟ್ಟಿನಲ್ಲಿ ಈ ಕಲ್ಪನೆ ಮತ್ತು ಉತ್ಪ್ರೇಕ್ಷೆಗಳೆರಡೂ ಹರಿಹರನ ಕಾವ್ಯ ಸೌಂದರ್ಯ ಹೆಚ್ಚಿಸುವಲ್ಲಿ ಮಹತ್ವದ ಕಾರ್ಯ ನಿರ್ವಹಿಸುತ್ತವೆ.

ಕಥಾನಾಯಕನನ್ನು ಬಿಟ್ಟರೆ ರಗಳೆಗಳಲ್ಲಿ ಕಾಣಿಸಿಕೊಳ್ಳುವ ಎರಡನೆ ಬಹು ಮುಖ್ಯ ಪಾತ್ರ ಶಿವ. ಈ ಶಿವನ ಪಾತ್ರ ಸಂಪೂರ್ಣವಾಗಿ ಹರಿಹರನ ಕಲ್ಪನೆಯಿಂದ ಬಂದಿದ್ದು. ಹಾಗೆಯೇ ಕಥಾನಾಯಕ ಕೈಲಾಸದಲ್ಲಿರುವುದು, ಅಲ್ಲಿ ಮಾಡಿದ ತಪ್ಪಿನಿಂದ ಭೂಮಿಯಲ್ಲಿ ಹುಟ್ಟುವುದು, ಮತ್ತೆ ಭೂಮಿಯಲ್ಲಿ ತಮ್ಮ ಸಾಧನೆಗೈದು ಕೈಲಾಸಕ್ಕೆ ಹೋಗುವುದು, ಕೈಲಾಸಕ್ಕೆ ಹೋಗುವಾಗ ಶಿವನೋ, ಪಾರ್ವತಿಯೋ ಅಥವಾ ಶಿವನ ಗಣಸದಸ್ಯರೋ ಬಂದು ಭಕ್ತನನ್ನು ಕೈಲಾಸಕ್ಕೆ ಕೊಂಡಯ್ಯುವುದು, ಅಲ್ಲಿ ಭಕ್ತನನ್ನು ಪರಿಚಯಿಸಿ ಗಣ ಪದವಿ ನೀಡುವುದು– ಇವುಗಳೆಲ್ಲ ಹರಿಹರನ ಸ್ವಂತ ಕಲ್ಪನೆಯಿಂದ ಮೂಡಿಬಂದಿವೆ. ಹಾಗೆಯೇ ಭಕ್ತನ ಪರೀಕ್ಷೆಯ ಸಂದರ್ಭದಲ್ಲಿ ಶಿವ ಧರಿಸುವ ವಿವಿಧ ವೇಷಗಳು ಕೂಡ ಕವಿಯ ಕಲ್ಪನೆಗಳೇ ಆಗಿವೆ. 'ಬಸವರಾಜದೇವರ ರಗಳೆ'ಯಲ್ಲಿ— ಬಸವಣ್ಣನು ಶಿವಾಲಯದಲ್ಲಿ ಮಲಗಿರುವಾಗ ಶಿವ ಅವನ ಕನಸಿನಲ್ಲಿ

ಕಾಣಿಸಿಕೊಂಡು ಮಾರ್ಗದರ್ಶನ ನೀಡಿದ್ದು ಮತ್ತು ಹದಿನಾರರ ಹರೆಯದವನಾಗಿ ಬಂದು ಬಸವಣ್ಣನ ಪತ್ನಿಯನ್ನು 'ಎಲೆ ಬಸವರಾಜ ಹೆಂಗೂಸಿಲ್ಲದೆ ಎಂದೂ ಇದ್ದುದಿಲ್ಲ' ಎಂದು ಬಯಸಿದ್ದು, 'ಮೈಜಕವ್ವೆಯ ರಗಳೆ'ಯಲ್ಲಿ— ಭಿಕ್ಷುಕನ ವೇಷ ಹಾಕಿಬರುವುದು, 'ಸುರಿಗೆಯ ಚೌಡಯ್ಯನ ರಗಳೆ'ಯಲ್ಲಿ— ಚೌಡಯ್ಯನ ಕನಸಿನಲ್ಲಿ ಬಂದು 'ಹಸಿದೆನೆಲೆ ಮಗನೆ ಹಸಿದೆಂ ಕಂದ' ಎನ್ನುವುದು, 'ಶಂಕರ ದಾಸಿಮಯ್ಯನ ರಗಳೆ'ಯಲ್ಲಿ— ಶಂಕರ ದಾಸಿಮಯ್ಯನ ಕನಸಿನಲ್ಲಿ ಇಂದುಕಳೆ, ಜೆಡೆ, ಪುಲಿದೊವಲು ಮತ್ತು ಭಸಿತವನ್ನು ಧರಿಸಿದಂತೆ ಕಾಣಿಸಿಕೊಳ್ಳುವುದು - ಹೀಗೆ ಇನ್ನೂ ಹಲವಾರು ಕಲ್ಪನೆಗಳು ರಗಳೆಗಳಲ್ಲಿ ಬರುತ್ತವೆ.

ಮೇರೆ ಮೀರಿದ ಹರಿಹರನ ಈ ಕಲ್ಪನೆಗಳು ಉತ್ಪ್ರೇಕ್ಷೆಯಾಗಿಬಿಡುವುದೂ ಉಂಟು. ಬಸವರಾಜದೇವರ ರಗಳೆಯಲ್ಲಿ ಬರುವ, ಶಿವನ ಹತ್ತಿರ ಬಸವಣ್ಣನು ತನ್ನ ಮಡದಿಯನ್ನು ಕಳಿಸುವ ಪ್ರಸಂಗ; 'ಅಕ್ಕಮಹಾದೇವಿಯರ ರಗಳೆ 'ಯಲ್ಲಿ ಬರುವ, ಶಯ್ಯಾಗೃಹದಿಂದ ಮಹಾದೇವಿಯು ವಿವಸ್ತ್ರಳಾಗಿ ಭಕ್ತರೆದುರು ಬಂದು ನಿಲ್ಲುವ ಪ್ರಸಂಗ; 'ರೇವಣಸಿದ್ಧೇಶ್ವರನ ರಗಳೆ'ಯಲ್ಲಿ ರೇವಣಸಿದ್ಧೇಶ್ವರನು ಚೋಳರಾಜನ ಮಗಳನ್ನು ಮದುವೆಯಾಗಿ ಅವಳ ಬಸುರಿಳಿಸುವುದು ಹಾಗೆ ಇಳಿಸಿದ ಬಸುರನ್ನು ಮತ್ತೆ ಒಂಭತ್ತು ತಿಂಗಳ ನಂತರ ಜೀವ ಪಡೆಯುವಂತೆ ಮಾಡುವ ಪ್ರಸಂಗ;'ಏಕಾಂತರಾಮಯ್ಯನ ರಗಳೆ'ಯಲ್ಲಿ ಭಕ್ತ ಏಕಾಂತರಾಮಿತಂದೆಯು ತನ್ನ ತಲೆಯನ್ನೇ ಕತ್ತರಿಸಿಕೊಂಡು ಒಂದು ವಾರದ ನಂತರ ಮತ್ತೆ ರುಂಡ ಮುಂಡಗಳನ್ನು ಕೂಡಿಸಿಕೊಂಡು ಜೀವ ಪಡೆಯುವ ಪ್ರಸಂಗ;'ಸಾಮವೇದಿಗಳ ರಗಳೆ'ಯಲ್ಲಿ ಭಕ್ತನಾದ ಸಾಮವೇದಿಯು ಆಕಾಶಮಾರ್ಗವಾಗಿ ನಡೆದು ಬರುವ ಪ್ರಸಂಗ ಹಾಗೂ ಹಲಾಯುಧ ಮತ್ತು ಉದ್ಭಟಯ್ಯನ ರಗಳೆಯಲ್ಲಿ, ಹಲಾಯುಧ ಮತ್ತು ಉದ್ಭಟಯ್ಯಗಳು ಮನೆ ಮತ್ತು ಊರುಗಳನ್ನೇ ಕೈಲಾಸಕ್ಕೆ ಕೊಂಡೊಯ್ಯುವ ಪ್ರಸಂಗಗಳೆಲ್ಲ ಉತ್ಪ್ರೇಕ್ಷೆಯಾಗಿ ತೋರುತ್ತವೆ. ಹಾಗಿದ್ದರೂ ಕಾವ್ಯದ ನಡುವೆ ಸಂಕೇತಗಳಾಗಿ ಕೆಲಸಮಾಡುವ ಇವು ಕಾವ್ಯಕ್ಕೆ ಮತ್ತಷ್ಟು ಸೌಂದರ್ಯವನ್ನು ತಂದುಕೊಡುತ್ತವೆ.

### 3.6 ವ್ಯಕ್ತಿತ್ವವನ್ನು ಕಟ್ಟಿಕೊಡುವ ಉದ್ದೇಶ

ಹರಿಹರ ಕಾವ್ಯ ರಚನೆ ಮಾಡಿದ ಉದ್ದೇಶ ಭಕ್ತಿಯ ಮಹತ್ವ ಹಾಗೂ ಶಿವನ ಮಹಿಮೆಯನ್ನು ಪ್ರದರ್ಶಿಸುವುದು ಮಾತ್ರವಲ್ಲದೆ, ಭಕ್ತನ ವ್ಯಕ್ತಿತ್ವವನ್ನು ಮೆರೆಯುವುದೂ ಆಗಿದೆ. ಅವನು ಸೃಷ್ಟಿಸುವ ಪ್ರತಿಯೊಂದು ಸನ್ನಿವೇಶಗಳ ಹಿಂದೆಯೂ ಇಂಥದ್ದೊಂದು ಉದ್ದೇಶ ಇದ್ದೇ ಇರುತ್ತದೆ. ಹಾಗೆಯೇ ಈ ಸನ್ನಿವೇಶಗಳು ಆ ಭಕ್ತನ ವ್ಯಕ್ತಿತ್ವವನ್ನು ಸಮರ್ಪಕವಾಗಿ ಕಟ್ಟಿಕೊಡುತ್ತವೆ. ಇದಕ್ಕೆ ಉದಾಹರಣೆ:

**ಮಾದಾರ ಚೆನ್ನಯ್ಯನ ರಗಳೆ:** ಮಾದಾರ ಚೆನ್ನಯ್ಯ ಒಬ್ಬ ಸಾಧಾರಣ ಭಕ್ತ. ಹುಟ್ಟಿನಿಂದ ಮಾದಾರರವನು. ಅರಸ ಕರಿಕಾಲಚೋಳನ ಅರಮನೆಯಲ್ಲಿ ಕುದುರೆಗಳಿಗೆ ಹುಲ್ಲುತರುವ ಕಾಯಕ ಮಾಡಿಕೊಂಡಿದ್ದವನು. ಆದರೆ ಅವನ ಭಕ್ತಿ ಅಸಾಧಾರಣವಾದದ್ದು. ಸ್ವತ: ಭಕ್ತನಾದ ಕರಿಕಾಲ ಚೋಳನ ಭಕ್ತಿಗಿಂತಲೂ ಮಿಗಿಲಾದದ್ದು ; ನೈಜವಾದದ್ದು. ಅಲ್ಲಿ ಯಾವ ಆಡಂಬರ

ಹಾಗೂ ಅಪೇಕ್ಷೆಯೂ ಇಲ್ಲ.

ಇಲ್ಲಿ ಭಕ್ತನ ಹಿರಿಮೆಯನ್ನು ಮೆರೆಯಬೇಕೆಂಬ ಉತ್ಕಟ ಬಯಕೆ ಕವಿಯದು. ಅದಕ್ಕಾಗಿ ಆತ ಒಂದು ಸನ್ನಿವೇಶವನ್ನು ಸೃಷ್ಟಿಸುತ್ತಾನೆ. ಶಿವನು ಚೆನ್ನಯ್ಯನ ಮನೆಗೆ ಹೋಗಿ ಚೆನ್ನಯ್ಯ ನೀಡಿದ ಅಂಬಲಿಯನ್ನು ಕುಡಿಯುವಂತೆ ಮಾಡುತ್ತಾನೆ. ಅದೇ ಸಂದರ್ಭದಲ್ಲಿ ಭಕ್ತನಾದ ಚೋಳನು ಭೋಜನವನ್ನು ಸಿದ್ಧಪಡಿಸಿ ಶಿವನನ್ನು ಊಟಕ್ಕೆ ಕರೆಯುತ್ತಾನೆ. ಚೋಳ ಹಾಕಿದ ಊಟವನ್ನು ಉಣಲೊಲ್ಲದ ಶಿವ, ಚೋಳನಿಗೆ ಚೆನ್ನಯ್ಯನ ಮನೆಯಲ್ಲಿ ಅಂಬಲಿಯ ನ್ನುಂಡದ್ದನ್ನು ತಿಳಿಸಿ ಅದರ ಸವಿಯನ್ನು ಬಣ್ಣಿಸುತ್ತಾನೆ. ಆಗ ಕರಿಕಾಲಚೋಳ ಶಿವನಿಗೆ ಅಂಬಲಿಯನ್ನು ನೀಡಿದ ಮಹಿಮನಾದ ಚೆನ್ನಯ್ಯನನ್ನು ಹುಡುಕಿಕೊಂಡು ಬಂದು ಅವನಿಗೆ ನಮಸ್ಕರಿಸುತ್ತಾನೆ.

ಒಂದು ನಾಡಿನ ಅರಸ, ಉನ್ನತ ವರ್ಗದ ವ್ಯಕ್ತಿ, ತನ್ನದೇ ಅರಮನೆಯಲ್ಲಿ ಕುದುರೆ ಗಳಿಗೆ ಹುಲ್ಲು ಹಾಕುವ ಮಾದಾರ ಕುಲದ ಸಾಮಾನ್ಯನೊಬ್ಬನ ಕಾಲಿಗೆ ಎರಗಿದ ಎಂದರೆ ಅದು ನಿಜಕ್ಕೂ ಹೆಮ್ಮೆ ಪಡಬೇಕಾದ ಸಂದರ್ಭ. ಇಲ್ಲಿ ಚೆನ್ನಯ್ಯ, ಅರಸ ತನ್ನ ಕಾಲಿಗೆ ಬೀಳುವುದನ್ನು ಕಂಡು ಹೆಮ್ಮೆ ಪಡಬಹುದಿತ್ತು, ಆದರೆ ಚೆನ್ನಯ್ಯ ಹಾಗೆ ನಡೆದುಕೊಳ್ಳುವುದೇ ಇಲ್ಲ. ಬದಲಾಗಿ 'ಕುಲವ ನೋಡದೆ ಎರಗುವರೆ' ಎಂದು ಸಂಕಟಪಡುತ್ತಾನೆ. ತನ್ನ ಗುಪ್ತ ಭಕ್ತಿ ಬಯಲಾದುದಕ್ಕೆ ನೊಂದುಕೊಳ್ಳುತ್ತಾನೆ. ಆ ನೋವಿನಲ್ಲಿ ಶಿವಲಾಯಕ್ಕೆ ಹೋಗಿ ಶಿವನೆದುರು ನಿಂತು ದುಃಖದಿಂದ 'ನೀನಿಂತು ದೂರುವರೆ'? 'ಚೋಳನಿಂದ ಹಿಡಿತರಿಸಿದೆ, ನಾನೇನು ತಪ್ಪು ಮಾಡಿದೆ'? 'ನಿನ್ನಲ್ಲಿ ಪದವಿ ಬೇಡಿದೆನೆ'? 'ಅಂಬಲಿಯನರ್ಪಿಸಿದರೆ ಇಂತು ಇರಿವರೆ'? 'ಇನ್ನು ಬದುಕಿ ಫಲವೇನು' ಎಂದು ಕತ್ತಿಯನ್ನು ಕೊರಳಿಗಿರಿಸುತ್ತಾನೆ.

ಇಲ್ಲಿ ಕವಿ ಚೆನ್ನಯ್ಯನ ವ್ಯಕ್ತಿತ್ವಕ್ಕೆ ಮೆರಗು ನೀಡಿದ್ದಾನೆ. ಅರಸ ಕಾಲಿಗೆ ಎರಗಿದ ಸಂದರ್ಭದಲ್ಲಿ ಚೆನ್ನಯ್ಯನಾಡುವ ಮಾತು, ಶಿವನೆದುರು ತನ್ನ ನೋವನ್ನು ವ್ಯಕ್ತಪಡಿಸುವ ರೀತಿ, ಚೆನ್ನಯ್ಯನ ಅಪೂರ್ವ ಮತ್ತು ಅನನ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

ಹೀಗೆ ಪ್ರತಿಯೊಂದು ರಗಳೆಯಲ್ಲೂ ಕವಿ ಭಕ್ತನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಸನ್ನಿವೇಶ ಗಳನ್ನು ಸೃಷ್ಟಿಸುತ್ತಾನೆ. ಕಥೆಯಲ್ಲಿ ಭಕ್ತಿ ಹಾಗೂ ಶಿವನಿಗಿರುವ ಮಹತ್ವ ಭಕ್ತನ ವ್ಯಕ್ತಿತ್ವಕ್ಕೂ ಇರುವುದು ಇಲ್ಲಿ ವ್ಯಕ್ತವಾಗುತ್ತದೆ.

ಹರಿಹರನ ಒಟ್ಟು ಕಾವ್ಯವನ್ನು ಅವಲೋಕಿಸಿದಾಗ ಪ್ರಾಚೀನ ಕವಿಗಳು ತಮ್ಮ ಕಾವ್ಯಕ್ಕೆ ಆರಿಸಿಕೊಂಡ ವಸ್ತುವಿನ ಬಗೆಗೆ ಅವನು ವಿರುದ್ಧವಾದ ಧೋರಣೆಯನ್ನು ಹೊಂದಿದ್ದು ತನ್ನ ಕಾಲ ಹಾಗೂ ಮನೋಧರ್ಮಕ್ಕೆ ಅನುಗುಣವಾಗಿ ಕಾವ್ಯವಸ್ತುವನ್ನು ಆಯ್ಕೆ ಮಾಡಿಕೊಳ್ಳು ವುದಕ್ಕೆ ಹೆಚ್ಚು ಒತ್ತುಕೊಟ್ಟಿದ್ದ ಎಂಬುದು ಸ್ಪಷ್ಟವಾಗುತ್ತದೆ. ಹಾಗೆ ಒತ್ತು ಕೊಟ್ಟಿದ್ದಕ್ಕೆ ತಕ್ಕಂತೆ ಕಾವ್ಯವನ್ನು ರಚಿಸಿ ಯಶಸ್ವಿಯಾಗಿರುವುದು ಹರಿಹರನ ಮಹಾಪ್ರತಿಭೆಗೆ ಸಾಕ್ಷಿಯಾಗಿದೆ.

* * * * *

## ಅಡಿಟಿಪ್ಪಣಿಗಳು


1. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ) : ಪುಟ 38
2. ಬಸವನಾಳ ಶಿವಲಿಂಗಪ್ಪ : ಹಂಪೆಯ ಹರಿಹರ ದೇವ ವಿರಚಿತ ಪಂಪಾಶತಕ ಮತ್ತು ರಕ್ಷಾಶತಕ : ಪುಟ 32 ಪದ್ಯ 82
3. ಜಿ. ಎಸ್. ಶಿವರುದ್ರಪ್ಪ : ಸಾಹಿತ್ಯ ಸಮೀಕ್ಷೆ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ) : ಪುಟ 96
4. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 16
5. ಜಿ. ಎಸ್ ಶಿವರುದ್ರಪ್ಪ: ಸಾಹಿತ್ಯ ಸಮೀಕ್ಷೆ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ) : ಪುಟ 96
6. ಎಚ್. ದೇವೀರಪ್ಪ : ಸಂಶೋಧನ ಸಂಪುಟ : ಪುಟ 373
7. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾನಿರ್ಣಯ : ಪುಟ 88
8. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾನಿರ್ಣಯ : ಪುಟ 88
9. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿಶ್ವ ವಿದ್ಯಾನಿಲಯ : ಸಂಪುಟ 3 : ಪುಟ 275
10. ಎ. ಎಸ್. ಶಂಕರ ಕೆದಿಲಾಯ : ಪೆರಿಯ ಪುರಾಣಂ ಭಾಗ 1 (ಅನುವಾದ) : ಪುಟ 5
11. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿಶ್ವ ವಿದ್ಯಾನಿಲಯ : ಸಂಪುಟ 3 : ಪುಟ 275
12. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿಶ್ವ ವಿದ್ಯಾನಿಲಯ : ಸಂಪುಟ 3 : ಪುಟ 275
13. ಎ. ಶಂಕರ ಕೆದಿಲಾಯ : ಪೆರಿಯ ಪುರಾಣಂ ಭಾಗ 1 (ಅನುವಾದ): ಪುಟ 5
14. ಎ. ಶಂಕರ ಕೆದಿಲಾಯ : ಪೆರಿಯ ಪುರಾಣಂ ಭಾಗ 1 (ಅನುವಾದ): ಪುಟ 5
15. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 3 ಬೆಂಗಳೂರು ವಿಶ್ವ ವಿದ್ಯಾನಿಲಯ : ಪುಟ 276
16. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 3 ಬೆಂಗಳೂರು ವಿಶ್ವ ವಿದ್ಯಾನಿಲಯ : ಪುಟ 276
17. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 3 ಬೆಂಗಳೂರು ವಿಶ್ವ ವಿದ್ಯಾನಿಲಯ : ಪುಟ 276
18. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 3 ಬೆಂಗಳೂರು ವಿಶ್ವ ವಿದ್ಯಾನಿಲಯ : ಪುಟ 276
19. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 3 ಬೆಂಗಳೂರು ವಿಶ್ವ ವಿದ್ಯಾನಿಲಯ : ಪುಟ 276
20. ಎ. ಎಸ್. ಕೆದಿಲಾಯ : ಪೆರಿಯಾ ಪುರಾಣಂ : ಪದ್ಯ 1058 : ಪುಟ - 366
21. ಎ. ಎಸ್. ಕೆದಿಲಾಯ : ಪೆರಿಯಾ ಪುರಾಣಂ : ಪದ್ಯ 352 : ಪುಟ 123
22. ಎ. ಎಸ್. ಕೆದಿಲಾಯ : ಪೆರಿಯಾ ಪುರಾಣಂ : ಪದ್ಯ 797 : ಪುಟ275
23. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 503

24. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 503
25. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 503
26. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 504
27. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 504
28. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 503-504
29. ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ - 18
30. ಬಸವಣ್ಣನವರ ವಚನ ಸಂಪುಟ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಪುಟ 213 : ಪದ್ಯ 830
31. ಬಸವಣ್ಣನವರ ವಚನ ಸಂಪುಟ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಪುಟ 178 : ಪದ್ಯ 711
32. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ್ಟ 67
33. ಜಿ. ಸಿ. ಸಾದರ - ಬಸವ ಪಥ : ಸಂಪುಟ 4 -ಸಂಚಿಕೆ 4. 1982 : ಪುಟ 71
34. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಬಸವರಾಜ ದೇವರ ರಗಳೆ : ಪುಟ 79
35. ಬಸವಣ್ಣನವರ ವಚನ ಸಂಪುಟ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಪುಟ 177 : ಪದ್ಯ 708
36. ಶಿವಶರಣೆಯರ ವಚನ ಸಂಪುಟ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಪುಟ 77: ಪದ್ಯ 250
37. ಸಿ.ಪಿ. ಕೃಷ್ಣಕುಮಾರ್ : ಕಾವ್ಯ ಗೌರವ : ಪುಟ 25
38. ಸಂ : ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಪುಟ ix
39. ಕೆ. ಎಲ್. ಗೋಪಾಲ ಕೃಷ್ಣಯ್ಯ : ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ : ಪುಟ 351
40. ಸಂ: ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 140–141

4

# ಹರಿಹರನ ಕಥೆಗಾರಿಕೆ

ಕಥೆಯನ್ನು ಕಟ್ಟುವ ಕ್ರಿಯೆ ಅಸಾಧ್ಯವಾದುದೇನೂ ಅಲ್ಲ. ಅದಕ್ಕೆ ಸಾಧಾರಣ ಮಟ್ಟದ ಪ್ರತಿಭೆಯಿದ್ದರೂ ಸಾಕು. ಆದರೆ ಓದುಗರಿಗೆ ಆಪ್ಯಾಯಮಾನವಾಗುವ ಹಾಗೆ ಕಥೆಯನ್ನು ಕಟ್ಟುವುದು ಸಾಧಾರಣ ಮಟ್ಟದ ಪ್ರತಿಭೆಗೆ ಎಟುಕುವಂಥದ್ದಾಗಿರುವುದಿಲ್ಲ. ಅದು ಅಲ್ಲಲ್ಲಿ ಎಲ್ಲೋ ಕೆಲವರಿಗೆ ಮಾತ್ರ ಸಾಧ್ಯವಾಗುವಂಥ ಕ್ರಿಯೆ. ಅಂತಹ ಕೆಲವು ಕವಿಗಳಲ್ಲಿ ಹರಿಹರನೂ ಒಬ್ಬ. ಹರಿಹರ ಪ್ರಚಂಡ ಪ್ರತಿಭಾವಂತ. ಕಥಾನಿರ್ಮಾಣ ಕ್ರಿಯೆಯಲ್ಲಿ ಚೆನ್ನಾಗಿ ಸುರಿತವನು. ಕಥೆಯನ್ನು ತನ್ನ ಭಾವಕ್ಕೆ ತಕ್ಕಹಾಗೆ ಬಳುಕಿಸಿ ಬಾಗಿಸಿಕೊಳ್ಳಬಲ್ಲಂತಹ ಕಲೆಗಾರಿಕೆಯುಳ್ಳವನು. ಕಥಾನಿರ್ಮಾಣದಲ್ಲಿ ಹಲವು ವೈಶಿಷ್ಟ್ಯಗಳನ್ನು ಆತ ಮೆರೆದಿದ್ದಾನೆ. ರಗಳೆಗಳು ಅವನ ಈ ಅದ್ಭುತ ಕಲೆಗಾರಿಕೆಗೆ ಕನ್ನಡಿ ಹಿಡಿದಂತಿವೆ.

## 4.1 ಕಾವ್ಯ ರಚನೆಗೆ ರಗಳೆಯ ಆಯ್ಕೆ

ಹರಿಹರ, ಕಾವ್ಯರಚನೆಗೆ ರಗಳೆಗಳನ್ನೇ ಆಯ್ಕೆ ಮಾಡಿಕೊಂಡದ್ದು ಒಂದು ಅಚ್ಚರಿಯ ಸಂಗತಿ. ಈ ಪ್ರಕಾರವು ಹರಿಹರನಿಗೂ ಹಿಂದೆ ಪಂಪ, ರನ್ನ ಮುಂತಾದ ಕವಿಗಳಲ್ಲಿ ಬಳಕೆಯಾಗಿತ್ತು. ಆದರೆ ಅವರು ಇದಕ್ಕೆ ಪ್ರಮುಖ ಸ್ಥಾನ ನೀಡಿರಲಿಲ್ಲ. ತಮ್ಮ ಕಾವ್ಯಗಳ ಮಧ್ಯೆ ಮಧ್ಯೆ ಮಾತ್ರ ಬಳಸಿಕೊಳ್ಳುತ್ತಿದ್ದರು. ಅವರ ದೃಷ್ಟಿಯಲ್ಲಿ ಇದೊಂದು ಕಾವ್ಯ ಪ್ರಕಾರವೇ ಅಲ್ಲ. ಆದರೆ ಈ ಪ್ರಕಾರದ ಮಹತ್ವವನ್ನು ಮೊಟ್ಟ ಮೊದಲಿಗೆ ಅರಿತವನು ಹರಿಹರ. ಹರಿಹರನಿಗೆ ಪಂಪ ರನ್ನಾದಿಗಳಂತೆ ಚಂಪೂವಿನಲ್ಲೂ ಕಾವ್ಯವನ್ನು ರಚಿಸಬಲ್ಲಂಥ ಸಾಮರ್ಥ್ಯ ಇತ್ತು. ಆರಂಭದಲ್ಲಿ ಆತ ಮಾಡಿದ್ದೂ ಅದೇ ಕೆಲಸವನ್ನೇ. ಚಂಪೂವಿನಲ್ಲಿ 'ಗಿರಿಜಾ ಕಲ್ಯಾಣ' ಕಾವ್ಯ ರಚಿಸಿದ. ಆದರೆ ಈ ಕಾವ್ಯಕ್ಕೆ ನಿರೀಕ್ಷಿಸಿದ ಯಶಸ್ಸು ದೊರೆಯಲಿಲ್ಲ. ಪಂಡಿತ ಮಾನ್ಯತೆಯೂ ಸಿಗಲಿಲ್ಲ. ಹಾಗಾಗಿ ಆತ ತನ್ನ ಕಥೆಗೆ ಬೇರೊಂದು ಪ್ರಕಾರವನ್ನು ಹುಡುಕುವುದು ಅನಿವಾರ್ಯವಾಯಿತು. ಇದಕ್ಕಿಂತ ಹೆಚ್ಚಾಗಿ ಆತ್ಮವಿಮರ್ಶಕ ಪ್ರಜ್ಞೆಯಿಂದ ತನ್ನ ಅಭಿವ್ಯಕ್ತಿಗೆ ಇದು ಸಮರ್ಥ ಮಾಧ್ಯಮ ಅಲ್ಲ ಎಂಬುದನ್ನು ಆತ ಕಂಡುಕೊಂಡದ್ದು ಕಾವ್ಯ ಪ್ರಕಾರದ ಬದಲಾವಣೆಗೆ ಕಾರಣವಾಯಿತು. ಈ ಸಂದರ್ಭದಲ್ಲಿ ಅವನಿಗೆ ಸೂಕ್ತವಾಗಿ ಕಂಡಿದ್ದು ಪಂಪ ರನ್ನಾದಿಗಳ ಕಾವ್ಯಗಳಲ್ಲಿ ಗುರುತಿಗೆ ಬಾರದಂತೆ ಬಿದ್ದಿದ್ದ 'ರಗಳೆ'. ಭಾವ ಹರಿದಂತೆಲ್ಲ ಹರಿಯಬಿಡಲು ರಗಳೆ ಸೂಕ್ತವಾದದ್ದು ಎಂದು ಗೊತ್ತಾದ ಮೇಲೆ, ಅದನ್ನೇ ತನ್ನ ಕಾವ್ಯ ಪ್ರಕಾರವನ್ನಾಗಿ ಮಾಡಿಕೊಳ್ಳಲು ತೀರ್ಮಾನಿಸಿದ. ಹೀಗೆ ಚಂಪೂವಿನಲ್ಲೇ ಇದ್ದ ರಗಳೆಯನ್ನು ತೆಗೆದುಕೊಂಡು ತನ್ನ ಉದ್ದೇಶಕ್ಕೆ ತಕ್ಕ ಹಾಗೆ ಬದಲಾವಣೆ ಮಾಡಿಕೊಳ್ಳುವ ಮೂಲಕ ಶಿವಶರಣರ ಹಲವು ಕಥೆಗಳನ್ನು ರಚಿಸಿದ.

## 4.2 ಪ್ರಾರಂಭದಲ್ಲಿ ಕಂದ ವೃತ್ತಗಳ ಬಳಕೆ

ಕಾವ್ಯ ಪ್ರಕಾರವನ್ನು ಪ್ರಾಚೀನರಿಂದ ತೆಗೆದುಕೊಂಡ ಮೇಲೆ ಆ ಪ್ರಕಾರದ ಯಥಾವತ್ ಅನುಕರಣೆಗೆ ಹರಿಹರ ಒಪ್ಪದ ಹಾಗೆ ತೋರುತ್ತದೆ. ಹಾಗಾಗಿ ಕಾವ್ಯದಲ್ಲಿ ಕೆಲ ಮಾರ್ಪಾಡು ಗಳನ್ನು ಮಾಡಿಕೊಳ್ಳುತ್ತಾನೆ. ಆರಂಭದಲ್ಲಿ ಕಂದಪದ್ಯ ಅಥವಾ ವೃತ್ತವನ್ನು ಮರೆಯದೆ ತರುತ್ತಾನೆ. ಕಥೆ ಒಂದು ಸ್ಥಲಕ್ಕಿಂತ ಹೆಚ್ಚಾಗುವ ಸಾಧ್ಯತೆ ಇದ್ದರೆ ಅಂತಹ ರಗಳೆಗಳ ಪ್ರಾರಂಭ ದಲ್ಲಿ ಒಂದು ವೃತ್ತವನ್ನು ಬಳಸುತ್ತಾನೆ. ಕಥೆ ಒಂದೇ ಸ್ಥಲದಲ್ಲಿ ಮುಕ್ತಾಯವಾಗುವಂತಿದ್ದರೆ ಕಂದ ಪದ್ಯವನ್ನು ಮಾತ್ರ ಬಳಸುತ್ತಾನೆ. ಒಂದು ಸ್ಥಲಕ್ಕಿಂತ ಹೆಚ್ಚು ಸ್ಥಲಗಳನ್ನು ಒಳಗೊಂಡಿರುವ ಕಾವ್ಯದಲ್ಲಿ ಕೆಲವೆಡೆ ಕಂದ ಮತ್ತು ವೃತ್ತಗಳೆರಡನ್ನೂ ಬಳಸಿದ್ದಾನೆ. ನಂಬಿಯಣ್ಣ, ಬಸವಣ್ಣ, ಶಂಕರ ದಾಸಿಮಯ್ಯ ಮುಂತಾದ ರಗಳೆಗಳಲ್ಲಿ ವೃತ್ತ ಮಾತ್ರವಿದ್ದರೆ, ಮಹಾದೇವಿಯಕ್ಕನ ರಗಳೆಯಲ್ಲಿ ಕಂದ ಮತ್ತು ವೃತ್ತಗಳೆರಡೂ ಇರುವುದು ಕಂಡುಬರುತ್ತದೆ. ಕಥೆಯ ಪ್ರಾರಂಭದಲ್ಲಿ ಅನುಸರಿಸುವ ಇದೇ ನಿಯಮ ಅಂತ್ಯದಲ್ಲೂ ಇರುತ್ತದೆ. ಆದರೆ ಇಲ್ಲಿ ವೃತ್ತಗಳು ಸಾಮಾನ್ಯವಾಗಿ ಬರುವುದಿಲ್ಲ.

ಪ್ರಾರಂಭದಲ್ಲಿ ಬರುವ ಕಂದ ವೃತ್ತಗಳು ಭಕ್ತನ ಮಹಿಮೆ ಮತ್ತು ಸಾಧನೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತವೆ. ಇಲ್ಲಿ ಕವಿಯ ಅಂಕಿತನಾಮ ಸಾಮಾನ್ಯವಾಗಿ ಇದ್ದೇ ಇರುತ್ತದೆ.

## 4.3 ಕಾವ್ಯದ ಸರಳತೆ ಮತ್ತು ನಿರರ್ಗಳತೆ

ಹರಿಹರ, ರಗಳೆಗಳನ್ನು ಕಾವ್ಯ ಪ್ರಕಾರವನ್ನಾಗಿ ಆರಿಸಿಕೊಂಡ ನಂತರ ವಿಶೇಷವಾಗಿ ಒತ್ತು ಕೊಟ್ಟಿದ್ದು ಕಾವ್ಯದ ಸರಳತೆ ಮತ್ತು ನಿರರ್ಗಳತೆಗೆ. ಜನಸಾಮಾನ್ಯನಿಗೂ ಕೂಡ ತನ್ನ ಕಾವ್ಯ ಅರ್ಥವಾಗುವಂತಿರಬೇಕು ಎಂಬುದು ಅವನ ಅಂತರಂಗದ ತುಡಿತ. ಅಂತೆಯೇ ತನ್ನ ಕಾವ್ಯವನ್ನು ಅತ್ಯಂತ ಸರಳವಾಗಿ ರಚಿಸುತ್ತಾನೆ. ಅವನ ಕಥೆಯಲ್ಲಿ "ಘುಳು ಘುಳಿಸುವ ಸಮುದ್ರದ ಸಪ್ಪಳವಿಲ್ಲ. ಕಥೆಯ ನಡುವೆ ಅಲ್ಲಲ್ಲಿ ಹದಿನೆಂಟು ವರ್ಣನೆಗಳ ಹಾವಳಿಯೂ ಇಲ್ಲ. ಕಾವ್ಯ ಸೌಧದಲ್ಲಿ ಅಲಂಕಾರದ ಭಾರದಿಂದ ಅತ್ತಿತ್ತ ಚಲಿಸುವುದಕ್ಕೂ ಆಗದೆ ನಿಂತಲ್ಲಿಯೇ ನಿಂತುಕೊಂಡು ಮಿಳ್ಮಿಳನೆ ನೋಡುವ ಕಥಾ ರಮಣೀಯ ದೃಶ್ಯವೂ ಅಲ್ಲಿಲ್ಲ. ಕಥೆ ಪ್ರಾರಂಭ ವಾಗುವುದೇ ತಡ ನಿರರ್ಗಳವಾಗಿ ಸಾಗುತ್ತದೆ. ಕಥಾರಂಭದಲ್ಲಿ ಮೊದಲು ಭಕ್ತನ ಊರು ದೇಶಗಳ ಪರಿಚಯ, ಅನಂತರ, ಅವನ ವ್ಯಕ್ತಿತ್ವದ ಸೂಕ್ಷ್ಮ ಪರಿಚಯದೊಂದಿಗೆ ಕಥಾರಂಗಕ್ಕೆ ಕವಿ ಧುಮುಕುತ್ತಾನೆ. ದೇಶ ಊರುಗಳ ವರ್ಣನೆಯಲ್ಲಾಗಲಿ, ಕಥಾನಾಯಕನ ವ್ಯಕ್ತಿ ಪರಿಚಯ ದಲ್ಲಾಗಲಿ, ಸುತ್ತು ಬಳಸುಗಳಿರುವುದಿಲ್ಲ. ಒಂದು ದೇಶ, ಅಲ್ಲೊಂದು ಊರು, ಅಲ್ಲಿ ಭಕ್ತ ನೊಬ್ಬನು ಭಕ್ತಿಯನ್ನಾಚರಿಸುತ್ತಿದ್ದನು ಎಂಬ ವೃತ್ತಾಂತ ಎಂಟು ಹತ್ತು ಚರಣಗಳಲ್ಲಿ ಮುಗಿದು ಹೋಗಿ, ಕಥಾನಾಯಕನ ಭಕ್ತಿಜೀವನದ ಹೋರಾಟದ ಚಿತ್ರಣಕ್ಕೆ ಆರಂಭವಾಗುವುದು. ಕಥಾರಂಭದ ಈ ಪರಿಚಯ ಭಾಗ ಕಥಾಪಾತ್ರವನ್ನನುಸರಿಸಿ ಹಿರಿದು ಕಿರಿದಾಗಿ ಹೊಂದಿಕೊಂಡು ಬರುವುದು. ಕಥೆಯನ್ನು ಹೇಳುವ ಕವಿಗೂ ಬೇಸರವಿಲ್ಲ. ಕೇಳುವವರಿಗೂ ಅತ್ತಿತ್ತ ತಿರುಗಿ ನೋಡುವ ಪುರಸತ್ತಿಲ್ಲ. ಚಿಕ್ಕ ಚಿಕ್ಕ ಮಾತಿನಲ್ಲಿ ಅಚ್ಚಗನ್ನಡದ ತಿಳಿಮಾತಿನಲ್ಲಿ ಚಿತ್ರಕ್ಕೆ

ವೇದ್ಯವಾಗುವ ರೀತಿಯಲ್ಲಿ ಕವಿ ಕಾವ್ಯ ನಿರೂಪಣೆ"[1] ಮಾಡುತ್ತಾನೆ. ಅವನ ರಗಳೆಯ ಕಥೆಗಳು "ಆರಂಭದಿಂದ ಮೊದಲ್ಗೊಂಡು ತುದಿಯವರೆಗೆ ಒಂದೊಂದು ಪಂಕ್ತಿಯೂ ಭಕ್ತನ ಕಥಾ ಜೀವನದ ವಿವರವನ್ನು ಬಿಗಿದಪ್ಪಿಕೊಂಡು ಭಕ್ತಿಯ ಶಿಖರದೆಡೆಗೆ ಧಾವಿಸುವುವು."[2] ಕಥೆಯ ಆರಂಭವು "ದೇಗುಲದ ದ್ವಾರ ಮಂಟಪವಿದ್ದ ಹಾಗೆಯೂ ಮುಕ್ತಾಯವು ಗರ್ಭಗುಡಿಯಿದ್ದ ಹಾಗೆಯೂ ನಡುವಿನ ಕಥಾ ಭೂಮಿಕೆಯು ಆದ್ಯಂತಗಳನ್ನು ಒಂದುಗೂಡಿಸುವ ಸುಂದರ ನವರಂಗದಂತೆಯೂ ಇರುತ್ತದೆ. ದ್ವಾರ ಮಂಟಪವನ್ನು ಪ್ರವೇಶಿಸಿದಂದು ಭಕ್ತನ ದೇಶಕೋಶಗಳ ಪರಿಚಯವಾಗುತ್ತದೆ. ನಡುವೆ ನವರಂಗದಲ್ಲಿ ಕಲೆಯ ಕುಸುರಿ ಕೆಲಸವಿರುತ್ತದೆ. ಅಲ್ಲಿ ಭಕ್ತ ಪುರುಷನ ಅಚಲ ಧರ್ಮನಿಷ್ಠೆ, ಸೇವಾಧರ್ಮದ ಹಲವು ಸ್ವರೂಪಗಳನ್ನು ಪ್ರದರ್ಶಿಸುತ್ತ ವಿವಿಧ ಭಂಗಿಯಲ್ಲಿ ನಿಂತಿರುವ ಸುಂದರ ವಿಗ್ರಹಗಳಿರುತ್ತವೆ. ಅವುಗಳ ವೈಖರಿಯನ್ನು ನೋಡುತ್ತ ನಿಂತಂತೆ ಧರ್ಮಯುದ್ಧದಲ್ಲಿ ಜಯಶೀಲನಾಗಿ ನಿಂತ"[3] ಭಕ್ತನ "ಸತ್ಯ ಚಿತ್ರ ನಮ್ಮ ಅಂತರಂಗವನ್ನು ಸೇರಿ ಅಲ್ಲಿ ಭಕ್ತಿಯ ಮಹಿಮೆಯನ್ನು ಪಸರಿಸುವುದು. ಗರ್ಭಗುಡಿಯ ಬಳಿಬಂದಾಗ ಅಲ್ಲಿ ಬಾಗಿಲಲ್ಲಿ ನಿಂತ ನಂದೀಶ, ಒಳಗಡೆ ಗಣಪತಿಯೊಂದಿಗೆ ಪಾರ್ವತೀ ಸಮೇತನಾಗಿ ಸಿಂಹಾಸನದಲ್ಲಿ ಅಲಂಕೃತನಾದ ಹಂಪೆಯ ವಿರೂಪಾಕ್ಷನು ಕಂಗೊಳಿಸುತ್ತಾನೆ."[4] ಹೀಗೆ ಕಥೆಯ ಆರಂಭ, ಬೆಳವಣಿಗೆ ಮತ್ತು ಮುಕ್ತಾಯ ಎಲ್ಲವೂ ಸುಂದರವಾಗಿ ಕಂಗೊಳಿಸುತ್ತವೆ.

## 4.4 ಕಥೆಯ ನಡುವೆ ಗದ್ಯದ ಬಳಕೆ

ಕಥೆಗಳ ಮಧ್ಯೆ ಗದ್ಯವನ್ನು ಬಳಸಿಕೊಂಡಿದ್ದು ಹರಿಹರನ ಕಥೆಗಾರಿಕೆಯ ಒಂದು ವಿಶಿಷ್ಟ ಗುಣವೇ ಆಗಿದೆ. ರಗಳೆಗಳು ಒಂದು ರೀತಿಯಲ್ಲಿ ವಚನಗಳಿದ್ದ ಹಾಗೆ. ಅವು ಕಿರಿಯ ಪ್ರಮಾಣದಲ್ಲಷ್ಟೇ ವ್ಯವಹರಿಸಲು ಅತ್ಯಂತ ಸೂಕ್ತವಾದವುಗಳು. ಹೆಚ್ಚೆಂದರೆ ಇನ್ನೂರರಿಂದ ಮುನ್ನೂರು ಸಾಲುಗಳವರೆಗೆ ವಿಸ್ತರಿಸಲು ಅನುಕೂಲವುಳ್ಳವುಗಳಾಗಿವೆ. ಇದನ್ನೂ ಮೀರಿ ವಿಸ್ತರಿಸಿದ್ದೇ ಆದರೆ ಇಡೀ ಕಥೆ ದೋಷಕ್ಕೆ ಒಳಗಾಗುತ್ತದೆ. ಮೇಲಿಂದ ಮೇಲೆ ಬರುತ್ತಲೇ ಇರುವ ಆದಿಪ್ರಾಸ, ಅಂತ್ಯಪ್ರಾಸ, ತಾಳ, ಲಯಗಳು ಓದುಗನಿಗೆ ಚಿಟ್ಟು ಹಿಡಿಸುವುದರಲ್ಲಿ ಅನುಮಾನವಿಲ್ಲ. ಈ ಒಂದು ವಿಚಾರ ಹರಿಹರನಿಗೆ ಕಾವ್ಯ ರಚನೆಯಲ್ಲಿ ತೊಡಗಿದ ಕೆಲ ದಿನಗಳಲ್ಲೇ ತಿಳಿದಿರಬೇಕೆನಿಸುತ್ತದೆ. ಹಾಗಾಗಿ ಅವನು ಚಂಪೂ ಸಾಹಿತ್ಯದಲ್ಲಿ ನಡುನಡುವೆ ಬರುವ ಗದ್ಯದ ಹಾಗೆ ತನ್ನ ಕಥೆಗಳ ನಡುವೆಯೂ ಒಂದೊಂದು ಸ್ಥಲವನ್ನು ಗದ್ಯದಲ್ಲಿ ರಚಿಸುತ್ತಾನೆ. ಕಥೆ ಚಿಕ್ಕದಾಗಿದ್ದರೆ ಒಂದೇ ಸ್ಥಲದಲ್ಲಿ ಮುಗಿಸಿಬಿಡುತ್ತಾನೆ. ಅಲ್ಲಿ ಈ ಗದ್ಯದ ಅಗತ್ಯವಿಲ್ಲ. ಅಂತೆಯೇ ಅವನು ರಚಿಸಿದ ಹಲವಾರು ಚಿಕ್ಕಚಿಕ್ಕ ಕಥೆಗಳು ಒಂದೇ ಸ್ಥಲದಲ್ಲಿ ರಸವತ್ತಾಗಿ ಮೂಡಿಬಂದಿವೆ.

ಹರಿಹರ ರಚಿಸಿದ ದೀರ್ಘ ಕಥನಗಳ ಸಂಖ್ಯೆ ಕಡಿಮೆ. ದೀರ್ಘ ಕಥನಗಳಲ್ಲಿ ಬಸವರಾಜ ದೇವರ ರಗಳೆ, ನಂಬಿಯಣ್ಣನ ರಗಳೆ, ಮಹಾದೇವಿಯಕ್ಕನ ರಗಳೆ, ಶಂಕರದಾಸಿಮಯ್ಯನ ರಗಳೆ, ರೇವಣಸಿದ್ಧೇಶ್ವರನ ರಗಳೆ, ಮಾರುಡಿಗೆನಾಚಿತಂದೆಯ ರಗಳೆ ಮುಂತಾದವು ಪ್ರಮುಖವಾಗಿವೆ.

ಹರಿಹರನ ಗದ್ಯ ಕನ್ನಡ ಸಾಹಿತ್ಯದ ಉತ್ಕೃಷ್ಟ ಗದ್ಯ. ಆತ 'ಚಾವುಂಡರಾಯ ಪುರಾಣ' ಮತ್ತು 'ವಡ್ಡಾರಾಧನೆ' ಕೃತಿಗಳನ್ನು ನೋಡಿದ್ದನೋ ಇಲ್ಲವೋ ತಿಳಿಯದು. ಆದರೆ ಇಷ್ಟು ಮಾತ್ರ ನಿಜ. ವಚನ ಸಾಹಿತ್ಯದಲ್ಲಿ ಸುಪ್ತವಾಗಿದ್ದ ಗದ್ಯದ ಗುಪ್ತಚೇತನವನ್ನು ಹರಿಹರ ಗುರುತಿಸಿದಂತೆ ತೋರುತ್ತದೆ. ಆ ಶಕ್ತಿಯನ್ನು ತನ್ನದಾಗಿಸಿಕೊಂಡು ತನ್ನ ಕೃತಿಗಳಲ್ಲಿ ಅದನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿದ್ದಾನೆ. ಆಧುನಿಕ ಗದ್ಯದ ಸಾಮರ್ಥ್ಯವನ್ನು ಹರಿಹರನ ಗದ್ಯ ಸಾಧಿಸಿರುವುದು ಅಚ್ಚರಿಯ ಸಂಗತಿ. ಅದು ಹರಿಹರನ ಕಾವ್ಯದ ನಡುವೆ ಬಂದು ಉಂಟಾಗಬಹುದಾಗಿದ್ದ ಏಕತಾನತೆಯನ್ನು ಇಲ್ಲವಾಗಿಸಿದೆ.

ಪ್ರಾರಂಭದ ಒಂದು ವೃತ್ತ ಮತ್ತು ಒಂದು ಕಂದಪದ್ಯದ ಅನಂತರ "ಶ್ರೀ ಸಕಲ ದೇವವೋಲಗಿಪ ರಜತಗಿರಿ / ವಾಸವಮನುಮುನಿಗಳಾದರಿಪ ರಜತಗಿರಿ / ಅಣಿಮಾದಿಗುಣ ವಗಲದೊಲಿಪ್ಪ ರಜತಗಿರಿ ......"[5] ಎಂಬ ವರ್ಣನೆಯೊಂದಿಗೆ 'ಮಹಾದೇವಿಯಕ್ಕನ ರಗಳೆ' ಪ್ರಾರಂಭವಾಗುತ್ತದೆ. ಇಲ್ಲಿಂದ ಪ್ರಾರಂಭವಾದ ರಗಳೆ ಮುಂದೆ ಶಿವನು ಕೈಲಾಸದಲ್ಲಿ ಒಡ್ಡೋಲಗದಲ್ಲಿ ಇದ್ದಿದ್ದು, ಅಲ್ಲಿ ಅವನು ಗುಪ್ತಗಣನಾಥನೆಂಬ ಭಕ್ತನನ್ನು ಕರೆದು "ದೇವಿಯರ ಸಮಯಮಂ ನೋಡಿ ಬಾರೆಲೆ ಮಗನೆ"[6] ಎಂದು ಗುಪ್ತಗಣನಾಥನನ್ನು ಪಾರ್ವತಿ ದೇವಿಯರು ಇರುವಲ್ಲಿಗೆ ಕಳುಹಿಸಿದ್ದು, ಶಿವನ ಸಂದೇಶವನ್ನು ಹೊತ್ತು ಗುಪ್ತಗಣನಾಥನು ಪಾರ್ವತಿದೇವಿಯರ ಹತ್ತಿರ ಬಂದಿದ್ದು, ಪಾರ್ವತಿ ದೇವಿಯರಿಗೆ ಶಿವನ ಸಂದೇಶವನ್ನು ತಿಳಿಸಿ ಹಿಂದಿರುಗುವಾಗ ಪಕ್ಕದಲ್ಲಿಯೇ ಕುಳಿತಿದ್ದ ರುದ್ರಕನ್ನಿಕೆಗೆ ಅವನ ಕಾಲು ಸೋಕಿದ್ದು, ಕೋಪ ಗೊಂಡ ರುದ್ರಕನ್ನಿಕೆ ಗುಪ್ತಗಣನಾಥನಿಗೆ 'ಎಲೆ ಭವಿಯೆ ನೋಡಿ ಪೊಡಮಡು' ಎಂದಿದ್ದು, ರುದ್ರಕನ್ನಿಕೆಯ ಈ ಮಾತನ್ನು ಕೇಳಿದ ಪಾರ್ವತಿದೇವಿ ಭಕ್ತನನ್ನು ಭವಿ ಎಂದ ತಪ್ಪಿಗೆ ಅವಳು ಭೂಲೋಕದಲ್ಲಿ ಭಕ್ತರ ಹೊಟ್ಟೆಯಲ್ಲಿ ಹುಟ್ಟಿ, ಭವಿಗೆ ಹೆಂಡತಿಯಾಗಿ ಭಕ್ತರಿಗೆ ಶರಣು ಮಾಡುತ್ತಾ ಸಂಸಾರ ಸಾಗರವನ್ನು ದಾಟಿ ಶ್ರೀಪರ್ವತ ಮಾರ್ಗವಾಗಿ ಮರಳಿ ಇಲ್ಲಿಗೆ ಬರಬೇಕು ಎಂದು ನಿರೂಪವಿತ್ತಿದ್ದು, ಆ ನಿರೂಪವನ್ನು ಹೊತ್ತ ರುದ್ರಕನ್ನಿಕೆ ಬಹುವಾಗಿ ನೊಂದು ಕಳವಳಗೊಂಡು ಕೊರಗುತ್ತ ಭೂಲೋಕದ ಕಡೆ ಪ್ರಯಾಣ ಬೆಳೆಸಿದ್ದು, ಭೂಲೋಕದಲ್ಲಿ ಉಡುತಡಿಯೆಂಬ ಪಟ್ಟಣದಲ್ಲಿ ಮಕ್ಕಳಿಲ್ಲದೆ ಬಹುಕಾಲ ಬಳಲಿದ್ದ ಶಿವಭಕ್ತ ಶಿವಭಕ್ತೆಯರಿಗೆ ಮಗಳಾಗಿ ಹುಟ್ಟಿದ್ದು - ಈ ಎಲ್ಲ ಚಿತ್ರಗಳು ಒಂದರ ನಂತರ ಒಂದರಂತೆ ಸುಮಾರು ನೂರ ಎಪ್ಪತ್ತು ಸಾಲುಗಳವರೆಗೆ ಸಾಗಿಬರುತ್ತವೆ. ಪ್ರಾರಂಭದಿಂದ ಒಂದೇ ವೇಗ; ಆ ಸ್ಥಲ ಮುಗಿಯುವ ವರೆಗೂ ಸ್ವಲ್ಪವೂ ವಿರಾಮ ಸಿಗುವುದಿಲ್ಲ. ಅಲ್ಲಿಗೆ ಬರುವ ಹೊತ್ತಿಗೆ ಮೇಲಿಂದ ಮೇಲೆ ಬರುವ ಪ್ರಾಸ, ತಾಳ, ಲಯಗಳು, ಓದುಗನಿಗೆ ಸಾಕು ಎನಿಸಿಬಿಟ್ಟಿರುತ್ತವೆ. ಮತ್ತೆ ಕಥೆಯನ್ನು ಮುಂದುವರಿಸುವುದು ಅಸಾಧ್ಯ ಎಂದು ಅನಿಸುತ್ತಿರುವಂತೆಯೇ ಕವಿ ಗದ್ಯವನ್ನು ತರುತ್ತಾನೆ. ಆಗ ಓದುಗನ ಉಸಿರು ವ್ಯತ್ಯಾಸಗೊಳ್ಳುತ್ತದೆ. ಮೊದಲಿನ ವೇಗವಾಗಲಿ ಪ್ರಾಸಗಳ ಪುನರುಕ್ತಿ ಯಾಗಲಿ ಮರೆಯಾಗುತ್ತವೆ. ಗದ್ಯವನ್ನು ತರುವ ಮೂಲಕ ಓದುಗನಲ್ಲಿ ಉಂಟಾಗಬಹುದಾದ ಏಕತಾನತೆಯ ದೋಷವನ್ನು ತೊಡೆದು ಹಾಕಿ ಕಾವ್ಯಕ್ಕೆ ಮೆರಗು ನೀಡುತ್ತಾನೆ. ಕಾವ್ಯವೂ ವೈವಿಧ್ಯತೆಯನ್ನು ಪಡೆದುಕೊಳ್ಳುತ್ತದೆ. ನೀಳವಾದ ಇನ್ನಿತರ ರಗಳೆಗಳಲ್ಲೂ ಗದ್ಯ ಇಷ್ಟೇ ಮಹತ್ವದ ಪಾತ್ರ ನಿರ್ವಹಿಸುತ್ತದೆ.

## 4.5 ಸನ್ನಿವೇಶ ನಿರ್ಮಾಣ ಚಾತುರ್ಯ

ಸನ್ನಿವೇಶ ನಿರ್ಮಾಣ ಚಾತುರ್ಯ ಹರಿಹರನ ಕಥೆಗಾರಿಕೆಯಲ್ಲಿ ಕಂಡುಬರುವ ಇನ್ನೊಂದು ವೈಶಿಷ್ಟ್ಯ. ಹರಿಹರನ ಕಥೆಗಳಲ್ಲಿ ಕೈಲಾಸದಷ್ಟೇ ಮರ್ತ್ಯಕ್ಕೂ ಮಹತ್ವವಿದೆ ಎನ್ನುವುದು ಈಗಾಗಲೇ ತಿಳಿದ ವಿಚಾರ. ಯಾವುದೇ ಭಕ್ತ ಕೈಲಾಸ ಪದವಿ ಪಡೆಯಬೇಕೆಂದರೆ ಮೊದಲು ಆತ ಮರ್ತ್ಯದಲ್ಲಿ ಸಾಧನೆಗೈಯಬೇಕು. ಶಿವನು ಒಡ್ಡುವ ಹಲವು ಪರೀಕ್ಷೆಗಳನ್ನು ನೆಟ್ಟ ಮನಸ್ಸಿನಿಂದ ಎದುರಿಸಬೇಕು. ಯಾವ ಭಕ್ತ ಶಿವ ಒಡ್ಡಿದ ಈ ಪರೀಕ್ಷೆಯಲ್ಲಿ ವಿಜಯಿಯಾಗುತ್ತಾನೋ ಅಂಥವನಿಗೆ ಕೈಲಾಸ ಪದವಿ ದೊರೆಯುವುದು ಖಚಿತ. ಅಂತೆಯೇ ಇಲ್ಲಿ ಬರುವ ಪ್ರತಿಯೊಬ್ಬ ಭಕ್ತನೂ ಶಿವ ಒಡ್ಡಿದ ಪರೀಕ್ಷೆಯನ್ನು ಎದುರಿಸಲು ಸಿದ್ಧನಾಗಿರುತ್ತಾನೆ. ಆ ಪರೀಕ್ಷೆಗಳು ಒಂದೊಂದೂ ಒಂದೊಂದು ತೆರನಾಗಿರುತ್ತವೆ. ಅದಕ್ಕಾಗಿ ಕವಿ ನಿರ್ಮಿಸುವ ಸನ್ನಿವೇಶ ಅತ್ಯಂತ ಸಮಯೋಚಿತವಾದವು. ಅವುಗಳಿಂದ ಕಥೆ ಮತ್ತಷ್ಟು ಅಂದಗೊಳ್ಳುತ್ತದೆ. ಅಂಥ ಒಂದೆರಡು ಸನ್ನಿವೇಶಗಳು ಇಂತಿವೆ:

**'ನಂಬಿಯಣ್ಣನ ರಗಳೆ'ಯಲ್ಲಿ ಬರುವ ವೃದ್ಧಮಾಹೇಶ್ವರನ ಸನ್ನಿವೇಶ :** ಕವಿ ಚಿತ್ರಿಸುವ ಕಥಾನಾಯಕ ನಂಬಿಯಣ್ಣ, ಜಡೆಯ ನಾಯ್ನಾರ ಮತ್ತು ಯಸ್ಯಜ್ಞಾನ ದೇವಿಯ ಮಗ. ಅವರು ಮಗನನ್ನು ಅರಸನಾದ ನರಸಿಂಗಮೊನೆಯರಿಗೆ ದತ್ತು ಕೊಟ್ಟಿರುತ್ತಾರೆ. ಇದು ನಂಬಿಯಣ್ಣನಿಗೆ ತಿಳಿದಿರುವುದಿಲ್ಲ. ಪೂರ್ವಾಪರಗಳ ಅರಿವಿಲ್ಲದ ಅವನು ಅರಮನೆಯಲ್ಲಿ ಹೇಗೆ ಇರಬೇಕೋ ಹಾಗೆ ಬೆಳೆಯುತ್ತಾನೆ. ಆದರೆ ಈಗ ಅವನಿಗೆ ಪೂರ್ವಾಪರಗಳ ಅರಿವು ಮೂಡಿಸಿ ಶಿವಜ್ಞಾನ ಉದಯಿಸುವಂತೆ ಮಾಡಬೇಕು. ಅದಕ್ಕಾಗಿ ಕವಿ ಸನ್ನಿವೇಶವೊಂದನ್ನು ಸೃಷ್ಟಿಸುತ್ತಾನೆ. ಅದು ಬಹಳ ಔಚಿತ್ಯಪೂರ್ಣವಾದ ಸನ್ನಿವೇಶ.

ಶಿವ ವೃದ್ಧವೇಷ ಧರಿಸಿ ನಂಬಿಯಣ್ಣನ ಮದುವೆ ಮಂಟಪಕ್ಕೆ ಬರುತ್ತಾನೆ. ಅಲ್ಲಿ ವಿಚಿತ್ರವಾಗಿ ವರ್ತಿಸತೊಡಗುತ್ತಾನೆ. ತುಪ್ಪದ ಡಬ್ಬದ ಮೇಲೆ ಬಿದ್ದು ತುಪ್ಪವನ್ನೆಲ್ಲ ಚೆಲ್ಲುತ್ತಾನೆ. ಮುದುಕ ಬಿದ್ದುಬಿಟ್ಟನೆಂಬ ಕನಿಕರದಿಂದ ಜನರೆಲ್ಲ ವೃದ್ಧವೇಷದ ಶಿವನನ್ನು ಎತ್ತಿ ನಿಲ್ಲಿಸಿದರೆ ಆ ವೃದ್ಧ ಒಂದೆರಡಡಿ ಇಟ್ಟು ಮತ್ತೆ ಘಳಿಗೆವಟ್ಟಲಮೇಲೆ ಬೀಳುತ್ತಾನೆ. ಘಳಿಗೆವಟ್ಟಲನ್ನು ಒಡೆದು ಮದುವೆ ಮಂಟಪದಲ್ಲಿ ಅಪಶಕುನವೆಸಗುತ್ತಾನೆ. ಜನರೆಲ್ಲ ವೃದ್ಧನ ಕೈ ಕಾಲು ಹಿಡಿದು ಒಂದು ಮನೆಯೊಳಗೆ ಹಾಕಿ ಬೀಗ ಹಾಕುತ್ತಾರೆ. ಆದರೆ ಕೆಲ ನಿಮಿಷದಲ್ಲಿಯೇ ಮುದುಕ ಮತ್ತೆ ಮದುವೆಯ ಮಂಟಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಜನರಿಗೆ ಇವನು ಕಾರಣಿಕನಿರಬೇಕೆಂದು ಅರ್ಥವಾಗುತ್ತದೆ. ಕಿಕ್ಕಿರಿದ ಜನರ ನಡುವೆ "ಎನ್ನ ತೊತ್ತಿನಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮಂ ಕೆಡಿಸಿಕೊಳ್ಳದಿರಿ ನಾನಪ್ಪಡೆ ಮದುವೆಯಾಗಲೀಯೆಂ ನೀವಿದಱೂದ್ಯಂತವೇನೆಂದಱಿಯಿರಿ ಅವಂ ನರಸಿಂಗಮೊನೆಯರ್ ಪೆತ್ತ ಮಗನಲ್ಲಂ ಕೊಂಡು ಸಾಕಿದ ದತ್ತು ಪುತ್ರನವಂ ......"[7] ಎಂದು ನಂಬಿಯಣ್ಣನ ವೃತ್ತಾಂತವನ್ನು ತಿಳಿಸುತ್ತಾನೆ. ಆಗ ಜನರೆಲ್ಲ ವೃದ್ಧನನ್ನು ವನದಲ್ಲಿ ಕುಳಿತಿದ್ದ ನಂಬಿಯಣ್ಣನ ಬಳಿಗೆ ಕಳುಹಿಸುತ್ತಾರೆ. ನಂಬಿಯಣ್ಣನ ಬಳಿಗೆ ಕೆಮ್ಮುತ್ತ, ನಡುಗುತ್ತ, ಕೊಡೆಕೋಲು,

ಕಮಂಡಲ, ಪ್ರಮಾಣ ಪತ್ರದೊಂದಿಗೆ ಬಂದ ಶಿವ "ನೀನೆಮ್ಮ ತೊತ್ತಿನ ಮಗಂ ನಿನ್ನ ಪೆಸರು ನಂಬಿಯೆಂಬುದು ಇನಿತು ದಿನಂ ಸುಶ್ರೂಷೆಗೆ ಸಮರ್ಥನಲ್ಲದ ಕಾರಣದಿಂ ಬಾರದಿರ್ದೆವು"[8] ಎಂದು ನುಡಿಯುತ್ತಾನೆ. ವೃದ್ಧವೇಷದ ಶಿವನ ಮಾತಿನಿಂದ ನಂಬಿಯಣ್ಣನಿಗೆ ಕೋಪ ಉಕ್ಕೇರುತ್ತದೆ. ಈ ಕೋಪದಲ್ಲಿ ಅವನನ್ನು ನೂಕಲು ಹೋಗುತ್ತಾನೆ. ಆದರೆ ನೂಕುವ ಮೊದಲೇ ಕೆಳಗೆ ಬಿದ್ದ ಶಿವ, ನಮ:ಶಿವಾಯ ನಮ:ಶಿವಾಯ ಎನ್ನತೊಡಗುತ್ತಾನೆ. ದೂರದ ದಿಣ್ಣೆಯ ಮೇಲೆ ನಿಂತು ಕಣಗಿಲೆ ಸೊಪ್ಪನ್ನು ಕೈಯಲ್ಲಿ ಹಿಡಿದು ಸಿಂಹಧ್ವನಿಯಿಂದ ಮತ್ತೆ ನಂಬಿಯಣ್ಣನ ವೃತ್ತಾಂತವನ್ನು ಸಾರಿ ಅದಕ್ಕೆ ಪ್ರಮಾಣ ಪತ್ರ ಇರುವುದೆಂದು 'ಶಿವದಿಡು'ತ್ತಾನೆ. ಇತ್ತ ಮಣಮಂದ ಪುತ್ತೂರಿನಿಂದ ಬಂದ ಜನ ವೃದ್ಧನೊಬ್ಬ ಮದುವೆಯ ಮಂಟಪದಲ್ಲಿ ಮಾಡಿದ ಅಮಂಗಳವನ್ನು ತಿಳಿಸುತ್ತಾರೆ. ಕೂಡಲೇ ಈ ವಿಷಯ ನರಸಿಂಗಮೊನೆಯರಿಗೆ ತಿಳಿಸಲು ಅವರು, ನಂಬಿಯಣ್ಣ ತಮ್ಮ ಮಗನಲ್ಲವೆಂದು ಒಪ್ಪಿ ಧರ್ಮ ಹೇಗಿದೆಯೋ ಹಾಗೆ ಮಾಡುವಂತೆ ತಿಳಿಸುತ್ತಾರೆ.

ವೃದ್ಧ ತಿಳಿಸಿದ ಸಾಕ್ಷಿದಾರರನ್ನು ಹುಡುಕಿ ಚತುರಂಗ ಬಲದೊಡನೆ ತಿರುವೆಣ್ಣನಲ್ಲೂರಿಗೆ ಬಂದ ನಂಬಿಯಣ್ಣ, ಜನರನ್ನು ಕರೆದು ವೃದ್ಧನ ಬಗೆಗೆ ವಿಚಾರಿಸಲು, ಆ ಜನರಿಗೂ ವೃದ್ಧನ ಬಗ್ಗೆ ತಿಳಿದಿರುವುದಿಲ್ಲ. ಆ ಹೊತ್ತಿಗೆ ವೃದ್ಧವೇಷದ ಶಿವ ಮತ್ತೆ ಪ್ರತ್ಯಕ್ಷವಾಗುತ್ತಾನೆ. ಸ್ಮಶಾನ ಭಟ್ಟ, ರುದ್ರಭಟ್ಟರನ್ನೆಲ್ಲ ಆತ್ಮೀಯವಾಗಿ ಮಾತನಾಡಿಸಿ ತನ್ನ ಪರಿಚಯ ಮಾಡಿಕೊಳ್ಳುತ್ತಾನೆ. ಪಡಿಪತ್ರವನ್ನು ತೆಗೆದು ಓದಿಸಲು ಪತ್ರದ ವಿಷಯ ಕೇಳಿ ಎಲ್ಲರೂ ಅಳತೊಡಗುತ್ತಾರೆ. ಆಗ ಇದೆಲ್ಲ ಮೋಸ ಠಕ್ಕು ಎಂದು ತಿಳಿದ ನಂಬಿಯಣ್ಣ, ಆ ಪಡಿ ಪತ್ರವನ್ನು ತೆಗೆದುಕೊಂಡು ಹರಿದುಹಾಕುತ್ತಾನೆ. ಆದರೂ ಶಿವನ ಆಟ ಇಲ್ಲಿಗೆ ನಿಲ್ಲುವುದಿಲ್ಲ. ಹರಿದ ಚೂರುಗಳನ್ನೆಲ್ಲ ಆಯ್ದುಕೊಂಡ ಶಿವ ಇದು ಪಡಿಪತ್ರ ಮಾತ್ರ; ಇದರ ಮೂಲ ಪತ್ರವೇ ಬೇರೆ. ಅದನ್ನು ಶಿವಾಲಯದೊಳಗೆ 'ತಮ್ಮರಸಿಯರು' ಬಚ್ಚಿಟ್ಟಿದ್ದಾರೆಂದು ತಿಳಿಸಲು, ನಂಬಿಯಣ್ಣ ಆ ಮೂಲ ಪತ್ರವನ್ನು ಕೊಡುವಂತೆ ಶಿವನನ್ನು ಬೇಡುತ್ತಾನೆ. ಆಗ ಶಿವ ಮೂಲ ಪತ್ರವನ್ನು ತೋರಿಸು ತ್ತೇನೆ ಬಾ ಎಂದು ಶಿವಾಲಯದ ಕಡೆ ಕರೆದುಕೊಂಡು ಹೋಗುತ್ತಾನೆ. ಶಿವಾಲಯದೊಳಗೆ ಕಾಲಿಡುತ್ತಿದ್ದಂತೆಯೇ ಶಿವ ತನ್ನ ನಿಜರೂಪುದೋರುತ್ತಾನೆ. ಭಕ್ತನಿಗೆ ಶಿವ 'ಮೂರ್ಧ್ನಿಘ್ರಾಣ' ಮಾಡುತ್ತಾನೆ. ನಂಬಿಯಣ್ಣನಿಗೆ ಶಿವಜ್ಞಾನ ಉದಯಿಸುತ್ತದೆ.

ಇಲ್ಲಿ, ಪ್ರಾಪಂಚಿಕ ಭೋಗದ ನಡುವೆ ಬಾಳುತ್ತಿರುವ ನಂಬಿಯಣ್ಣನಿಗೆ ಆ ಗುಂಗಿನಲ್ಲಿ ವಸ್ತುಸ್ಥಿತಿ ಅರಿವಾಗುತ್ತಿಲ್ಲ. ಹೇಳಿದರೂ ಕೇಳುವಷ್ಟು ವ್ಯವಧಾನ ಕೂಡ ಅವನಲ್ಲಿಲ್ಲ. ಆ ಸಂದರ್ಭದಲ್ಲಿ ಅದನ್ನು ಅವನಿಗೆ ಅರುಹುವುದಾದರೂ ಹೇಗೆ? ಇಂಥ ಮಹತ್ವದ ಕಾರ್ಯವನ್ನು ಹರಿಹರ ಮೇಲಿನ ಸನ್ನಿವೇಶವನ್ನು ಸೃಷ್ಟಿಸುವ ಮೂಲಕ ಯಶಸ್ವಿಯಾಗಿ ನಿಭಾಯಿಸಿದ್ದಾನೆ.

**'ಮಹಾದೇವಿಯಕ್ಕನ ರಗಳೆ'ಯಲ್ಲಿ ಬರುವ ಸೀರೆ ಎಳೆವ ಸನ್ನಿವೇಶ** : ಮಹಾದೇವಿಯಕ್ಕ ಮಹಾಭಕ್ತೆ. ಮಲ್ಲಿಕಾರ್ಜುನನೇ ತನಗೆ ಗಂಡನಾಗಬೇಕೆಂದು ಬಯಸಿದವಳು. ಆದರೆ ಬದುಕು ಅವಳು ಬಯಸಿದಂತೆ ಆಗುವುದಿಲ್ಲ. ಆದರೂ ಮಹಾದೇವಿಯಕ್ಕ ತನ್ನ ಅಚಲ ಭಕ್ತಿಯನ್ನು

ಬಿಡುವುದಿಲ್ಲ. ಭವಿಯ ಸಂಗದಲ್ಲಿದ್ದೇ ತನ್ನ ಭಕ್ತಿಯನ್ನು ಮುಂದುವರಿಸುತ್ತಾಳೆ. ಸಂಸಾರಿಯಾದರೂ ಇದ್ದೂ ಇಲ್ಲದಂತಿದ್ದಾಳೆ. ಮಹಾದೇವಿಯಕ್ಕನ ಈ ಅಚಲ ನಿಷ್ಠೆಯನ್ನು ಶಿವ ಮೆಚ್ಚುತ್ತಾನೆ. ಆದರೆ ಆ ನಿಷ್ಠೆ ಎಷ್ಟರ ಮಟ್ಟಿಗೆ ಸತ್ಯವಾದದ್ದು, ಮನಃಪೂರ್ವಕವಾದದ್ದು ಎಂಬುದನ್ನು ಪರೀಕ್ಷಿಸಲು ಬಯಸುತ್ತಾನೆ. ಇಲ್ಲಿ ಮಹಾದೇವಿಯಕ್ಕನ ಪರೀಕ್ಷೆಗೆ ಹರಿಹರ ಸೃಷ್ಟಿಸಿದ ಸಮಯೋಚಿತವಾದ ಸನ್ನಿವೇಶ ಮೆಚ್ಚುವಂತಹದ್ದು. ಈ ಸನ್ನಿವೇಶ ಅವಳ ನಿಷ್ಠೆ ಮತ್ತು ಭಕ್ತಿಯ ತೀವ್ರತೆಯನ್ನು ಸಹಜವಾಗಿ ಚಿತ್ರಿಸುತ್ತದೆ.

ಒಮ್ಮೆ ಮಹಾದೇವಿಯಕ್ಕ "ಕಾಮಾನುರಾಗರಸದೊಳಾಳ್ದು ಸುರತಾಂತಸಮಯಶ್ರಾಂತಿ ಭರಜನಿತಸುಖಸ್ವೇದಮಯ ಶರೀರ"[9]ಳಾಗಿ ಕೌಶಿಕನೊಡನೆ ಇರಲು ಅಲ್ಲಿಗೆ ಅದೇ ಸಮಯಕ್ಕೆ, ಮುಂದೆ ಮಾಹೇಶ್ವರರು ಹಿಂದೆ ಶಿಷ್ಯವರ್ಗವನ್ನುಳ್ಳ ಮಹಾದೇವಿಯಕ್ಕನ ಆರಾಧ್ಯ ದೇವರು ಪ್ರತ್ಯಕ್ಷರಾಗುತ್ತಾರೆ. ಶ್ರೀಗುರುವಿನ ಆಗಮನ ಮಹಾದೇವಿಯಕ್ಕನ ಕಿವಿ ತಾಕುತ್ತಿದಂತೆಯೇ ಅವಳು ಯಾವ ಸ್ಥಿತಿಯಲ್ಲಿದ್ದಳೋ ಅದೇ ಸ್ಥಿತಿಯಲ್ಲಿ ಬಂದು, ಶ್ರೀಗುರುವಿನ ಎದುರು ನಿಂತು ಗುರುವಿನ ಪಾದಕ್ಕೆ ನಮಸ್ಕರಿಸುತ್ತಾಳೆ. ಮಹಾದೇವಿಯಕ್ಕನ ಸ್ಥಿತಿಯನ್ನು ಕಂಡ ಗುರುಗಳು ಕಣ್ ಮುಚ್ಚಿ 'ದುಕೂಲ'ವನ್ನು 'ಬಾಸಣಿಸಿ'ಕೊಳ್ಳುವಂತೆ ಹೇಳುತ್ತಾರೆ. ಶ್ರೀಗುರುವಿನ ಮಾತಿಗೆ 'ತಗ್ಗಿ ಕುಗ್ಗಿ ಸಿಗ್ಗಾಗಿ' ಹೋದ ಮಹಾದೇವಿ ದುಕೂಲವನ್ನು ಉಟ್ಟುಕೊಳ್ಳಲು ಕೌಶಿಕನಿದ್ದ ಕಡೆ ಬರುತ್ತಾಳೆ. ದುಕೂಲಕ್ಕಾಗಿ ಕೈನೀಡಲು ಕೌಶಿಕನು "ತೆಗೆ ತೆಗೆ ನಿನಗೇನತ್ಯಂತ ಭಕ್ತಿಗೆ, ಮೀರಿದವಳ್ಗೆ ಸೀರೆಯೇಕೆಂದು"[10] ಸೀರೆ ಎಳೆದುಕೊಳ್ಳುತ್ತಾನೆ. ಆ ಕೂಡಲೇ ಮಹಾದೇವಿಯಕ್ಕ ಕೌಶಿಕನನ್ನು ತೊರೆದು ಶ್ರೀಗುರುವಿಗೆ ನಮಸ್ಕಾರ ಮಾಡಿ ಬೀಳ್ಕೊಟ್ಟು, ಕೇಶಾಂಬರೆಯಾಗಿ ಚೆನ್ನಮಲ್ಲಿಕಾರ್ಜುನನನ್ನು 'ಕರಸ್ಥಳದೊಳು ಬಿಜಯಂಗೈಸಿ' ಶ್ರೀಪರ್ವತಾಭಿಮುಖವಾಗಿ ನಡೆಯುತ್ತಾಳೆ. ಮಹಾದೇವಿಯಕ್ಕನ ಭಕ್ತಿ ಸಾಮಾನ್ಯದ್ದಾಗಿದ್ದರೆ ಇಂಥ ಸನ್ನಿವೇಶ ಮೂಡಿ ಬರುತ್ತಿರಲಿಲ್ಲ.

ಇನ್ನೂ ಹಲವಾರು ಸನ್ನಿವೇಶಗಳು ಹರಿಹರನ ರಗಳೆಗಳಲ್ಲಿ ಬರುತ್ತವೆ. 'ಬಸವರಾಜ ದೇವರ ರಗಳೆ'ಯಲ್ಲಿ ಮಾಯಿದೇವಿಯನ್ನು ಶಿವನ ಸೆಜ್ಜೆಮನೆಗೆ ಕಳುಹಿಸುವ ಸನ್ನಿವೇಶ, 'ಅಮರನೀತಿಯ ರಗಳೆ'ಯಲ್ಲಿ ವಸ್ತ್ರವ್ಯಾಪಾರಿಯಾದ ಅಮರನೀತಿಯ ಎಲ್ಲ ವಸ್ತ್ರಗಳನ್ನು ಒಂದೆಡೆ ಇಟ್ಟು ಇನ್ನೊಂದೆಡೆ ಶಿವನ 'ಕಚ್ಚುಟ'ವನ್ನಿಟ್ಟು ತೂಗಿ ಸಮನಾಗಿಸುವ ಸನ್ನಿವೇಶ, 'ತಿರುನೀಲಕಂಠನ ರಗಳೆ'ಯಲ್ಲಿ ತಿರುನೀಲಕಂಠ ಮತ್ತು ಮುತ್ತೈದೆಯರು ಕೋಲುಹಿಡಿದು ಕೊಳದಲ್ಲಿ ಮುಳುಗುವಂತೆ ಮಾಡುವ ಸನ್ನಿವೇಶ, 'ಮಲುಹಣನ ರಗಳೆ'ಯಲ್ಲಿ ಮಲುಹಣನು ಇಡೀ ರಾತ್ರಿ ಕೊರೆಯುವ ಚಳಿಯಲ್ಲಿ ಮಲುಹಣೆಯ ಮನೆಯ ಹಿತ್ತಲ ತಿಪ್ಪೆಯಲ್ಲಿ ಕೊರಗುತ್ತ ಕುಳಿತಿದ್ದ ಸನ್ನಿವೇಶ, 'ಚಂಡೇಶಪಿಳ್ಳೆಯ ರಗಳೆ'ಯಲ್ಲಿ ಭಕ್ತನಾದ ಚಂಡೇಶಪಿಳ್ಳೆಯು ಕೊಳಲನೂದಿ ಹಸುಗಳು ಹಾಲು ಕರೆಯುವಂತೆ ಮಾಡುವ ಸನ್ನಿವೇಶ— ಹೀಗೆ ಇನ್ನೂ ಹಲವು ಸನ್ನಿವೇಶಗಳು ಹರಿಹರನ ಕಥೆಗಳಲ್ಲಿ ಬರುತ್ತವೆ. ಇಲ್ಲಿ ಆಯಾಯ ಸಂದರ್ಭಗಳಿಗೆ ತಕ್ಕಂತೆ ಆಯಾಯ ಸನ್ನಿವೇಶಗಳನ್ನು ಸೃಷ್ಟಿಸಿ ಕವಿ ಕಥೆಯನ್ನು ಅರ್ಥಪೂರ್ಣವಾಗಿಸುತ್ತಾನೆ.

## 4.6 ಘಟನೆಗಳನ್ನು ಕಟ್ಟಿಕೊಡುವ ಕಲೆ

ಸನ್ನಿವೇಶಗಳನ್ನು ನಿರ್ಮಿಸಿದ ಹಾಗೆಯೇ ಘಟನೆಗಳನ್ನು ನಿರ್ಮಿಸುವಲ್ಲಿಯೂ ಕವಿ ತನ್ನ ಚಾತುರ್ಯವನ್ನು ಮೆರೆಯುತ್ತಾನೆ. ಪ್ರತಿಯೊಂದು ಕಥೆಯಲ್ಲೂ ಹಲವು ಘಟನೆಗಳನ್ನು ಕಟ್ಟಿಕೊಡುವ ಮೂಲಕ ಭಕ್ತನ ಭಕ್ತಿಯ ಮಹತ್ವವನ್ನು ಚಿತ್ರಿಸುತ್ತಾ ಹೋಗುತ್ತಾನೆ. ಈ ಘಟನೆಗಳು ಭಕ್ತಿಚಿತ್ರಣಕ್ಕಾಗಿ ನಿರ್ಮಿಸಿಕೊಂಡ ಮೆಟ್ಟಿಲುಗಳಿದ್ದಂತೆ. ಒಂದೊಂದೇ ಘಟನೆಗಳನ್ನು ಕೂಡಿಸುತ್ತಾ ಕೂಡಿಸುತ್ತಾ ಅಂತಿಮವಾಗಿ ಭಕ್ತಿಯ ದಿವ್ಯದರ್ಶನವನ್ನು ಕವಿ ಮಾಡಿಸುತ್ತಾನೆ. ಆತ ಕಟ್ಟಿಕೊಡುವ ಘಟನೆಗಳಲ್ಲಿ ಸ್ವಲ್ಪವೂ ಕೃತಕತೆಯನ್ನು ಕಾಣಲಾಗದು. ಅವು ಬೇರೆ ಎಲ್ಲಿಂದಲೋ ಎಳೆದುತಂದು ತುರುಕಿದ ಪ್ರವೃತ್ತಿಗಳಿಗನುಗುಣವಾಗಿಯೇ ಹೊಂದಿಕೊಂಡು ಬಂದಂತಿರುತ್ತವೆ. ಈ ಘಟನೆಗಳು ಒಂದು ಕಥೆಯೊಳಗೆ ಹೇಗೆ ಹೆಣೆದುಕೊಂಡಿವೆ ಎನ್ನುವುದಕ್ಕೆ ಉದಾಹರಣೆ:

**ಕಣ್ಣಪ್ಪನ ರಗಳೆ :** ಈ ಕಥೆಯಲ್ಲಿ ಕವಿ ಮೊದಲು ಭಕ್ತನ ವೃತ್ತಾಂತವನ್ನು ಪರಿಚಯಿಸುತ್ತಾನೆ. ಅನಂತರ, ಕಣ್ಣಪ್ಪ ತನ್ನನ್ನು ಬೇಟೆಗೆ ತೊಡಗಿಸಿಕೊಂಡದ್ದು, ಬೇಟೆಯ ಸಂದರ್ಭದಲ್ಲಿ ಅವನು ಅಟ್ಟಿಸಿಕೊಂಡು ಹೋದ ಹುಲ್ಲೆ ಕಾಡಿನೊಳಗೆ ಪ್ರವೇಶಿಸಿ ಕಾಳಹಸ್ತೀಶ್ವರ ದೇವಾಲಯದ ಹತ್ತಿರ ಕಣ್ಮರೆಯಾದದ್ದು, 'ನೋಡುವೆಂ ನಿನ್ನ ನನ್ನಿಗಳನಿಂದೆನ್ನವನೆ' ಎನ್ನುತ್ತ ಕಣ್ಣಪ್ಪ ಅಲ್ಲಿಯೇ ನಿಲ್ಲುವುದು, ಮತ್ತೆ ಮರೆಯಾದ ಹುಲ್ಲೆ ಕಾಣಿಸಿಕೊಳ್ಳುವುದು, ಬೇಟೆಯಿಂದ ಬಂದ ಆಹಾರವನ್ನು ಶಿವನಿಗೆ ಅರ್ಪಿಸುವ ನೇಮದಲ್ಲಿ ತೊಡಗುವುದು, ದೇವಾಲಯದಲ್ಲಿ ರಕ್ತ ಮಾಂಸಗಳು ಹರಡಿರುವುದನ್ನು ಕಂಡ ಶಿವಬ್ರಾಹ್ಮಣ ಅಸಹ್ಯಪಟ್ಟುಕೊಂಡು ಶುದ್ಧಮಾಡಿ ದೇವಾಲಯಕ್ಕೆ ಬೀಗ ಹಾಕಿ ಹೋಗುವುದು, ಬೇಟೆಯಿಂದ ಬಂದ ಕಣ್ಣಪ್ಪ 'ಕದವ ತೆಜೆ' ಎನ್ನವನೆ ಎನ್ನುತ್ತಿದ್ದಂತೆ ಮತ್ತೆ ದೇವಾಲಯದ ಕದ ತೆರೆಯುವುದು, ಕಣ್ಣಪ್ಪ ಮತ್ತೆ ತನ್ನ ಎಂದಿನ ನಿಷ್ಠೆಯನ್ನು ಮುಂದುವರಿಸುವುದು. ಮರು ದಿನ ಬಂದ ಬ್ರಾಹ್ಮಣ ಮತ್ತೆ ದೇವಾಲಯದಲ್ಲಿ ರಕ್ತಮಾಂಸ ಬಿದ್ದಿರುವುದನ್ನು ನೋಡಿ ಸಿಟ್ಟಿನಿಂದ ಹಿಂತಿರುಗುವುದು, ಶಿವ ಪಾರ್ವತಿಯರಿಬ್ಬರೂ ಭಕ್ತನ ಪರೀಕ್ಷೆಗಾಗಿ ಸಿದ್ಧವಾಗುವುದು, ಕಾಳ ಹಸ್ತೀಶ್ವರನ ಕಣ್ಣಲ್ಲಿ ನೀರು ಸೋರುವಂತೆ ಮಾಡುವುದು, ಇದನ್ನು ನೋಡಿದ ಶಿವಬ್ರಾಹ್ಮಣ ಹೆದರಿ ಊರಿನವರಿಗೆ ತಿಳಿಸುವುದು, ಶಿವನ ಕಣ್ಣಲ್ಲಿ ರಕ್ತ ಸೋರುತ್ತಿದ್ದುದನ್ನು ಕಂಡ ಕಣ್ಣಪ್ಪ ತನ್ನ ಕಣ್ಣನ್ನೇ ಕಿತ್ತು ಶಿವನಿಗೆ ನೀಡುವುದು, ಇನ್ನೊಂದು ಕಣ್ಣಲ್ಲೂ ರಕ್ತ ಸುರಿಯಲು ಅದನ್ನೂ ಹಾಗೆಯೇ ಮಾಡುವುದು— ಹೀಗೆ ಹಲವು ಘಟನೆಗಳನ್ನು ಕವಿ ಚಿತ್ರಿಸುತ್ತಾನೆ. ಆದರೆ ಈ ಎಲ್ಲ ಘಟನೆಗಳ ಉದ್ದೇಶ ಭಕ್ತಿಯನ್ನು ಸಾರುವುದು. ಕವಿಯ ಈ ಉದ್ದೇಶವನ್ನು ಈ ಎಲ್ಲ ಘಟನೆಗಳು ಅಷ್ಟೇ ಸಹಜವೆಂಬಂತೆ ಕಟ್ಟಿಕೊಡುತ್ತವೆ.

## 4.7 ಭಕ್ತಿಪರತೆ ಹಾಗೂ ತನ್ಮಯತೆ

ಭಕ್ತಿಪರತೆ ಹಾಗೂ ತನ್ಮಯತೆ ಹರಿಹರನ ಕಥೆಗಾರಿಕೆಯ ಇನ್ನೊಂದು ಲಕ್ಷಣ. ಮೊದಲೇ ತಿಳಿದಿರುವಂತೆ ಹರಿಹರನ ರಗಳೆಗಳ ರಚನೆಯ ಮೂಲ ಉದ್ದೇಶವೇ ಭಕ್ತಿಯ ಮಹಿಮೆಯನ್ನು

ಸಾರುವಿಕೆ. ಮೂಲತ: ಭಕ್ತನಾದ ಹರಿಹರ ಅದರ ಚಿತ್ರಣವನ್ನು ಕೊಡುವುದು ಸಾಮಾನ್ಯ. ಯಾವುದನ್ನೇ ಆಗಲಿ ನೇರವಾಗಿ ಹೇಳಿದರೆ ಅದು ತನ್ನ ಉದ್ದೇಶವನ್ನು ಸಾಧಿಸುವುದರಲ್ಲಿ ವಿಫಲವಾಗತ್ತದೆ ಎಂಬ ಸತ್ಯ ಹರಿಹರನಿಗೂ ಗೊತ್ತಿದೆ. ಆದ್ದರಿಂದ ಆತ ಹೇಳಬೇಕಾದ ಮಹತ್ವದ ಭಕ್ತಿಯನ್ನು ಕಥಾನಾಯಕನ ಮೂಲಕ ಹೇಳುತ್ತಾ ಹೋಗುತ್ತಾನೆ. ಕಥೆ ಎಷ್ಟೇ ವೇಗದಿಂದ ಓಡುತ್ತಿರಲಿ ಭಕ್ತಿಯ ತಾಣ ಸಿಕ್ಕಿತೆಂದರೆ ಸಾಕು ಅಲ್ಲಿಯೇ ನಿಂತುಬಿಡುತ್ತಾನೆ. ಮೈಮರೆತು ಭಕ್ತಿಯ ಬಣ್ಣನೆಯಲ್ಲಿ ತೊಡಗುತ್ತಾನೆ. ಕೆಲವೊಮ್ಮೆ ಈ ಬಣ್ಣನೆ ಒಂದೊಂದು ಆಶ್ವಾಸಗಳನ್ನೇ ಆವರಿಸಿಕೊಂಡಿರುವುದೂ ಉಂಟು. ಮಹಾದೇವಿಯಕ್ಕನ ರಗಳೆಯ ಮೊದಲನೆಯ ಆಶ್ವಾಸದಲ್ಲಿ, ಆಕೆ ಶಿವಭಕ್ತೆಯ ಉದರದಲ್ಲಿ ಹುಟ್ಟಿ ಬೆಳೆದು ದೊಡ್ಡವಳಾದುದರ ವರ್ಣನೆ ಇದೆ. ಮೂರನೆಯ ಆಶ್ವಾಸದಲ್ಲಿ ವೈಹಾಳಿಯಿಂದ ಹಿಂತಿರುಗಿ ಬರುವ ಕೌಶಿಕರಾಜ, ಅಕ್ಕನ ಮೇಲೆ ಆತನ ಮೋಹ, ಮದುವೆಯ ರಾಯಭಾರ, ನಿರಾಕರಣೆ, ಸ್ವೀಕಾರಗಳ ಸನ್ನಿವೇಶಗಳು ಬರುತ್ತವೆ. ಹೀಗೆ ಸಾಗಿಬಂದ ಕಥೆ ಐದನೆ ಆಶ್ವಾಸಕ್ಕೆ ಬರುತ್ತಿದ್ದಂತೆ ಮಹಾದೇವಿಯಕ್ಕನ ಭಕ್ತಿಯ ವರ್ಣನೆ ಪ್ರಾರಂಭವಾಗುತ್ತದೆ.

> ದೇವ ಎನ್ನ ಹೃದಯ ಕಮಲದೊಳಗೆ ಪ್ರಜ್ವಲಿಪ್ಪ ಬೆಳಗೆ
> ದೇವ ಎನ್ನ ಮನದ ಮೊನೆಯೊಳೊಪ್ಪುತಿರ್ಪ ಬೆಳಗಿನೊಳಗೆ
> ------------------------------------------
> ಬಾರ ನಿನ್ನ ತೊತ್ತು ಭೃತ್ಯಳಾನೆನುತ್ತೆ ಮತ್ತೆ ಕರೆಯೆ[11]

ಎಂದು ಮಹಾದೇವಿಯಕ್ಕನ ಪೂಜಾಸಂಭ್ರಮವನ್ನು ಕವಿ ಮೆರೆಯುತ್ತಾನೆ. ಬಸವರಾಜದೇವರ ರಗಳೆಯಲ್ಲೂ ಹೀಗೆ ಪೂಜೆಯಲ್ಲಿ ತಲ್ಲೀನನಾಗುವ ಒಂದು ಸಂದರ್ಭವಿದೆ. ಮೂರನೆಯ ಸ್ಥಲದಲ್ಲಿ ಬರುವ ಈ ಪೂಜಾವರ್ಣನೆಯಲ್ಲಿ ಹರಿಹರನೇ ಬಸವನಾಗಿ ಪೂಜಾತಲ್ಲೀನನಾಗಿರುವಂತೆ ಭಾಸವಾಗುತ್ತದೆ.

> ನಡುವೆ ಪೂವಡ್ಡಮಿರೆ ನಡುಗಿ ಕೆಲ ಸಾರ್ಚುತಂ
> ಪೂಜಿಸುವ ಕೈ ಸಡಿಲಲಮರ್ದಪ್ಪಿ ಕರಗುತಂ
> ರಾಜಭೂಷಣನನಡಿಗಡಿಗಪ್ಪಿ ನೆರೆವುತಂ
> ನೋಟ ವಕ್ರತೆಯೆಂದು ಮೈಯಿಕ್ಕಲಂಜುತಂ
> --------------------------------
> ಶಿವ ಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ[12]

ಹೀಗೆ ಪೂಜೆಯಲ್ಲಿ ತಲ್ಲೀನನಾಗುತ್ತಾನೆ. ಅವನ ಈ ಪೂಜೆ "ಲಿಂಗ ಜಂಗಮವೋ ಮೇಣ್ ಜಂಗಮವೆ ಲಿಂಗವೋ / ಲಿಂಗ ಜಂಗಮವೆರಡು ಇಳೆಯೊಳು ವಿಭೇದವೊ"[13] ಎಂಬಂತಿರುತ್ತದೆ. ಸುಮಾರು ನೂರ ಐವತ್ತೇಳು ಸಾಲುಗಳವರೆಗೆ ಹಬ್ಬಿರುವ ಈ ಪೂಜಾವರ್ಣನೆ ಬಸವಣ್ಣನ

ಪೂಜಾಸಂಭ್ರಮವನ್ನು ಅನನ್ಯವಾಗಿ ಚಿತ್ರಿಸುತ್ತದೆ.

ಕುಂಬರಗುಂಡಯ್ಯನ ರಗಳೆಯಲ್ಲೂ ಇಂತಹ ತಲ್ಲೀನತೆಯ ಸನ್ನಿವೇಶವನ್ನು ಕವಿ ಚಿತ್ರಿಸಿದ್ದಾನೆ. ಅಲ್ಲಿ ಭಕ್ತಿಯಲ್ಲಿ ಮೈಮರೆತು ಕುಣಿಯುವ ಭಕ್ತ ಗುಂಡಯ್ಯನೊಡನೆ, ಶಿವನೂ ಕುಣಿಯುವ ಸನ್ನಿವೇಶ ಸುಂದರವಾಗಿದೆ.

'ಪುಷ್ಪರಗಳೆ'ಯಲ್ಲಿ ಬರುವ ಭಕ್ತಿ ಚಿತ್ರಣ ಅಸ್ವಾದೃಶವಾದುದು. ಅದು ಹರಿಹರನ ಭಕ್ತಿಯ ತೀವ್ರತೆಯನ್ನು ಅತ್ಯಂತ ಆತ್ಮೀಯವಾಗಿ ಚಿತ್ರಿಸುತ್ತದೆ. ಅಲ್ಲಿ ಬೆಳಿಗ್ಗೆಯೇ ಎದ್ದು ಹೂ ಕೊಯ್ಯಲು ತೋಟಕ್ಕೆ ಹೊರಡುವ ಕವಿ ಪ್ರತಿಯೊಂದು ಹೂಗಳನ್ನು ಮನಮುಟ್ಟಿ ಕೀಳುವ ದೃಶ್ಯ, ತಾನು ಕೊಯ್ದಿರುವ ಹೂವನ್ನು ಎಲ್ಲಿ ದುಂಬಿಗಳು ಮುತ್ತುವವೋ ಎಂದು ಜೋಪಾನಿಸಿ ದುಂಬಿಗಳನ್ನು ಓಡಿಸುವ ದೃಶ್ಯ, ಹೂಮಾಲೆಯನ್ನು ಶಿವನಿಗೆ ಅರ್ಪಿಸುವ ದೃಶ್ಯಗಳು ಹೃದಯ ಸ್ಪರ್ಶಿಯಾಗಿ ಮೂಡಿಬಂದಿವೆ. ಕವಿಯ ಪೂಜಾತಲ್ಲೀನತೆಗೆ ಇದಕ್ಕಿಂತ ಉತ್ತಮವಾದ ಉದಾಹರಣೆ ಬೇರೊಂದಿಲ್ಲ.

ಪ್ರತಿಯೊಂದು ರಗಳೆಯಲ್ಲೂ ಭಕ್ತಿಪರವಶತೆಯ ದೃಶ್ಯಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ. ಆದರೆ ಮೇಲೆ ಹೇಳಿದ ರಗಳೆಗಳಲ್ಲಿ ಸ್ವಲ್ಪ ಮಟ್ಟಿನ ಹೆಚ್ಚುಗಾರಿಕೆಯಿದೆಯಷ್ಟೆ.

## 4.8 ವಿಷಯಕ್ಕೆ ಹೊರತಾದುದರ ನಿರಾಕರಣೆ

ಹರಿಹರನ ಕಥೆಗಾರಿಕೆಯಲ್ಲಿ ಕಂಡುಬರುವ ವಿಶೇಷ ಗುಣಗಳಲ್ಲಿ ವಿಷಯಕ್ಕೆ ಹೊರತಾದುದರ ನಿರಾಕರಣೆಯೂ ಒಂದು. ಕವಿ ಶಿವಶರಣರ ಕಥೆಗಳನ್ನು ಬರೆಯಲು ಹೊರಟಿದ್ದರ ಮೂಲ ಉದ್ದೇಶ ಭಕ್ತಿಯ ಮಹೋನ್ನತಿಯ ಚಿತ್ರಣವಾದ್ದರಿಂದ, ಯಾವುದು ಭಕ್ತಿಯ ಚಿತ್ರಣಕ್ಕೆ ಅನುಕೂಲಕರವಲ್ಲವೋ ಅಂಥ ಚಿತ್ರಣವನ್ನು ಕಾವ್ಯದಲ್ಲಿ ನಿರಾಕರಿಸುತ್ತಾನೆ. ಇದರಿಂದ ಭಕ್ತನ ವಾಸ್ತವ ಬದುಕಿನ ಹಲವು ವಿವರಗಳು ಕಥೆಯಿಂದ ದೂರವಾಗುತ್ತವೆ.

ಹರಿಹರ 'ಬಸವರಾಜದೇವರ ರಗಳೆ'ಯ ಸಂದರ್ಭದಲ್ಲಿ "ಶಾಪಗ್ರಸ್ತನಾಗಿ ಇಳೆಗಿಳಿದ ವೃಷಭಮುಖನೆಂಬ ಗಣನು ಬಾಗೇವಾಡಿಯಲ್ಲಿ ಬಸವನೆಂಬ ಹೆಸರಿನಿಂದ ಹುಟ್ಟಿದನು. ತಾಯಿ ತಂದೆ ಶಿವೈಕ್ಯರಾಗಲು ಕಪ್ಪಡಿ ಸಂಗಮಕ್ಕೆ ಬಂದು ಅಸದಳ ಭಕ್ತಿಯಿಂದ ಶಿವನನ್ನು ಪೂಜಿಸುತ್ತ ಇದ್ದನು. ಶಿವನಾಜ್ಞೆಯಂತೆ ಬಿಜ್ಜಳರಾಜನಿದ್ದ ಮಂಗಳವಾಡಕ್ಕೆ ಬಂದು ಅವನ ಆಸ್ಥಾನದಲ್ಲಿ ಭಂಡಾರಿಯಾದನು. ಗಂಗಾದೇವಿ ಮಾಯಿದೇವಿಯರನ್ನು ಮದುವೆಯಾದನು. ನಿಚ್ಚ ಶಿವರಾತ್ರಿ ಮಾಡುವೆನೆಂಬ ನೇಮ ಹಿಡಿದನು. ಊರಿನ ಶಿವಲಿಂಗಗಳೆಲ್ಲದರ ಮೇಲೆ ಕೇದಗೆಯೆಸಳು ಕಾಣಿಸಿದ ಪವಾಡವನ್ನು ತೋರಿದನು. ಕಪಟಿಗಳು ಕಟ್ಟಿಕೊಂಡು ಬಂದಿದ್ದ ಬದನೆಕಾಯಿಗಳು ಲಿಂಗವಾದ ಪವಾಡ ಮೆರೆದನು. ಶರಣರೇ ಜೀವವಾಗಿದ್ದ ಬಸವಣ್ಣನು ಸಂಬೋಳಿ ನಾಗಿದೇವನೆಂಬ ಶರಣನ ಕಾಲ ಹೆಬ್ಬೆರಳಿನಿಂದ ಹಾಲು ಹರಿದ ಪವಾಡ ತೋರಿಸಿದನು. ಅವನ ಜೀವ ಶರಣರ ಹಿಂದೆ ತಿರುಗಿತು, ಅವರು ಹಿಂದಿರುಗಿದಾಗ ಅವನ ಜೀವವೂ ಹಿಂದಿರುಗಿತು. ಅಸಂಖ್ಯಾತ ಶರಣರಿಗೆ ಉಪಚಾರ ಮಾಡಿದನು. ಶರಣನನ್ನು ತೃಪ್ತಿಪಡಿಸಲು ಉಳ್ಳಿಯ

ಮೆರವಣಿಗೆಯನ್ನೇ ಮಾಡಿದನು. ವಿಟವೇಷದಿಂದ ಬಂದು ಪತ್ನಿಯನ್ನು ಕೇಳಿದ ಶಿವನಿಗೆ ಪತ್ನಿ ಮಾಯಿದೇವಿಯನ್ನೇ ಅರ್ಪಿಸಿದನು. ಸಂದರ್ಶನ ಕೊಟ್ಟು ಅಲ್ಲಮನಿಂದ ನಿರ್ದೇಶನ ಪಡೆದನು."[14] ಎಂಬ ಇಷ್ಟು ವಿಚಾರಗಳನ್ನು ಮಾತ್ರ ಚಿತ್ರಿಸಿದ್ದಾನೆ. "ಬಸವಣ್ಣನ ಭಕ್ತಜೀವನಕ್ಕೆ ಪೋಷಕವಾಗದ ಘಟನೆಗಳು ಕಥೆಯಲ್ಲಿ ಕೆಲವು ಕಡೆ ತಲೆ ಎತ್ತಿದಾಗ ಹರಿಹರ ಅವುಗಳನ್ನು ಗಮನಿಸದೆ ಕಥೆಯನ್ನು ಮುಂದುವರಿಸಿರುವುದು ಕಂಡುಬರುತ್ತದೆ."[15] ಬಸವಣ್ಣನ ತಂದೆ ತಾಯಿಗಳು ಯಾರು? ಅವರ ಹೆಸರೇನು? ಎನ್ನುವುದನ್ನು ತಿಳಿಸುವುದಿಲ್ಲ. "ಸಿದ್ಧದಂಡಾಧಿಪ, ಮಡದಿಯರಾದ ಗಂಗಾದೇವಿ-ಮಾಯಿದೇವಿ, ಮಾಯಿದೇವಿಯ ಹೊಟ್ಟೆಯಲ್ಲಿ ಹುಟ್ಟಿದ ಸಿದ್ಧರಸ - ಇವರ ಬಗ್ಗೆ ಹೆಚ್ಚಿಗೆ ಏನನ್ನೂ ಹೇಳದಿರುವುದು ಗಮನಾರ್ಹ. ಸಚಿವ ಸಿದ್ಧಂಗೆ ಸ್ವರ್ಗದ ದಾಳಿ ಸಂಭವಿಸಿದುದನ್ನು ಹೇಳಿದ್ದಕ್ಕಿಂತ ಹೆಚ್ಚಿನ ವೃತ್ತಾಂತ ನಮಗೆ ತಿಳಿಯುವುದಿಲ್ಲ. ಮಾಯಿದೇವಿಗೆ ಮಗ ಹುಟ್ಟಿ ಬೆಳೆದನು. 'ಒಂದೆರಡು ವರಿಸಂ ನಳನಳಿಸಿ ಬೆಳೆವುತಿಪ್ಪ' ಮಗನ ಬಾಲಲೀಲೆಯನ್ನು ಕಂಡು ಬಸವಣ್ಣನು ಸಂತುಷ್ಟನಾದನು ಎಂದು ಹೇಳಿದ ಮೇಲೆ ಸಿದ್ಧರಸನ ಬಗ್ಗೆ ಏನನ್ನೂ ಪ್ರಸ್ತಾಪಿಸುವುದಿಲ್ಲ"[16] ಮಹಾದೇವಿಯಕ್ಕನ ರಗಳೆಯಲ್ಲೂ ಹೀಗೆಯೇ. ಇಲ್ಲಿ ಕವಿ "ಕಿನ್ನರಿ ಬೊಮ್ಮಯ್ಯನನ್ನು ಕಂಡಮೇಲೆ ಅಕ್ಕನು ಆವಾವ ಪರಿಯಲ್ಲಿ ತನುವನ್ನು ನವೆಸಿದಳು ಎನ್ನುವುದನ್ನು ಹೇಳುವುದಿಲ್ಲ. 'ಪಲಕೆಲವುದಿವಸಮೀತೆರದಿ' 'ಗೀತಮಂ ಪಾಡುತಿರೆ' 'ಸುಖದಿಂದಿರ್ದು' ಭವಿಯ ಸಂಗದ ತನುವನೊಲ್ಲೆನೆಂದು ಶಿವನನ್ನು ಪ್ರಾರ್ಥಿಸುತ್ತ ಕೈಲಾಸವನ್ನು ಸೇರಿದಳೆಂದು"[17] ಮಾತ್ರ ಹೇಳಿ ಅನಗತ್ಯವೆನಿಸಿದ್ದನ್ನು ನಿರಾಕರಿಸುತ್ತಾನೆ. ರೇವಣಸಿದ್ಧೇಶ್ವರನ ರಗಳೆಯಲ್ಲಿ ರುದ್ರಮುನಿದೇವನ ಬಗೆಗೆ ಏನನ್ನೂ ಹೇಳುರುವುದಿಲ್ಲ. ತಾಯಿಯ ಗರ್ಭದಿಂದ ಬರುವ ನೋವನ್ನು ಅರಿಯದೆ ರುದ್ರಮುನಿದೇವನು ಹುಟ್ಟಿ ಬಂದನೆಂಬ ಉಲ್ಲೇಖ ತೀರ ಸಂಕ್ಷಿಪ್ತವಾಗಿದೆ. ಹರಿಹರನ ಈ ಕ್ರಮ ನೂತನರ ರಗಳೆಗಳಲ್ಲಿ ಮಾತ್ರವಲ್ಲದೆ ಪುರಾತನರ ರಗಳೆಯಲ್ಲೂ ಕಂಡುಬರುತ್ತದೆ.

## 4.9 ಕಥನೈಕಾಗ್ರತೆ

ಹರಿಹರನ ಕಥೆಗಾರಿಕೆಯಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಎದ್ದು ತೋರುವ ವೈಶಿಷ್ಟ್ಯವೆಂದರೆ ಕವಿಯ ಕಥನೈಕಾಗ್ರತೆ. "ಅಲ್ಲಿ ಕಥೆ ಅಡಿಯಿಂದ ಮುಡಿಯವರೆಗೆ ಒಂದೇ ಸಮನೆ ಓಡುತ್ತಿರುತ್ತದೆ. ಭಕ್ತನ ಪರಿಚಯದಿಂದ ಪ್ರಾರಂಭವಾದ ಕಥಾವಾಹಿನಿ ತನ್ನ ಸೆಳವಿನಲ್ಲಿ ಪಾಠಕ ಮಹಾಶಯರನ್ನು ತೇಲಿಸಿಕೊಂಡು ಕರೆದೊಯ್ಯುತ್ತದೆ. ಹರಿಯುವ ಆ ಹೊಳೆಯ ತೀರದಲ್ಲಿ ಅನೇಕ ಸುಂದರ ದೃಶ್ಯಗಳಿವೆ. ತೆಂಗು, 'ಕೌಂಗು'ಗಳ ಬನಗಳಿವೆ. ಪ್ರಕೃತಿ ಸೌಂದರ್ಯದಿಂದ ತುಂಬಿ ತುಳುಕುವ ಊರು-ಕೇರಿಗಳಿವೆ. ಆದರೆ ಅವುಗಳನ್ನು ಬಹಳ ಹೊತ್ತಿನವರೆಗೆ ನಿಂತು ನೋಡುವುದಕ್ಕೆ ಅವಕಾಶವಿಲ್ಲ. ಆ ಸನ್ನಿವೇಶ ಮತ್ತು ವಾತಾವರಣವನ್ನು ಮಾತ್ರ ನೋಟದಲ್ಲಿ ನಿಲ್ಲಿಸಿಕೊಂಡು ಮುಂದಕ್ಕೆ ತೆರಳಬೇಕಾಗಿದೆ.[18] "ಚಂದ್ರೋದಯ, ಸೂರ್ಯೋದಯ ಇತ್ಯಾದಿ ಹದಿನೆಂಟು ವರ್ಣನೆಗಳೊಡನೆ ವಿವರಿಸಲು ಅಲ್ಲಿ ಅವಕಾಶವೇ ಇಲ್ಲ. ಭಕ್ತನ ಜೀವನದ

ಪರಿಚಯ, ಆತನ ಜೀವನದ ಘಟನೆಗಳೊಡನೆ ತೇಲಿ, ಆತನ ಬಾಳಿನೊಡನೆ ಸಮರಸವಾಗಿ, ಆತನಿದ್ದ ಆವರಣದೊಂದಿಗೆ ಒಂದಾಗಿ ರಸೈಕ್ಯ ಮತ್ತು ಧರ್ಮಬೋಧೆಯನ್ನು ಪಡೆಯುವವರೆಗೆ ಕಥಾಸೆಳವು ಓದುಗರನ್ನು ಅತ್ತಿತ್ತ ಅಲುಗಗೊಡುವುದಿಲ್ಲ."[19] ಅವನ ಕಥನೈಕಾಗ್ರತೆಗೆ ಕೊಡಗೂಸಿನ ರಗಳೆ ಒಂದು ಉತ್ತಮ ನಿದರ್ಶನ.

ಇಡೀ ಕಥೆಯನ್ನು ಮೂರು ಹಂತಗಳಾಗಿ ವಿಂಗಡಿಸಬಹುದು.

ಕೊಡಗೂಸು ಉತ್ತರ ದಿಶಾಭಾಗದ ಶಿವಪುರವೊಂದರಲ್ಲಿದ್ದ ಶಿವಭಕ್ತೆಯೋರ್ವಳ ಮಗಳು. ಶಿವಭಕ್ತೆ ನಿತ್ಯವೂ ಕಲ್ಲಿನಾಥನಿಗೆ ಹಾಲಿನ ಅಭಿಷೇಕ ಮಾಡುವ ನೇಮವನ್ನಿಟ್ಟು ಕೊಂಡಿದ್ದಳು. ಒಮ್ಮೆ ಕೊಡಗೂಸು ತನ್ನ ತಾಯಿಗೆ -

ಗಡಿಗೆವಾಲಂ ಕೊಂಡು ಪೋದಿರೆಲ್ಲಿಗೆ ತಾಯೆ
ಆರ್ಗೆರೆದು ಬಂದೆ ನೊರೆವಾಲನೆನಗರುಪವ್ವ[20]

ಎಂದು ಕೇಳುತ್ತದೆ. ಆಗ ಶಿವಭಕ್ತೆ ಶಿವನ ರೂಪವನ್ನು ಮಗಳಿಗೆ ತಿಳಿಸುತ್ತಾಳೆ. (ಒಂದನೆ ಹಂತ)

ಕೊಡಗೂಸು ಶಿವನ ಧ್ಯಾನದಲ್ಲೇ ಬೆಳೆಯುತ್ತದೆ. ಅವಳಿಗೆ ಹತ್ತುವರ್ಷ ತುಂಬಿದಾಗ ತಾಯಿ ತಾನು ಮುಟ್ಟಾದ ಕಾರಣ ಶಿವನಿಗೆ ಹಾಲನೆರೆದು ಬರುವಂತೆ ಮಗಳಿಗೆ ತಿಳಿಸುತ್ತಾಳೆ. ಆಗ ಕೊಡಗೂಸು ದೇವರಿಗೆ ಹಾಲನೆರೆಯುವ ಭಾಗ್ಯ ಸಿಕ್ಕಿದ್ದಕ್ಕೆ ಹರುಷಗೊಂಡು, ಸ್ನಾನ ಮಾಡಿ, ಮಡಿ ಬಟ್ಟೆ ಧರಿಸಿ, ಶಿವಾಲಯಕ್ಕೆ ಹೊರಡುತ್ತಾಳೆ. (ಎರಡನೆ ಹಂತ)

ಶಿವಾಲಯದಲ್ಲಿ ಶಿವಲಿಂಗದ ಮುಂದೆ ನಿಂತು "ಎನ್ನ ರನ್ನವೆ ಎನ್ನ ಹೊನ್ನೆ ಹಾಲ್ಗುಡಿಯಯ್ಯ / ಎನ್ನ ಪರಿಸವೆ ಎನ್ನ ಚೆನ್ನೆ ಹಾಲ್ಗುಡಿಯಯ್ಯ"[21] ಎಂದು ಪರಿಪರಿಯಾಗಿ ಶಿವನನ್ನು ಬೇಡುತ್ತಾಳೆ. ಎಷ್ಟು ಹೊತ್ತಾದರೂ ಶಿವ ಹಾಲು ಕುಡಿಯುವುದಿಲ್ಲ. ಕೊಡಗೂಸಿಗೆ ಶಿವನ ಈ ಮೌನ ದುಃಖವನ್ನುಂಟುಮಾಡುತ್ತದೆ. ಆಗ ಕೊಡಗೂಸು ಶಿವನನ್ನು –

ಹಾಲ್ಗುಡಿಯದಿರ್ದೊಡೆಮ್ಮವ್ವೆ ಬಡಿವಪಳಯ್ಯ
ಹಾಲ್ಗುಡಿಯದಿರೆ ಮನೆಗೆ ಹೋಗಲಂಜುವೆನಯ್ಯ[22]

ಎಂದು ಬಿಕ್ಕುತ್ತಲೇ ಬೇಡುತ್ತಾಳೆ. ಆಗ ಶಿವ ಪ್ರತ್ಯಕ್ಷನಾಗಿ ಕೊಡಗೂಸು ನೀಡಿದ ಹಾಲನ್ನು ಕುಡಿದು ಅವಳಿಗೆ ಮುಕ್ತಿಯನ್ನು ದಯಪಾಲಿಸುತ್ತಾನೆ. (ಮೂರನೆ ಹಂತ)

ಈ ಮೂರು ಹಂತಗಳಲ್ಲಿ ಕಥೆ ಆರಂಭದಿಂದ ಅಂತ್ಯದವರೆಗೂ ಒಂದೇ ವೇಗದಲ್ಲಿ ಸಾಗಿಬರುತ್ತದೆ. ಯಾವ ಹಂತದಲ್ಲೇ ಆಗಲಿ ಕವಿ ತನ್ನ ಏಕಾಗ್ರತೆಯನ್ನು ಕಳೆದುಕೊಳ್ಳುವುದಿಲ್ಲ. ಆಕಸ್ಮಿಕವಾಗಿ ಈ ಏಕಾಗ್ರತೆ ತಪ್ಪಿದರೂ ತನ್ನ ಕಥೆಗಾರಿಕೆಯಿಂದ ಮತ್ತೆ ಅಲ್ಲಿ ಸಂಬಂಧವನ್ನು ಕಲ್ಪಿಸುತ್ತಾನೆ. ಮಲುಹಣನ ರಗಳೆ, ಪ್ರಭುದೇವನ ರಗಳೆ ಮುಂತಾದ ರಗಳೆಗಳಲ್ಲಿ ಹೀಗೆ ಏಕಾಗ್ರತೆ ತಪ್ಪಿದಂತೆ ಕಂಡುಬರುತ್ತದೆ. ಆದರೆ ಕವಿ ಮತ್ತೆ ಆ ಕಥೆಗಳನ್ನು ತನ್ನ ಉದ್ದೇಶದ

ಕಡೆ ತಿರುಗಿಸಿ ಕಾವ್ಯ ಸುಂದರವಾಗುವಂತೆ ಮಾಡಿರುವುದನ್ನು ನಾವು ಕಥೆಗಳಲ್ಲಿ ಗುರುತಿಸಬಹುದು.

ಮಲುಹಣನ ರಗಳೆ ಒಂದು ಸುಂದರ ಪ್ರೇಮ ಕಥೆ. ಮಲುಹಣ ಸುವರ್ಣಭಟ್ಟನೆಂಬ ಕೋಟ್ಯಾಧೀಶನ ಮಗನಾದರೆ, ಮಲುಹಣಿ ಒಬ್ಬ ವೇಶ್ಯೆಯ ಮಗಳು. ವಿಜಯೇಶ್ವರ ದೇವಾಲಯದಲ್ಲಿ ಇಬ್ಬರಿಗೂ ಪ್ರೇಮಾಂಕುರವಾಗುತ್ತದೆ. ಈ ಪ್ರೇಮ ಮಲುಹಣಿಯ ತಾಯಿಗೆ ತಿಳಿಯುತ್ತದೆ. ವೇಶ್ಯೆಯಾದ ಅವಳು ಮಲುಹಣಿಯನ್ನು ಬಳಸಿಕೊಂಡು ಮಲುಹಣನಿಂದ ಹಣ ಕೀಳಲು ಮುಂದಾಗುತ್ತಾಳೆ. ಮಲುಹಣ-ಮಲುಹಣಿಯರ ಪ್ರೇಮ ಸಂಪೂರ್ಣ ಬೆಸೆದಾಗ ಮಲುಹಣನಲ್ಲಿದ್ದ ಹಣವೆಲ್ಲ ಬರಿದಾಗುತ್ತದೆ. ಹಣವಿಲ್ಲದ ಮಲುಹಣ ಪದ್ಮಾವತಿಗೆ ಬೇಡವಾಗುತ್ತಾನೆ. ಆಗ ಪದ್ಮಾವತಿ ಮಗಳಿಗೆ ಮಲುಹಣನನ್ನು ಬಿಟ್ಟುಬಿಡುವಂತೆ ಒತ್ತಾಯಿಸುತ್ತಾಳೆ. ಮಲುಹಣಿ ಇದನ್ನು ವಿರೋಧಿಸುತ್ತಾಳೆ. ಆದರೂ ಹಣದ ಹುಚ್ಚುಹಿಡಿದ ಪದ್ಮಾವತಿಗೆ ಈ ಪ್ರೇಮ ಬೇಡವಾಗುತ್ತದೆ. ಒಮ್ಮೆ ಮಲುಹಣ-ಮಲುಹಣಿಯರಿಬ್ಬರನ್ನು ಅವರು ವಿನೋದದಲ್ಲಿರುವಾಗ ರಕ್ಕಸಿಯಂತೆ ಎರಗಿ ದೂರ ಸರಿಸುತ್ತಾಳೆ. ಇಬ್ಬರೂ ವಿರಹ ಯಾತನೆಯಲ್ಲಿ ಬಳಲುತ್ತಾರೆ. ಮಲುಹಣಿಯಿಲ್ಲದೆ ಮಲುಹಣ ಬದುಕಲಾರದವನಾಗುತ್ತಾನೆ.

ಇಲ್ಲಿಯವರೆಗೂ ಕಥೆ ಅತ್ಯಂತ ಲೌಕಿಕ ನೆಲೆಗಟ್ಟಿನಲ್ಲಿಯೇ ಸಾಗಿಬರುತ್ತದೆ. ಆದರೆ ಏಕಾಗ್ರತೆಯುಳ್ಳ ಕವಿ ಅದನ್ನು ಹಾಗೆಯೇ ಸಾಗಲು ಬಿಡುವುದಿಲ್ಲ. ತಕ್ಷಣವೇ ಆತ ಕಥೆಯ ದಾರಿಯನ್ನು ಬದಲಿಸುತ್ತಾನೆ. ಹಿಮದ ರಾಶಿಯ ನಡುವೆ ನಡುಗುತ್ತಾ ಬಿದ್ದಿದ್ದ ಮಲುಹಣನಿಗೆ, ತನ್ನ ಮೇಲಿನ ಚಿತ್ತದಾತುರತೆಯನ್ನು ಪನ್ನಗಾಭರಣನೊಳು ಇಡುವಂತೆ ಮಲುಹಣಿಯಿಂದ ಹೇಳಿಸಿ ಮಲುಹಣನಲ್ಲಿ ಶಿವಭಕ್ತಿ ನೆಲೆಗೊಳ್ಳುವಂತೆ ಮಾಡುತ್ತಾನೆ.

ಒಟ್ಟಿನಲ್ಲಿ ಹರಿಹರನ ಕಥೆಗಾರಿಕೆ ಬಹಳ ಸರಳ ಮತ್ತು ನಿರರ್ಗಳವಾದದ್ದು. ಆತ ಅನಗತ್ಯವಾಗಿ ಪಾಂಡಿತ್ಯ ಮೆರೆದು ಕಥೆಯನ್ನು ಗಂಟು ಗಂಟಾಗಿಸುವುದನ್ನು ಇಷ್ಟಪಡುವುದಿಲ್ಲ. ತಾನು ಬರೆಯುತ್ತಿರುವ ಕಾವ್ಯ ಜನಸಾಮಾನ್ಯರ ಬದುಕಿಗೆ ತೀರ ಹತ್ತಿರವಾದದ್ದು ಎಂಬುದನ್ನು ಸದಾ ಗಮನದಲ್ಲಿಟ್ಟುಕೊಂಡಿರುವ ಕವಿ, ಯಾವ ಸಂದರ್ಭದಲ್ಲಿಯೂ ಜನಸಾಮಾನ್ಯರಿಗೆ ಕ್ಲಿಷ್ಟವೆನಿಸುವ ಕಾವ್ಯ ಬರೆಯುವುದಕ್ಕೆ ಮನಸ್ಸು ಮಾಡುವುದಿಲ್ಲ. ಅವನ ಕಥೆಗಾರಿಕೆಗೆ ಎಲ್ಲರನ್ನೂ ಆಕರ್ಷಿಸುವ ಗುಣವಿದೆ. ಸಹಜ ಸೌಂದರ್ಯವೂ ಇದೆ.

* * * * *

ಅಡಿಟಿಪ್ಪಣಿಗಳು

1. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 471
2. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 143
3. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 143

4. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 143

5. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 1

6. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 2

7. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 360

8. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 361

9. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 42

10. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 42

11. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 32

12. ಟಿ. ಎಸ್. ವೆಂಕಣ್ಣಯ್ಯ: ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 19

13. ಟಿ. ಎಸ್. ವೆಂಕಣ್ಣಯ್ಯ: ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 19

14. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ : 4 ಪ್ರಧಾನ ಸಂಪಾದಕ : ಹಾ.ಮಾ.ನಾ. : ಪುಟ 1328-29

15. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 323

16. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 323-324

17. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 324

18. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 144

19. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು : ಒಂದು ಸಂಖ್ಯಾ ನಿರ್ಣಯ : ಪುಟ 144

20. ಸಂ: ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 205

21. ಸಂ: ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 208

22. ಸಂ: ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನರ ರಗಳೆಗಳು : ಪುಟ 209

5

# ಪುರಾತನರ ರಗಳೆಗಳು

ಪುರಾತನರನ್ನು ಕುರಿತಂತೆ ಹರಿಹರ ಬರೆದ ಕಥೆಗಳು ಸುಮಾರು ಅರುವತ್ತಮೂರು. ಈ ಪುರಾತನ ಶರಣರು ಪಕ್ಕದ ತಮಿಳುನಾಡಿನವರು. ಇವರೆಲ್ಲರೂ ಶಿವಭಕ್ತರಾಗಿದ್ದು ತಮ್ಮ ಜೀವಿತಾವಧಿಯಲ್ಲಿ ಶಿವಕೃಪೆಯನ್ನು ಪಡೆಯುವುದಕ್ಕಾಗಿ ಎದುರಾದ ಘೋರ ಕಷ್ಟಗಳನ್ನೆಲ್ಲಾ ಸಹಿಸಿ ನಿಷ್ಠೆಯಿಂದ ಬಾಳಿದವರು. ಹರಿಹರ ಕೂಡ ಶಿವಭಕ್ತನೇ. ಹಾಗಾಗಿ ಶಿವಭಕ್ತರ ಬಗೆಗೆ ಆತ ಒಳ್ಳೆಯ ಮನೋಭಾವವನ್ನು ತಳೆದಿದ್ದ. ಅವರ ವ್ಯಕ್ತಿತ್ವಕ್ಕೆ ಆಕರ್ಷಣೆಗೊಂಡು ಅವರ ಬದುಕನ್ನು ಕುರಿತ ಕಾವ್ಯವನ್ನು ರಚಿಸಿದ. ಅವನು ರಚಿಸಿದ ಎಲ್ಲ ಕಾವ್ಯಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು ಇಲ್ಲಿ ಅನಗತ್ಯವಾಗಿರುವುದರಿಂದ ಕಥೆಯ ಶೈಲಿ, ಉದ್ದೇಶ ಹಾಗೂ ಸಾಧನೆಯ ದೃಷ್ಟಿಯಿಂದ ಅತ್ಯಂತ ಪ್ರಮುಖವೆನಿಸಿದ ಕೆಲವು ರಗಳೆಗಳನ್ನು ಆಧರಿಸಿ ಇಡೀ ಕಥೆಯ ರಚನೆಯನ್ನು ಹೇಗೆ ಮಾಡಿದ್ದಾನೆ ಎಂಬುದನ್ನು ಪ್ರಧಾನವಾಗಿ ಗಮನಿಸಲಾಗಿದೆ.

## 5.1 ನಂಬಿಯಣ್ಣನ ರಗಳೆ

ಹರಿಹರ ರಚಿಸಿದ ದೀರ್ಘ ಕಥೆಗಳಲ್ಲಿ ನಂಬಿಯಣ್ಣನ ಕಥೆ ಮೊದಲನೆಯದು. ಇದರಲ್ಲಿ ಸುಮಾರು ಹತ್ತೊಂಬತ್ತು ಸ್ಥಲಗಳಿವೆ. ಪುರಾತನರ ರಗಳೆಗಳ ಸಾಲಿನಲ್ಲಿ ಬರುವ ಇದು, ಹರಿಹರನ ರಗಳೆಗಳಲ್ಲಿ ತುಂಬ ಮುಖ್ಯವೂ ಪ್ರಾತಿನಿಧಿಕವೂ ಆದದ್ದು. ಬಸವಣ್ಣನ ಸಮಕಾಲೀನ ವ್ಯಕ್ತಿಯಾಗಿದ್ದ ಸೌಂದರ ಈ ಕಥೆಯ ನಾಯಕ. ತಮಿಳು ಕಾವ್ಯ ಲೋಕದಿಂದ ವಸ್ತುವನ್ನು ಎತ್ತಿಕೊಂಡು ಸುಂದರವಾದ ಕಾವ್ಯವನ್ನು ಹರಿಹರ ಹೆಣೆದಿದ್ದಾನೆ.

ಕಥೆ ಅತಿ ದೀರ್ಘವಾದ್ದರಿಂದ ಅಧ್ಯಯನದ ಅನುಕೂಲಕ್ಕಾಗಿ ಕೆಲವು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳಲ್ಲಿ ಮೊದಲನೆಯದು-ನಂಬಿಯಣ್ಣನ ಪಾತ್ರ ಚಿತ್ರಣ; ಎರಡನೆಯದು-ನಂಬಿಯಣ್ಣನ ರಗಳೆಯಲ್ಲಿ ಬರುವ ವೃದ್ಧಮಾಹೇಶ್ವರ ಪ್ರಸಂಗ; ಮೂರನೆಯದು-ನಂಬಿಯಣ್ಣನ ಕಥೆಯ ಒಟ್ಟು ಉದ್ದೇಶ ಮತ್ತು ಅದರ ಸಾಧನೆ.

### 5.1.1 ನಂಬಿಯಣ್ಣನ ಪಾತ್ರಚಿತ್ರಣ

ಪಾತ್ರಗಳನ್ನು ಚಿತ್ರಿಸುವ ಸಂದರ್ಭದಲ್ಲಿ ಹರಿಹರ ಭಕ್ತನ ಭಕ್ತಿಯ ಪ್ರದರ್ಶನ ಹಾಗೂ ಮಹಿಮಾ ಪ್ರದರ್ಶನಕ್ಕೆ ಹೆಚ್ಚಿನ ಒತ್ತು ಕೊಡುತ್ತಾನೆ. ಯಾವುದೇ ಸನ್ನಿವೇಶವನ್ನು ಚಿತ್ರಿಸಲಿ ಅದಕ್ಕೆ ಭಕ್ತಿಯ ಲೇಪ ಹಚ್ಚುತ್ತಾನೆ. ಇದೇ ಬಗೆಯ ರಚನೆ ನಂಬಿಯಣ್ಣನ ಕಥೆಯಲ್ಲೂ ಕಂಡುಬರುತ್ತದೆ. ಆದರೆ ಬೇರೆ ಕಥೆಗಳ ಪಾತ್ರಗಳಿಗೆ ಹೋಲಿಸಿಕೊಂಡರೆ ನಂಬಿಯಣ್ಣನ ಪಾತ್ರ ರಚನೆಯಲ್ಲಿ ಹರಿಹರ ಅನುಸರಿಸಿರುವ ರೀತಿ ಸ್ವಲ್ಪ ವಿಶಿಷ್ಟವಾಗಿದೆ.

ಹರಿಹರ ಚಿತ್ರಿಸುವ ನಂಬಿಯಣ್ಣನ ಪಾತ್ರವನ್ನು (ಅ) ಭಕ್ತಿ ಮತ್ತು ಮಹಿಮೆ (ಆ) ಪರಾವಲಂಬನೆ (ಇ) ಸ್ತ್ರೀಲೋಲುಪ ಬದುಕು (ಈ) ಮಾನವೀಯ ತುಡಿತ ಎಂಬ ನಾಲ್ಕು ವಿಭಾಗಗಳಲ್ಲಿ ಅಧ್ಯಯನ ಮಾಡಬಹುದು.

## (ಅ) ಭಕ್ತಿ ಮತ್ತು ಮಹಿಮೆ

ಹರಿಹರ ಚಿತ್ರಿಸುವ ಭಕ್ತರಲ್ಲಿ ಸಾಮಾನ್ಯವಾಗಿ ಶಿವನಿಗಾಗಿ ತನ್ನನ್ನೇ ಅರ್ಪಿಸಿಕೊಳ್ಳುವಂಥ ಅರ್ಪಣಾ ಭಾವ, ನಿರಪೇಕ್ಷ ಭಕ್ತಿ, ಶಿವನಿಗಾಗಿ ತೀವ್ರವಾದ ಹಂಬಲ ಇರುವುದನ್ನು ಕಾಣುತ್ತೇವೆ. ಆದರೆ ನಂಬಿಯಣ್ಣನ ಭಕ್ತಿಯಲ್ಲಿ ಈ ಬಗೆಯ ಭಕ್ತಿಯ ಭಾವವನ್ನು ಕಾಣುವುದು ಕಷ್ಟ. ನಂಬಿಯಣ್ಣನ ಭಕ್ತಿ ಹೆಚ್ಚಾಗಿ ಅಪೇಕ್ಷೆಯಿಂದ ಕೂಡಿರುವಂಥದ್ದು. ಅದರಲ್ಲಿ ಅರ್ಪಣಾ ಭಾವವಾಗಲಿ, ತೀವ್ರವಾದ ಹಂಬಲವಾಗಲಿ ಬಹಳ ಕಡಿಮೆ. ಆದರೂ ಭಕ್ತಿಯ ಭಾವ ಅವನಲ್ಲಿ ತುಂಬಿರುವುದು ಅವನ ಪ್ರಾರ್ಥನೆಗಳಲ್ಲಿ, ಕೋರಿಕೆಗಳಲ್ಲಿ, ಕೆಲವೊಮ್ಮೆ ಅವನ ಕಾತರಗಳಲ್ಲಿ ಕಂಡುಬರುತ್ತದೆ.

ಶಿವಾಲಯದಲ್ಲಿ ನಂಬಿಯಣ್ಣನಿಗೆ 'ಮೂರ್ಧ್ನಿಘ್ರಾಣ' ಮಾಡಿದ ಶಿವ, ಹಾಡನ್ನು ಹಾಡುವಂತೆ ನಂಬಿಯಣ್ಣನನ್ನು ಕೇಳಿಕೊಳ್ಳುತ್ತಾನೆ. ಆಗ ನಂಬಿಯಣ್ಣ -

ಪಿಚ್ಚನೇ ಪೆಱೆಯ ಸೂಡಿದ ಪರಮ ಪಶುಪತಿಯೆ
ಅಚ್ಚಸವಿಯೇ ಸುಖವೆ ಸಖನೆ ನಂಬಿಯ ಪತಿಯೆ
ನೀನೆಯಾಳ್ಮಾಡಿಕೊಳಲಲ್ಲೆನಲ್ಕಪ್ಪುದೇ
----------------------------------
ನಚ್ಚಿ ನಿನಗಾಳಾದೆನಲ್ಲೆನಲು ಬಪ್ಪುದೇ[1]

ಎಂದು ಹಾಡುತ್ತಾನೆ. ಈ ಹಾಡಿನಲ್ಲಿ ಶಿವನ ಬಗೆಗಿನ ನಂಬಿಯಣ್ಣನ ಭಕ್ತಿ ಭಾವ ಸ್ಫುಟಗೊಳ್ಳುತ್ತದೆ. ರಾಶಿ ರಾಶಿ ನೆಲ್ಲನ್ನು ಸಂಗ್ರಹಿಸಿದ ಮೇಲೆ ಅದನ್ನು ಪರವೆಯ ಊರಿಗೆ ಸಾಗಿಸಬೇಕಾಗುತ್ತದೆ. ಆಗ ನಂಬಿಯಣ್ಣ ಶಿವನನ್ನು -

ಅಱಸಿ ಬಂದೆನ್ನನೆಂತಾಳ್ಗೊಂಡಿರಾನಂತೆ
ಅಱಸಿಕೊಂಬೆಂ ಬಿಡುವೆನೇ ಅಡಗಲೇಕಿಂತೆ
ಕೊಂಡೆಯೂರೊಳು ಕಿಱಿದು ನೆಲ್ಲಾದುದೆಲೆ ದೇವ
ಕೊಂಡು ತಿರುವಾರೂರ್ಗೆ ಕಳುಪಿಕೊಡುವುದು ದೇವ[2]

ಎಂದು ವಿನಂತಿಸಿಕೊಳ್ಳುತ್ತಾನೆ. ಈ ವಿನಂತಿಯಲ್ಲೂ ನಂಬಿಯಣ್ಣನ ಭಕ್ತಿ ಭಾವವನ್ನು ಗುರುತಿಬಹುದು. ಹಾಗೆಯೇ ಎರಡೂ ಕಣ್ಣನ್ನು ಕಳೆದುಕೊಂಡ ಸಂದರ್ಭದಲ್ಲಿ ಏಕಾಮ್ರನಾಥನಲ್ಲಿಗೆ ಬಂದ ನಂಬಿಯಣ್ಣ —

ದೇವ ಜನ್ಮ ವಿದೂರ ಜಗದೇಕಚಕ್ಷುವೇ
ದೇವ ಕಮಲಜಶಿರೋಧರ ಮಹಾಭಿಕ್ಷುವೇ
---------------------------
ಕರುಣಾಕರಾ ನಿರೋಧವನುಡುಗಿಸೆಲೆ ಶಿವನೆ[3]

ಎಂದು ಬೇಡಿಕೊಳ್ಳುತ್ತಾನೆ. ಈ ಬೇಡಿಕೆಯಲ್ಲೂ ನಂಬಿಯಣ್ಣನ ಭಕ್ತಿ ಭಾವ ತುಂಬಿ ಹರಿಯುವುದನ್ನು ಗುರುತಿಸಬಹುದು. ಹೀಗೆ ಹಲವು ಸಂದರ್ಭಗಳು ಬರುತ್ತವೆ. ಅವುಗಳಲ್ಲಿ ಚೇರಮನ ನಾಡಿಗೆ ಹೋಗಿ ಅಲ್ಲಿ ತಿರುವಂಜಕಳನಾಥನನ್ನು ಪ್ರಾರ್ಥಿಸುವ ಸಂದರ್ಭ, ಬೇಡಪಡೆಗೆ ಸೋತು ತಿರುಮುರುಘಾಂಡಿ ಎಂಬ ಶಿವಪುರವನ್ನು ಕಂಡು ಆನಂದದಿಂದ ಶಿವನನ್ನು ಪ್ರಾರ್ಥಿಸುವ ಸಂದರ್ಭ, ಎರಡನೆ ಬಾರಿ ಬಂದ ಪಂಗುನಿ ತಿರುನಾಳಿಗೆ ಸಂಪತ್ತನ್ನು ಸಂಗ್ರಹಿಸಲು ತಿರುನಾಗಪಟ್ಟಣಕ್ಕೆ ಬಂದ ನಂಬಿಯಣ್ಣ ಅಲ್ಲಿ ದೇವಾಲಯದ ಮುಂದೆ ನಿಂತು ಶಿವನನ್ನು ಪ್ರಾರ್ಥಿಸುವ ಸಂದರ್ಭಗಳು ಪ್ರಮುಖವಾದವು. ಈ ಎಲ್ಲ ಸಂದರ್ಭಗಳಲ್ಲೂ ನಂಬಿಯಣ್ಣನ ಭಕ್ತಿ ಭಾವ ಪ್ರಕಟಗೊಳ್ಳುತ್ತದೆ.

ಸಂದರ್ಭಗಳನ್ನು ಸೃಷ್ಟಿಸಿ ನಂಬಿಯಣ್ಣನ ಭಕ್ತಿಯನ್ನು ಹರಿಹರ ಹೇಗೆ ಪ್ರಕಟ ಪಡಿಸುತ್ತಾನೋ, ಹಾಗೆಯೇ ಅವನ ಮಹಿಮೆಯನ್ನೂ ಪ್ರಕಟಿಸುತ್ತಾನೆ. ಇದಕ್ಕೆ ನರಸಿಂಗ ಮೊನೆಯರ ಆನೆಯನ್ನು ತಡೆದು ನಿಲ್ಲಿಸಿದ ಪ್ರಸಂಗ ಮತ್ತು ಮೂರು ವರ್ಷಗಳ ನಂತರ ಮೊಸಳೆ ಬಾಯಿಯಿಂದ ಮಗುವನ್ನು ರಕ್ಷಿಸಿದ ಪ್ರಸಂಗವನ್ನು ಉದಾಹರಿಸಬಹುದು.

ನಂಬಿಯಣ್ಣ ಇನ್ನೂ ಚಿಕ್ಕವನಿದ್ದಾಗ ಒಮ್ಮೆ ಮಕ್ಕಳೊಡನೆ ಆಟವಾಡುತ್ತಿರುತ್ತಾನೆ. ಆಗ ಮದ್ದಾನೆಯೊಂದು ಘೀಳಿಡುತ್ತಾ ಬರುತ್ತದೆ. ಮಕ್ಕಳೆಲ್ಲರೂ ಅತ್ತಿತ್ತ ಓಡಿ ಪಾರಾಗುತ್ತಾರೆ. ಆದರೆ ನಂಬಿಯಣ್ಣ ಅತ್ತಿತ್ತ ಕದಲದೆ ನಿಲ್ಲುತ್ತಾನೆ. ಘೀಳಿಡುತ್ತಾ ಬಂದ ಮದ್ದಾನೆ ನಂಬಿಯಣ್ಣನೆದುರು ಬರುತ್ತಿದ್ದಂತೆಯೇ ಪ್ರದಕ್ಷಿಣೆ ಹಾಕಿ ನಿಲ್ಲುತ್ತದೆ. ಈ ಪ್ರಸಂಗವನ್ನು ಕಟ್ಟಿಕೊಡುವ ಮೂಲಕ ಹರಿಹರ ನಂಬಿಯಣ್ಣನು ಸಾಮಾನ್ಯ ಪುರುಷನಲ್ಲ; ಅವನು ಕಾರಣಿಕ ಪುರುಷ ಎಂಬುದನ್ನು ತಿಳಿಸುತ್ತಾನೆ. ಇಂಥದ್ದೇ ಇನ್ನೊಂದು ಪ್ರಸಂಗವಿದೆ. ಅದರಲ್ಲಿ ಚತುರಂಗ ಬಲದೊಡನೆ ಪೊಕ್ಕುಳಿಯೂರಿಗೆ ನಂಬಿಯಣ್ಣ ಬರುತ್ತಾನೆ. ಹಾಗೆ ಬಂದು ಆ ಊರಿನ ಶಿವದೇವಾಲಯದಲ್ಲಿ ಶಿವನನ್ನು ಪ್ರಾರ್ಥಿಸುತ್ತಾ ಕುಳಿತಿರುತ್ತಾನೆ. ಅಲ್ಲಿ ಕುಳಿತಿರುವಾಗ ಕೊಳದಲ್ಲಿ ಆಡುತ್ತಿದ್ದ ನಂಬಿ ಎಂಬ ಬಾಲಕನನ್ನು, ಮೊಸಳೆಯೊಂದು ನುಂಗಿ ಮೂರು ವರ್ಷ ವಾಗಿರುವ ಶೋಕವಾರ್ತೆ ನಂಬಿಯಣ್ಣನಿಗೆ ತಿಳಿಯುತ್ತದೆ. ಆ ವಾರ್ತೆ ತಿಳಿಯುತ್ತಿದ್ದಂತೆಯೇ ನಂಬಿಯಣ್ಣ ಶಿವನನ್ನು ಪ್ರಾರ್ಥಿಸಿ ಆ ಮಗುವು ಮತ್ತೆ ಜೀವ ಪಡೆಯುವಂತೆ ಮಾಡುತ್ತಾನೆ. ಈ ಪ್ರಸಂಗವನ್ನು ಸೃಷ್ಟಿಸುವ ಮೂಲಕ ಹರಿಹರ ನಂಬಿಯಣ್ಣನ ಸಾಧನೆಯ ಸಿದ್ಧಿಯನ್ನು ಪ್ರಕಟಪಡಿಸುತ್ತಾನೆ. ಹೀಗೆ ಕೆಲವು ಪ್ರಸಂಗಗಳನ್ನು ಸೃಷ್ಟಿಸಿ ಹರಿಹರ ನಂಬಿಯಣ್ಣನ ಮಹಿಮೆಯನ್ನು ಪ್ರದರ್ಶಿಸುತ್ತಾನೆ.

## (ಆ) ಪರಾವಲಂಬನೆ

ನಂಬಿಯಣ್ಣನ ರಗಳೆಯಲ್ಲಿ ಹರಿಹರ ಕವಿ ನಂಬಿಯಣ್ಣನ ಹಲವು ಸಾಧನೆ ಹಾಗೂ ಸಿದ್ಧಿಯನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ. ಹಾಗಿದ್ದರೂ ಇಡೀ ರಗಳೆಯಲ್ಲಿ ನಂಬಿಯಣ್ಣ ಕಾಣಿಸಿಕೊಳ್ಳುವುದು ಒಬ್ಬ ಪರಾವಲಂಬಿಯಾಗಿ. ಅವನಿಗೆ ಸ್ವಂತಿಕೆಯೆಂಬುದೇ ಇಲ್ಲ. ಪ್ರತಿಯೊಂದಕ್ಕೂ ಶಿವನನ್ನೇ ಅವಲಂಬಿಸುತ್ತಾನೆ. ಯಾವ ಸಮಸ್ಯೆಗೂ ಆತ ಮುಖಾಮುಖಿ ಯಾಗುವುದೇ ಇಲ್ಲ. ಶಿವನ ಪ್ರಭಾವಕ್ಕೆ ಒಳಗಾಗುವುದಕ್ಕೆ ಮೊದಲು ಅವನಲ್ಲಿ ಸ್ವಲ್ಪ ಮಟ್ಟಿಗಿನ ಆ ಧೀರತನ ಇರುವುದು ಗೊತ್ತಾಗುತ್ತದೆ. ಆದರೆ ಶಿವನ ಪ್ರಭಾವಕ್ಕೆ ಒಳಗಾಗುತ್ತಿದ್ದಂತೆಯೇ ಆ ಧೀರತ್ವವೂ ಅವನಲ್ಲಿ ಉಳಿದಂತೆ ಕಂಡುಬರುವುದಿಲ್ಲ. ಆತ ಪರವೆಯನ್ನು ಪಡೆದದ್ದು ಶಿವನಿಂದ ಮತ್ತೆ ಪರವೆಯನ್ನು ತೊರೆದದ್ದೂ ಶಿವನಿಂದ, ಸಂಕಿಲೆಯನ್ನು ಪಡೆದದ್ದು ಶಿವನಿಂದ ಮತ್ತೆ ಅವಳನ್ನು ತೊರೆದದ್ದೂ ಶಿವನಿಂದ, ಸಂಕಿಲೆಯನ್ನು ತೊರೆದ ಮೇಲೆ ಮತ್ತೆ ಪರವೆಯೊಡನೆ ಸೇರಿದ್ದೂ ಶಿವನಿಂದಲೇ ಆಗಿದೆ. ಅಲ್ಲದೆ, ಪರವೆಗಾಗಿ ಅವನು ಸಂಪತ್ತನ್ನು ಸಂಗ್ರಹಿಸಿದ್ದು ಮತ್ತು ಅದನ್ನು ಪರವೆಯೂರಿಗೆ ಸಾಗಿಸಿದ್ದೂ ಶಿವನ ಮೂಲಕವೇ. ಹೀಗೆ ಪ್ರತಿಯೊಂದು ಕಾರ್ಯದಲ್ಲೂ ನಂಬಿಯಣ್ಣ ಶಿವನ ಸಹಾಯವನ್ನು ಪಡೆದೇ ಸಾಧಿಸುತ್ತಾನೆ. ಅವನ ಸಾಧನೆಯಲ್ಲಿ ಅವನದೇ ಆದದ್ದು ಬಹಳ ಕಡಿಮೆ ಎಂದೇ ಹೇಳಬೇಕು. ಇದು ಒಂದು ರೀತಿಯಲ್ಲಿ ಕೃತಿಯ ಮೇಲು ನೋಟದ ಚಿತ್ರ.

## (ಇ) ಸ್ತ್ರೀಲೋಲುಪ ಬದುಕು

ನಂಬಿಯಣ್ಣ ತನ್ನ ಜೀವಿತದ ಅವಧಿಯಲ್ಲಿ, ಬದುಕಿನ ಬೇರೆ ಬೇರೆ ಸಾಧನೆಗಳಿಗಾಗಿ ಆಸೆ ಪಟ್ಟಿದ್ದಕ್ಕಿಂತ ಹೆಚ್ಚಾಗಿ, ಸ್ತ್ರೀಯರ ಅಂಗ ಸುಖಕ್ಕಾಗಿ ಹಾತೊರೆದದ್ದೇ ಹೆಚ್ಚು. ಮೊದಲಿಗೆ ಆತ ಬಯಸಿದ್ದು ಪರವೆಯನ್ನು. ಒಮ್ಮೆ ಆತ ತಿರುವಾರೂರ ಬೀದಿಯಲ್ಲಿ ಬರುತ್ತಿರುತ್ತಾನೆ. ಹಾಗೆ ಬರುವಾಗ ಉಪ್ಪರಿಗೆಯ ಮೇಲಿದ್ದ ಪರವೆಯನ್ನು ನಂಬಿಯಣ್ಣ ನೋಡುತ್ತಾನೆ. ಅವಳನ್ನು ನೋಡುತ್ತಿದ್ದಂತೆಯೇ ಅವಳ ಮೋಹಕ್ಕೆ ಒಳಗಾಗುತ್ತಾನೆ. ಪರವೆಯೂ ನಂಬಿಯಣ್ಣನ ಮೋಹಕ್ಕೆ ಒಳಗಾಗುತ್ತಾಳೆ. ಆಮೇಲೆ ಇಬ್ಬರ ಭೆಟ್ಟಿಯೂ ಆಗುತ್ತದೆ. ನಂಬಿಯಣ್ಣ ಪರವೆ ಯೊಡನೆ ಕೂಡಿ ಹಲವು ದಿನಗಳನ್ನು ನಿಮಿಷಗಳಂತೆ ಕಳೆಯುತ್ತಾನೆ. ಕೆಲವು ವರ್ಷಾನಂತರದಲ್ಲಿ ಎರಡನೆ ಪೈಘಾಸಿ ತಿರುನಾಳು ಬರುತ್ತದೆ. ಆ ಹಬ್ಬಕ್ಕೆ ಪರವೆಗೆ ಸಂಪತ್ತನ್ನು ತರಲು ನಂಬಿಯಣ್ಣ ತಿರುವತ್ತಿಯೂರಿನ ಕಡೆ ಹೊರಡುತ್ತಾನೆ. ತಿರುವತ್ತಿಯೂರರಸನ ದೇವಾಲಯದಲ್ಲಿ ಇರುವಾಗ, ಆ ದೇವಾಲಯಕ್ಕೆ ಬಂದಿದ್ದ ಸಂಕಿಲಿನಾಚಿ ನಂಬಿಯಣ್ಣನ ಕಣ್ಣಿಗೆ ಬೀಳುತ್ತಾಳೆ. ಅವಳನ್ನು ಕಾಣುತ್ತಿದ್ದಂತೆಯೇ ನಂಬಿಯಣ್ಣನಿಗೆ ಅವಳೊಡನೆ ಕೂಡಬೇಕೆನಿಸುತ್ತದೆ. ಆಗ ಶಿವನ ಹತ್ತಿರ ಹೋಗಿ "ದೇವರ ದೇವ ನಿಮ್ಮರಮನೆಯ ಪರಿಸೂತ್ರ ದೊಳೊರ್ವ ಸಂಕಲಿನಾಚಿ ಯರೆಂಬನರ್ಘ್ಯ ರತ್ನಮಂ ಕಂಡೆನೆನಗಾಕನ್ನಿಕೆಯಂ ಮಾಡಿಕೊಡು"[4] ವುದು ಎಂದು ಬೇಡಿ ಕೊಳ್ಳುತ್ತಾನೆ. ಶಿವ ನಂಬಿಯಣ್ಣನ ಈ ಮಾತಿಗೆ ಬೆರಗಾದವನಂತೆ ನಟಿಸುತ್ತಾನೆ. ಆಗ ನಂಬಿಯಣ್ಣ ಸಿಡಿಮಿಡಿಗೊಂಡು "ಮೊಲೆಗುಡದ ತಾಯ ಕಾಲ ಬಾಯೊಳು ಶಿಶು ನಾಲಗೆಗಿತ್ತಳು

ವಂತೆ ರಂಗಮಂಟಪದೊಳು"[5] ಬಿದ್ದು ಹೊರಳಾಡುತ್ತಾನೆ. ಆಮೇಲೆ ಶಿವ ಅವನನ್ನು ಸಮಾಧಾನಿಸಿ ಸಂಕಿಲೆಯು ಅವನಿಗೆ ದೊರೆಯುವಂತೆ ಮಾಡುತ್ತಾನೆ. ಕೆಲವು ಕಾಲ ಆಕೆಯನ್ನು ಬಳಿ ಇದ್ದು ಮತ್ತೆ ಸಂಕಿಲೆಯನ್ನು ತೊರೆದು ಪರವೆಯನ್ನು ಕೂಡಿಸುವಂತೆ ಶಿವನನ್ನು ಬೇಡುತ್ತಾನೆ. ಶಿವ ನಂಬಿಯ ಈ ಬೇಡಿಕೆಗೆ ಮರುಮಾತನಾಡದೆ ಇರುವಾಗ ನಂಬಿಯಣ್ಣ –

> ಕುಡು ಕುಡಿನ್ನೇಸು ಪ್ರಮಾಣ ಪತ್ರವ ದೇವ
> ಬಿಡು ಬಿಡ್ಡೆ ನೀನೆನ್ನನಾಳಲಾರ್ಪೈ ದೇವ [6]

ಎಂದು ಮುನಿಸಿಕೊಂಡು ಪಡಿಪತ್ರ ಕೊಡುವಂತೆ ಕೇಳಿಕೊಳ್ಳುತ್ತಾನೆ. ಅಲ್ಲದೆ –

> ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ
> ಆಸುರಂ ಮಾಡಿ ನೀನೆನ್ನೊಡನಿದೇಗುವೈ[7]

ಎಂದು ಶಿವನನ್ನು ದೂರುತ್ತಾನೆ. ಶಿವ ಏನೆಂದರೂ ಬಿಡದೆ ಮತ್ತೆ ಪರವೆಯೊಡನೆ ಕೂಡುತ್ತಾನೆ.

ಹೀಗೆ ನಂಬಿಯಣ್ಣ ತನ್ನ ಬದುಕಿನ ಹೆಚ್ಚು ಕಾಲವನ್ನು ಬರೀ ವಿಷಯಾಸಕ್ತಿಗಾಗಿಯೇ ಸವೆಯಿಸುವುದನ್ನು ಹರಿಹರ ಚಿತ್ರಿಸುತ್ತಾನೆ. ಇದು ನಂಬಿಯಣ್ಣ ಕೇವಲ ವಿಷಯಾಸಕ್ತಿಗಾಗಿ ಹೇಗೆ ಹಾತೊರೆಯುತ್ತಿದ್ದ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದರೆ ಇದಿಷ್ಟೇ ನಂಬಿಯಣ್ಣನ ವ್ಯಕ್ತಿತ್ವವಲ್ಲ.

### (ಈ) ಮಾನವೀಯ ತುಡಿತ

ಕೇವಲ ವಿಷಯಾಸಕ್ತಿಯಲ್ಲಿಯೇ ನಂಬಿಯಣ್ಣ ತನ್ನ ಬದುಕನ್ನು ಸವೆಯಿಸಿದ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ಆದರೆ ನಂಬಿಯಣ್ಣನ ಜೀವ ಇದಕ್ಕಿಂತಲೂ ಮಿಗಿಲಾದ ಮಾನವೀಯ ತುಡಿತ ಮತ್ತು ಸ್ಪಂದನವನ್ನು ಹೊಂದಿತ್ತು ಎಂಬುದನ್ನು ಕಡೆಗಣಿಸುವಂತಿಲ್ಲ. ಈ ತುಡಿತವನ್ನು ಮೊಸಳೆಯ ಬಾಯಿಯಿಂದ ಮಗುವನ್ನು ಬದುಕಿಸಿದ ಪ್ರಸಂಗ ಮತ್ತು ಪರವೆನಾಚಿಯ ಸಾವಿನ ಸಂದರ್ಭಗಳಲ್ಲಿ ಗುರುತಿಸಬಹುದು.

ಪರವೆಯ ಸಾವಿನ ಸುದ್ದಿಯನ್ನು ನಂಬಿಯಣ್ಣನಿಗೆ ತಿಳಿಸಲು ಬರುತ್ತಿದ್ದಂತೆಯೇ ಅವನಿಗೆ ಸಂಶಯ ಬರುತ್ತದೆ. ಆಗ 'ಪರವೆಯೇನಾದಳೆಂತಿರ್ದಳೆ.....' ಎಂದು ಅವಳ ಸಾವಿನ ಸುದ್ದಿಯನ್ನು ತಂದವನಿಗೆ ಕೇಳುತ್ತಾನೆ. ಪರವೆಯ ಸಾವು ತಿಳಿಯುತ್ತಿದ್ದಂತೆಯೇ ನಂಬಿಯಣ್ಣನಿಗೆ ಕರಣದಲ್ಲಿ ಕಿಚ್ಚುಹತ್ತಿದಂತಾಗುತ್ತದೆ. ಮನದಲ್ಲಿ ಶೋಕಾಗ್ನಿ ಹೊತ್ತಿ ಉರಿದಂತಾಗುತ್ತದೆ. ವಿರಾಗ ಆವರಿಸುತ್ತದೆ. ಅವಳಿಲ್ಲದ ಮೇಲೆ ಇನ್ನೆಂಥ ಆರೂರ ಭೋಗ! ಎಂದು ನಿಶ್ಚಯಿಸು ತ್ತಾನೆ. ಇಲ್ಲಿ ಪರವೆಯೊಡನೆ ನಂಬಿಯಣ್ಣ ಇಟ್ಟುಕೊಂಡಿದ್ದ ಅತ್ಯಂತ ಆತ್ಮೀಯ ಸಂಬಂಧ

ವೊಂದರ ಪರಿಚಯವಾಗುತ್ತದೆ. ನಂಬಿಯಣ್ಣ ಕೇವಲ ವಿಷಯಾಸಕ್ತನಾಗಿದ್ದರೆ ಇಂಥದ್ದೊಂದು ಶೋಕ ಅವನಲ್ಲಿ ಹುಟ್ಟುತ್ತಿರಲಿಲ್ಲ.

ಪೊಕ್ಕುಳಿಯೂರಿನಲ್ಲಿ ನಂಬಿಯಣ್ಣ ಇರುವಾಗಲೂ ನಂಬಿಯ ಮಾನವೀಯ ತುಡಿತವನ್ನು ಹೊರಗೆಡಹಬಲ್ಲ ಪ್ರಸಂಗವೊಂದು ಜರುಗುತ್ತದೆ. ಮೊಸಳೆಯೊಂದು ನಂಬಿಯೆಂಬ ಮಗುವನ್ನು ನುಂಗಿದ್ದು ನಂಬಿಯಣ್ಣನಿಗೆ ತಿಳಿಯುತ್ತದೆ. ಅಲ್ಲಿ–

ಪೆಸರೊಪ್ಪಿಸುವ ಭಾಗ್ಯವೆಮಗೆ [illegible]ಂ ದೇವ
ಒಡನೆ ಜನಿಯಿಸಿದ ನೆರೆಮನೆಯವರ ಪುತ್ರಂಗೆ
ಮೃಡ ಮೂರ್ತಿಯುಪನಯನವೇನೆಂಬೆವಿಂದಿಂಗೆ[೮]

ಎಂದು ಗೋಳಾಡುವ ಮಗುವಿನ ತಂದೆ ತಾಯಿಯರನ್ನು ಕಂಡು ನಂಬಿಯಣ್ಣ ಮರುಗುತ್ತಾನೆ. ಆ ಮರುಗುವಿಕೆಯಿಂದ ಸಿಟ್ಟಿಗೆದ್ದ ನಂಬಿಯಣ್ಣ ತಂದೆ ತಾಯಿಯರನ್ನು ಕರೆದುಕೊಂಡು ಕೊಳದ ಬಳಿ ಬರುತ್ತಾನೆ. ಅವನು ಬರುತ್ತಿದ್ದಂತೆಯೇ ಕಾಲನೂ ವರುಣನೂ ಬಂದು ಕೊಳದಲ್ಲಿ ಮುಳುಗಿ ಮಗುವಿನ ಶರೀರವನ್ನು ಒಂದುಗೂಡಿಸುತ್ತಾರೆ. ಕೊಳದ ಬಳಿ ಬಂದ ನಂಬಿಯಣ್ಣ-

ಅವಿನಾಶಿ ನೀ ನಿನ್ನ ಮಕ್ಕಳ್ಗೆ ನಾಶವೇ
ಭವನಾಶಿ ಮಕ್ಕಳಂ ಕೊಲುವುದಭ್ಯಾಸವೇ[೯]

ಎನ್ನುತ್ತ 'ನಡುನೀರ ನಡುವಿಂದೆ ಗಳಗಳನೆ ನಡೆತಂದು' ನಿಲ್ಲುತ್ತಾನೆ. ಆಗ ಮಗು ಮೊಸಳೆ ಬಾಯಿಯಿಂದ ಬದುಕಿ ಬರುತ್ತದೆ. ಹೀಗೆ ಜರುಗುವ ಪ್ರಸಂಗ, ಜನರ ಸಂಕಷ್ಟಗಳಿಗೆ ಸ್ಪಂದಿಸುವ ನಂಬಿಯಣ್ಣನ ಗುಣವನ್ನು ತೆರೆದು ತೋರುತ್ತದೆ.

ಹೀಗೆ ಹರಿಹರ ನಂಬಿಯಣ್ಣನ ಪಾತ್ರವನ್ನು ಚಿತ್ರಿಸುತ್ತಾನೆ. ಅವನ ಚಿತ್ರಣದಲ್ಲಿ ನಂಬಿಯಣ್ಣನ ರಸಿಕ ಜೀವನ, ಭಕ್ತ ಜೀವನ, ಮಾನವೀಯ ಸ್ಪಂದನ ಎಲ್ಲವೂ ಸುಂದರವಾಗಿ ಸಂಯೋಜನೆಗೊಂಡಿವೆ.

### 5.1.2 ನಂಬಿಯಣ್ಣನ ರಗಳೆಯಲ್ಲಿ ವೃದ್ಧಮಾಹೇಶ್ವರ ಪ್ರಸಂಗ

'ನಂಬಿಯಣ್ಣನ ರಗಳೆ'ಯಲ್ಲಿ ಹಲವಾರು ಪ್ರಸಂಗಗಳು ಬರುತ್ತವೆ. ಅವುಗಳಲ್ಲಿ ನಂಬಿಯಣ್ಣ ಬಾಲಕನಿದ್ದಾಗ ಮದ್ದಾನೆಯೊಂದನ್ನು ತಡೆದು ನಿಲ್ಲಿಸಿದ್ದು, ಭೂತಗಳ ಸಹಾಯದಿಂದ ಅಪಾರ ನೆಲ್ಲನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಿದ್ದು, ಮೂರು ವರ್ಷಗಳ ನಂತರ ಮೊಸಳೆಯ ಬಾಯಿಯಿಂದ ಮಗುವನ್ನು ರಕ್ಷಿಸಿದ್ದು, ಬೇಡಪಡೆಯೊಡನೆ ಹೋರಾಡಿದ್ದು ಹಾಗೂ ವೃದ್ಧಮಾಹೇಶ್ವರ ಪ್ರಸಂಗ ಬಹಳ ಮುಖ್ಯವಾಗಿವೆ. ಆದರೆ ಈ ಎಲ್ಲ ಪ್ರಸಂಗಗಳಲ್ಲಿ ಅತ್ಯಂತ ಮುಖ್ಯ, ಅರ್ಥಪೂರ್ಣ ಮತ್ತು ಔಚಿತ್ಯ ಪೂರ್ಣವಾದುದು ವೃದ್ಧಮಾಹೇಶ್ವರ ಪ್ರಸಂಗ. ಈ ಪ್ರಸಂಗ, ಕಥೆಯ ಒಂದು ಮುಖ್ಯ ತಿರುವು. ಇದು ಇಡೀ

ಕಥೆಯ ಯಶಸ್ಸಿಗೆ ಹಾಗೂ ಸೌಂದರ್ಯಕ್ಕೆ ಕಾರಣವಾದ ಪ್ರಸಂಗವಾಗಿದೆ.

ಈ ಪ್ರಸಂಗ ನಂಬಿಯಣ್ಣನ ಕಥೆಯ ಆರು ಮತ್ತು ಏಳನೆ ಸ್ಥಲಗಳಲ್ಲಿ ಬರುತ್ತವೆ. ಶಿವ, ಆರನೆ ಸ್ಥಲದಲ್ಲಿ ವೃದ್ಧ ಮಾಹೇಶ್ವರನಾಗಿ ಕಾಣಿಸಿಕೊಂಡರೆ, ಏಳನೆ ಸ್ಥಲದಲ್ಲಿ ಜಗಳದ ಮಾಹೇಶ್ವರನಾಗಿ ಕಾಣಿಸಿಕೊಳ್ಳುತ್ತಾನೆ.

ಮಣಮಂದ ಪುತ್ತೂರಿನಲ್ಲಿ ನಂಬಿಯಣ್ಣನ ಮದುವೆ ನಿಶ್ಚಯವಾಗಿರುತ್ತದೆ. ಸಕಲ ಏರ್ಪಾಡುಗಳೂ ನಡೆದಿರುತ್ತವೆ. ಇನ್ನೇನು ಮುಹೂರ್ತದ ಗಳಿಗೆ ಹತ್ತಿರ ಬಂತು ಎಂಬಷ್ಟರಲ್ಲಿ ಈ ವೃದ್ಧ ಮಾಹೇಶ್ವರನ ಪ್ರವೇಶವಾಗುತ್ತದೆ. ಶತವೃದ್ಧನ ಆ ವೇಷವನ್ನು ಕವಿ " ..... ಪಾದ ಮಸ್ತಕಂಬರಂ ಉದ್ಧೂಳಿಸಿದ ವಿಭೂತಿ ತಲೆಯುಂ ಮೈಯ್ಯುಂ ತೀವಿದ ನರೆತೆರೆಗಳಾಗೆ ಜೆಡೆಯ ಚಂದ್ರಕಳೆ ಕೊಡೆಯಾಗೆ ಹಿಡಿದ ತ್ರಿಶೂಲಂ ಕೊಡೆಯ ಕಾವಾಗೆ ಖಟ್ವಾಂಗಂ ಯಷ್ಟಿಯಾಗೆ ಆಭರಣದೊಂದು ಸರ್ಪಂ ಪ್ರಮಾಣ ಪತ್ರಮಾಗೆ ಕಮಲಜಶಿರಂ ಕಮಂಡಲ ಮಾಗೆ ..... ಸರ್ವಾಂಗದಿಂ ಪುಣ್ಯಂ ಪಣ್ಣಾದಂತೆ ಒಮ್ಮೊಮ್ಮೆ ಗೊಹೆ ಗೊಹೆಗುಟ್ಟುತಂ ಶಿಥಿಲಾಕ್ಷರಂಗಳಿಂ ನಮ: ಶಿವಾಯ, ನಮ: ಶಿವಾಯೆನುತೆ ಎನಲಾಱದಂತೆ ನಡುಗುತಂ"[10] ಹೀಗೆ ವರ್ಣಿಸಿದ್ದಾನೆ. ಇಲ್ಲಿ ನೂರು ತುಂಬಿದ ವೃದ್ಧನೊಬ್ಬನ ಅರೆಕೊರೆಯಿಲ್ಲದ ಚಿತ್ರವನ್ನು ಕವಿ ಚಿತ್ರಿಸಿದ್ದಾನೆ.

ಶತ ವೃದ್ಧನ ವೇಷಧರಿಸಿದ ಶಿವ ಮದುವೆಯ ಮಂಟಪಕ್ಕೆ ಬರುತ್ತಿದ್ದಂತೆಯೇ ಅಲ್ಲಿ ಹಲವು ಅನಿಷ್ಟಗಳನ್ನು ಮೆರೆಯುತ್ತಾನೆ. ತುಂಬಿಸಿಟ್ಟಿದ್ದ ತುಪ್ಪದ ಡಬ್ಬದ ಮೇಲೆ ಎಡವಿ ಬಿದ್ದಂತೆ ಬಿದ್ದು ತುಪ್ಪವನ್ನೆಲ್ಲ ಚೆಲ್ಲುತ್ತಾನೆ. ಚೆಲ್ಲಿದ ತುಪ್ಪ ಕುಳಿತಿದ್ದ ಜನರ ಮೈಕೈಗೆಲ್ಲ ಆಗುತ್ತದೆ. ನೆರೆದ ಜನರು 'ಎಲೆಲೆಲೆ ವೃದ್ಧಂ ಬಿದ್ದಂ ಬಿದ್ದನಾ' ಎನ್ನುತ್ತಾ ಮೇಲೆತ್ತಿ ನಿಲ್ಲಿಸುತ್ತಾರೆ. ಅವರು ಎತ್ತಿ ನಿಲ್ಲಿಸುತ್ತಿದ್ದಂತೆಯೇ ವೃದ್ಧ ನಿಲ್ಲಲಾರದವನಂತೆ 'ಗಳಿಗೆವಟ್ಟಲ' ಮೇಲೆ ಬೀಳುತ್ತಾನೆ. 'ಗಳಿಗೆವಟ್ಟಲು' ಒಡೆಯುತ್ತದೆ. ಕಳಸವೂ ಒಡೆಯುತ್ತದೆ. ಒಳಗಿದ್ದ ಅಕ್ಕಿ ಚೆಲ್ಲುತ್ತದೆ. ಜೋಯಿಸರೆಲ್ಲ ಚೆದುರುತ್ತಾರೆ. ಏಳಲಾಗದೆ ಬಿದ್ದಿರುವ ಮುದುಕನಿಗೆ ನೀರು ಚಿಮುಕಿಸಿ ಎಚ್ಚರಿಸಿದರೆ ಎತ್ತಿದವರ ಭಾರ ತನ್ನ ಮೇಲೆ ಎಂಬಂತೆ ವರ್ತಿಸುತ್ತಾನೆ. ಹಿಡಿದರೆ ಕೈಯಲ್ಲಿರುತ್ತಾನೆ. ಇಲ್ಲಿದಿದ್ದರೆ ತುಪ್ಪದ ಡಬ್ಬಿಯ ಮೇಲೆ ಬೀಳುತ್ತಾನೆ. ಕೊನೆಗೆ ನೆರೆದ ಜನರೆಲ್ಲರೂ ವೃದ್ಧನ ಕೈ ಕಾಲುಗಳನ್ನು ಹಿಡಿದು ಚಪ್ಪರದಿಂದ ಹೊರಗೆ ತಂದು ಹಾಕುತ್ತಾರೆ. ಮತ್ತೆ ಒಳಗಡೆ ಬರದಂತೆ ಬಾಗಿಲು ಹಾಕಿಕೊಳ್ಳುತ್ತಾರೆ. ಆದರೆ ಎಲ್ಲರೂ ಒಳಗೆ ಪ್ರವೇಶಿಸುವಷ್ಟರಲ್ಲಿ ವೃದ್ಧ ಮತ್ತೆ ಒಳಗೆ ಪ್ರವೇಶಿಸುತ್ತಾನೆ. ಕಟ್ಟಿದ ತಳಿರು ತೋರಣವನ್ನು ಕಿತ್ತು ಎಸೆಯುತ್ತಾನೆ; ಮತ್ತೆ ಮತ್ತೆ 'ಶಿವದಿಡುತ್ತ' "ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮಂ ಕೆಡಿಸಿಕೊಳ್ಳದಿರಿ, ನಾನಪ್ಪಡೆ ಮದುವೆಯಾಗಲೀಯೆಂ ನೀವಿದಱೊಡ್ಡಂತವನೇನೆಂದಱಿಯಿರಿಪಂ ನರಸಿಂಗ ಮೊನೆಯರ್ಪೆತ್ತ ಮಗನಲ್ಲಂ ಕೊಂಡು ಸಾಕಿದ ದತ್ತು ಪುತ್ರಂ ಶಿವಬ್ರಾಹ್ಮಣಂ ಸೌಂದರ ಪೆರುಮಾಳೆಯಲ್ಲಂ ನಂಬಿಯಣ್ಣನೆಂದು ಪೆಸರು ಎನ್ನ ತೊತ್ತಿನ ಮಗನದಕ್ಕೆ ಪ್ರಮಾಣ ಪತ್ರ"[11] ಇದೆ ಎಂದು ತಿಳಿಸುತ್ತಾನೆ. ನೆರೆದ ಜನರಿಗೆ ಹಾಗೂ ತಂದೆ ತಾಯಿಯರಿಗೆ ವೃದ್ಧನ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟವಾಗುತ್ತದೆ. ಆಗ ವೃದ್ಧನನ್ನು ಸೌಂದರ ಪೆರುಮಾಳೆಯಿದ್ದ ವನಕ್ಕೆ ಕಳುಹಿಸಿಕೊಡುತ್ತಾರೆ. ಅಲ್ಲಿ

ನಂಬಿಯಣ್ಣನಿಗೂ ವೃದ್ಧಶಿವನಿಗೂ ನಡುವೆ ಮಾತುಕತೆ ನಡೆಯುತ್ತದೆ. ವೃದ್ಧ ಹೇಳುವ ಸಂಗತಿ ನಂಬಿಯಣ್ಣನಿಗೆ ಸ್ವಲ್ಪವೂ ನೆನಪಿಗೆ ಬರುವುದಿಲ್ಲ. ಇಬ್ಬರ ನಡುವೆಯೂ ಮಾತಿಗೆ ಮಾತು ಬೆಳೆಯುತ್ತವೆ. ನಂಬಿಯಣ್ಣ (ಸೌಂದರ)ನಿಗೆ ಸಿಟ್ಟು ಉಕ್ಕೇರುತ್ತದೆ. ಆ ಸಿಟ್ಟಿನಲ್ಲಿ "ಈ ಪಿಚ್ಚ ಬ್ರಾಹ್ಮಣನೀ ಪೆಷ್ಟ ವೃದ್ಧನಂ ತಂದರಾರೋ ನೂಂಕು ನೂಂಕೆಂದು"[12] ಅಲ್ಲಿಯ ಪಡಿಯರರಿಗೆ ತಿಳಿಸುತ್ತಾನೆ. ಆದರೆ ಅವರು ಮುಟ್ಟುವ ಮುನ್ನವೇ ವೃದ್ಧ ತಾನೇ ಬಿದ್ದು ತಲೆಯೊಡೆದಂತೆ ಒತ್ತಿಕೊಳ್ಳುತ್ತ, ಬೆನ್ನು ಉಳುಕಿದಂತೆ ಉಸುರುತ್ತ, ಕಾಲುನೊಂದಂತೆ ನರಳುತ್ತ ಶಿವ ಶಿವ ಎನ್ನತೊಡಗುತ್ತಾನೆ. ದಿಣ್ಣೆಯ ಮೇಲೆ ನಿಂತು ಮತ್ತೆ ನಂಬಿಯಣ್ಣನ ಪೂರ್ವ ವೃತ್ತಾಂತವನ್ನು ತಿಳಿಸುತ್ತಾನೆ. ಆ ಹೊತ್ತಿಗೆ ಅಲ್ಲಿಗೆ ಬಂದ ಒಬ್ಬ ವ್ಯಕ್ತಿ ಮಣಮುಂದ ಪುತ್ತೂರಿನಲ್ಲಿ ನಡೆಯಬೇಕಿದ್ದ ಮದುವೆ ಸಂಭ್ರಮವನ್ನು ವೃದ್ಧನೊಬ್ಬ ಕೆಡಿಸಿದ ಬಗೆಗೆ ತಿಳಿಸುತ್ತಾನೆ. ಇದನ್ನು ಕೇಳಿದ ತುಂಬುರ ಮೊದಲಾದವರು ಇದರಲ್ಲೇನೋ ಸತ್ಯವಿರಬೇಕೆಂದು ತಿಳಿದು ಸೌಂದರನಿರುವಲ್ಲಿಗೆ ವೃದ್ಧಶಿವನನ್ನು ಕರೆದುಕೊಂಡು ಬರುತ್ತಾರೆ. ಅಲ್ಲಿ ಮತ್ತೆ ಸೌಂದರ ಮತ್ತು ವೃದ್ಧಶಿವನ ನಡುವೆ ಮಾತುಕತೆ ನಡೆಯುತ್ತದೆ. ಸಿಟ್ಟಿಗೆದ್ದ ಸೌಂದರ "ಆನೆ ನಿನಗೆ ತೊತ್ತಿನ ಮಗ, ನಾನೆ ನಾನೆಯೆನೆ ನೀ ನೀ ನೀನೆಂದು ಕೈವಿಡಿದೆಳೆವುದುಂ ಕುಮಾರಂ ಕೆರಳ್ದು ..... ಕೊಲುವೆನಾಮುದಕ್ಕೆಂದು ಕೈನೀಡಿ"[13] ತಿವಿಯಲು ಹೊರಡುತ್ತಾನೆ. ಆಗ ತುಂಬುರ ಮತ್ತು ಇತರರೆಲ್ಲ ಮಧ್ಯ ಪ್ರವೇಶಿಸಿ ವೃದ್ಧನಿಗೆ ಕೈಮುಗಿದು ಪ್ರಮಾಣಪತ್ರ ಪಡೆದು ಗಣನೊಬ್ಬನಿಂದ ಓದಿಸುತ್ತಾರೆ. ಅದರಲ್ಲಿ ನಂಬಿಯಣ್ಣನು ತೊತ್ತಿನ ಮಗನೆಂಬ ವಿಚಾರ ತಿಳಿಯುತ್ತದೆ. ಕೂಡಲೇ ಅರಸ ನರಸಿಂಗಮೊನೆಯರಿಗೆ ಹೇಳಿ ಕಳುಹಿಸುತ್ತಾರೆ. ಈ ವಿಚಾರ ಕೇಳಿದ ನರಸಿಂಗಮೊನೆಯರು ಇದು ನಿಜವೆಂದು ಒಪ್ಪಿ ಧರ್ಮ ಹೇಗಿದೆಯೋ ಹಾಗೆ ಮಾಡುವಂತೆ ತಿಳಿಸುತ್ತಾರೆ. ಕೊನೆಯದಾಗಿ ಈ ವಿಚಾರವನ್ನು ಖಚಿತಪಡಿಸಿಕೊಳ್ಳಲು ಆ ಪತ್ರದಲ್ಲಿ ನಮೂದಿಸಿದ್ದ ಸಾಕ್ಷಿಗಳನ್ನು ಹುಡುಕಿ ತಿರುವೆಣ್ಣನಲ್ಲೂರಿಗೆ ಹೊರಡುತ್ತಾರೆ.

ಇಲ್ಲಿಗೆ ವೃದ್ಧಮಾಹೇಶ್ವರನ ಪ್ರಸಂಗ ಮುಗಿಯುತ್ತದೆ. ಮುಂದೆ ಇದೇ ವೃದ್ಧಮಾಹೇಶ್ವರ ಜಗಳದ ಮಾಹೇಶ್ವರನಾಗಿ ಕಾಣಿಸಿಕೊಳ್ಳುತ್ತಾನೆ. ತಿರುವೆಣ್ಣನಲ್ಲೂರಿಗೆ ಬಂದ ನಂಬಿಯಣ್ಣ, ತುಂಬುರಾದಿಗಳು ಅಲ್ಲಿನ ಮಹಾಜನಗಳನ್ನು ಕಾಣುತ್ತಾರೆ. ಮನನೊಂದ ನಂಬಿಯಣ್ಣ ಕಡುಸಿತಗನಾದ ವೃದ್ಧನ ವಿಚಾರವನ್ನು ತಿಳಿಸುತ್ತಾರೆ. ಆಗ ಮಹಾಜನಗಳು ಆ ವೃದ್ಧನ ವಿಚಾರವನ್ನು ತಿಳಿಸುತ್ತಾರೆ. ಮಹಾಜನಗಳು ಆ ವೃದ್ಧನನ್ನು ತೋರುವಂತೆ ಹೇಳುತ್ತಾರೆ. ಹಾಗೆ ಹೇಳುತ್ತಿದ್ದಂತೆಯೇ ಅವರ ನಡುವೆಯೇ ಜಗಳದ ಮಾಹೇಶ್ವರನು ಕಾಣಿಸಿಕೊಳ್ಳುತ್ತಾನೆ. ಕಾಣಿಸಿಕೊಂಡು 'ಕುಶಲವೇ ರುದ್ರ ಭಟ್ಟರೇ', 'ಕ್ಷೇಮವೇ ಈಶಾನ ಭಟ್ಟರೇ' ಎಂದು ಬಹಳ ಪರಿಚಿತರಂತೆ ಅಲ್ಲಿರುವವರನ್ನು ಮಾತನಾಡಿಸತೊಡಗುತ್ತಾನೆ. ಇಡೀ ಸಭೆ ಕೌತುಕಗೊಂಡು ಜಗಳದ ಮಾಹೇಶ್ವರನ ಪರಿಚಯವನ್ನು ಕೇಳುತ್ತದೆ. ಆಗ ಮಾಹೇಶ್ವರ ತನ್ನ ವೃತ್ತಾಂತವನ್ನು ತಿಳಿಸಿ ಪರಿಚಯ ಮಾಡಿಕೊಳ್ಳುತ್ತಾನೆ. ಅನಂತರ, ಮಹಾಜನಗಳು ಶಿವನ ಪತ್ರವನ್ನು ಗಣಕನ ಕೈಯಿಂದ ಓದಿಸುತ್ತಾರೆ. ಹಾಗೆ ಓದುವಾಗ ಇದೆಲ್ಲ ಕೃತಕವೆಂದು ತಿಳಿದು ಅಲ್ಲಿಯ

ಮಹಾಜನಗಳೆಲ್ಲ ಅಳತೊಡಗುತ್ತಾರೆ. ನಂಬಿಯಣ್ಣ ಪತ್ರವನ್ನು ಕಿತ್ತು ಹರಿದುಹಾಕುತ್ತಾನೆ. ಆಗ ಜಗಳದ ಮಾಹೇಶ್ವರ ಆ ಪತ್ರ ನಕಲಾದದ್ದು : ಅದರ ಮೂಲ ಪತ್ರ ಶಿವಾಲಯದೊಳಗೆ ಇರುವುದಾಗಿ ತಿಳಿಸುತ್ತಾನೆ. ನಂಬಿಯಣ್ಣನನ್ನು ಕರೆದುಕೊಂಡು ಶಿವಾಲಯದ ಕಡೆ ಹೊರಡುತ್ತಾನೆ. ಶಿವಾಲಯದೊಳಗೆ ಹೋಗುವಾಗ ಶಿವ ಕೆರವನ್ನು ಕಳೆಯದೆ ನುಗ್ಗುತ್ತಾನೆ. ಇದರಿಂದ ಕೋಪಗೊಂಡ ನಂಬಿಯಣ್ಣ ಅವನನ್ನು ಕೊಲ್ಲುವುದಾಗಿ ನಿಶ್ಚಯಿಸಿ ಹತ್ತಿರ ಬರುತ್ತಾನೆ. ಒಡನೆಯೇ ಶಿವ ಲಿಂಗದಲ್ಲಿ ಲೀನವಾಗುವನು. ನಂಬಿಯಣ್ಣನಿಗೆ ಮೆಲ್ಲ ಮೆಲ್ಲನೆ ಹಿಂದಿನದೆಲ್ಲಾ ನೆನಪಾಗುತ್ತದೆ. ತಾನು ಶಿವನ ತೊತ್ತಿನ ಮಗನೆಂಬುದು ಖಚಿತವಾಗುತ್ತದೆ.

ನಂಬಿಯಣ್ಣ ಸಕಲ ವೈಭವದ ನಡುವೆ ತನ್ನ ಹಿಂಬದುಕನ್ನು ಮರೆತಿದ್ದಾನೆ. ಅದನ್ನು ನೆನಪಿಸಿ ಶಿವನು ನಂಬಿಯಣ್ಣನಿಗೆ ಪೂರ್ವಜ್ಞಾನ ಉದಯಿಸುವಂತೆ ಮಾಡಬೇಕಾಗಿದೆ. ಹಾಗೆ ಮಾಡಿ ಅವನನ್ನು ಉದ್ಧರಿಸಬೇಕಾಗಿದೆ. ಆದರೆ ಆ ಕಾರ್ಯವನ್ನು ನೇರವಾಗಿ ಮಾಡುವುದು ಆಗದ ಕೆಲಸ ಎಂಬುದು ಶಿವನಿಗೆ ಸ್ಪಷ್ಟವಾಗಿದೆ. ಆದ್ದರಿಂದಲೇ ಇಲ್ಲಿ ಪರೋಕ್ಷವಾಗಿ ನಂಬಿಯಣ್ಣನಿಗೆ ಅವನ ಹಿಂಬದುಕನ್ನು ತಿಳಿಸುತ್ತಾ ಹೋಗುತ್ತಾನೆ. ಹಾಗೆ ಮಾಡುವಾಗ ಏರುಪೇರುಗಳಾಗುವುದು ಸಹಜವಾಗಿದೆ. ಅದೆಲ್ಲವನ್ನು ಶಿವ ಸಹಿಸಿಕೊಂಡೇ ಹೋಗುತ್ತಾನೆ. ಎಲ್ಲರೆದುರೂ ನಿಜರೂಪ ತೋರುವುದು ಸಾಧುವಲ್ಲದ ಕಾರಣ, ನಂಬಿಯಣ್ಣನೊಬ್ಬನನ್ನೇ ದೂರ ಕರೆದುಕೊಂಡು ಹೋಗಬೇಕಾಗಿದೆ. ಅದಕ್ಕಾಗಿ ಪಡಿಪತ್ರದ ಪ್ರಸಂಗ ತರುತ್ತಾನೆ. ಪಡಿಪತ್ರವನ್ನು ತೋರಿಸುವ ನೆಪದಲ್ಲಿ ನಂಬಿಯಣ್ಣನನ್ನು ಶಿವಮಂದಿರದ ಕಡೆ ಕರೆದುಕೊಂಡು ಹೋಗುತ್ತಾನೆ.ಸುಂದರವಾದ ಈ ಸಮಯದಲ್ಲಿ ಶಿವ, ಭಕ್ತನಿಗೆ ತನ್ನ ನಿಜ ಸ್ವರೂಪ ತೋರುತ್ತಾನೆ. ಶಿವನ ಆ ಸ್ವರೂಪವನ್ನು ಕಾಣುತ್ತಲೇ ನಂಬಿಯಣ್ಣನಲ್ಲಿ ಪೂರ್ವಜ್ಞಾನ ಉದಯಿಸುತ್ತದೆ. ಇಡೀ ಪ್ರಸಂಗ ಒಂದು ಸುಂದರವಾದ ನಾಟಕದಂತಿದೆ. ಪ್ರತಿ ಸನ್ನಿವೇಶವೂ ಓದುಗನಿಗೆ ಕುತೂಹಲವನ್ನು ಕೆರಳಿಸುವಂತಿದೆ. ಪ್ರತಿ ಸನ್ನಿವೇಶಗಳೂ ಸಮಯೋಚಿತವಾಗಿವೆ. ಪ್ರತಿ ಸಂಭಾಷಣೆಗಳೂ ಅರ್ಥಪೂರ್ಣವಾಗಿವೆ. ಈ ಪ್ರಸಂಗ ಕಥೆಯ ಸೌಂದರ್ಯವನ್ನು ಹೆಚ್ಚಿಸಿದೆ.

## 5.1.3 ನಂಬಿಯಣ್ಣನ ಕಥೆಯ ಉದ್ದೇಶ ಮತ್ತು ಸಾಧನೆ

ಆತ್ಮದ ವಿಕಾಸದ ಹಾದಿಯಲ್ಲಿ ಪ್ರಸಾದಿ ಸ್ಥಲವೂ ಒಂದು. ಇದು ಮಾನವನ ಅಹಂಕಾರವನ್ನು ಅಳಿದು ಸಮರ್ಪಣ ಭಾವವನ್ನು ನೀಡಿ ಮುಕ್ತಿಗೆ ಅಣಿಗೊಳಿಸುತ್ತದೆ.

"ಪ್ರಸಾದಿಯು ನಾಲಗೆ, ಕಣ್ಣು, ಕಿವಿ, ಮೂಗು, ತ್ವಚೆ ಈ ಪಂಚೇಂದ್ರಿಯಗಳ ಮೂಲಕ ನೇರವಾಗಿ ರಸ, ರೂಪ, ಶಬ್ದ, ಗಂಧ ಹಾಗೂ ಸ್ಪರ್ಶಗಳನ್ನು ಪಡೆಯದೆ, ಆಸ್ವಾದಿಸದೆ ಆಯಾ ಇಂದ್ರಿಯಗಳಲ್ಲಿ ಮುಖ್ಯವಾಗಿ ನೆಲೆಸಿರುವ ಗುರುಲಿಂಗ, ಶಿವಲಿಂಗ, ಪ್ರಸಾದಲಿಂಗ, ಆಚಾರಲಿಂಗ ಹಾಗೂ ಜಂಗಮಲಿಂಗಗಳಿಗೆ ಅರ್ಪಿಸಿ ತರುವಾಯ ಅದನ್ನು ಪ್ರಸಾದವಾಗಿ ಸ್ವೀಕರಿಸುತ್ತಾನೆ. ಇದನ್ನೇ 'ಲಿಂಗ ಮುಂತಾಗಿ ತನು ಹಿಂತಾಗಿ' ಭೋಗಿಸುವದೆಂದು ಹೇಳುತ್ತಾರೆ.

ಇದು ಪ್ರಸಾದಿ ಸ್ಥಲದಲ್ಲಿ ಮೊದಲ ಮೆಟ್ಟಿಲು. ಒಂದೊಂದು ಸ್ಥಲವನ್ನು ಮತ್ತೆ ಆರು ಸ್ಥಲಗಳನ್ನಾಗಿ ಶರಣರು ವಿಭಾಗಿಸಿದ್ದಾರೆ. ಒಬ್ಬೊಬ್ಬ ಭಕ್ತನು ಒಂದೊಂದು ಸ್ಥಲದಲ್ಲಿ ನಿಂತು ಕೊನೆಯ ಮೆಟ್ಟಿಲು ಮುಟ್ಟುತ್ತಾನೆ"[14] "ಮಹಾಪ್ರಸಾದಿಯ ಬಾಹ್ಯೇಂದ್ರಿಯಗಳು ಸ್ವತಂತ್ರವಾಗಿ ಯಾವ ಕಾರ್ಯವನ್ನು ಮಾಡಲಾರವು. ಯಾವ ಭೋಗವೂ ಆಯಾ ಇಂದ್ರಿಯಗಳಲ್ಲಿ ನೆಲೆಸಿರುವ ಲಿಂಗ ಮುಖವಾಗಿಯೇ ಬರಬೇಕು. ಮೊದಮೊದಲು ಲಿಂಗಮುಖವಾಗಿ ಭೋಗಿಸುವ ಪ್ರಸಾದಿ ಕ್ರಮೇಣ ಬಾಹ್ಯೇಂದ್ರಿಯಗಳಲ್ಲಿ ಒಳಮುಖ ಮಾಡುತ್ತಾನೆ. ಈಗ ಇಂದ್ರಿಯಗಳ ಬಾಹ್ಯ ವಿಷಯಗಳನ್ನು ಭೋಗಿಸುವ ಪ್ರಶ್ನೆಯೇ ಉಳಿಯುವುದಿಲ್ಲ. ಅವನ ಸರ್ವಾಂಗವೂ ಲಿಂಗರೂಪ ವಾಗುತ್ತದೆ. ತನುವೇ ಪ್ರಾಣಲಿಂಗವಾಗಿ ತಾನು ಲಿಂಗಮುಖನಾಗಿ ಭೋಗಿಸುವೆನೆಂಬ ಭೇದಜ್ಞಾನ ಇಲ್ಲವಾಗುತ್ತದೆ. ಈ ನೆಲೆಯಲ್ಲಿ ತನಗೆ ಅರ್ಪಿಸಲೂ ಏನಿಲ್ಲ. ತಾನು ಅರ್ಪಿಸುವವನೂ ಅಲ್ಲವೆಂಬ ಅರಿವು ಮೂಡುತ್ತದೆ."[15] ಇದೇ ಪ್ರಸಾದಿ ಸ್ಥಲ ಇಲ್ಲಿ ಭಕ್ತನು ಸರ್ವವನ್ನೂ ಶಿವಾರ್ಪಿತವೆಂದೇ ಭಾವಿಸುತ್ತಾನೆ. ಇದರ ಪ್ರತಿಪಾದನೆಯೇ ಹರಿಹರನ ನಂಬಿಯಣ್ಣನ ರಗಳೆಯ ಪ್ರಧಾನ ಉದ್ದೇಶ. ಇದು ನಂಬಿಯಣ್ಣನ ರಗಳೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ವ್ಯಕ್ತವಾಗುತ್ತದೆ.

ಪರವೆ ಮತ್ತು ನಂಬಿಯಣ್ಣ ಇಬ್ಬರೂ ಪರಸ್ಪರ ಮೋಹಕ್ಕೆ ಒಳಗಾಗಿ ಕಾಮಾನುರಾಗಕ್ಕೆ ಆತುರವಾಗಿರುವ ಸಂದರ್ಭದಲ್ಲಿ ಶಿವನು ಗಗನದಲ್ಲಿ ನಿಂತು ಅವರನ್ನು ನೋಡಿ ಪಾರ್ವತಿ ದೇವಿಗೆ "ನೋಡು ನೋಡು ಪಾರ್ವತೀ ನಿನ್ನ ಪರವೆಯ ರೂಪುಮನೆನ್ನ ನಂಬಿಯಣ್ಣನ ವಿಳಾಸಮನೀ ಇರ್ಬರ ಸುಖದೋಜೆಯನೀ ಜಗತ್ತ್ರಯಂಮೆಚ್ಚೆ ಪೂಜೆಯಾಗಿ ಕೈಕೊಂಡಪೆಂ"[16] ಎಂದು ತಿಳಿಸುತ್ತಾನೆ. ಶಿವನಾಡುವ ಈ ಮಾತು ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿಯೇ ಇದೆ.

ಮಣಮಂದ ಪುತ್ತೂರಿನಲ್ಲಿ ನಂಬಿಯಣ್ಣನ ಮದುವೆಯ ಎಲ್ಲ ಏರ್ಪಾಡುಗಳೂ ನಡೆದಿರುತ್ತವೆ. ಆಗ ಶಿವನು ಪಾರ್ವತಿದೇವಿಗೆ "ದೇವಿ ಕೇಳ್ ನಮ್ಮ ಪುತ್ರಂ ಪುಷ್ಪದತ್ತಂ ನರಲೋಕಮೊಳ್ಪುಟ್ಟಿ ನಂಬಿಯೆಂಬ ನಾಮವಾಗಿ ಸಂಸಾರದಿಂ ಕೆಟ್ಟುಪೋಗಲನುವಾಗಿರ್ದ ಪನಾತಂಗೆ ಮುನ್ನಿತ್ತ ನಂಬುಗೆಯ ಬೆಂಬುಳಿಗೊಂಡು ಪೋಗಿ ಮರ್ತ್ಯದೊಳ್ತೊತ್ತುಗೊಂಡಾವು ಕಳುಪಿದ ನಿಮ್ಮಿರ್ಬರು ರುದ್ರಕನ್ನಿಕೆಯರು ಚೋಳದೇಶದ ತಿರುನಾವಲೂರೊಳಂ ತಿರುವತ್ತಿಯೂರೊಳಂ ಪರವೆ ಸಂಕಿಲೆಗಳೆಂಬ ನಾಮದಿಂ ಜನಿಯಿಸಿರ್ದಪರವಂದಿರನಾತನೊಳ್ನೆರಪಿ ಸಕಲ ಸುಖಮಂ ಪೂಜೆಯಾಗಿ ಕೈಕೊಂಡು ಬಪ್ಪೆ"[17] ಎಂದು ನುಡಿಯುತ್ತಾನೆ. ಶಿವನಾಡುವ ಈ ಮಾತೂ ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿಯೇ ಇದೆ.

ಮಣಮಂದ ಪುತ್ತೂರಿನಲ್ಲಿ ನಡೆಯಬೇಕಿದ್ದ ಮದುವೆ ಶಿವನಿಂದಾಗಿ ನಿಲ್ಲುತ್ತದೆ. ಮದುವೆ ನಿಂತಮೇಲೆ ನಂಬಿಯಣ್ಣ ಪರವೆ ಇರುವ ತಿರುವಾರೂರ ಕಡೆಗೆ ಬರುತ್ತಾನೆ. ಅಲ್ಲಿ ಪರವೆನಾಚಿಯನ್ನು ಕಂಡು ಪ್ರೇಮವಶನಾಗುತ್ತಾನೆ. ಪರವೆನಾಚಿಯ ಸಖಿಯೊಬ್ಬಳು ಬಂದು ನಂಬಿಯಣ್ಣನಿಗೆ ತನ್ನ ಒಡತಿಯ ಬಯಕೆಯನ್ನು ತಿಳಿಸುತ್ತಾಳೆ. ನಂಬಿಯು ಆರೂರ ಅರಸನು ಕಳುಹಿಸಿದ ಶಿವಪ್ರಸಾದಾಮೃತವನ್ನು, 'ರಸವ್ರೊಸರ್ವ ಮುಪ್ಪಳಮಂ', 'ಚಿಲುಪಾಲು' ಮುಂತಾದುವುಗಳನ್ನು

ನಾಲಗೆಗೆ ರುಚಿಕರವಾಗಿರಲು ಶಿವಾರ್ಪಿತವೊಡನೆ ಕೈಕೊಳ್ಳುತ್ತಾನೆ. ಅನಂತರ, ಪರವೆಯು ಬಳಿ ತೆರಳಿ ಅವಳೊಡನೆ ಕಾಮಲೀಲಾ ವಿನೋದದಲ್ಲಿ ತೊಡಗುತ್ತಾನೆ. ಅವರ ಆ ವಿನೋದವನ್ನು 'ಕಾಮರತಿ ಕ್ರೀಡಾ ಕಾರ್ಯಂ ಶಿವಾರ್ಪಿತ ಕಾರಣ' ಆಗುತ್ತಿತ್ತು ಎಂದು ಕವಿ ವರ್ಣಿಸುತ್ತಾನೆ.

ನಂಬಿಯಣ್ಣನು ಪರವೆಯೊಡನೆ ಕಾಮರತಿಕ್ರೀಡಾಕಾರ್ಯದಲ್ಲಿರುವಾಗ ವೈಘಾಸಿ ತಿರುನಾಳು ಬರುತ್ತದೆ. ಅದಕ್ಕಾಗಿ ನೆಲ್ಲನ್ನು ಸಂಗ್ರಹಿಸಲು ನಂಬಿಯಣ್ಣ ಪರವೆಯನ್ನು ಬಿಟ್ಟು ಹೊರಗೆ ಹೋಗಬೇಕಾಗುತ್ತದೆ. ಹೀಗೆ ಹೊರಗೆ ಹೋಗಬೇಕಾಗಿಬಂದದ್ದರಿಂದ ನಂಬಿಯಣ್ಣನಿಗೆ ಪರವೆಯ ಅಗಲ್ಕೆ ಅಭ್ಯಾಸವಾಗುತ್ತದೆ. ಹಾಗೆ ಅಭ್ಯಾಸವಾಗುತ್ತಿದ್ದಂತೆಯೇ ತಿರುವತ್ತಿಯೂರಿನಲ್ಲಿ ಸಂಕಿಲೆಯ ಮೋಹಕ್ಕೆ ನಂಬಿಯಣ್ಣ ಒಳಗಾಗುತ್ತಾನೆ. ಸಂಕಿಲೆಯನ್ನು ಕೊಡಿಸಿ ಕೊಡುವಂತೆ ಶಿವನನ್ನು ಬೇಡುತ್ತಾನೆ. ನಂಬಿಯ ಬೇಡಿಕೆಯಂತೆ ಶಿವನು ಸಂಕಿಲೆಯ ತಾಯಿಯನ್ನು ಭೆಟ್ಟಿ ಮಾಡಿ ಒಪ್ಪಿಸಿ ಸಂಕಿಲೆಯೊಡನೆ ನಂಬಿಯಣ್ಣನನ್ನು ಕೂಡಿಸುತ್ತಾನೆ. ನಂಬಿಯಣ್ಣ ಮತ್ತು ಸಂಕಿಲೆ ಪರಸ್ಪರ ಕಾಮಾನುರಾಗದಲ್ಲಿ ತೊಡಗಿರಲು ಶಿವ ಅವರನ್ನು 'ಎಚ್ಚರಿಸಿ ಅರ್ಚನೆ'ಗೊಳ್ಳುತ್ತಿದ್ದನಂತೆ. ಹೀಗೆ ನಂಬಿಯಣ್ಣ ಮತ್ತು ಸಂಕಿಲೆ ಹಲವು ಕಾಲ ಇರಲು ಶಿವನು 'ಕೊಟ್ಟ ನಂಬುಗೆಯಂ ನೆನೆದು' ಮಾರುತನನ್ನು ಕರೆದು ಪರವೆಯ 'ನರುಸುಯ್ಯ ಸವಿಗಂಪನ್ನು' ನಂಬಿಯೆಡೆಗೆ ಕಳುಹಿಸುತ್ತಾನೆ. ಆಗ ನಂಬಿಯಣ್ಣನಿಗೆ ಮತ್ತೆ ಪರವೆಯರ ನೆನಪಾಗುತ್ತದೆ. ಸಂಕಿಲೆಯನ್ನು ತೊರೆದು ಮತ್ತೆ ಪರವೆಯನ್ನು ಬಯಸಿ ಬರುತ್ತಾನೆ. ಸಂಕಿಲೆಯನ್ನು ಬಯಸಿದ ಕಣ್ಗಳು ಮತ್ತೆ ಪರವೆಯನ್ನು ನೋಡಲಾಗದು ಎಂಬಂತೆ ನಂಬಿಯಣ್ಣನ ಕಣ್ಣು ಕಾಣದಾಗುತ್ತವೆ. ಆಗ ನಂಬಿಯಣ್ಣ ಕಣ್ಣಿಗಾಗಿ ಮತ್ತೆ ಶಿವನನ್ನು ಬೇಡುತ್ತಾನೆ. ಹೋದ ಕಣ್ಣುಗಳು ಬರುತ್ತವೆ. ಪರವೆಯ ಬಳಿ ಮತ್ತೆ ಬಂದ ನಂಬಿಯಣ್ಣ ತಿರಸ್ಕೃತನಾಗುತ್ತಾನೆ. ಆಗ ಶಿವ ಮತ್ತೆ ಮಧ್ಯಸ್ತಿಕೆ ವಹಿಸಿ ಪರವೆಯೊಡನೆ ನಂಬಿಯಣ್ಣ ಸೇರುವಂತೆ ಮಾಡುತ್ತಾನೆ. ಮತ್ತೆ ಪರವೆಯೊಡನೆ ನಂಬಿಯಣ್ಣ ಸುಖದಿಂದಿರಲು ಅವರ ಸುಖ 'ಕಾಮಸುಖ ಕಾಮಾರಿಗೇಱುತ್ತ' ಇದ್ದಿತಂತೆ. ಹೀಗಿರುವಾಗ ಅರಸ ಚೇರಮ ನಂಬಿಯಣ್ಣನನ್ನು ಕಾಣಲು ಬರುತ್ತಾನೆ. ಚೇರಮ ಮತ್ತು ನಂಬಿ ಇಬ್ಬರೂ ಗದುಗಿನಾಟದಲ್ಲಿ ತೊಡಗುತ್ತಾರೆ. ಚೇರಮ ಗದುಗವನ್ನು ತೆಗೆದುಕೊಂಡು ಇಡಲು ಗದುಗ ತಾಗದೆ ಹೋಗುತ್ತದೆ. ಆಗ ಚೇರಮ 'ಏನಯ್ಯ ಶಿವಭಕ್ತರಪ್ಪೆವೋ ಅಲ್ಲವೊ ಏನು' ಎಂದು ಕೇಳುತ್ತಾನೆ. ಅದಕ್ಕೆ ನಂಬಿ "ನಿಂದ ಗದುಗಂ ನೋಡಿ ಲಿಂಗವೆಂದೇ ನೆನೆದು, ಬಂದ ಗದುಗಂ ಚೆಂಗಣಗಿಲೆಯಾಗಿರೆ ನೆನೆದು ಇಡುವುದು"[18] ಎನ್ನುತ್ತಾನೆ. ಹಾಗೆಯೇ ಚೇರಮ ಗದುಗವನ್ನು ಇಡುತ್ತಾನೆ. ಇಟ್ಟೊಡನೆ ಅದು ತಟ್ಟನೆ ತಾಗುತ್ತದೆ. ಆಗ ಚೇರಮನಿಗೆ ನಂಬಿಯ ನಿಜದ ಅರಿವಾಗುತ್ತದೆ. ನಂಬಿಯ ಮಹಿಮೆಗೆ ಮೆಚ್ಚಿ -

ದೇವ ನೀ ಮಾಳ್ಪುದಂ ಪೂಜೆಯೆಂದಱಿಯೆನ್ನೈ
ದೇವ ಪೊರವೇಷಮುಂ ಕಂಡು ಮರುಳಾದೆನ್ನೈ
ಸೈರಿಪುದು ದೇವ ಎನ್ನಯ ತಪ್ಪಿದೊಂದುವಂ

ಎಂದು ನಂಬಿಯಣ್ಣನಿಗೆ ಶರಣುಹೋಗುತ್ತಾನೆ. ಈ ಮಾತು ನಂಬಿಯಣ್ಣನ ಪ್ರಸಾದಿಗುಣಕ್ಕೆ ಕನ್ನಡಿ ಹಿಡಿದಂತಿದೆ. ಇದಾದ ನಂತರ ಪರವೆಯ ಮರಣದ ವಾರ್ತೆ ನಂಬಿಯ ಕಿವಿ ಮುಟ್ಟುತ್ತದೆ. ಕೂಡಲೇ ನಂಬಿಗೆ ಶೋಕಾಗ್ನಿ ಹೊತ್ತಿ ಉರಿದಂತಾಗುತ್ತದೆ. ಕ್ಷಣ ಕಾಲದಲ್ಲಿಯೇ ಅವನ ಮನಸ್ಸು ತಿಳಿಗೊಳ್ಳುತ್ತದೆ. ಇದೆಲ್ಲವು ಶಿವನ ಕೆಲಸವೇ ಎಂದು ತಿಳಿಯುತ್ತಾನೆ. ಕೈಲಾಸಕ್ಕೆ ಹೊರಡುವ ಮುನ್ಸೂಚನೆ ಇದು ಎಂಬುದು ಅವನಿಗೆ ಗೊತ್ತಾಗುತ್ತದೆ.

ಎಲ್ಲವೂ ಮುಗಿದ ಬಳಿಕ ಮಹಾ ಅಡವಿಯ ಕಡೆಗೆ ನಡೆಯುತ್ತಾನೆ. ಹೋಗುವಾಗ ಅಲ್ಲಿ ಕಾಣುವ ಅದ್ಭುತಗಳನ್ನು, ಕ್ರೂರ ಮೃಗಗಳನ್ನು, ಅಲ್ಲಲ್ಲಿ ಹುಟ್ಟುವ ವೀರಾದ್ಭುತ ರಸಗಳನ್ನು ಶಿವನಿಗರ್ಪಿಸುತ್ತ ನಡೆಯುತ್ತಾನೆ. ಆಮೇಲೆ ಚೇರಮನ ನಾಡಿಗೆ ಬರುತ್ತಾನೆ. ಅಲ್ಲಿ ಭಕ್ತರೆಲ್ಲರು ಸೇರಿರಲು "ಮಂಗಳ ಮೃದಂಗ ನಾನಾವಿಳಾಸಿನೀನರ್ತನ ರತ್ನದರ್ಪಣ ಕನಕಕಳಸ ಸಕಲ ಜನದಾಶೀರ್ವಾದ ವೈತಾಳಿಕ ನಾಟ್ಯ ನಾಟಕಂಗಳ ಸಮಹ ಪುಟ್ಟುವ ಸಕಳ ಸುಖಂಗಳಂ"[20] ಶಿವನಿಗರ್ಪಿಸುತ್ತಾನೆ. ಮುಂದೆ, ಐರಾವತವು ಬಂದು ನಂಬಿಯಣ್ಣನನ್ನು ಕೈಲಾಸಕ್ಕೆ ಕರೆದೊಯ್ಯುತ್ತದೆ. ಅಲ್ಲಿ ಶಿವನು ಉಮೆಗೆ ನಂಬಿಯಣ್ಣನ ಪರಿಚಯ ಮಾಡಿ ಅವನಿಗೆ ಗಣಪದವಿಯನ್ನು ಕರುಣಿಸುತ್ತಾನೆ.

ಹೀಗೆ ಮೊದಲಿಂದ ಕೊನೆಯವರೆಗೂ ಪ್ರಸಾದಿಯ ಚಿತ್ರಣವನ್ನು ಮಾಡುತ್ತಲೇ ಹೋಗುತ್ತಾನೆ. ಈ ಕಥೆಯಲ್ಲಿ ಬಸವಾದಿ ಶರಣರು ಹೇಳಿದ ಮಹಾಪ್ರಸಾದಿಯ ಸರ್ವ ಲಕ್ಷಣಗಳನ್ನು ಹರಿಹರ ಗರ್ಭೀಕರಿಸಿದ್ದಾನೆ ಎನ್ನಬಹುದು.

ಒಟ್ಟಿನಲ್ಲಿ 'ನಂಬಿಯಣ್ಣನ ರಗಳೆ' ಹರಿಹರನ ರಗಳೆಗಳಲ್ಲಿ 'ಬಸವರಾಜದೇವರ ರಗಳೆ'ಯಷ್ಟೇ ಪ್ರಧಾನವಾದ ಇನ್ನೊಂದು ಕೃತಿ. ಇದು ಹರಿಹರನ ಭಾವ ಹಾಗೂ ಪ್ರತಿಭೆಗಳ ವಿದ್ಯುದಾಲಿಂಗನದಿಂದ ಪ್ರಜ್ವಲ್ಯಮಾನವಾಗಿ ಬೆಳಗುವ ಕೃತಿಯಾಗಿದೆ. ಈ ಕೃತಿಯಲ್ಲಿನ 'ಪದರಚನೆ, ಸನ್ನಿವೇಶ ನಿರ್ಮಾಣ, ವರ್ಣನಾವೈಖರಿ, ಭಾವಪರವಶತೆ - ನಿರ್ದಿಷ್ಟ ಗುರಿಯ ಸಾಧನೆಗೆ ಪೋಷಕವಾಗಿ ಬಂದಿವೆ. ನಂಬಿಯಣ್ಣನ ವ್ಯಕ್ತಿತ್ವ ಚಿತ್ರಣ ಅಚ್ಚಳಿಯದ ನೆಟ್ಟನ ಚಿತ್ರವಾಗಿ ನಮ್ಮ ಮನಸ್ಸನ್ನು ಹಿಡಿಯುತ್ತದೆ. ಇಲ್ಲಿನ ಗದ್ಯಶೈಲಿ ಹೃದ್ಯವಾಗಿದೆಯಲ್ಲದೆ ಪ್ರೌಢಿಮೆಯ ಪರಾಕಾಷ್ಠತೆಯನ್ನು ತಲುಪಿದೆ."[21] ಬಳಕೆಗೊಂಡಿರುವ ಹಿತಮಿತವಾದ ಶೃಂಗಾರ ಹಾಗೂ ಭಕ್ತಿ ಮನಸ್ಸನ್ನು ತಾಕುತ್ತದೆ.

## 5.2 ಅಮರನೀತಿಯ ರಗಳೆ

"ಈಶ ಕಾರುಣ್ಯವನ್ನು ಪಡೆಯ ಬಯಸುವವನು ತನ್ನಲ್ಲಿರುವ ಧನ, ಕನಕ, ವಸ್ತು, ವಾಹನ, ವಸ್ತ್ರಗಳನ್ನು ಕೊಟ್ಟರೆ ಸಾಲದು; ಪತ್ನಿ ಪುತ್ರರನ್ನು ಕೊಟ್ಟರೂ ಸಾಲದು; ತನ್ನನ್ನೂ ತನ್ನ ಬುದ್ಧಿ, ಮನ, ಚಿತ್ತ, ಅಹಂಕಾರಗಳನ್ನೂ ಶಿವನಿಗರ್ಪಿಸಿ ತಾನು ಇಲ್ಲವಾಗಬೇಕು"[22] ಎಂಬುದು ಭಕ್ತಿ ತತ್ವದ ತಿರುಳು. ಈ ತತ್ವದ ಪ್ರತಿಪಾದನೆ ಅಮರನೀತಿಯ ಕಥೆಯ ಮುಖ್ಯ ಉದ್ದೇಶವಾಗಿದೆ.

ಕಥೆಯ ನಾಯಕ ಅಮರನೀತಿ ಅಗರ್ಭ ಶ್ರೀಮಂತ. ಶಿವಭಕ್ತರು ಎಂತಹ ಅಮೂಲ್ಯ ವಸ್ತುವನ್ನು ಕೇಳಿದರೂ ಅದರ ಎರಡರಷ್ಟನ್ನು ಆನಂದದಿಂದ ಕೊಡುವುದು ಅವನ ಕಾಯಕ

ವಾಗಿತ್ತು. ಒಮ್ಮೆ ಶಿವನು ಇವನ ನಿಷ್ಠೆಯನ್ನು ಪರೀಕ್ಷಿಸಬೇಕೆಂದು ಬರುತ್ತಾನೆ. ಅಮರನೀತಿಗೆ ಒಂದು ಕೌಪೀನವನ್ನು ನೀಡಿ, ಮತ್ತೆ ಬರುವವರೆಗೆ ಜೋಪಾನವಾಗಿಡಲು ತಿಳಿಸಿ ಹೋಗುತ್ತಾನೆ. ಬರುವಷ್ಟರಲ್ಲಿ ಕೌಪೀನ ಮಾಯವಾಗಿರುತ್ತದೆ. ಅಮರನೀತಿಯು ಕೌಪೀನಕ್ಕೆ ಸಮನಾದ ವಸ್ತ್ರಗಳನ್ನು ಕೊಡಲು ಹೋಗುತ್ತಾನೆ. ಆದರೆ ಶಿವ, ಅದನ್ನು ನಿರಾಕರಿಸಿ ಕೌಪೀನದ ತೂಕಕ್ಕೆ ಎಷ್ಟು ವಸ್ತ್ರ ಬರುತ್ತದೆಯೋ ಅಷ್ಟನ್ನು ನೀಡುವಂತೆ ಕೇಳುತ್ತಾನೆ. ಅದರಂತೆ ಕೌಪೀನವನ್ನು ತಕ್ಕಡಿಯಲ್ಲಿಟ್ಟು ಮತ್ತೊಂದೆಡೆ ವಸ್ತ್ರಗಳನ್ನು ಇಡುತ್ತಾ ಹೋಗುತ್ತಾನೆ. ತನ್ನಲ್ಲಿರುವ ಎಲ್ಲಾ ವಸ್ತ್ರಗಳನ್ನು ಇಟ್ಟರೂ ಕೌಪೀನದ ತೂಕಕ್ಕೆ ಸಮನಾಗುವುದಿಲ್ಲ. ಆಗ ಅಮರನೀತಿ ತನ್ನ ಹೆಂಡತಿ ಮತ್ತು ಮಗುವನ್ನು ತಕ್ಕಡಿಯಲ್ಲಿಡುತ್ತಾನೆ. ತಕ್ಕಡಿ ಸ್ವಲ್ಪ ಕೆಳಗೆ ಬರುತ್ತದೆ. ಪೂರ್ಣ ಸಮವಾಗದಿರಲು ತಾನೇ ತಕ್ಕಡಿಯಲ್ಲಿ ಕೂರುತ್ತಾನೆ. ಒಂದೆಡೆ ಶಿವನಿದ್ದರೆ ಮತ್ತೊಂದೆಡೆ ಅಮರನೀತಿಯ ಸಂಸಾರ. ತಕ್ಕಡಿ ಸಮವಾಗುತ್ತದೆ.

ಎಲ್ಲಿಯವರೆಗೆ ಅಮರನೀತಿ ತನ್ನ ಅಹಂಕಾರವನ್ನು ಅಳಿದು ತಕ್ಕಡಿ ಏರುವುದಿಲ್ಲವೋ ಅಲ್ಲಿಯವರೆಗೂ ತಕ್ಕಡಿ ಹಾಗೆಯೇ ಇರುತ್ತದೆ. ಅಹಂಕಾರ ಅಳಿದು ತಾನು ಇಲ್ಲವಾಗಿ ತಕ್ಕಡಿ ಏರುತ್ತಿದ್ದಂತೆಯೇ ಅದು ಸಮವಾಗಿ ನಿಲ್ಲುತ್ತದೆ. ಆ ಮೂಲಕ ಕಥೆಯ ಉದ್ದೇಶ ಸಫಲವಾಗುತ್ತದೆ.

ಈ ಉದ್ದೇಶದ ಜೊತೆಗೆ, ಭಕ್ತ ಮತ್ತು ಶಿವ ಇಬ್ಬರೂ ಒಂದೇ ಎನ್ನುವಂಥ ಇನ್ನೂ ಒಂದು ಉದ್ದೇಶ ಕಥೆಯಲ್ಲಿ ಸಾಧಿತವಾದಂತೆ ಕಾಣುತ್ತದೆ. ಇಲ್ಲಿ ಶಿವ ಮತ್ತು ಭಕ್ತ ಒಂದೇ ತಕ್ಕಡಿಯಲ್ಲಿ ನಿಂತಾಗ ಆ ತಕ್ಕಡಿ ಸಮವಾಗುತ್ತದೆ. ಕೇವಲ ಒಬ್ಬ ತಕ್ಕಡಿ ಏರಿದ ಸಂದರ್ಭದಲ್ಲಿ ಅದು ಹಾಗೆಯೇ ಇರುತ್ತದೆ. ಈ ಸನ್ನಿವೇಶವು ಭಕ್ತ ಮತ್ತು ಶಿವ ಇಬ್ಬರೂ ಒಂದೇ ಎಂಬುದನ್ನು ಸಂಕೇತಿಸುತ್ತದೆ.

ಕಥಾರಚನೆಯ ಸಂದರ್ಭದಲ್ಲಿ ಅಮರನೀತಿಯು ದಿವ್ಯಾಂಬರಗಳನ್ನು ನೀಡಿ ನೀಡಿ ದಣಿಯದ ದಾನ ಗುಣಗಳನ್ನು ಕವಿ ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಅಮರನೀತಿಯ ಅಂತರಂಗದಿಂದ ಹೊಮ್ಮುತ್ತಿದ್ದ ಭಾವತರಂಗಗಳನ್ನೂ ಅಷ್ಟೇ ಶಕ್ತಿಯುತವಾಗಿ ವರ್ಣಿಸುತ್ತಾನೆ. ಶಿವನ ಕೋವಣವನ್ನು ತಕ್ಕಡಿಯಲ್ಲಿ ಇಟ್ಟು ತೂಗುವ ಸನ್ನಿವೇಶ ಮತ್ತು ಶಿವನು ಪ್ರತ್ಯಕ್ಷನಾದಾಗ —

ಅಲ್ಲಿ ವೃಷಭ ಧ್ವಜಂ ಇಲ್ಲಿ ಭಕ್ತ ಧ್ವಜಂ
ಅಲ್ಲಿ ವರದಶಭುಜಂ ಇಲ್ಲಿ ವರಷಡ್ಭುಜಂ
ಅಲ್ಲಿ ಗಿರಿಜಾವರಂ ಇಲ್ಲಿ ಮುಕ್ತ್ಯಾವರಂ[23]

ಎಂದು ಪ್ರಾರಂಭವಾದ ವರ್ಣನೆಯು ಓದುಗರ ಹೃನ್ಮನಗಳನ್ನು ಸೂರೆಗೊಳ್ಳುತ್ತದೆ.

ಕೊನೆಯದಾಗಿ, ಈ ಕಥೆಗೂ ತಿರುನೀಲಕಂಠನ ಕಥೆಗೂ ಸ್ವಲ್ಪ ಮಟ್ಟಿನ ಹೋಲಿಕೆ ಇರುವುದನ್ನು ಕಥೆಯ ಸಂದರ್ಭದಲ್ಲಿ ಗಮನಿಸಬಹುದು. "ಅಲ್ಲಿ ನಡೆಯುವುದು ಶಿವಾಣೆಯ ಪರೀಕ್ಷೆ; ಇಲ್ಲಿ ನಡೆಯುವುದು ದಾನ ಗುಣದ ಪರೀಕ್ಷೆ. ಶಿವನ ಆಟ, ಅಟ್ಟಾಸುರ, ಕಟಕಿ,

ತಾರುಣ್ಯ ಇವು ಎರಡು ಕಥೆಗಳಲ್ಲಿಯೂ ಒಂದೇ ಬಗೆಯಲ್ಲಿ ನಿರೂಪಿಸಲ್ಪಟ್ಟಿವೆಯಾದರೂ ಸನ್ನಿವೇಶ ಪ್ರಭಾವದಿಂದ ಅದರಪರ ಸೊಗಸು ಅದಕ್ಕದಕ್ಕೆ"[24] ಇರುವುದು ಕಂಡುಬರುತ್ತದೆ.

## 5.3 ಇಳೆಯಾಂಡನ ರಗಳೆ

ಶ್ರೇಷ್ಠ ದಾನಗಾರ ಎನಿಸಿಕೊಂಡವನು ಕೂಡ ಏನೆಲ್ಲವನ್ನು ದಾನ ಮಾಡಿದರೂ, ತನ್ನ ಹೆಂಡತಿಯನ್ನು ದಾನ ಮಾಡಲಾರ; ಮಾಡುವುದು ಸಾಧ್ಯವೂ ಇಲ್ಲ. ಏಕೆಂದರೆ ಪತಿ - ಪತ್ನಿ ಎಂಬುದೊಂದು ಭಾವುಕ ಸಂಬಂಧ. ಎರಡೂ ಮನಸ್ಸುಗಳು ಅಲ್ಲಿ ಒಂದಕ್ಕೊಂದು ಬೆರೆತುಹೋಗಿರುತ್ತವೆ. ತಮಗೇ ತಿಳಿಯದಂತೆ ಒಪ್ಪಂದ ಮಾಡಿಕೊಂಡಿರುತ್ತವೆ. ದಾನ ಮಾಡಿದ್ದೇ ಆದರೆ ಆತ ಮನುಷ್ಯ ಲಕ್ಷಣಗಳಿಂದ ದೂರವಿದ್ದಾನೆಂದೇ ಅರ್ಥ. ಅಂಥ ಕ್ರಿಯೆಯನ್ನು ಲೋಕ ಒಪ್ಪುವುದಿಲ್ಲ.

ಭಕ್ತನಾದವನಿಗೆ ಸರ್ವಸ್ವವನ್ನು ಸಮರ್ಪಿಸುವ ಶಕ್ತಿಯಿರಬೇಕು. ಆಗ ಮಾತ್ರ ಆತ ಪರಿಪೂರ್ಣತೆಯನ್ನು ಪಡೆಯುತ್ತಾನೆ. ಶಿವನ ಕೃಪೆಗೆ ಪಾತ್ರನಾಗುತ್ತಾನೆ. ಇಂಥ ಸಮರ್ಪಣ ಭಾವವನ್ನೇ ಕೇಂದ್ರವಾಗಿಟ್ಟುಕೊಂಡು ಹರಿಹರ ಇಳೆಯಾಂಡ ಎಂಬ ದಾನಶೂರ, ಭಕ್ತ ಮಹಾಶಯನ ಕಥೆಯನ್ನು ಹೆಣೆದಿದ್ದಾನೆ.

'ಪರಿಚರ್ಯೆ'ಗಾಗಿ ವನಿತೆಯನ್ನು ಕೇಳಿಬಂದ ಶಿವನಿಗೆ ಇಳೆಯಾಂಡ ತನ್ನಲ್ಲಿದ್ದ ಇನ್ನೂರು ವಿಳಾಸಿನಿಯರನ್ನೂ ನೂರ್ವರು ತೊತ್ತುಗಳನ್ನೂ ತೋರಿಸುತ್ತಾನೆ. ಆದರೆ ಶಿವ ಅವರಲ್ಲಿ ಯಾರೊಬ್ಬರನ್ನೂ ಆಯ್ಕೆ ಮಾಡುವುದಿಲ್ಲ. ಅಂತಿಮವಾಗಿ ಉಳಿದವಳು ಒಬ್ಬಳೇ. ಅವಳೇ ಇಳೆಯಾಂಡನ ಹೆಂಡತಿ ಪತಿಹಿತವೆ. ಭಕ್ತ ಇಳೆಯಾಂಡ ಯಾವ ಸಂಕೋಚವೂ ಇಲ್ಲದೆ ತನ್ನ ಪತ್ನಿಯನ್ನು ಕರೆಸಿ ಶಿವನಿಗೆ ತೋರಲು, ಅವನು ಮರುಮಾತನಾಡದೆ ಒಪ್ಪುತ್ತಾನೆ. ಭಕ್ತ ತನ್ನ ದಾನಗುಣವನ್ನು ಮೆರೆಯುತ್ತಾನೆ. ಆದರೆ ಇಡೀ ಸಮೂಹ ನಿಬ್ಬೆರಗಾಗುತ್ತದೆ. ವಿಷಯವನ್ನು ತಿಳಿದ ಪತಿಹಿತವೆಯ ಸಂಬಂಧಿಗಳು ಚತುರಂಗ ಬಲದೊಡನೆ ಬಂದು ಶಿವನ ಮೇಲೆ ಎರಗುತ್ತಾರೆ. ಆಗ ಇಳೆಯಾಂಡ ವೀರಾವೇಶದಿಂದ ಹೋರಾಡಿ ಸಂಬಂಧಿಗಳನ್ನೆಲ್ಲ ಚದುರಿಸಿ ಪತಿಹಿತವೆಯು ಶಿವನೊಡನೆ ಹೋಗಲು ದಾರಿಮಾಡಿಕೊಡುತ್ತಾನೆ. ಆ ಮೂಲಕ ತನ್ನ ಸಮರ್ಪಣ ಭಾವವನ್ನು ಮೆರೆಯುತ್ತಾನೆ.

ಕಥೆಯಲ್ಲಿ ಇದೊಂದು ಅಂಶವನ್ನು ಬಿಟ್ಟರೆ ಮಹತ್ವ ಎನ್ನಿಸುವಂತಹದ್ದು ಮತ್ತೇನೂ ಇಲ್ಲ. ಇಳೆಯಾಂಡನ ಸಂಪತ್ತು, ವೈಭವ ಮತ್ತು ದಾನಗುಣಗಳ ವರ್ಣನೆ ಹಾಗೂ ಯುದ್ಧದ ವರ್ಣನೆಗಳೇ ಹೆಚ್ಚಾಗಿ ಕಥೆಯೊಳಗೆ ಸೇರಿಕೊಂಡಿವೆ. ದಾನಗುಣದ ವರ್ಣನೆಯು ಕಥೆಗೆ ಸ್ವಲ್ಪ ಮಟ್ಟಿಗೆ ಪೂರಕವಾಗಿಯೂ ಅಗತ್ಯವಾಗಿಯೂ ಇದೆ. ಬಹುಶ: ಇಂಥ ವರ್ಣನೆ ಇಲ್ಲದೆ ಹೋಗಿದ್ದರೆ ರಗಳೆಯ ಒಟ್ಟು ಉದ್ದೇಶವೇ ಸಫಲವಾಗುತ್ತಿರಲಿಲ್ಲ. ಇವುಗಳಿಂದಲೇ ಕಥೆ ಯಶಸ್ವಿಯನ್ನು ಕಂಡಿದೆ. ಆದರೆ ಯುದ್ಧಕ್ಕೆ ಸಂಬಂಧಪಟ್ಟ ವರ್ಣನೆಯು ಕಥೆಯಲ್ಲಿ ಅನಗತ್ಯವಾಗಿ ತಂದು ಸೇರಿಸಿರುವಂತೆ ಕಾಣುತ್ತದೆ. ಹೆಚ್ಚು ಭಾಗ ಪೇಲವವಾಗಿದೆ. ಇಡೀ ವರ್ಣನೆ ಕೃತಕವೆಂಬಂತೆ ಕಂಡುಬರುತ್ತದೆ.

## 5.4 ರುದ್ರಪಶುಪತಿಯ ರಗಳೆ

ಪಂಚಾಕ್ಷರಿ ಮಂತ್ರ ವೀರಶೈವ ಧರ್ಮದ ಆಧಾರಚಕ್ರವಿದ್ದಂತೆ. ಈ ಮಂತ್ರಕ್ಕೆ ವೀರಶೈವರಲ್ಲಿ ವಿಶೇಷ ಗೌರವವಿದೆ. ಇದರ ಮಹತ್ವವನ್ನು ತಿಳಿಸುವುದಕ್ಕಾಗಿ ಕವಿ ರುದ್ರ ಪಶುಪತಿಯ ಕಥೆಯನ್ನು ಬರೆದಿದ್ದಾನೆ.

ಕಥೆಯಲ್ಲಿ ಎರಡು ಸಂದರ್ಭಗಳು ಬರುತ್ತವೆ. ಒಂದನೆಯ ಸಂದರ್ಭದಲ್ಲಿ ರುದ್ರಪಶುಪತಿಯು ಲಿಂಗದ ಮೇಲೆ ಹರಿದಾಡುತ್ತಿದ್ದ ಇರುವೆಯನ್ನು ಓಡಿಸುತ್ತಾನೆ. ಎರಡನೆಯ ಸಂದರ್ಭದಲ್ಲಿ ಶಿವನ ಕಂಠದಲ್ಲಿದ್ದ ವಿಷವನ್ನು ತೆಗೆದುಹಾಕುತ್ತಾನೆ. ಈ ಎರಡು ಸಂದರ್ಭಗಳಲ್ಲೂ ರುದ್ರಪಶುಪತಿ ಬಳಸಿಕೊಂಡಿದ್ದು ಪಂಚಾಕ್ಷರಿ ಮಂತ್ರವನ್ನು.

ಒಮ್ಮೆ ರುದ್ರಪಶುಪತಿಯು ತಿರಿತಲೆಪೂರ ದೇವಾಲಯಕ್ಕೆ ಬಂದು ಶಿವಪೂಜೆಯಲ್ಲಿ ನಿರತನಾಗಿರುತ್ತಾನೆ. ಆಗ ಇರುವೆಯೊಂದು ಲಿಂಗದ ಮೇಲೆ ಹರಿದಾಡುವುದನ್ನು ಕಾಣುತ್ತಾನೆ. ಇದನ್ನು ಕಾಣುತ್ತಲೇ ರುದ್ರಪಶುಪತಿ ಚಿಂತಾಕ್ರಾಂತನಾಗಿ-

> ಏನಪ್ಪ ಪಾರ್ವತೀ ಸುಮ್ಮನಿರ್ದಪಿರಪ್ಪ
> ಏನಿಂತಿಜುಂಪೆ ಊಜಿಲು ನೋಡುತಿರ್ದಪ್ಪ
> ಗಂಡ ನೆಸೆದುದೊ ನೊಂದು ಚುಳ್ಳುಸುರಿದುದೊ ತಂದೆ[25]

ಎನ್ನುತ್ತಾ ಲಿಂಗದ ಮೇಲೆ ಸಹಸ್ರಾಭಿಷೇಕವನ್ನು ಮಾಡಿ, ಪೂಜಿಸಿ, ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾನೆ. ಕೆಲಕ್ಷಣದಲ್ಲಿಯೇ ಇರುವೆ ಮಾಯವಾಗುತ್ತದೆ.

ರುದ್ರಪಶುಪತಿ ಅತ್ಯಂತ ಮುಗ್ಧ ಭಾವದವನು. ಶಿವನು ಗರಳಧರ ಎಂಬುದನ್ನು ಕೂಡ ಅರಿಯದವನು. ಒಮ್ಮೆ ಪುರಾಣವನ್ನು ಆಲಿಸುವಾಗ ಅಲ್ಲಿ ಶಿವ ಗರಳಧರನೆಂಬುದನ್ನು ಅರಿಯುತ್ತಾನೆ. ತಕ್ಷಣವೇ ಕಡುಗೋಪಗೊಳ್ಳುತ್ತಾನೆ.

> ಎಲೆ ಪಾಪಿಗಳಿರ ಪರಿಹಾರಮಂಮಾಡಿರೇ
> ಎಲೆಲೆ ಸತ್ತಂ ಕೆಟ್ಟೆನಿನ್ನೆಂತು ಹೇಳಿರೇ
> ಅಯ್ಯೋ ಇದೇತಕ್ಕೆ ಸುಮ್ಮನಿರ್ದಪಿರೆಲ್ಲ[26]

ಎಂದು ಪರಿತಪಿಸುತ್ತಾ ಗರಳಧರನ ವಿಷ ಪರಿಹಾರಕ್ಕಾಗಿ ಭಕ್ತಿವಾರ್ಧಿಯ ಕಡೆಗೆ ಬರುತ್ತಾನೆ. ಭಕ್ತಿವಾರ್ಧಿಯ ನಡುವಲ್ಲಿ ನಿಲ್ಲಲು ನೀರು ಕಂಠಮಟ್ಟ ಬರುತ್ತದೆ. ಪಂಚಾಕ್ಷರಂ ರಸಜಿಹ್ವೆಯೊಳಗೆ ನಲಿದಾಡೆ/ ಪಂಚಮುಖ ಶರಣೆನುತೆ ಕಡುನಿಷ್ಠೆ ಕೈಗೂಡೆ/ ಕಣ್ಮುಚ್ಚಿ ನೆಡೆನಚ್ಚಿ ಮಚ್ಚಿ"[27] ಪಂಚಾಕ್ಷರಿ ಮಂತ್ರದ ಜಪದಲ್ಲಿ ತೊಡಗುತ್ತಾನೆ.

ಜಲಚರಗಳು ದೇಹವನ್ನು ಕಿತ್ತು ತಿನ್ನತೊಡಗುತ್ತವೆ. ದೇಹ ಅಸ್ಥಿಪಂಜರವಾಗುತ್ತದೆ.

ರುದ್ರಪಶುಪತಿಯ ತಪದ ನಿಷ್ಠೆಗೆ ದೇವತೆಗಳು ಬೆದರುತ್ತಾರೆ. ಕೂಡಲೇ ಶಿವನು ಪ್ರತ್ಯಕ್ಷನಾಗುತ್ತಾನೆ. ನಡುನೀರಲ್ಲಿರುವ ರುದ್ರಪಶುಪತಿಯನ್ನು ಕಂಡು ಕಟಕಿಯಾಡುತ್ತಾನೆ. ವೇಷಧಾರಿಯ ಕಟಕಿ ಮಾತುಗಳನ್ನು ಸಹಿಸದ ರುದ್ರಪಶುಪತಿ, ಅವನ ಮೇಲೆ ಜಲವನಭಿಮಂತ್ರಿಸಿಡುತ್ತಾನೆ. ಆಗ ಶಿವ ತನ್ನ ನಿಜರೂಪುದೋರುತ್ತಾನೆ. ರುದ್ರಪಶುಪತಿ ಶರಧಿಯಿಂದ ಹೊರಗೆ ಬಂದು ಶಿವನ ಕೊರಳನ್ನು ನೋಡಲು ಕೊರಳಲ್ಲಿ ವಿಷವಿಲ್ಲವಾಗಿರುತ್ತದೆ.

ಕಥೆಯ ಉದ್ದೇಶ ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ಪ್ರಕಟಿಸುವುದೇ ಆಗಿದ್ದರೂ ಅಲ್ಲಿ ರುದ್ರಪಶುಪತಿಯ ಮುಗ್ಧವಾದ ಭಕ್ತಿಯ ವರ್ಣನೆ ಪ್ರಧಾನವಾಗಿದೆ. ಇದು ಕಾವ್ಯದಲ್ಲಿ ಸುಂದರವಾಗಿ ಮೂಡಿಬಂದಿದೆ. ಓದುಗನ ಮನಸ್ಸನ್ನು ಸೂರೆಗೊಳ್ಳುತ್ತದೆ.

ರುದ್ರಪಶುಪತಿ ಎಂಥ ಮುಗ್ಧನೆಂದರೆ, ಅವನಿಗೆ ಶಿವನು ಸರ್ಪಭೂಷಣನೆಂಬುದು ಗೊತ್ತಿಲ್ಲ! ಈಶನ ಹಸ್ತದಲ್ಲಿ ತಲೆಯಿರುವುದೂ ಗೊತ್ತಿಲ್ಲ! ತ್ರಿಶೂಲದಲ್ಲಿ ಹೆಣವಿರುವುದೂ ಗೊತ್ತಿಲ್ಲ! ಶಿವನ ಕಂಠದಲ್ಲಿ ವಿಷವಿರುವುದು ಮೊದಲೇ ಗೊತ್ತಿಲ್ಲ! ಹೀಗೆ ಏನೊಂದನ್ನೂ ಅರಿಯದ ಮುಗ್ಧ ಆತ. ಶಿವಲಿಂಗದ ಮೇಲೆ ಇರುವೆ ಹರಿದಾಡಿದ್ದಕ್ಕೆ ಆ ಲಿಂಗಕ್ಕೆ ಗಂಧೆ ಬಂದೀತೇನೋ, ಚುಳ್ಳೆಂದೀತೇನೋ ಎಂದು ಸಂಕಟಪಡುತ್ತಾನೆ. ಶಿವನ ಕಂಠದಲ್ಲಿ ವಿಷವಿರುವ ಸುದ್ದಿಯನ್ನು ತಿಳಿದು-

> ತಾನೆಂತು ಸೈರಿಸಿದಳಯ್ಯೋ ಮಹಾದೇವಿ
> ತಾನಜೆದು ಬೇಡೆನ್ನದಿರ್ದಳೆ ಮಹಾದೇವಿ[28]

> ಏನೆಂಬೆ ಕರುಣೆ ಹರನಯ್ಯೋ ಕರಂ ಮರುಳು
> ಪಲವು ಮಾತೇಕದಂ ಬಿಡಿಸುವೆಂ ಬಿಡಿಸುವೆಂ
> ನೆಲನಜಿಯೆ ಸುಖದಿಂದಲಿರಿಸುವೆಂ ಪರಸುವೆಂ[29]

ಎಂದು ಹಲುಬುತ್ತಾನೆ. ನಡುನೀರಲ್ಲಿರುವ ರುದ್ರಪಶುಪತಿಯನ್ನು ಕಂಡು ವೇಷಾಧಾರಿ ಶಿವನು ಕಟಕಿಯನ್ನಾಡಿದಾಗ, ಅವನು ಶಿವನೆಂಬುದನ್ನು ಅರಿಯದೆ ಅವನ ಮೇಲೆ ಜಲ ಮಂತ್ರವನ್ನು ಅಭಿಮಂತ್ರಿಸುತ್ತಾನೆ. ಕಟಕಿಯಾಡಿದವನು ಶಿವನೇ ಎಂಬುದು ಗೊತ್ತಾದಾಗ ಅವನ ಕೊರಳನ್ನು ನೋಡಿ -

> ಎಲೆ ತಂದೆ ವಿಷವೆಲ್ಲಿ ಆವ ಕಯ್ಯೊಳು ಪಿಡಿದೆ
> ಎಲೆ ತಂದೆ ಹೇಳೆನಗೆ ಕೊರಳೊಳೇಕೈ ತೊಡೆದೆ[30]

> ಎಲ್ಲಿ ವಿಷಮಂತೊಡೆದೆ ಕೊರಳೆಲ್ಲಿಯೆಂದೆನುತೆ
> ಅಲ್ಲಿ ಕೊರಳಂ ಮುಟ್ಟುತಂ ನಮಃಶಿವಯೆನುತೆ
> ಪಂಚಾಕ್ಷರಗಳಿಂದ ಮತ್ತಂತೆ ಮಂತ್ರಿಸುತೆ[31]

ಹೀಗೆ ಶಿವನನ್ನು ಮುದ್ದಾಡಿ ಅವನ ಕೈ ಹಾಗೂ ಕೊರಳನ್ನು ನೋಡುತ್ತಾನೆ. 'ಒಯ್ಯನೊಯ್ಯನೆ ನಾಲಗೆಯೊಳಂಟಿ ನೋಡುತ್ತೆ' ತಂದೆ ಬದುಕಿದೆ ಎಂದು ನಿಟ್ಟುಸಿರು ಬಿಡುತ್ತಾನೆ.

ಇಂಥದ್ದೇ ಒಂದು ಮುಗ್ಧ ಭಕ್ತಿ ಕಣ್ಣಪ್ಪನ ಕಥೆಯಲ್ಲಿ ಬರುತ್ತದೆ. ರುದ್ರಪಶುಪತಿಯದೂ ಮುಗ್ಧ ಭಕ್ತಿ; ಕಣ್ಣಪ್ಪನದೂ ಮುಗ್ಧ ಭಕ್ತಿ. "ಆದರೂ ಒಂದರಿಂದೊಂದು ಎಷ್ಟು ಭಿನ್ನ! ಕಣ್ಣಪ್ಪ ಬೇಡರ ಹೊಟ್ಟೆಯಲ್ಲಿ ಹುಟ್ಟಿ, ಬೇಡರ ನಡುವೆ ಬೆಳೆದು, ಬೇಟೆಯಲ್ಲಿಯೆ ಬಾಳುವೆ ಸಾಗಿಸುತ್ತಿದ್ದವನು. ಇನ್ನಾವ ಸಂಸ್ಕಾರವು ಆತನಿಗಿಲ್ಲ. ಆತನ ಅಂತರಂಗ ಬಲಿಷ್ಠವೂ ಅಸಂಕೀರ್ಣವೂ ಆದ ರಾಗಭಾವಗಳ ತವರು ಮನೆ. ಅವನ ಸಂಸ್ಕಾರ ಸನ್ನಿವೇಶ, ವಯೋಗುಣ, ಮನೋಧರ್ಮಗಳಿಗೆ ಅನುಗುಣವಾಗಿ ಭಕ್ತಿ ಪ್ರಕಟಗೊಂಡಿತು. ರುದ್ರಪಶುಪತಿಯ ಮಾತು ಬೇರೆ. ಆತ ವಿದ್ಯಾವಿನಯ ಸಂಪನ್ನನಾದ ವಿಪ್ರ ಶಿವಭಕ್ತನ ಮಗ. ಹದಿನಾರರ ಹರಯದವನಾಗಿದ್ದರೂ ಪಂಚಾಕ್ಷರಿ ಮಂತ್ರದ ಮಹಿಮೆಯನ್ನು ಅರಿತುಕೊಂಡಿದ್ದವನು. ಅವನಲ್ಲಿ ವಯಸ್ಸಿಗನುಗುಣವಾದ ಸರಳತೆ ಮತ್ತು ಮುಗ್ಧತೆ"[32] ತುಂಬಿವೆ.

## 5.5 ಚಂಡೇಶ ಪಿಳ್ಳೆಯ ರಗಳೆ

ಏಕನಿಷ್ಠೆಯುಳ್ಳ ಯಾವುದೇ ಒಬ್ಬ ಭಕ್ತ, ತನ್ನ ನಿಷ್ಠೆಗೆ ಅಡ್ಡಿಯುಂಟಾಗುವ ಸಂದರ್ಭ ಬಂದರೆ— ಅದು ತನ್ನವರಿಂದಾಗಲಿ ಅಥವಾ ಪರರಿಂದಾಗಲೀ - ಯಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೆ ಅವರ ವಿರುದ್ಧ ಹೋರಾಡುತ್ತಾನೆ. ಅವನಿಗೆ ತನ್ನ ಗುರುವಲ್ಲದೆ ಬೇರೆ ಯಾವುದೂ ಮುಖ್ಯವಾಗಿರುವುದಿಲ್ಲ.

ಚಂಡೇಶ ಪಿಳ್ಳೆಯ ಕಥೆಯೂ ಸಹ ಏಕನಿಷ್ಠೆಯನ್ನು ಪ್ರಧಾನವಾಗಿ ಇಟ್ಟುಕೊಂಡು ಬರೆದ ಕಥೆಯಾಗಿದೆ. ಇಲ್ಲಿ ಚಂಡೇಶ ಪಿಳ್ಳೆಯೇ ಅಂಥ ಏಕನಿಷ್ಠೆಯುಳ್ಳ ಭಕ್ತ. ಅವನ ತಂದೆ ಅಚ್ಚುತ ಭಟ್ಟ. ಚಂಡೇಶ ಹುಟ್ಟುತ್ತಲೇ ಅವನಿಂದ ಭಟ್ಟನ ಮನೆಗೆ ದಾರಿದ್ರ್ಯ ಹುಟ್ಟುತ್ತದೆ. ಇವನನ್ನು ಬೇರೆಯವರಿಗೆ ಮಾರಿಬಿಡುವುದೇ ಲೇಸು ಎಂದು ಜೋಯಿಸರು ನುಡಿಯುತ್ತಾರೆ. ಆದರೆ ಇರುವ ಒಬ್ಬನೇ ಮಗನನ್ನು ಮಾರುವುದಕ್ಕೆ ತಂದೆಯ ಮನಸ್ಸು ಒಪ್ಪುವುದಿಲ್ಲ.

ಕೆಲವು ದಿನಗಳಲ್ಲಿ ಚಂಡೇಶನಿಗೆ ಶಿವಕಾರುಣ್ಯವಾಗುತ್ತದೆ. ಇದು ಬೇರೆ ಯಾರಿಗೂ ತಿಳಿಯುವುದಿಲ್ಲ. ಚಂಡೇಶ ಬಾಹ್ಯಗೋಚರವಾಗದ ಹಾಗೆ ಕಾಪಾಡಿಕೊಂಡು ಬರುತ್ತಾನೆ. ಒಮ್ಮೆ ಚಂಡೇಶನ ನಿಷ್ಠೆಗೆ ಅವನ ತಂದೆಯೇ ಭಂಗ ತರುವ ಪ್ರಯತ್ನ ಮಾಡುತ್ತಾನೆ. ಚಂಡೇಶನು ಪೂಜಿಸುವ ಮಳಲ ಲಿಂಗದ ಮೇಲೆ ಹಸುಗಳು ಹಾಲು ಕರೆಯುತ್ತಿರಲು, ಮರದ ಮೇಲೆ ಕುಳಿತು ವೀಕ್ಷಿಸುತ್ತಿದ್ದ ಅಚ್ಚುತ ಭಟ್ಟ ಒಡನೆಯೇ ಇಳಿದು ಬಂದು 'ಈ ಪರಿಯಲೇ ಮಾಳ್ಪೆ ಲೇಸು ಲೇಸೆಲೆ ಮಗನೆ' ಎಂದು ಲಿಂಗದ ಮೇಲೆ ಕೈ ಇಡ ಹೋಗುತ್ತಾನೆ. ಭವಿಯೊಬ್ಬ ಲಿಂಗವನ್ನು ಮುಟ್ಟಲು ಹೊರಟಿದ್ದು ಚಂಡೇಶ ಪಿಳ್ಳೆಗೆ ಅತಿಯಾದ ಕೋಪ ತರುತ್ತದೆ. ಆ ಕೋಪದಲ್ಲಿ ತಂದೆ ಎಂಬುದನ್ನು ಕಾಣದೆ ಮನಸಾರೆ ಬಡಿಯುತ್ತಾನೆ. ಮಗನ ಹೊಡೆತಕ್ಕೆ ತಂದೆ ನೆಲಕಚ್ಚಿ ನೀರು ನೀರು ಎನ್ನುತ್ತಿರಲು ಮತ್ತೆ ಚಂಡೇಶ, ಶಿವ ದ್ರೋಹಿ ಇನ್ನೂ ಇರುವೆಯಾ

ಎಂದು ಹಿಡಿದಿರುವ ಕೋಲು ಕೊಡಲಿಯಂತಿರಲು ತಲೆಯುರುಳುವಂತೆ ಹೊಡೆಯುತ್ತಾನೆ.

ಇಲ್ಲಿ ಚಂಡೇಶ ಪಿಳ್ಳೆಯು ಅತಿಯಾದ ಶಿವನಿಷ್ಠೆ ಉಳ್ಳವನಾದ್ದರಿಂದಲೇ ಮಾರಬೇಕಾಗಿದ್ದ ತನ್ನನ್ನು ಸಾಕಿದ ತಂದೆಯನ್ನು ಕೊಲ್ಲಲು ಸಾಧ್ಯವಾಗಿದ್ದು. ಇಂಥ ಕೆಲಸ ಅರೆನಿಷ್ಠೆಯುಳ್ಳವರಿಗೆ ಸಾಧ್ಯವಾಗುವುದಿಲ್ಲ.

ಕವಿ ಕಥೆಯನ್ನು ಬಹಳ ಎಚ್ಚರಿಕೆಯಿಂದಲೇ ಹೆಣೆದಿದ್ದಾನೆ. ಏಕನಿಷ್ಠೆಯ ಸತ್ವಶಾಲಿ ಅಭಿವ್ಯಕ್ತಿಗಾಗಿ ತಂದೆಯನ್ನೇ ಮಗ ಕೊಲ್ಲುವ ಹಾಗೆ, ಅದರಲ್ಲೂ ದರಿದ್ರದ ಕೂಸನ್ನು ಪ್ರೀತಿಯಿಂದ ಸಾಕಿದ ತಂದೆಯನ್ನು ಕೊಲ್ಲುವ ಹಾಗೆ ಮಾಡಿರುವುದು ಅದ್ಭುತವಾಗಿದೆ.

ಕಥೆಯಲ್ಲಿ, ಚಂಡೇಶ ಪಿಳ್ಳೆ ಹುಟ್ಟಿದ ಕೂಡಲೇ ಒದಗಿ ಬಂದ ದಾರಿದ್ರ್ಯ, ಕೊಳಲ ದನಿಗೆ ಓಡಿ ಬಂದು ಹಸುಗಳು ಹಾಲು ಕರೆಯುವ ಸನ್ನಿವೇಶ, ಮಗನೇ ತಂದೆಯನ್ನು ಹೊಡೆದು ಕೊಲ್ಲುವ ಸನ್ನಿವೇಶಗಳನ್ನು ಕವಿ ಸುಂದರವಾಗಿ ನಿರೂಪಿಸಿದ್ದಾನೆ. ಆ ಸನ್ನಿವೇಶಗಳು ಓದುಗನ ಮನದಲ್ಲಿ ಬಹಳ ಕಾಲ ಅಚ್ಚಳಿಯದೇ ಉಳಿಯುತ್ತವೆ.

## 5.6 ಮಾದಾರ ಚೆನ್ನಯ್ಯನ ರಗಳೆ

ಹರಿಹರ ಕವಿಯ ಶ್ರೇಷ್ಠವಾದ ಕಥೆಗಳಲ್ಲಿ ಮಾದಾರ ಚೆನ್ನಯ್ಯನ ಕಥೆಯೂ ಒಂದು. ಈ ಕಥೆಯ ಸಂಕ್ಷಿಪ್ತ ರೂಪ ಹೀಗಿದೆ.

ಸತ್ಯಶೀಲನಾದ ಕರಿಕಾಲಚೋಳ ಸಿರಿಸಂಪತ್ತಿನಿಂದ ಕೂಡಿದ ಚೋಳದೇಶವನ್ನು ಧರ್ಮ ಹಾಗೂ ನಿಷ್ಠೆಯಿಂದ ಆಳುತ್ತಿದ್ದನು. ಅಲ್ಲಿ ಮಾದಾರ ಚೆನ್ನಯ್ಯ ಎಂಬ ಭಕ್ತ, ಕುದುರೆಗೆ ಹುಲ್ಲು ತಂದು ಹಾಕುವ ಕಾಯಕದೊಂದಿಗೆ ಗುಪ್ತ ಭಕ್ತಿನಿರತನಾಗಿದ್ದನು. ಆತನ ಗುಪ್ತಭಕ್ತಿ ಶಿವನಿಗಲ್ಲದೆ ಬೇರೆ ಯಾರಿಗೂ ಗೊತ್ತಿರಲಿಲ್ಲ. ಒಂದು ದಿನ ಚೆನ್ನಯ್ಯ ತಾನುಂಡ ಅಂಬಲಿ ಯನ್ನು ಶಿವನಿಗರ್ಪಿಸಿದನು. ಆತನ ಅಂಬಲಿಯ ರುಚಿಯನ್ನು ಶಿವ ಕರಿಕಾಲಚೋಳನಿಗೆ ತಿಳಿಸಿದನು. ಶಿವನೊಡನುಂಡ ಚೆನ್ನಯ್ಯನನ್ನು ಕಾಣಲು ಕರಿಕಾಲಚೋಳನು ಸಕಲರೊಂದಿಗೆ ಬಂದು ಚೆನ್ನಯ್ಯನೆದುರು ನಿಲ್ಲುತ್ತಾನೆ. ಆಗ ಚೆನ್ನಯ್ಯ ತನ್ನ ಗುಪ್ತ ಭಕ್ತಿ ಬಹಿರಂಗವಾಯಿತೆಂದು ನೊಂದು ಆತ್ಮಹತ್ಯೆ ಮಾಡಿಕೊಳ್ಳುವ ಯತ್ನಮಾಡಿದನು. ಕೂಡಲೇ ಶಿವ ಪ್ರತ್ಯಕ್ಷವಾಗಿ ಅವನನ್ನು ತಡೆದು ಅವನ ಅರ್ಪಣಾಭಾವದ ಭಕ್ತಿಯನ್ನು ಕೊಂಡಾಡಿ ಕರಿಕಾಲಚೋಳನ ಎದುರಿನಲ್ಲಿಯೇ ಕೈಲಾಸಕ್ಕೆ ಕರೆದೊಯ್ದು ಗಣಪದವಿ ಕೊಟ್ಟು ಗೌರವಿಸಿದನು.

ಈ ಕಥೆಯಲ್ಲಿ ಮುಖ್ಯವಾಗಿ ಎರಡು ಪಾತ್ರಗಳು ಬರುತ್ತವೆ. ಒಂದು ಮಾದಾರ ಚೆನ್ನಯ್ಯನದು. ಇನ್ನೊಂದು ಅರಸ ಕರಿಕಾಲಚೋಳನದು. ಮಾದಾರ ಚೆನ್ನಯ್ಯ ಅಪ್ರತಿಮ ಶಿವಭಕ್ತ. ಹುಟ್ಟಿನಿಂದ ಮಾದಾರ ಕುಲದವನು. ಕರಿಕಾಲಚೋಳನೂ ಸಹ ಮಾದಾರ ಚೆನ್ನಯ್ಯನಂತೆ ಅಪ್ರತಿಮ ಶಿವಭಕ್ತನೇ. ಇಬ್ಬರೂ ಭಕ್ತರೇ ಆದರೂ ಇಬ್ಬರ ಭಕ್ತಿಯಲ್ಲೂ ಅಸಾಧಾರಣ ವ್ಯತ್ಯಾಸವಿರುವುದನ್ನು ಕಥೆಯಲ್ಲಿ ನಾವು ಗಮನಿಸುತ್ತೇವೆ. ಇವರಿಬ್ಬರಲ್ಲಿ ಶಿವನಿಗೆ ಒಪ್ಪಿತವಾದ ಭಕ್ತಿ ಯಾವುದು ಎಂಬುದನ್ನು ಕವಿ ಕಥೆಯ ಅಂತರಂಗದಲ್ಲಿ ಸೂಚಿಸುತ್ತಾನೆ.

ಮೊದಲು ತಿಳಿಸಿದಂತೆ ಮಾದಾರ ಚೆನ್ನಯ್ಯ ಹುಟ್ಟಿನಿಂದ ಮಾದಾರ ಕುಲದವನು.

ಅಸ್ಪೃಶ್ಯ, ಕಡುಬಡವ. ಊರ ಹೊರಗಿನ ಗುಡಿಸಲಿನಲ್ಲಿ ಅವನ ವಾಸ. ಕರಿಕಾಲಚೋಳನ ಕುದುರೆಗಳಿಗೆ ಹುಲ್ಲು ತರುವ ಕಾಯಕ ಮಾಡಿಕೊಂಡಿದ್ದನು. ಕಾಯಕ ಯಾವುದಾದರೇನು? ಜಾತಿ ಯಾವುದಾದರೇನು? ಅವು ಯಾವುವೂ ಅವನ ಭಕ್ತಿಗೆ ಅಡ್ಡಿಯಾಗಿರಲಿಲ್ಲ. ಹುಲ್ಲು ತರುವ ಕಾಯಕದೊಂದಿಗೆ ಭಕ್ತಿಯ ಕಾಯಕವೂ ಸಾಗಿತ್ತು. ಅವನ ಅಗೋಚರವಾದ ಈ ಭಕ್ತಿಯನ್ನು ಕವಿ -

> ಒಳಗೆ ಭಕ್ತಿಯ ತಂಪು ಹೊಱಗೆ ಜನ್ಮದ ಸೊಂಪು
> ಒಳಗೆ ಮುಕ್ತಿಯ ಗುಂಪು ಹೊಱಗೆ ಜಾತಿಯ ಹೆಂಪು
> ತಾನಾಗಿ ಮುಗಿಲ ಮಱೆಯಿಂದು ಮಂಡಲದಂತೆ
> ಏನೆಂಬೆಸುದಕದೊಳಗಣ ಕಮಲದಳದಂತೆ
> ತಿಲದ ತೈಲದ ತೆಱದೆ ಕಾಷ್ಠದಗ್ನಿಯ ತೆಱದೆ
> ನೆಲದ ಮಱೆಯೊಳಗೆ ತೊಳಗುವ ನಿಧಾನದ ತೆಱದೆ[33]

ಎಂಬ ಈ ಸಾಲುಗಳಲ್ಲಿ ವರ್ಣಿಸಿದ್ದಾನೆ. ಉದಯ ಸಮಯದಲ್ಲಿ ಎದ್ದು ಕಾನನಕ್ಕೆ ಹೊರಡುವ ಆತ ಅಲ್ಲಿ-

> ನುಣ್ಮಳಲದಿಂಡೆಯೊಳು ತಳಿರ ಹಸೆಯಂ ಹಾಸಿ
> ಕಣ್ಮನವನಭವನತ್ತಲು ನಿಲಿಸಿ ಕಯ್ಮೀಸಿ
> ಬಾರಯ್ಯ ಬಾರ ಶಿವ ಭಕ್ತೈಕ ಬಂಧುವೇ
> ಬಾರಯ್ಯ ಬಾರ ಕಾರುಣ್ಯ ಸಿಂಧುವೇ
> ಗುರುವೆ ವರಗುರುವೆ ಸದ್ಗುರುವೆ ಗುರುಲಿಂಗವೇ[34]

ಎಂದು ಶಿವನನ್ನು ಅರ್ಚಿಸುತ್ತಾನೆ. ಚೆನ್ನಯ್ಯನ ಪೂಜೆ ಅತ್ಯಂತ ಸರಳವಾದದ್ದು. ಶಿವನ ಪೂಜೆಗಾಗಿ ಆತ ಯಾವ ವಸ್ತುವನ್ನೂ ತರುವುದಿಲ್ಲ. ಹೂ, ಹಣ್ಣುಗಳಿಲ್ಲ. ಧೂಪ ದೀಪಗಳಿಲ್ಲ. ತಾನುಣ್ಣುವ ಅಂಬಲಿಯನ್ನೇ ಶಿವನಿಗೂ ನೀಡುತ್ತಾನೆ. ಎಲ್ಲವೂ ಅವನ ಅಂತರಂಗದಲ್ಲೇ ಅಡಗಿವೆ. ಅವನ ಪ್ರಕಾರ ಭಕ್ತಿ ಎಂಬುದು ಅಂತರಂಗಕ್ಕೆ ಸಂಬಂಧಿಸಿದ್ದು. ಒಮ್ಮೆ ಚೆನ್ನಯ್ಯನ ಈ ಭಕ್ತಿಯು ಬಹಿರಂಗಗೊಳ್ಳುವ ಪ್ರಸಂಗ ಬರುತ್ತದೆ. ಆಗ ತನ್ನ ಭಕ್ತಿ ಬಹಿರಂಗಗೊಂಡುದಕ್ಕೆ ನೊಂದ ಚೆನ್ನಯ್ಯ -

> ಹೇಳಯ್ಯ ನಿನ್ನಲ್ಲಿ ಪದವಿಯಂ ಬೇಡಿದನೆ
> ಅಱಿಯದಂಬಲಿಯನರ್ಪಿಸಿದೊಡಿಂತಿಱಿವರೆ
> ಹೆಱೆಯ ಸೂಡಿದ ಶಿವನೇ ನೀನಿಂತು ದೂಱುವರೆ
> ಮೇದಿನಿಗೆ ಬೀದಿಗಱಿವಾದುದೆನ್ನಯ ಭಕ್ತಿ[35]

ಎಸ್ಸುತ್ತಾ ಅಲಗನೆತ್ತಿ ಕೊರಳಿಗಿಡುತ್ತಾನೆ. ಆದರೆ ಕರಿಕಾಲಚೋಳನ ಭಕ್ತಿ ಇಂಥದ್ದಲ್ಲ. ಅವನ ಭಕ್ತಿಯಲ್ಲಿ ಚೆನ್ನಯ್ಯನ ಭಕ್ತಿಯ ಸಮರ್ಪಣತೆಯಿಲ್ಲ, ಸರಳತೆಯಿಲ್ಲ. ಎಲ್ಲವೂ ಆಡಂಬರ, ಅದ್ದೂರಿ, ಶಿವನೊಪ್ಪದವುಗಳೇ ಆಗಿವೆ. ಆತ –

ಬೆಳಗಾಗುತ್ತಲೆ ಎದ್ದು ಶಿವಮಂದಿರಕ್ಕೆ ನಡೆದು, ಲಿಂಗಯ್ಯನಿಗೆ ಕೈಮುಗಿದು, ಅವನ ಎಡಪಕ್ಕದಲ್ಲಿ ಕುಳಿತು, ಆಗಮೋಕ್ತವಾಗಿ ಭಸ್ಮಧಾರಣೆ ಮಾಡಿಕೊಂಡು, ರುದ್ರಾಕ್ಷಿಗಳನ್ನು ಧರಿಸಿಕೊಂಡು, ಶಿವನನ್ನು ನೋಡಿ ನಲಿಯುತ್ತ, ಹೊಗಳುತ್ತ, ನವವಸ್ತ್ರ, ನವರತ್ನ, ನವ ನವಾಭರಣಗಳಿಂದ ಶಿವನನ್ನು ಅಲಂಕರಿಸುತ್ತಾನೆ. ಸುಖವೇರಿ ಆಡುತ್ತಾನೆ, ಮುದವೇರಿ ಹಾಡುತ್ತಾನೆ, ದಳವೇರಿ ನೋಡುತ್ತಾನೆ. ಇಷ್ಟಲ್ಲದೆ ಶಿವನಿಗಾಗಿ ಅವನು ಮಾಡಿಸುವ ಅಡುಗೆ ಕೂಡ ಆಡಂಬರದಿಂದಲೇ ಕೂಡಿರುತ್ತದೆ. ಆ ಅಡುಗೆಯನ್ನು ರನ್ನದ ಅಡ್ಡಣಿಗೆಗಳ ಮೇಲೆ ಬೆಳಗುಗರೆವ ಮುನ್ನೂರು ಹರಿವಾಣಗಳಲ್ಲಿ, 'ಕೆಲವಟ್ಟಲುಗಳಲ್ಲಿ' ಸಾಗಿಸುತ್ತಾನೆ. ದೇವಾನ್ನ, ದಿವ್ಯಾನ್ನ, ಅಮೃತಾನ್ನದ ಜೊತೆಗೆ ಹಪ್ಪಳ 'ಚಿಲುಪಾಲಘಟ್ಟಿಗಳು', ತುಪ್ಪ, ಕೆನೆಮೊಸರು, ಸಕ್ಕರೆ ಮುಂತಾದುವನ್ನೊಳಗೊಂಡ ರಸದಡುಗೆಯನ್ನೇ ಸಿದ್ಧಮಾಡಿಸುತ್ತಾನೆ. ಇವೆಲ್ಲಾ ರಾಜಾಧಿಕಾರದ ಉತ್ತಮ ಶ್ರೀಮಂತಿಕೆಯ ಕುರುಹುಗಳೇ ಹೊರತು ಸಹಜವಾದ ಭಕ್ತಿಯ ಕುರುಹುಗಳಾಗಿರುವುದಿಲ್ಲ.

ಈ ತೆರನಾದ ಆಡಂಬರದ ಭಕ್ತಿ ಶಿವನಿಗೆ ಒಪ್ಪುವುದಿಲ್ಲ. ಆದ್ದರಿಂದಲೇ ಶಿವ ಮೃಷ್ಟಾನ್ನಭೋಜನವನ್ನಿಟ್ಟು ಊಟ ಮಾಡಲು ಕರಿಕಾಲಚೋಳನು ಕರೆದಾಗ ಬರುವುದಿಲ್ಲ. ಬದಲಾಗಿ ಚೆನ್ನಯ್ಯನ ಮನೆಯಲ್ಲಿ ಹೋಗಿ ಅಂಬಲಿಯನ್ನು ಸವಿಯುತ್ತಾನೆ. ಆ ಮೂಲಕ ಚೆನ್ನಯ್ಯನ ಭಕ್ತಿಯ ಔನ್ನತ್ಯವನ್ನು ಮೆಚ್ಚುತ್ತಾನೆ. "ಶಿವನೊಲುಮೆಗಳಿಸುವುದು ಅರ್ಪಿಸುವ ವಸ್ತುಗಳಿಂದಲ್ಲ, ಹೃದಯ ವೈಶಾಲ್ಯತೆಯಿಂದ"[36] ಎಂಬುದನ್ನು ಕವಿ ಈ ಸಂದರ್ಭದಲ್ಲಿ ಸೂಚ್ಯವಾಗಿಸುತ್ತಾನೆ.

ಮಾದಾರ ಚೆನ್ನಯ್ಯನ ರಗಳೆಯನ್ನು ಬರೆಯುವಾಗ ಕವಿಗೆ ಭಕ್ತಿಯ ಮಹತ್ವವನ್ನು ತಿಳಿಸಿಕೊಡುವುದರ ಜೊತೆಗೆ ಸಮಾಜದಲ್ಲಿ ಬೇರೂರಿದ್ದ ಕೀಳು - ಮೇಲು, ಅಸ್ಪೃಶ್ಯ - ಸ್ಪೃಶ್ಯ ಮನೋಭಾವಗಳ ಬದಲಾವಣೆಯ ಆಶಯವೂ ಇರುವುದು ಸ್ಪಷ್ಟವಾಗುತ್ತದೆ. ಅದಕ್ಕೆ ಮೇಲ್ವರ್ಗಕ್ಕೆ ಸೇರಿದ ಕರಿಕಾಲಚೋಳ, ಕೀಳುಕುಲದವನಾದ ಮಾದಾರ ಚೆನ್ನಯ್ಯನ ಮನೆಗೆ ಹೋಗಿ ಅವನ ಪಾದಗಳನ್ನು ಮುಟ್ಟಿ ನಮಸ್ಕರಿಸುವ ಸಂದರ್ಭವೇ ಸಾಕ್ಷಿಯಾಗಿದೆ.

ಕರಿಕಾಲಚೋಳ ಹುಟ್ಟಿನಿಂದ ಕ್ಷತ್ರಿಯ. ಆ ಪ್ರದೇಶದ ಅರಸ. ಮಹಾಭಕ್ತ. ಒಮ್ಮೆ ಮಾದಾರ ಚೆನ್ನಯ್ಯನೆಂಬ ಅಸ್ಪೃಶ್ಯನ ಮನೆಯಲ್ಲಿ ಶಿವ ಅಂಬಲಿ ಕುಡಿದ ವಿಚಾರವನ್ನು ಶಿವನಿಂದಲೇ ತಿಳಿಯುತ್ತಾನೆ. ಆ ಕೂಡಲೇ ಶಿವನೊಡನೆ ಉಂಡ ಮಾದಾರ ಚೆನ್ನಯ್ಯನನ್ನು ನೋಡುವ ಹಂಬಲ ಚೋಳನಿಗಾಗುತ್ತದೆ. ತಾನು ಅರಸ, ಕ್ಷತ್ರಿಯ ಕುಲದವನು, ಮಾದಾರ ಚೆನ್ನಯ್ಯ ಒಬ್ಬ ಕೀಳು ಕುಲದವನು ಎಂಬ ವಿಚಾರ ಗೊತ್ತಿದ್ದರೂ, ಮೇಲು ಕೀಳೆಂಬ ಭೇದ ಭಾವಗಳನ್ನೆಲ್ಲ ತೊರೆದು ಸಹವರ್ತಿಗಳೊಡನೆ ಮಾದಾರ ಚೆನ್ನಯ್ಯನನ್ನು ಹುಡುಕಿ ಸಾಗುತ್ತಾನೆ. ಪರಿಯ ಕೇರಿಯ ಹತ್ತಿರ ಬರುತ್ತಿದ್ದಂತೆಯೇ ಬಲ್ಲವನೊಬ್ಬ ಕರಿಕಾಲಚೋಳನಿಗೆ ಚೆನ್ನಯ್ಯನ

ಗುಡಿಸಲನ್ನು ತೋರಿಸುತ್ತಾನೆ. ಗುಡಿಸಲು ಅರಮನೆ ಎಂಬ ಯಾವ ಭೇದವೂ ಇಲ್ಲದೆ ಚೋಳ, ಚೆನ್ನಯ್ಯನ ಮನೆಯನ್ನು ಪ್ರವೇಶಿಸುತ್ತಾನೆ. ಒಳಗಿದ್ದ ಮಾದಾರ ಚೆನ್ನಯ್ಯನನ್ನು ಕಾಣುತ್ತಲೇ, ಅವನ ಪಾದಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ನಡೆಯುವ, ಮಾದಾರ ಚೆನ್ನಯ್ಯ ಮತ್ತು ಕರಿಕಾಲಚೋಳರ ಸಂಭಾಷಣೆಯು ಮೇಲು - ಕೀಳುಗಳ ವಿಚಾರದಲ್ಲಿ ಹರಿಹರನ ಧೋರಣೆಯನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

ಕರಿಕಾಲಚೋಳನು ಚೆನ್ನಯ್ಯನ ಪಾದಗಳಿಗೆ ಎರಗುತ್ತಿದ್ದಂತೆಯೇ ಅವನು ಅತಿಶಯವಾಗಿ ಸಂಕೋಚಗೊಳ್ಳುತ್ತಾನೆ. ಕಾಲು ಹಿಡಿದ ಚೋಳನಿಗೆ -

> ಭಾನು ಕುಲ ದರ್ಪಣನೆ ನೀನಿಂತು ಮಾಳ್ಪರೇ
> ಎನ್ನ ಕುಲಮಂ ನೋಡದೆಯ್ತಪ್ಪರೇ ಚೋಳ
> ಎನ್ನ ಜಾತಿಯನರಿಯದಿಂತು ಮಾಳ್ಪರೇ ಚೋಳ
> ರಾಜ್ಯಾಂತರಂ ನರಕವೆಂಬುದಿಲ್ಲದ ಚೋಳ[37]

ಎಂದು ನುಡಿದು ತನ್ನ ಕಾಲನ್ನು ಬಿಡುವಂತೆ ಕೇಳಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಕರಿಕಾಲಚೋಳ -

> ದೇವ ದೇವನೊಲಿದ ಕುಲವೆ ಸತ್ಕುಲಂ
> ಘನಮಹಿಮನೊಲಿದ ಜಾತಿಯೆ ಜಾತಿ ನಿರ್ಮಲಂ
> ಸರ್ವನೊಡನುಂಡ ನಿಮ್ಮ ಜಾತಿಗಾಂ ಸರಿಯೆ
> ಸರ್ವಜ್ಞ ನಿಮ್ಮ ಕಿರ್ಪಿಂಗೆನ್ನ ಶಿರ ಸರಿಯೆ
> ಬಿಡೆನಯ್ಯ ನಿಮ್ಮ ಪದಮಂ ಬಿಟ್ಟು ಬಾಳ್ವೆನೇ[38]

ಎಂದು ಹಲುಬುತ್ತಾನೆ. ವಾಸ್ತವವಾಗಿ ನೋಡಿದರೆ ಮಾದಾರ ಚೆನ್ನಯ್ಯ ಚೋಳನ ಕೆರಕ್ಕೆ ಸಮನಾದವನಲ್ಲ. ಅದರಲ್ಲೂ ಮುಟ್ಟಿಸಿಕೊಳ್ಳುವುದಕ್ಕೂ ಯೋಗ್ಯತೆ ಇಲ್ಲದವನು. ಆದರೆ ಇಲ್ಲಿ ಚೋಳನೇ ಮಾದಾರ ಚೆನ್ನಯ್ಯನ ಪಾದಗಳನ್ನು ಮುಟ್ಟಿ, ನಿಮ್ಮ ಕೆರಕ್ಕೆ ನನ್ನ ಶಿರವು ಸಮನಲ್ಲ ಎಂದು ಬಹುವಚನದಲ್ಲಿ ಸಂಬೋಧಿಸುವುದು, ಅಸ್ಪೃಶ್ಯರಿಗೂ ಒಂದು ಸ್ಥಾನವನ್ನು ಸಮಾಜದಲ್ಲಿ ಕಲ್ಪಿಸಿಕೊಡಬೇಕೆಂಬ ಹರಿಹರನ ಉದ್ದೇಶವನ್ನು ಸಂಕೇತಿಸುತ್ತದೆ.

ಪೂಜೆಯ ವಿಧಾನ, ಕಾಯಕ ನಿಷ್ಠೆ, ಆಹಾರ ಪದ್ಧತಿ ಇವು ಚೆನ್ನಯ್ಯನ ರಗಳೆಯಲ್ಲಿ ಕಂಡುಬರುವ ಇನ್ನಿತರ ಅಂಶಗಳಾಗಿವೆ.

ಈ ರಗಳೆಯಲ್ಲಿ, ಜನರು ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಪೂಜಾ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಮಾದಾರ ಚೆನ್ನಯ್ಯ ಹುಲ್ಲು ತರುವ ಕೆಲಸವನ್ನು ಮಾಡುತ್ತಿದ್ದುದರಿಂದ, ಅವನು ಕಾಡಿನೊಳಗೆ ಸಿಕ್ಕುತ್ತಿದ್ದ ನೇರಲ, ಮಾವು, ಹುಲ್ಲು, ಸಂಪಿಗೆ, ಮಲ್ಲಿಗೆಗಳನ್ನೇ ಪೂಜೆಯ ಪರಿಕರಗಳನ್ನಾಗಿ ಬಳಸುತ್ತಾನೆ. ತನ್ನಲ್ಲಿ ಇಲ್ಲದ ಮೃಷ್ಟಾನ್ನವನ್ನು ಶಿವನಿಗರ್ಪಿಸಲು ಹೋಗದೆ, ಇರುವ ಅಂಬಲಿಯನ್ನೇ ಅರ್ಪಿಸಿ ಮೆಚ್ಚಿಸುತ್ತಾನೆ. ಆದರೆ ಕರಿಕಾಲ

ಚೋಳನ ಪೂಜೆ ಚೆನ್ನಯ್ಯನಿಗಿಂತಲೂ ಭಿನ್ನವಾಗಿದೆ. ಅವನ ಅಂತಸ್ತಿಗೆ ತಕ್ಕಂತೆ ಬದಲಾಗಿದೆ. ಅವನದು ಆಡಂಬರದ ಪೂಜೆ; ವಿಭೂತಿ, ರುದ್ರಾಕ್ಷಿ, ಭಸ್ಮಗಳನ್ನು ಬಳಿದುಕೊಳ್ಳುವುದು; ಹೊಸ ವಸ್ತ್ರ ಮತ್ತು ಹೊಸ ಆಭರಣಗಳಿಂದ ಅಲಂಕಾರ ಮಾಡಿಕೊಳ್ಳುವುದು ಸಾಮಾನ್ಯವಾಗಿ ರೂಢಿಯಲ್ಲಿದೆ.

ಈ ರಗಳೆ ಕಾಯಕ ನಿಷ್ಠೆಯನ್ನು ಎತ್ತಿಹಿಡಿಯುತ್ತದೆ. ಮಾದಾರ ಚೆನ್ನಯ್ಯ ಮಾಡುವ ಕಾಯಕ ಶಿವನಿಂದ ವರವಾಗಿ ಬಂದದ್ದು. ಮಾಡುವ ಕಾಯಕದಲ್ಲಿ ಶಿವ ಇರುತ್ತಾನೆ ಎಂಬ ಸತ್ಯವನ್ನು ಅವನು ಕಂಡುಕೊಂಡು ಅದನ್ನೇ ತನ್ನ ಜೀವನದ ಉಸಿರನ್ನಾಗಿಸಿಕೊಂಡಿದ್ದವನು. ಕರಿಕಾಲಚೋಳನ ಹತ್ತಿರ ಇದ್ದರೆ ಹುಲ್ಲು ತರುವ ಕಾಯಕ ಮಾಡುತ್ತಾನೆ. ಮನೆಗೆ ಬಂದರೆ ಮೆಟ್ಟುಗಳನ್ನು ಮಾಡುವ ಕಾಯಕ ಮಾಡುತ್ತಾನೆ. ಯಾವ ಕೆಲಸವನ್ನೇ ಆಗಲಿ ನಿಷ್ಠೆಯಿಂದ ಮಾಡುವುದು ಅವನ ಸ್ವಭಾವ. ಚೆನ್ನಯ್ಯನ ಈ ನಿಷ್ಠೆಯ ಮೂಲಕ ಹರಿಹರ, ಕಾಯಕದ ನಿಷ್ಠೆ ಹೇಗೆ ಇರಬೇಕೆಂಬುದನ್ನು ತಿಳಿಸುತ್ತಾನೆ.

ಆಹಾರ ಪದ್ಧತಿಯಲ್ಲಿನ ವೈಶಿಷ್ಟ್ಯ ಚೆನ್ನಯ್ಯನ ರಗಳೆಯಲ್ಲಿ ಕಂಡುಬರುವ ಇನ್ನೊಂದು ಅಂಶವಾಗಿದೆ. ಈ ರಗಳೆಯಲ್ಲಿ ಮೇಲ್ವರ್ಗ ಮತ್ತು ಕೆಳವರ್ಗಗಳು ತಮ್ಮದೇ ಆದ ಆಹಾರ ಪದ್ಧತಿಯನ್ನು ಹೊಂದಿರುವುದು ಕಂಡುಬರುತ್ತದೆ. "ಮಾದಾರ ಚೆನ್ನಯ್ಯನಂಥ ಶರಣರ ಪ್ರಮುಖ ಆಹಾರ ಅಂಬಲಿ. ಅಂಬಲಿಯನ್ನು ಜೋಳದ ನುಚ್ಚು, ಹುರುಳಿ ಹಿಟ್ಟು ಮುಂತಾದ ಪದಾರ್ಥಗಳಿಂದ ತಯಾರಿಸುತ್ತಾರೆ. ಹರಿಹರ ಇಲ್ಲಿ ಅಂಬಲಿ ಎಂದಷ್ಟೇ ಹೇಳುತ್ತಾನೆ. ಯಾವುದರಿಂದ ಮಾಡಿದ್ದು ಎಂಬುದನ್ನು ಹೇಳುವುದಿಲ್ಲ. ಆದರೆ 'ಮಧುರಾಮ್ಲದ' ರುಚಿ ಎಂಬ ಮಾತಿನ ಮೂಲಕ ಅದು ಹುಳಿಯಂಬಲಿ ಎಂಬುದು ಸ್ಪಷ್ಟವಾಗುತ್ತದೆ."[39] ಈ ಅಂಬಲಿಯು ಆ ಕಾಲದ ಬಡಜನರ ಪ್ರಮುಖ ಆಹಾರವಾಗಿತ್ತೆಂದು ಹೇಳಬಹುದಾಗಿದೆ. ಅವರ ಆಹಾರದಲ್ಲಿ ನೇರಲ ಹಣ್ಣು, ಮಾವಿನ ಹಣ್ಣು, ಸೊಪ್ಪು ಇತ್ಯಾದಿಗಳೂ ಸೇರಿವೆ. ಉಪ್ಪಿನಕಾಯಿ ಅವರ ಅವಶ್ಯಕ ಆಹಾರ ವಸ್ತುಗಳಲ್ಲಿ ಒಂದು ಎನ್ನಬಹುದು. ಆದರೆ ಮೇಲ್ವರ್ಗದವರ ಆಹಾರ ಇದಾಗಿರಲಿಲ್ಲ. ಕರಿಕಾಲಚೋಳ ಶಿವನಿಗರ್ಪಿಸಲು ತಂದಿದ್ದ ಆಹಾರವೇ ಇದನ್ನು ಸ್ಪಷ್ಟಪಡಿಸುತ್ತದೆ. ಅವನು ಶಿವನಿಗೆ ಅರ್ಪಿಸಲು ದೇವಾನ್ನ, ಅಮೃತಾನ್ನ ಮುಂತಾದ ಅನ್ನಗಳನ್ನಲ್ಲದೆ ಕ್ಷೀರ, ಮಧು, ದ್ರಾಕ್ಷಿ, ಓವಿ, ಹಪ್ಪಳ, ಚಿಲುಪಾಲು, ಕೆನೆ ಮೊಸರು, ತುಪ್ಪ, ಉಪ್ಪಿನಕಾಯಿ, ಹೆರಸಾರು ಇತ್ಯಾದಿ ಪದಾರ್ಥಗಳನ್ನು ತಂದಿರುತ್ತಾನೆ.

ಕೊನೆಯದಾಗಿ, ಮಾದಾರ ಚೆನ್ನಯ್ಯನ ರಗಳೆಯಲ್ಲಿ ಕಂಡುಬರುವ ಒಂದು ಅಂಶವೆಂದರೆ ತಾಳ್ಮೆ. "ತಾಳ್ಮೆಯ ಗುಣವಿಲ್ಲದಿದ್ದರೆ ಎಂಥ ಘಟನೆಗಳು ನಡೆಯಲು ಅವಕಾಶ ದೊರಕುತ್ತದೆ ಎಂಬುದಕ್ಕೆ ಈ ರಗಳೆಯ ಎರಡು ಪ್ರಸಂಗಗಳನ್ನು ಗಮನಿಸಬಹುದು. ಒಂದು ಸಂದರ್ಭದಲ್ಲಿ ಚೆನ್ನಯ್ಯನು ತನ್ನ ಗುಪ್ತಭಕ್ತಿ ಬಹಿರಂಗವಾದಾಗ ತಾಳ್ಮೆಯನ್ನು ಕಳೆದುಕೊಳ್ಳುತ್ತಾನೆ. ಅಷ್ಟೇ ಅಲ್ಲ ಆತ್ಮಹತ್ಯೆಗೂ ಮುಂದಾಗುತ್ತಾನೆ."[40] ಇನ್ನೊಂದು ಸಂದರ್ಭದಲ್ಲಿ "ಕರಿಕಾಲಚೋಳನ

ಮೃಷ್ಟಾನ್ನವನ್ನು ಶಿವ ಸ್ವೀಕರಿಸದೇ ಇದ್ದಾಗ, ಆತನು ತಾಳ್ಮೆ ಕಳೆದುಕೊಂಡು ಆತ್ಮಹತ್ಯೆಗೆ ಅಣಿಯಾಗುತ್ತಾನೆ."[41] ಈ ಎರಡೂ ಸಂದರ್ಭಗಳಲ್ಲಿ ಇಬ್ಬರಿಗೂ ಶಿವನು ಬೋಧಿಸುವ ತಾಳ್ಮೆಯ ಮಾತು ಅತ್ಯಂತ ಮೌಲಿಕವಾದುದಾಗಿದೆ.

## 5.7 ಆನಾಯನಾರನ ರಗಳೆ

ಜೀವನದ ವೃತ್ತಿಯನ್ನೇ ಅಧ್ಯಾತ್ಮಕ್ಕೆ ತೊಡಗಿಸಿಕೊಂಡ ಕಥೆಯನ್ನು ಕವಿ ಇಲ್ಲಿ ನಿರೂಪಿಸುತ್ತಾನೆ.

ಆನಾಯನಾರ ಪಂಚಾಕ್ಷರಿ ಮಂತ್ರವನ್ನು ಮರ್ತ್ಯರಿಗೆ ಬೋಧಿಸುವ ಉದ್ದೇಶದಿಂದ ಜನಿಸಿದವನು. ಮರ್ತ್ಯದಲ್ಲಿ ದನ ಕಾಯುವ ವೃತ್ತಿ ಅವನದಾಗುತ್ತದೆ. ಆದರೆ ವೃತ್ತಿ ಅವನ ಉದ್ದೇಶಕ್ಕೆ ಅಡ್ಡಿ ಬರುವುದಿಲ್ಲ. ದಿನವೂ ಕಾಡಿಗೆ ಹೋಗಿ ಹಸುಗಳನ್ನು ಮೇಯಲು ಬಿಟ್ಟು, ತಾನು ಪಂಚಾಕ್ಷರಿಯ ಕೊಳಲನೂದತೊಡಗುತ್ತಾನೆ. ಆನಾಯನಾರನ ಕೊಳಲ ನಾದಕ್ಕೆ ಹಸುಗಳೆಲ್ಲ ಕಿವಿ ನಿಮಿರಿ ನಿಲ್ಲುತ್ತವೆ. ಮೃಗ ಕೀಟಗಳು ತಮ್ಮ ಜಾತಿ ವೈರವನ್ನು ಮರೆತು ಕೊಳಲ ನಾದವನ್ನು ಆಲಿಸುತ್ತವೆ.

ಆನಾಯನಾರನ ಭಕ್ತಿಯ ಈ ಪರಿಯನ್ನು ಶಿವ, ಒಮ್ಮೆ ದೂರದ ಕಕ್ಕೆಯ ಮರದ ಮೇಲೆ ಕುಳಿತು ನೋಡುತ್ತಿರುತ್ತಾನೆ. ಶಿವನ ಇರುವಿಕೆಯನ್ನು ತಿಳಿದ ಆನಾಯನಾರ ಆ ಮರದ ಬಳಿಗೆ ಹೋಗಿ ಪಂಚಾಕ್ಷರಿಯ ಕೊಳಲನೂದುತ್ತಾ ನಲಿದಾಡುತ್ತಾನೆ. ಶಿವನಿರುವ ಆ ಮರವನ್ನೇ ತನ್ನೊಳಗಿರಿಸಿಕೊಂಡು ಹಾಡುತ್ತಾನೆ. ಆಗ ಆನಾಯನಾರನ ಭಕ್ತಿಗೆ ಸೋತು ಶಿವ ಪ್ರತ್ಯಕ್ಷವಾಗಿ 'ಬಾ ಮಗನೆ' ಎಂದು ಅಪ್ಪಿಕೊಳ್ಳುತ್ತಾನೆ.

ಜೀವನದಲ್ಲಿ ಯಾವುದೇ ವೃತ್ತಿಯನ್ನು ಕೈಕೊಂಡಾಗಲೂ ಪರಮಾತ್ಮನಲ್ಲಿ ತಲ್ಲೀನತೆಯನ್ನು ಹೇಗೆ ತೋರಬಹುದೆಂಬುದು ಈ ರಗಳೆಯಿಂದ ತಿಳಿಯುತ್ತದೆ. ಭಕ್ತಿಯನ್ನು ಹೊರಗೆ ತೋರದ ರೀತಿ ಉದ್ಯೋಗದಲ್ಲಿ ತೊಡಗಿರುವುದನ್ನು ಈ ರಗಳೆ ಬಣ್ಣಿಸುತ್ತದೆ. ಇತರರ ಗೋವುಗಳನ್ನು ಕಾಯುವಾಗಲೇ ಆನಾಯನಾರ ತನ್ನ ಆತ್ಮದ ಗೋವುಗಳನ್ನು ಪೋಷಿಸುತ್ತಿದ್ದ. ತನ್ನಿಚ್ಛೆ ಗೋವಾಗಿ ಭವದಿಚ್ಛೆ ತಾನಾಗಿದ್ದ. ಕೈಕೊಂಡ ವೃತ್ತಿಯೂ ದೇವನಿಗಾಗಿ ಮಾತ್ರ. ತನ್ನ ಸ್ವಾರ್ಥಕ್ಕಾಗಿ ಇಲ್ಲವೆ ಅಹಂಕಾರದ ತುಷ್ಟಿಗಾಗಿ ಅಲ್ಲವೆಂಬ ಭಾವ ನಮ್ಮಲ್ಲಿ ಬಲಿಯಬೇಕು. ದೇವನ ಇಚ್ಛೆಯೇ ತನ್ನ ಇಚ್ಛೆಯೆಂದು ಬಾಳುವ ಮಾನವನ ಜೀವನವೆ ದೈವೀ ಜೀವನದ ಹಾದಿ. ಪರಮಾತ್ಮನ ಧ್ಯಾನದಲ್ಲಿ ತೊಡಗಿಯೂ ಜೀವನದ ವೃತ್ತಿಯನ್ನು ಯಶಸ್ವಿಯಾಗಿ ನಡೆಸುವ ರೀತಿಯನ್ನು ಇಲ್ಲಿ ಕಾಣುತ್ತೇವೆ.

## 5.8 ಮಾನಕಂಜಾರನ ರಗಳೆ

ಭಕ್ತನಾದವನು ಪಡೆದುದನ್ನು ಪಡೆದಷ್ಟೇ ಪ್ರೀತಿಯಿಂದ ಹಿಂತಿರುಗಿಸಬೇಕು ಎಂಬ ಆಶಯದ ಹಿನ್ನೆಲೆಯಲ್ಲಿ ಹರಿಹರ ಮಾನಕಂಜಾರನ ರಗಳೆಯನ್ನು ರಚಿಸಿದ್ದಾನೆ.

ಕಥಾನಾಯಕ ಮಾನಕಂಜಾರ ಶಿವನ ಪರಮಭಕ್ತ. ಶಿವಭಕ್ತರು ಬಂದು ಏನನ್ನು ಬೇಡಿದರೂ ಕೂಡಲೇ ಸಂತಸದಿಂದ ನೀಡುವುದು ಇವನ ನೇಮ. ಇವನಿಗಿದ್ದ ಒಂದೇ ಕೊರತೆ ಎಂದರೆ ಮಕ್ಕಳಿಲ್ಲದ್ದು. ಹೆಂಡತಿಯ ಕೋರಿಕೆಯಂತೆ ಒಮ್ಮೆ ಮಗುವಿಗಾಗಿ ಶಿವನನ್ನು ಬೇಡುತ್ತಾನೆ. ಬೇಡುವಾಗ ಪುತ್ರನಂ ಎಂಬುದಕ್ಕೆ ಬದಲಾಗಿ, ಪುತ್ರಿಯಂ ಕೊಡು ಎಂದು ಬೇಡುತ್ತಾನೆ. ಕಾಲಕ್ರಮದಲ್ಲಿ ಇವನಿಗೆ ಹೆಣ್ಣುಮಗು ಜನಿಸುತ್ತದೆ. ದಿನದಿನಕ್ಕೆ ಆ ಮಗು ಸುಂದರವಾಗಿ ಬೆಳೆಯುತ್ತದೆ.

ಲಾವಣ್ಯವತಿಯಾದ ಮಗಳಿಗೆ ಚೋಳ ಭೂಪಾಲನ ಮಗನೊಂದಿಗೆ ಮದುವೆಯ ನಿಶ್ಚಯವಾಗುತ್ತದೆ. ಮದುವೆಗೆ ಸಕಲ ಸಿದ್ಧತೆಗಳೂ ಜರುಗುತ್ತವೆ. "ಎಲ್ಲಿಲ್ಲದ ಸಡಗರ, ಅತ್ಯಂತ ಸಂಭ್ರಮ! ರಾಜ ಮಹಾರಾಜರುಗಳು, ಮನ್ನೆಯರು, ಮಂತ್ರಿಗಳು, ತಂತ್ರಿಗಳು, ಸಚಿವರು, ಸಾಮಂತರು, ಕವಿ, ಗಮಕಿ, ವಾಗ್ಮಿ, ನರ್ತಕಿ, ನರ್ತಕ"[42]ರಿಂದ ಕಲ್ಯಾಣ ಮಂಟಪವು ಕಿಕ್ಕಿರಿದಿತ್ತು. ಜೋಯಿಸರು ಸುಮುಹೂರ್ತಕ್ಕಾಗಿ ಕಾಯ್ದು ಕುಳಿತಿದ್ದಾರೆ. ಆ ಸಂದರ್ಭದಲ್ಲಿ ಸರಿಯಾಗಿ ಶಿವನು ಪ್ರತ್ಯಕ್ಷನಾಗುತ್ತಾನೆ. ಮಹತ್ವದ ಆ ಸನ್ನಿವೇಶದಲ್ಲಿ ಒಳಗೆ ಪ್ರವೇಶಿಸಿದ ಭಿಕ್ಷುಕ ವೇಷದ ಶಿವ, ಮಗಳ ಮುಡಿಯ ಭಿಕ್ಷೆಯನ್ನು ನೀಡುವಂತೆ ಮಾನಕಂಜಾರನನ್ನು ಬೇಡುತ್ತಾನೆ.

ಮಗಳ ಮುಡಿಯನ್ನು ಕತ್ತರಿಸಿದ್ದೇ ಆದರೆ ಇಡೀ ಸಮಾರಂಭ ಹಾಳಾಗುತ್ತದೆ. ಜೊತೆಗೆ ಮಗಳ ಸೌಂದರ್ಯವೂ ಹೋಗುತ್ತದೆ, ಬದುಕೂ ಹಾಳಾಗುತ್ತದೆ. ಆದರೂ ಮಾನಕಂಜಾರ ಹಿಂಜರಿಯುವುದಿಲ್ಲ. ಒಂದು ಕ್ಷಣ ಕೂಡ ವಿಚಲಿತನಾಗುವುದಿಲ್ಲ. ಕೇಳಿದ ತಕ್ಷಣವೇ, ಇರುವುದನ್ನು ಕೊಡುವುದಕ್ಕೆ ಇಷ್ಟು ಉಪಚಾರವೇ? ಎಂದು ನುಡಿದು, ಆ ಭಿಕ್ಷುಕನಿಗೆ ಕೈಕೊಟ್ಟು ನಡೆಸಿಕೊಂಡು ಬಂದು ಮದುವೆಯ ಮಂಟಪದ ಹತ್ತಿರ ನಿಲ್ಲುತ್ತಾನೆ. ಬಂದ ಜನರೆಲ್ಲ ಆಶ್ಚರ್ಯ ಪಡುತ್ತಿರಲು ಮಾನಕಂಜಾರನು ಮಗಳ ಹತ್ತಿರ ಹೋಗಿ ಅವಳ ತಲೆಯಲ್ಲಿದ್ದ ದಂಡೆ ತೊಂಡಿಲುಗಳನ್ನು ಓಸರಿಸಿ "ಚಂಡಿಕೆವಿಡಿದು ಮಗಳನುದ್ಧರಿಸುವಂದದಿಂ ಶಿವಭಕ್ತಿ ಮಗಳ ತಲೆಗೇಱಿತೆಂಬಂದದಿಂ, ಶಿವಭಕ್ತಿ ಕಯ್ಯೊಳಡಂಗಿತೆಂಬಂದದಿಂ"[43] ಎಡಗೈಯಿಂದ ಮುಡಿಯನ್ನು ಹಿಡಿದು, ಬಲಗೈಯಲ್ಲಿದ್ದ ಕಠಾರಿಯಿಂದ - ಹೂವನ್ನು ಕೊಯ್ಯುವಂತೆ - ಮಗಳ ಮುಡಿಯನ್ನು ಕೊಯ್ದು ಭಿಕ್ಷುವಿಗೆ ಅರ್ಪಿಸುತ್ತಾನೆ.

ಇಲ್ಲಿ ಮಾನಕಂಜಾರನ ದಾನ, ನಿಷ್ಠೆ, ಔದಾರ್ಯಗಳೆಲ್ಲ ಅತ್ಯಂತ ಸುಂದರವಾಗಿ ಮೂಡಿ ಬಂದಿವೆ. ಕವಿ ತನ್ನ ಆಶಯ ಏನಿತ್ತೋ ಅದನ್ನು ಸಂಪೂರ್ಣವಾಗಿ ಸಾಧಿಸಿಕೊಂಡಿದ್ದಾನೆ.

ಕಥೆಯಲ್ಲಿ ಬರುವ ತಿರುಮುಡಿಯೊಡೆಯಳ ಸೌಂದರ್ಯ ವರ್ಣನೆ, ಕಲ್ಯಾಣ ಮಂಟಪದ ಅಲಂಕಾರ, ಸಭೆಯಲ್ಲಿ ಸೇರಿದ್ದ ಸಭ್ಯರ ವರ್ಣನೆ, ಮಗಳ ಮುಡಿಯನ್ನು ಕೊಯ್ಯುವ ಸನ್ನಿವೇಶ ಎಲ್ಲವೂ ಕಣ್ ಕಟ್ಟುವಂತೆ ಚಿತ್ರಣಗೊಂಡಿವೆ.

## 5.9 ಒಲಿಥಾಂಡ ಮೂರ್ತಿಯ ರಗಳೆ

ಶಿವನ ಒಲುಮೆಗಾಗಿ ಧನವನ್ನು ಸವೆಯಿಸುವುದಷ್ಟೇ ಮುಖ್ಯವಲ್ಲ, ಭಕ್ತನಾದವನು

ತನ್ನ ತನುವನ್ನೂ ಸವೆಯಿಸಲು ಸಿದ್ಧನಾಗಿರಬೇಕು. ಧನವನ್ನು ಸವೆಯಿಸುವ ಭಕ್ತಿ ಕಪಟವಾದದ್ದು; ಆ ಭಕ್ತಿಗೆ ಶಿವ ಒಲಿಯುವುದಿಲ್ಲ.

ಒಲಘಾಂಡ ಮೂರ್ತಿಯ ಕಥೆ ಇದೇ ತತ್ವವನ್ನು ಪ್ರಧಾನವಾಗಿ ಎತ್ತಿ ಹಿಡಿಯುತ್ತದೆ. ಇಲ್ಲಿನ ಕಥಾನಾಯಕನೇ ಒಲಘಾಂಡಮೂರ್ತಿ. ಮಹಾಭಕ್ತ, ಭಾರೀ ಐಶ್ವರ್ಯವಂತ, ಉದಾರ ದಾನವಂತ. ಶಿವಭಕ್ತಿ ತನ್ನಲ್ಲಿ ನೆಲೆಸಲಾಗಿ ನಿತ್ಯವೂ ಶಿವನಿಗೆ ಚಂದನವನ್ನು ಅರ್ಪಿಸುವ ನೇಮ ಕೈಗೊಳ್ಳುತ್ತಾನೆ. ದಾನ ಮಾಡಿ ಬರಿದಾಗುತ್ತಾನೆ. ಶಿವನಿಗೆ ಚಂದನವನ್ನು ಅರ್ಪಿಸಲೂ ಸಂಪತ್ತು ಇಲ್ಲದವನಾಗುತ್ತಾನೆ. ಚಂದನಕ್ಕಾಗಿ ತನಗೆ ದೊರೆಯುವ ಎಲ್ಲ ಮಾರ್ಗಗಳನ್ನೂ ಬಳಸಿಕೊಂಡಿದ್ದಾನೆ. ಬೇರೆ ದಾರಿಯೇ ಇಲ್ಲದಿದ್ದಾಗ ತನ್ನ ಹೆಂಡತಿಯ ತಾಳಿಯನ್ನೇ ಕಿತ್ತು ಮಾರುತ್ತಾನೆ. ಬಂದ ಹಣದಿಂದ ಚಂದನವನ್ನು ತಂದು ಶಿವನಿಗರ್ಪಿಸುತ್ತಾನೆ.

ತಾಳಿಯನ್ನು ಮಾರಿ ಚಂದನವನ್ನು ಶಿವನಿಗರ್ಪಿಸುವ ದೃಶ್ಯವನ್ನು ನಿರ್ಮಿಸುವ ಮೂಲಕ ಒಲಘಾಂಡ ಮೂರ್ತಿಯ ಚಂದನದ ನೇಮದ ನಿಷ್ಠೆಯ ಉತ್ತುಂಗವನ್ನು ಹರಿಹರ ಸುಂದರವಾಗಿ ಕಟ್ಟಿಕೊಡುತ್ತಾನೆ. ಈ ಸಂದರ್ಭ ಭಕ್ತನ ಬಡತನದ ಉತ್ಕೃಷ್ಟತೆಯನ್ನು ಅಷ್ಟೇ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಇಷ್ಟಾದರೂ ಕೂಡ ಅದನ್ನು ನಿಜ ಭಕ್ತಿ ಎಂದು ಕರೆಯಲಾಗದು. ಇಂಥ ಆಚರಣೆಗಳಿಗೆಲ್ಲ ಶಿವ ಒಲಿಯಲಾರ ಶಿವನಿಗಾಗಿ ತನ್ನನ್ನೇ ಅರ್ಪಿಸಿಕೊಳ್ಳುವ, ನಿಷ್ಠೆ ಭಕ್ತನದಾಗಿರಬೇಕು. ಅಂತೆಯೇ ಒಲಘಾಂಡಮೂರ್ತಿ ತನ್ನ ಮೊಳಕೈಯನ್ನೇ ಚಂದನದ ಕೊರಡನ್ನಾಗಿ ಮಾಡಿಕೊಂಡು ನಿತ್ಯವೂ ಶಿವನಿಗೆ ತೇಯ್ದು ಅರ್ಪಿಸುತ್ತಿದ್ದುದನ್ನು ಕಾಣುತ್ತೇವೆ.

ಇಡೀ ಸಂಪತ್ತು ಬರಿದಾದ ಸಂದರ್ಭದಲ್ಲಿ ಒಲಘಾಂಡಮೂರ್ತಿ ಚಿಂತಾಕ್ರಾಂತನಾಗುತ್ತಾನೆ. ಆಗ ಶಿವನೇ ಕನಸಿನಲ್ಲಿ ಬಂದು, ಚಂದನ ನಿನ್ನ ಕೈಯಲ್ಲೇ ಇದೆ ಎಂದು ತಿಳಿಸುತ್ತಾನೆ. ಶಿವನ ಮಾತು ಭಕ್ತನಿಗೆ ಆಶ್ಚರ್ಯ ತರುತ್ತದೆ.

ಮರು ದಿನ ದೇವಾಲಯಕ್ಕೆ ಬಂದ ಭಕ್ತ ದೇವರಿಗೆ ಮಜ್ಜನಮಾಡಿಸಿ, ಚಂದನಕ್ಕಾಗಿ ತನ್ನ ಮೊಳಕೈಯನ್ನೇ ತೇಯತೊಡಗುತ್ತಾನೆ. ತೇಯ್ದಂತೆಲ್ಲ ಚಂದನದ ಕಂಪು ಬೀರತೊಡಗುತ್ತದೆ. ಆಗ–

> ಮುನ್ನವೇ ಪೇಳದಂತಿಜೀವರೇ ಶಕರಾ
>
> .........................................
>
> .............. ದೇಹವುಳ್ಳನ್ನೆಗಂ ತೇವೆ
>
> ಒಲ್ಲೆನೊಲ್ಲೆಂ ಬೆಜೆ ಗಂಧಮುಮಂ ನಾನೇವ[44]

ಎನ್ನುತ್ತಾನೆ. ಅವನಲ್ಲಿ ಪರಮಾತ್ಮನ ಅರಿವು ಮೂಡುತ್ತದೆ.

ಇಡೀ ಕಥೆ ಸಾಂಕೇತಿಕವಾಗಿದೆ. ಅದು ಶಿವನಿಗಾಗಿ ಬರೀ ಧನವನ್ನು ಸವೆಯಿಸಿದರೆ ಸಾಲದು, ತನುವನ್ನು ಸವೆಯಿಸಬೇಕು ಎಂಬ ತತ್ವವನ್ನು ಸಾಂಕೇತಿಕವಾಗಿ ತಿಳಿಸುತ್ತದೆ.

"ಕಥೆಯೊಳಗೆ ಒಲಘಾಂಡಮೂರ್ತಿಯ ಶಿವಪೂಜಾ ವೈಭವ, ಪತ್ನಿಯ ತಾಳಿಯನ್ನು ಮಾರಿಯಾದರೂ ಹಿಡಿದ ವ್ರತವನ್ನು ಪಾಲಿಸುವ ನಿಷ್ಠೆ, ಶಿವನ ಆಜ್ಞೆಯಲ್ಲಿ ಇವನ ಅಚಲ

ವಿಶ್ವಾಸ ಇವುಗಳ ನಿರೂಪಣೆ ಸಂದರ್ಭೋಚಿತವೂ ಸ್ವಾರಸ್ಯವೂ ಭಕ್ತಿರಸ ಪರಿಪೋಷಕವೂ ಆಗಿ ಕಂಗೊಳಿಸುತ್ತದೆ."[45]

## 5.10 ಅತಿಭಕ್ತನ ರಗಳೆ

ವ್ರತವನ್ನು ಕೈಗೊಳ್ಳುವುದು ಭಕ್ತರ ಜೀವನದಲ್ಲಿ ಸಾಮಾನ್ಯ ಸಂಗತಿ. ಒಬ್ಬೊಬ್ಬರ ವ್ರತವೂ ಒಂದೊಂದು ರೀತಿ ಇರುತ್ತದ. ಒಮ್ಮೆ ಒಂದು ವ್ರತವನ್ನು ಕೈಗೊಂಡರೆ ಎಂಥದ್ದೇ ಕಡುಕಷ್ಟಗಳು ಬರಲಿ, ಎಂಥದ್ದೇ ಆನಂದ ಲಭಿಸಲಿ, ವಿಚಲಿತನಾಗದೆ ಆ ವ್ರತವನ್ನು ನಿಷ್ಠೆಯಿಂದ ಪಾಲಿಸಬೇಕು. ಅದಕ್ಕೆ ಶಿವನ ಒಲುಮೆ ಇದ್ದೇ ಇರುತ್ತದೆ. ಕಷ್ಟ ಸುಖಗಳು ಎದುರಾದಾಗ ತಾನು ಹಿಡಿದಿರುವ ವ್ರತವನ್ನು ಬಿಟ್ಟಿದ್ದೇ ಆದರೆ, ಅಥವಾ ಸಡಿಲಿಸಿದ್ದೇ ಆದರೆ ಅದರಲ್ಲಿ ಅರ್ಥವಿರುವುದಿಲ್ಲ. ಇಂಥ ವ್ರತಗಳಿಗೆ ಶಿವ ಒಲಿಯುವುದೂ ಇಲ್ಲ.

ವ್ರತನಿಷ್ಠೆಯನ್ನು ಕುರಿತಂತೆ ಅತಿಭಕ್ತನ ಈ ರಗಳೆಯಲ್ಲಿ ಸುಂದರವಾದ ನಿರೂಪಣೆಯಿದೆ. ಕವಿ ತನ್ನ ಸನ್ನಿವೇಶ ನಿರ್ಮಾಣ ಕೌಶಲದಿಂದ ಬಹಳ ಚೆನ್ನಾಗಿ ಸಾಧಿಸಿದ್ದಾನೆ. ಈ ಕಥೆಯ ನಾಯಕ ಅತಿಭಕ್ತ. ಮೀನು ಹಿಡಿಯುವುದೇ ಅವನ ಕಾಯಕ. ಹಿಡಿದ ಮೀನಿನಲ್ಲಿ ಮೊದಲ ಮೀನನ್ನು ಶಿವನಿಗೆ ಅರ್ಪಿಸಿ ಮತ್ತೆ ನೀರಿಗೆ ಬಿಡುವುದೇ ಅವನು ಕೈಗೊಂಡಿರುವ ವ್ರತ. ಬಹಳ ವರ್ಷಗಳ ಕಾಲ ಈ ವ್ರತವನ್ನು ಚಾಚೂತಪ್ಪದೆ ಪಾಲಿಸುತ್ತಾನೆ.

ಒಮ್ಮೆ ಶಿವನು ಈ ವ್ರತಕ್ಕೆ ಭಂಗ ತರುವ ಮೂಲಕ ಅತಿಭಕ್ತನ ವ್ರತನಿಷ್ಠೆಯನ್ನು ಪರೀಕ್ಷಿಸ ಬಯಸುತ್ತಾನೆ. ಆ ನಿಟ್ಟಿನಲ್ಲಿ ಮೊದಲಿಗೆ, ಮೀನುಗಳು ಸಿಗುವ ಪ್ರಮಾಣವನ್ನು ಕಡಿಮೆ ಮಾಡುತ್ತಾನೆ. ಆದರೂ ಅತಿಭಕ್ತ ತನ್ನ ವ್ರತವನ್ನು ಬಿಡುವುದಿಲ್ಲ. ಜೊತೆಗೆ ಮೀನುಗಳ ದಾನವನ್ನೂ ಬಿಡುವುದಿಲ್ಲ. ಕೊನೆ ಕೊನೆಗೆ ಶಿವನು ಅತಿಭಕ್ತನಿಗೆ ಮೀನುಗಳೇ ಸಿಗದ ಹಾಗೆ ಮಾಡುತ್ತಾನೆ. ಅತಿಭಕ್ತನ ಕುಟುಂಬ ಬಡತನಕ್ಕೆ ಒಳಗಾಗುತ್ತದೆ. ಮಡದಿ ಮಕ್ಕಳ ಸಹಿತವಾಗಿ ಹಸಿವೆಯಿಂದ ಬಳಲುತ್ತಾನೆ. ಹಸಿವು ತೀವ್ರವಾಗತೊಡಗುತ್ತದೆ. ಅಂತಹ ಸಂದರ್ಭದಲ್ಲಿ ಮೀನಿಗಾಗಿ ಬಲೆ ಬೀಸಿರಲು, ದೊಡ್ಡದಾದ ಮೀನೊಂದು ಅತಿಭಕ್ತನ ಬಲೆಗೆ ಬೀಳುತ್ತದೆ. ಅತಿಭಕ್ತನ ವ್ರತ, ಹಿಡಿದ ಮೊದಲ ಮೀನನ್ನು ನೀರಿಗೆ ಬಿಡುವುದಾದ್ದರಿಂದ ಆ ಮೀನನ್ನು ನೀರಿಗೆ ಬಿಡಲು ಸಿದ್ಧವಾಗುತ್ತಾನೆ. ಆ ಹೊತ್ತಿಗೆ ಇಡೀ ಜನ ಸಮೂಹ ಆ ಮೀನನ್ನು ನೀರಿಗೆ ಬಿಡದ ಹಾಗೆ ಕೇಳಿಕೊಳ್ಳುತ್ತದೆ. ಆದರೂ ಅತಿಭಕ್ತ ತನ್ನ ವ್ರತ ಏನಿದೆಯೋ ಅದರಂತೆ ನಡೆಯುತ್ತಾನೆ. ಮೀನು ಎಷ್ಟೇ ಬೆಲೆಯುಳ್ಳದ್ದಾಗಿರಲಿ, ಎಷ್ಟೇ ಜನ ಬೇಡ ಎಂದು ತಡೆಯಲಿ, ಅದನ್ನು ಲೆಕ್ಕಿಸದೆ ನೀರಿಗೆ ಬಿಡುತ್ತಾನೆ.

ಒಂದೆಡೆ ಭಯಾನಕ ಹಸಿವು ಇನ್ನೊಂದೆಡೆ ಊರಿನ ಜನರ ಕೋರಿಕೆ. ಸಾಮಾನ್ಯವಾಗಿ ಇಂತಹ ಸಂದರ್ಭದಲ್ಲಿ ಯಾವುದೇ ಒಬ್ಬ ಭಕ್ತ ಎಂಥದ್ದೆ ವ್ರತವನ್ನು ಕೈಗೊಂಡಿರಲಿ ಆ ನಿಷ್ಠೆಯನ್ನು ಸಡಿಲಿಸಿಯೇ ತೀರುತ್ತಾನೆ. ಸಂದರ್ಭವೂ ಹಾಗೆಯೇ ಇದೆ. ಆದರೆ ಮಹಾ ವ್ರತನಿಷ್ಠನಾದ ಅತಿಭಕ್ತ – ಕಡು ಕಷ್ಟಗಳು ಬಂದರೂ – ಸ್ವಲ್ಪವೂ ವಿಚಲಿತನಾಗುವುದಿಲ್ಲ. ತನ್ನ ವ್ರತ ಏನಿದೆಯೋ ಅದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾನೆ.

ಈ ರಗಳೆಯಲ್ಲಿ ಮಂದಾನಿಲ ರಗಳೆಯ ಸುಮಾರು ನೂರ ಐವತ್ತೆರಡು ಪಾದಗಳಿವೆ.

ಈ ಪಾದಗಳಲ್ಲಿ "ಅರ್ಧ ಭಾಗದಷ್ಟು ಚೋಳನ ರಾಜಧಾನಿ ಮತ್ತು ಅದರ ಒತ್ತಿನಲ್ಲಿರುವ ಕೈವರ್ತಪುರದ ವರ್ಣನೆಗೆ ಮೀಸಲಾಗಿದೆ. ಮೀನಿನ ವರ್ಣನೆ ಕಥೆಯ ಚೆಲುವನ್ನು ಕೊಂಚ ಮಟ್ಟಿಗೆ ಹೆಚ್ಚಿಸಿದೆ. ಕಥಾಬೀಜವೇನೋ ಸೊಗಸಾಗಿರುವುದಾದರೂ ಅದು ಅಂಕುರಿಸಿ ಎಲೆಯೊಡೆದು ಬೆಳೆದು ರಸವತ್‌ಫಲವನ್ನು"[46] ನೀಡುವಲ್ಲಿ ಕಥೆ ವಿಫಲವಾಗಿದೆ. ಕೈಗೊಂಡ ವ್ರತಕ್ಕೆ ನಿಷ್ಠನಾಗಿರಬೇಕು ಎಂಬುದು ಕಥೆಯ ಪ್ರಧಾನ ಆಶಯವಾಗಿದೆ.

## 5.11 ಕಲಿಕಾಮದೇವರ ರಗಳೆ

ಕಲಿಕಾಮದೇವರ ರಗಳೆ ಹರಿಹರನ ನೀಳವಲ್ಲದ ಕಥೆಗಳಲ್ಲಿ ಸ್ವಲ್ಪ ಮಟ್ಟಿಗೆ ವಿಶಿಷ್ಟವಾದದ್ದೂ, ಕಲಾಮಯವಾದದ್ದೂ ಆಗಿದೆ. ಇಲ್ಲಿ ಕಲಿಕಾಮದೇವ ಮತ್ತು ಅವನ ಪತ್ನಿ ಪತಿಭಕ್ತೆ ಹಾಗೂ ನಂಬಿಯಣ್ಣನ ಭಕ್ತಿಯ ಬೇರೆ ಬೇರೆ ಸ್ವರೂಪವನ್ನು ಕವಿ ನಿರೂಪಿಸಿದ್ದಾನೆ.

ಕಲಿಕಾಮನ ಕಲ್ಪನೆಯಂತೆ ಶಿವನು ಅತ್ಯಂತ ಸುಕುಮಾರ, ಲಾವಣ್ಯವಂತ, ಚೆಲುವಿನ ಚೆಲುವು, ಮೃದುವಿನ ಮೃದುವು, ಬೆಳಗಿನ ಬೆಳಗು. ಶಿವನ ಮೇಲೆ ಈತನಿಗೆ ಅತ್ಯಪೂರ್ವವಾದ ವಾತ್ಸಲ್ಯ, ಅಭಿಮಾನ, ಆದರೆ ನಂಬಿಯಣ್ಣನಿಗೆ, ಶಿವನೆಂದರೆ ಭಕ್ತಪರಾಧೀನ, ಭಕ್ತನ ಅಚ್ಚುಮೆಚ್ಚಿನ ಗೆಳೆಯ, ಭಕ್ತಜನ ಬಾಂಧವ, ಭಕ್ತವತ್ಸಲ. ಇವರಿಬ್ಬರೂ ಶಿವನಿಗೆ ಒಂದೇ. ಇವರಿಬ್ಬರನ್ನೂ ಒಂದುಗೂಡಿಸುವುದಕ್ಕೆ ಶಿವ ಹೂಡಿದ ಉಪಾಯ ಅತ್ಯಂತ ರಮಣೀಯ ವಾಗಿ, ಹಾಸ್ಯಮಯವಾಗಿ, ನಾಟಕೀಯವಾಗಿ ಚಿತ್ರಿತವಾಗಿದೆ. ಕಲಿಕಾಮ ಒಂದು ಬಗೆಯಲ್ಲಿ, ಮೆರೆಮಿಂಡದೇವ ಮತ್ತೊಂದು ಬಗೆಯಲ್ಲಿ ನಂಬಿಯಣ್ಣನ ಸೊಕ್ಕುಮುರಿದು ಅವನ ಭಕ್ತಿಯ ಕಾಳಿಕೆಯನ್ನು ತೆಗೆದುಹಾಕಿರುವರು.

ಕಥೆಯಲ್ಲಿ ಕಲಿಕಾಮ ಮತ್ತು ಪತಿಭಕ್ತೆಯರ ಪರಸ್ಪರ ಅನ್ಯೋನ್ಯತೆ, ಶಿವಾರಾಧನೆ, ಭಕ್ತೋಪಚಾರ ಗಮನ ಸೆಳೆಯುತ್ತವೆ. ಪತಿಭಕ್ತೆಯ ಪಾತ್ರ ಚಿಕ್ಕದಾಗಿದ್ದರೂ ಕಥೆಯಲ್ಲಿ ಹಿರಿಯ ಪಾತ್ರ ಅವಳದಾಗಿದೆ. ಈ ದಂಪತಿಗಳ ಶಿವಭಕ್ತಸೇವೆ "ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂಬ ಸೂಕ್ತಿಗೆ ಟೀಕೆಯಂತಿದೆ."[47] ಇವರ ಶಿವಭಕ್ತಿಯ "ನಿರೂಪಣೆಯ ಭಿತ್ತಿಯ ಮೇಲೆ ಪರಸ್ಪರ ವಿರೋಧವೆಂಬಂತೆ ತೋರುವ ಎರಡು ಬಗೆಯ ಭಕ್ತಿಯಲ್ಲಿ ನಡೆಯುವ ಘರ್ಷಣೆಯ ವರ್ಣರಂಜಿತ ವರ್ಣಶಿಲ್ಪವಿದೆ. ಕಲಿಕಾಮ ನಂಬಿಯ ಭಕ್ತಿಮಾರ್ಗವನ್ನು"[48] ತಿಳಿದಾಗ ಅವನ ಬಾಯಿಂದ ಹೊರ ಹೊಮ್ಮುವ ಮುಗ್ಧವಾದ ಮಾತುಗಳು, ಆರೂರವರು ಬಂದಾಗ ಅವರನ್ನು ಇವನು ಓಡಿಸುವ ರೀತಿ, ಶಿವ ಮತ್ತು ನಂಬಿಯಣ್ಣರ ನಡುವೆ ನಡೆದ ಮಾತುಕತೆ, ಕಲಿಕಾಮನನ್ನು ಕಂಡು ನಂಬಿಯಣ್ಣನಲ್ಲಿ ಉಂಟಾದ ಭಯ, "ನಂಬಿಯಣ್ಣನಿಗೂ ಕಲಿಕಾಮನಿಗೂ ನಡೆದ ಯುದ್ಧದ ಸರಸ ಚಿತ್ರಣ, ಅವರಿಬ್ಬರ ನಡುವೆ ಇತ್ತಲೆಗನಂತೆ ವರ್ತಿಸುತ್ತಿದ್ದ ಶಿವನ ಚಿನ್ನಾಟ, ಅವನ ರಾಯಭಾರ, ಪತಿಭಕ್ತೆಯ ಧ್ಯೇಯ ಪರಿಪಾಲನೆ, ಕಲಿಕಾಮನ ಕಡುನಿಷ್ಠೆ"[49] ಶಿವ ಕಳುಹಿಸಿದ ಶೂಲೆಯು ಕಲಿಕಾಮನ ದೇಹವನ್ನು ಹೊಕ್ಕಿದ್ದು, ಮತ್ತೆ ಎಚ್ಚರವಾದಾಗ ನಂಬಿಯಣ್ಣನ ಮೇಲೆ ಕಿಡಿಕಾರಿದ್ದು, ಕಲಿಕಾಮನನ್ನು ಶಿವನು ಹೊಸ ಜನ್ಮ ಪಡೆದ ಬಗ್ಗೆ ಹೇಳಿ ಸಮಾಧಾನಿಸಿದ್ದು - ಇವೆಲ್ಲವುಗಳ ನಿರೂಪಣೆ ಅತ್ಯಂತ ಉಚಿತವೂ

ಚಮತ್ಕಾರಯುತವೂ ಆಗಿರುತ್ತದೆ.

"ಕಥೆಯ ಕಟ್ಟಡ, ಅಚ್ಚುಕಟ್ಟು, ಪಾತ್ರ ನಿರ್ಮಾಣ, ಭಕ್ತಿತತ್ತ್ವದ ಪ್ರತಿಪಾದನೆ - ಎಲ್ಲ ದೃಷ್ಟಿಯಿಂದಲೂ ಈ ಕೃತಿ ಅತ್ಯಂತ ಕಲಾಮಯವಾಗಿ ಕಂಗೊಳಿಸುತ್ತದೆ."[50]

## 5.12 ಇಳೆಯಾಂಡ ಗುಡಿಮಾರನ ರಗಳೆ

ಶಿವಭಕ್ತನ ದಾನನಿಷ್ಠೆ ಮತ್ತು ದುಡಿಮೆಯ ನಿಷ್ಠೆಗಳನ್ನು ಚಿತ್ರಿಸುವುದು ಹರಿಹರ ಕವಿಯ ಅಪರೂಪದ ಗುಣವೇನಲ್ಲ. ಅವನ ರಗಳೆಗಳಲ್ಲಿ ಮೇಲಿಂದ ಮೇಲೆ ಇಂಥ ಚಿತ್ರಣಗಳು ಚಿತ್ರಣಗೊಳ್ಳುತ್ತಿರುತ್ತವೆ. ಆ ಚಿತ್ರಣಗಳಂತೆಯೇ ಇಳೆಯಾಂಡ ಗುಡಿಮಾರನ ರಗಳೆಯಲ್ಲೂ ಕೆಲವು ಚಿತ್ರಣಗಳಿವೆ. ಆದರೆ ಇತರ ಎಲ್ಲ ರಗಳೆಗಳಿಗಿಂತ ಹರಿಹರನ ಇಳೆಯಾಂಡ ಗುಡಿಮಾರನ ರಗಳೆಯಲ್ಲಿ ಇರುವ ಚಿತ್ರಣ ಅತ್ಯಂತ ವಿಶಿಷ್ಟವಾಗಿದೆ. ಉತ್ತಮವೂ ಚಿತ್ತಾಕರ್ಷಕವೂ ಆಗಿದೆ.

ಕಥೆಯಲ್ಲಿ ಎರಡು ಘಟ್ಟಗಳಿವೆ. ಒಂದು - ಪ್ರಾರಂಭದಿಂದ ಶಿವನ ಪ್ರವೇಶದವರೆಗಿನದು. ಇನ್ನೊಂದು - ಶಿವನ ಪ್ರವೇಶದಿಂದ ಕೊನೆಯ ತನಕದ್ದು. ಈಗ ಈ ಎರಡೂ ಘಟ್ಟಗಳ ವಿಶೇಷತೆಯನ್ನು ಗಮನಿಸೋಣ.

ಗುಡಿಮಾರ ಶಿವನ ಸಜ್ಜೆಯೆನಿಸುವ ಚೋಳದೇಶದ ಭಕ್ತ. ಒಕ್ಕಲುತನವೇ ಅವನ ವೃತ್ತಿಯಾಗಿದ್ದು, ಇದರೊಡನೆ ಶರಣರ ಇಚ್ಛೆಯನ್ನು ಸಲ್ಲಿಸುವ ಕಾರ್ಯದಲ್ಲಿ ನಿರತನಾಗಿದ್ದನು. ಅಪಾರ ಸಿರಿಸಂಪತ್ತುಗಳು ಅವನಲ್ಲಿತ್ತು. ಕವಿ ಉದ್ಧರಿಸುವಂತೆ 'ಧರೆಯೆನಿತನಿತು ಭೂಮಿ ತನಗುಂಟದರ' ಭೂ ಸಂಪತ್ತು ಇತ್ತು. ಅಪಾರ ಸಂಪತ್ತಿನೊಂದಿಗೆ ಅಪಾರ ಭಕ್ತಿಯೂ ಇದ್ದುದರಿಂದ ಇದ್ದ ಸಂಪತ್ತನ್ನೆಲ್ಲ ಭಕ್ತರಿಗೆ ಹಂಚುವಲ್ಲಿ ನಿರತನಾದನು. ಅವನು —

> ನೊಳ್ಪಿತಂ ಸೊಗಸಿತಂ ಶಿವನ ಭಕ್ತರ್ಗೀವ
> ನುಳ್ಳುದಂ ನವ್ಯಮಂ ಶಿವನ ಭಕ್ತರ್ಗೀವ
> ನೆಲ್ಲ ತೇಜಂಗಳಂ ಶರಣ ತತಿಗೀವುತಂ[51]

ಹೀಗೆ, ತನ್ನಲ್ಲಿ ಏನಿತ್ತೋ ಅದೆಲ್ಲವನ್ನೂ ಶಿವಭಕ್ತರಿಗೆ ಹಂಚುತ್ತಾನೆ.

ಯಾವೊಬ್ಬ ವ್ಯಕ್ತಿ ದಾನಮಾಡುತ್ತಾನೆಂದರೆ ಜನ ಅಲ್ಲಿ ಕಿಕ್ಕಿರಿದು ನಿಲ್ಲುತ್ತದೆ. ಅವಶ್ಯಕತೆ ಇಲ್ಲದಿದ್ದರೂ ಪಡೆದುಕೊಳ್ಳುತ್ತದೆ. ಅಂಥ ಜನರ ಚಿತ್ರಣವನ್ನು ಕವಿ ಇಲ್ಲಿ ಚೆನ್ನಾಗಿ ನಿರೂಪಿಸಿದ್ದಾನೆ. ಭಕ್ತ ಗುಡಿಮಾರ ದಾನ ಮಾಡುತ್ತಾನೆ ಎಂದು ತಿಳಿಯುತ್ತಿದಂತೆಯೇ -

> ಬರುತಲಿರ್ದುದು ಭೂತಳದ ಭಕ್ತರೊಳ್ಮೆಯಿಂ
> ಮೇರೆದಪ್ಪಿದ ವಾರ್ಧಿಯೆಂತಂತೆ ಕವಿವುತಿರೆ
> ಧೀರನನೋಸರಿಸಂ ಮಹಾಗಣಂ ಪೊಗಳುತಿರೆ[52]

ಈ ರೀತಿ ಸುತ್ತಮುತ್ತಲ ಜನ ಸಾಗರದಂತೆ ಸೇರುತ್ತದೆ. ಆ ಜನಸಾಗರಕ್ಕೆ ತನ್ನಲ್ಲಿದ್ದ

ಧನವೆಲ್ಲವನ್ನು ಹಂಚಿಬಿಡುತ್ತಾನೆ. ಧನವೂ ತೀರಿಹೋದಾಗ ತನ್ನ ಭೂಮಿಯನ್ನೇ ಮಾರಿ ಜನರ ಬಯಕೆ ಈಡೇರಿಸುತ್ತಾನೆ. ಹೀಗೆ ಹಂಚುತ್ತಾ ಹೋದಂತೆ ಇಡೀ ಭೂಮಿ ತೀರಿ ಹೋಗಿ ಒಂದು 'ಕೋಲ್ನೆಲ' ಮಾತ್ರ ಉಳಿಯುತ್ತದೆ. ಆದಾಗ್ಯೂ ಭಕ್ತರ ಸಂಖ್ಯೆ ಬರುತ್ತಲೇ ಇದೆ. ಆದರೂ ಗುಡಿಮಾರನಿಗೆ ಬೆಸನವೆಂಬುದು ಮೂಡಿಲ್ಲ. ಎಷ್ಟೆಷ್ಟು ಕೊಡುತ್ತಾನೋ ಅಷ್ಟಷ್ಟೇ ಸಂತಸದಲ್ಲಿ ಮುಳುಗಿದ್ದಾನೆ. ಎಲ್ಲವನ್ನೂ ದಾನಿಸಿದ ಅವನಿಗೆ ಕೊನೆಗೆ ಉಳಿದದ್ದು ತನ್ನ ಸತಿಗೆ ಒಂದು ಕಪ್ಪಡ, ತನಗೆ ಮತ್ತು ತನ್ನ ಮಗನಿಗೆ ಒಂದೊಂದು ಕೋವಳ ಮಾತ್ರ. ಇಷ್ಟೆಲ್ಲ ದಾನ ಮಾಡಿದರೂ ಅವನ ಮನಸ್ಸಿನಲ್ಲಿ ಕೊಟ್ಟೆನೆಂಬ ಅಹಂಕಾರವಾಗಲಿ, ಸಂತೋಷವಾಗಲಿ ಇಲ್ಲ. ಅಲ್ಲಿ ಪ್ರತಿಫಲಾಪೇಕ್ಷೆಯಿಲ್ಲ. ಅವನದು ಮನ:ಪೂರ್ವಕವಾದ ದಾನ, ತ್ಯಾಗ ಹಾಗೂ ಕಪಟದೂರವಾದ ಭಕ್ತಿ.

ಗುಡಿಮಾರನ ತ್ಯಾಗ ಬಾಹ್ಯ ಸಂಪತ್ತುಗಳಿಗೆ ಸೀಮಿತವಾಗಿರಲಿಲ್ಲ. ಬಾಹ್ಯ ಸಂಪತ್ತುಗಳನ್ನೆಲ್ಲ ಹಂಚಿ ಆತ ಕೈ ಕಟ್ಟಿ ಕುಳಿತಿದ್ದರೆ ಬಹುಶ: ಅವನ ತ್ಯಾಗ ಗುಣಕ್ಕೆ ಯಾವ ಮನ್ನಣೆಯೂ ದೊರೆಯುತ್ತಿರಲಿಲ್ಲ. ಅವನ ದಾನಗುಣ ಮಹೋನ್ನತಿಯನ್ನು ಮುಟ್ಟಿದ್ದು ತನ್ನ ಅಂತರಂಗವನ್ನು ದಾನ ಮಾಡಲು ಹೊರಟಿದ್ದರಿಂದ. ಎಲ್ಲ ತೀರುತ್ತ ಬಂದಂತೆ ಆತ —

> ಧನವಿಲ್ಲದಿರ್ದೊಡೇಂ ಧಾನ್ಯಮಿಲ್ಲದೊಡೇನೊ
> ಮನೆಯಿಲ್ಲದೊಡಮೇನೊ ಏನುಮಿಲ್ಲದೊಡೇನೋ
> ತನುವಿರ್ದಪುದು ಇದಜೊಳರ್ಧಮುಂ ಕೊಟ್ಟಪೆಂ
> ಮನಮಿದಪುದು ಮನದೊಳರ್ಧಮುಂ ಕೊಟ್ಟಪೆಂ
> ಎರಡು ಕಣ್ಣಿಪೆ ಎರಡಜೊಳಗೊಂದನಿತ್ತಪೆಂ
> ಹರಣಮಿದೆ ಹರಣದೊಳಗರ್ಧಮುಂ ಕೊಟ್ಟಪೆಂ[53]

ಹೀಗೆ ತನ್ನ ತನುಮನವನ್ನೇ ಧಾರೆ ಎರೆಯಲು ಸಿದ್ಧವಾಗುತ್ತಾನೆ. ಕಪಟಿಗಳಿಗೆ ಇದೆಲ್ಲಿ ಸಲ್ಲಬೇಕು. ತೊಂಬತ್ತೈದು ವರ್ಷಗಳ ಕಾಲ ನಿರಂತರವಾದ ಈ ಸೇವೆ ಯಾರಿಂದ ತಾನೆ ಸಾಧ್ಯ?

ದಾನದಲ್ಲಿ ಅವನ ನಿಷ್ಠೆ ಉನ್ನತವಾಗಿದ್ದಂತೆ ದುಡಿಮೆಯಲ್ಲೂ ಉನ್ನತವಾಗಿತ್ತು. ಶೋಭಾಯಮಾನವಾಗಿತ್ತು. ಯಾವ ವೃತ್ತಿಯನ್ನೇ ಆಗಲಿ ಕಡೆಗಣಿಸಿದವನಲ್ಲ. ಮಾಡುವ ವೃತ್ತಿಯನ್ನೇ ಆತ ನಿಷ್ಠೆಯಿಂದ ಮಾಡುತ್ತಿದ್ದ. ಅದರಲ್ಲೇ ಶಿವನನ್ನು ಕಾಣುತ್ತಿದ್ದ. ಅವನ ವೃತ್ತಿಯೇ ಅವನಿಗೆ ಅಧ್ಯಾತ್ಮದ ಹಾದಿಯಾಗಿತ್ತು. ಇಂಥ ಮನೋಭಾವ ಬಹುಶ: ಅವನಿಗೇ ಕೊನೆಯಿರಬೇಕು. "ಆತ್ಮದ ಕೃಷಿಕಾರನಾದ ಇಳೆಯಾಂಡ ಗುಡಿಮಾರನಿಗೆ ಸಮಚಿತ್ತವೇ ಭೂಮಿ, ಶಿವನ ನೇಹವೇ ನೇಗಿಲು, ಅರಿಷಡ್ವರ್ಗವೇ ಆರೆತ್ತುಗಳಾಗಿವೆ. ಹರಿವ ಮನವೇ ಹಿಡಿವ ಹಗ್ಗ, ಅಹಂಕಾರವೇ ಅಚ್ಚು, ಶಿವನಿಷ್ಠೆಯೇ ಬೀಜಗಳಾಗಿವೆ. ಶಿವಜ್ಞಾನವೇ ಅಂಕುರ, ಪರಮಾನಂದವೇ ಮಳೆ, ಸದ್ಭಕ್ತಿಯೇ ಬೆಳೆಗಳಾಗಿವೆ."[54] ಅವನ ಈ ವ್ಯವಸಾಯ ನಿಷ್ಠೆಯನ್ನು-

ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿಷಟ್ಕಮಂ ತಂದು ಹೂಡುವೆತ್ತಂಮಾಡಿ
-----------------------------
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
ಕಿತ್ತಿ ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ[55]

ಎಂದು ಕವಿ ಬಣ್ಣಿಸುವ ಈ ಬಣ್ಣನೆ ಅತ್ಯಂತ ಅರ್ಥಪೂರ್ಣವಾಗಿದೆ.

"ಹೊರಗಿನ ಹೊಲವನ್ನೇ ಹರಗಿ ಹರನಿಗೆ ಹೊರಗಾಗುವ ಒಕ್ಕಲಿಗರೇ ಎಲ್ಲೆಲ್ಲಿಯೂ ಸಿಕ್ಕುವುದು ಬಹಳ. ತಮ್ಮ ಶರೀರವೆಂಬ ಹೊಲವನ್ನು ಹಸನು ಮಾಡಿ ಹರನೊಳಗಾಗುವ ಮಿಕ್ಕಿದ ಒಕ್ಕಲಿಗರು ಸಿಗುವುದು ವಿರಳ. ಈ ಹೊರಗಣ ಹರಗಣೆಯಿಂದ ಶರೀರೋನ್ನತಿ ಯಾದೀತೇ ಹೊರತು ಆತ್ಮೋನ್ನತಿಯಾಗದು."[56] ಆತ್ಮೋನ್ನತಿಯಾಗಬೇಕಾದರೆ ಗುಡಿಮಾರನ ನಿಷ್ಠೆ ಇರಬೇಕು ಎಂಬೊಂದು ಆಶಯ ಈ ಸನ್ನಿವೇಶದಲ್ಲಿದೆ.

ಇಲ್ಲಿಗೆ `ಮೊದಲನೆಯ ಘಟ್ಟ' ಮುಗಿಯುತ್ತದೆ. ಇದರಿಂದ ಮುಂದಿನದು ಕಥೆಯ ಎರಡನೆಯ ಘಟ್ಟ. ಇಲ್ಲಿ ಕವಿ ಎರಡು ಸನ್ನಿವೇಶಗಳನ್ನು ಸೃಷ್ಟಿಸುವ ಮೂಲಕ ಸರ್ವಸ್ವವನ್ನೂ ಒಪ್ಪಿಸಿಕೊಳ್ಳುವ `ಗುಡಿಮಾರನ ವ್ಯಕ್ತಿತ್ವವನ್ನು ಸೆರೆಹಿಡಿದಿದ್ದಾನೆ.

ಮೊದಲನೆಯದು - ಮನೆಯ ಜಂತಿಗಳನ್ನೇ ಕಿತ್ತು ಬೆಂಕಿ ಹಾಕಿ ಶಿವನ ಚಳಿಯನ್ನು ಹೋಗಲಾಡಿಸುವುದು. ಈ ಸನ್ನಿವೇಶ ಕಲಾತ್ಮಕವಾಗಿ ಮೂಡಿ ಬಂದಿದೆ.

ಶಿವ ವೃದ್ಧವೇಷ ಧರಿಸಿ ಪರೀಕ್ಷೆಗೆ ಹೊರಡುತ್ತಾನೆ. "ಎಂತಹ ಕನಿಕರ ರೂಪು! ವಿಕಾರ ವೇಷ! ತಲೆಯಲ್ಲೆಲ್ಲ ನೆರೆ, ಮೈಯಲ್ಲೆಲ್ಲ ನೆರೆ, ಕೈಯಲ್ಲಿ ಕೋಲು, ಬಾಯಲ್ಲಿ ಜೊಲ್ಲು, ಸುಕ್ಕುಗಟ್ಟಿದ ಶರೀರ, ಬಾಗಿದ ಬೆನ್ನು"[57] ಈ ತರಹದ ವೇಷದಲ್ಲಿ, ಕಾರಿರುಳಲ್ಲಿ ಚೋಳದೇಶ ಹೊಕ್ಕಿದ್ದಾನೆ. ಅಷ್ಟರಲ್ಲಿಯೇ ಕಾರ್ಮೋಡಗಳು ತುಂಬಿಕೊಂಡಿವೆ. ಮಿರ್ರೆಂದು ಮಿಂಚು ಮಿಂಚುತ್ತಿದೆ, ಸಿಡಿಲು ಆರ್ಭಟಿಸುತ್ತಿದೆ, ಗಗನ ಘನೀಭೂತವಾಗುತ್ತಿದೆ, ಮೇಘ ಸಂಕುಲ ಆಕಾಶ ತುಂಬುತ್ತಿವೆ, ಗಾಳಿ ತೀವ್ರವಾಗಿ ಬೀಸುತ್ತಿದೆ, ಆಕಾಶವೇ ಜಲವಾದಂತಿದೆ, ಭೂಮಿ ಜಲದ ಮೇಲೆ ತೇಲಾಡುತ್ತಿರುವಂತಿದೆ. ಧಾರಾಕಾರವಾಗಿ ಬೀಳುವ ಮಳೆಯಿಂದ ಇಡೀ ಜಗತ್ತು ಕತ್ತಲು ಆವರಿಸಿದಂತೆ ಕಾಣುತ್ತಿದೆ. ಇಂಥ ಭಯಾನಕ ರಾತ್ರಿಯಲ್ಲಿ ವೇಷಧಾರಿ ಶತವೃದ್ಧ ಶಿವ ಚೆನ್ನಾಗಿ ನೆನೆದು ನಡುಗುತ್ತಾ ಬಂದು ಗುಡಿಮಾರನ ಮನೆಯ ಬಾಗಿಲಲ್ಲಿ ಹರಹರ ನಮ:ಶಿವಾಯ ಎನ್ನುತ್ತ ನಿಲ್ಲುತ್ತಾನೆ.

ಇತ್ತ ಇಳೆಯಾಂಡ ಗುಡಿಮಾರ ಬಟ್ಟೆ ಬರೆಯಿಲ್ಲದೆ ಚಳಿಹತ್ತಿ ಬಳಲುತ್ತಿದ್ದಾನೆ. ಧಾನ್ಯವಿಲ್ಲದೆ ಮೂರು ದಿನದಿಂದ ಉಪವಾಸ ಬಿದ್ದಿದ್ದಾನೆ. ಹಾಸಲೂ ಇಲ್ಲ ಹೊದೆಯಲೂ ಇಲ್ಲ. ಹಾಗಿರುವಾಗ ಶಿವನ ದನಿಯನ್ನು ಕೇಳುತ್ತಲೇ ಗುಡಿಮಾರ ಹೊರಗೆ ಬರುತ್ತಾನೆ. ಶಿವನ ಸ್ಥಿತಿಯನ್ನು ಕಂಡು ಅವನ ಎದೆ ಕರಗಿ ನೀರಾಗುತ್ತದೆ. ಶಿವ ನಡುಗುತ್ತ ಎಲೆ ಮಗನೆ ಶೀತ ಬಾಧಿಸುತ್ತಿದೆ, ಪ್ರಾಣ

ಹೀರುತ್ತಿದೆ, ಅವಯುವಗಳು ಅದುರುವುದು, ದೇಹವೊಡೆದಿಹುದು, ಮನಸೀಳುವುದು ಹ್ಹಾ ಹ್ಹ ಹ್ಹ ಹಾ.....! ನಿಲಲಾರೆ ನಿಲಲಾರೆ ಎಂದು ಧೊಪ್ಪನೆ ನೆಲಕ್ಕೆ ಬೀಳುತ್ತಾನೆ. ಬಿದ್ದ ಶಿವನನ್ನು ಮೇಲೆ ಎತ್ತಿದ ಗುಡಿಮಾರ ಶಿವನನ್ನು ಒಳಗೆ ಒಯ್ಯುತ್ತಾನೆ. ಏನು ಮಾಡಲೆಂದು ಯೋಚನೆಗೊಳಗಾಗದೆ ತಾನಿರುವ ಮನೆಯ ಮಾಳಿಗೆಯ ಜಂತಿಯನ್ನು ಬಿಚ್ಚಿ ಬೆಂಕಿಹಾಕಿ ಶಿವನಿಗೆ ಬೆಂಕಿ ಕಾಯಿಸುತ್ತಾನೆ.

ಎರಡನೆಯ ಸನ್ನಿವೇಶ - ಬಿತ್ತಿದ 'ಮೊಳೆವಿತ್ತ'ನ್ನೇ ತಂದು ಶಿವನಿಗೆ ಊಣ ಬಡಿಸಿದ್ದು. ಈ ಸನ್ನಿವೇಶವೂ ಅಷ್ಟೇ ಕಲಾತ್ಮಕವಾಗಿ ಮೂಡಿಬಂದಿದೆ.

ಬೆಂಕಿ ಕಾಯಿಸುತ್ತಿದ್ದಂತೆ ಶಿವನ ಚಳಿ ಕಡಿಮೆಯಾಗುತ್ತ ಬರುತ್ತದೆ. ಚಳಿ ಕಡಿಮೆಯಾದಂತೆ ಆದಂತೆ ಶಿವ ಹಸಿದೆ ಹಸಿದೆ ಎಂದು ಚಡಪಡಿಸುತ್ತಾನೆ. ತಮಗೇ ತುತ್ತು ಕೂಳಿಲ್ಲದೆ ಉಪವಾಸವಿರುವಾಗ ಗುಡಿಮಾರ ಶಿವನಿಗೆಲ್ಲಿಂದ ಆಹಾರ ತಂದಾನು! ಚಿಂತಾಕ್ರಾಂತನಾಗುತ್ತಾನೆ.

ಇಲ್ಲಿ ಗುಡಿಮಾರನ ಹೆಂಡತಿಯ ಪಾತ್ರ ಮಹತ್ವದ್ದು. ಪತಿಯೊಡನೆ ಸಹಕರಿಸುವ ರೀತಿ, ಸತಿಪತಿಗಳೊಂದಾದ ಭಕ್ತಿಗೆ ತಕ್ಕುದಾದದ್ದು. ಗುಡಿಮಾರ ದಿಕ್ಕೇ ತೋಚದ ಸ್ಥಿತಿಯಲ್ಲಿ ಕುಳಿತಿರುವಾಗ 'ಮೊಳೆವಿತ್ತ'ನ್ನು ತರುವಂತೆ ಹೇಳುತ್ತಾಳೆ. ಆಗ ಎದುರಾದ ಸನ್ನಿವೇಶ ಭೀಕರವಾದದ್ದು. ಅದನ್ನು -

> ಮತ್ತೆ ಚಳಿ ಪಿರಿದಾಗೆ ಮತ್ತೆ ಚಳಿ ಘನವಾಗೆ
> ಮತ್ತೆ ಕತ್ತಲೆ ಸುತ್ತಿ ಮುತ್ತಿಯುನ್ನತವಾಗೆ
> ಬರುತಿರ್ದನಪ್ರತಿಮ ಶಿವಭಕ್ತನುರವಣಿಸಿ
> ಪುರದ ಪೊಲನಂ ದಾಂಟಿ ಕತ್ತಲೆಯನುತ್ತರಿಸಿ
> ಹಳ್ಳಂಗಳಂ ತೊಡೆಗಳಂ ಕೆಡೆಗಳಂ ದಾಂಟಿ[58]

ಎಂಬೀ ಕವಿವಾಣಿಯಿಂದಲೇ ತಿಳಿಯಬೇಕು. ಆ ಕಾರಿರುಳಲ್ಲಿಯೇ ಗುಡಿಮಾರ ಮೊಳೆವಿತ್ತನ್ನು ಆಯುತ್ತಾನೆ. ಆಯ್ದು ಹರನು ಹಸಿದಿರಬಹುದೆಂದು 'ಉರವಣಿಸು'ತ್ತಾ ಬಂದು ಮಡದಿಗೆ ನೀಡುತ್ತಾನೆ.

ಇದರೊಳಗೆಯೇ ಬರುವ ಇನ್ನೂ ಒಂದು ಸನ್ನಿವೇಶ ಗುಡಿಮಾರನ ವಿಶಾಲವಾದ ಮನಸ್ಸು ಹಾಗೂ ಶಿವಭಕ್ತಿ ಪ್ರೇಮವನ್ನು ಪ್ರಕಟಿಸುತ್ತದೆ.

ಶಿವನ ಅಡುಗೆ ಸಿದ್ಧವಾಗಿದೆ, ಊಟಮಾಡಲು ಎಲೆಗಾಗಿ ಮಗನನ್ನು ಕಳುಹಿಸಿದ್ದಾನೆ. ಮಗ ಬರುವುದು ತೀರಾ ತಡವಾಗಲು ತಾನೇ ಹುಡುಕಿ ಬಂದಿದ್ದಾನೆ. ಅಲ್ಲಿ ಮಗ ಹಾವು ಕಚ್ಚಿ ಸತ್ತಿರುವುದನ್ನು ಕಾಣುತ್ತಾನೆ. ಈ ಸಂದರ್ಭದಲ್ಲಿ ಗುಡಿಮಾರ ಮರುಗದೆ ಮುಂದಿನ ಕಾರ್ಯದಲ್ಲಿ ತತ್ಪರನಾಗುತ್ತಾನೆ. ಮಗನು ಮಡಿದ ವಿಷಯ ಶಿವನಿಗೆ ತಿಳಿದರೆ ಆತ ಊಟ ಮಾಡು ವುದಿಲ್ಲವೆಂದು ತಿಳಿದು, ಅವನಿಗೆ ತಿಳಿಸದೆ ಊಟವಿಕ್ಕಿ ಸಂತೋಷಪಡಿಸಲು ಸಿದ್ಧನಾಗುತ್ತಾನೆ.

ಮಗನ ಸಾವನ್ನು ಬದಿಗಿಟ್ಟು ಶಿವನ ಸೇವೆಯಲ್ಲಿ ನಿರತನಾಗುವ ಭಕ್ತಾಗ್ರಣಿಯ ವ್ಯಕ್ತಿತ್ವ

ವನ್ನು ಬಣ್ಣಿಸಲು ಇದಕ್ಕಿಂತ ಇನ್ನೊಂದು ಸನ್ನಿವೇಶ ಬೇಕಿಲ್ಲ.

"ಹೊಲವನ್ನು ಹಸನುಗೊಳಿಸಿ ಬೆಳೆಯನ್ನು ಪಡೆಯುವ ಕ್ರಮದಲ್ಲಿ ದೇಹ, ಮನಗಳ ಶುದ್ಧೀಕರಣವನ್ನು ಸ್ವಾರಸ್ಯಕರವಾದ ರೀತಿಯಲ್ಲಿ ಹೊಂದಿಸಿ, ಪರಮಾನಂದದ ಬೆಳೆಯಲ್ಲಿ ಕೊನೆಗೊಳ್ಳುವ ಇಲ್ಲಿಯ ರೂಪಕವು ಸ್ವಾರಸ್ಯವೂ ಅರ್ಥಪೂರ್ಣವೂ ಆಗಿದೆ. ಇಳೆಯಾಂಡ ಗುಡಿಮಾರನ ತ್ಯಾಗ, ಕಷ್ಟ ಸಹಿಷ್ಣುತೆಗಳ ಚಿತ್ರ ಹೃದಯಸ್ಪರ್ಶಿಯಾಗಿದೆ. ತನಗೆಂದು ತನ್ನ ಕುಟುಂಬದವರಿಗೆಂದು ಎಲ್ಲವನ್ನು ಸಂಗ್ರಹಿಸುವ, ಮುಚ್ಚಿಟ್ಟುಕೊಳ್ಳುವ ಸ್ವಾರ್ಥದ ಸಾಮಾನ್ಯವಾದ ಮಾನವನ ಚಿತ್ರದೊಂದಿಗೆ ಇದನ್ನು ಹೋಲಿಸಿ ನೋಡಬಹುದು. ಭಕ್ತಿಯ ಉತ್ಕಟ ಭಾವದಲ್ಲಿ ತನ್ನ ಸ್ವಂತ ಅನುಕೂಲಗಳನ್ನೆಲ್ಲ ಬಲಿದಾನ ಮಾಡುವಾಗ ತೋರಿದ ಪ್ರಸನ್ನತಾ ಭಾವವು ಇಲ್ಲಿಯ ಮುಖ್ಯ ದೃಷ್ಟಿಯಾಗಿದೆ."[59] "ಬಾಳಿನಲ್ಲಿ ದ್ರವ್ಯ ಸಂಗ್ರಹವೂ ಕಿರಿದಾಗುವ ಕ್ರಮದಲ್ಲಿ ಮನದ ಹಿರಿಮೆ ಹೆಚ್ಚುವುದೆಂಬ ಮಾತನ್ನು ಇಲ್ಲಿ ನಿರೂಪಿಸಲಾಗಿದೆ. ತನ್ನ ಹಾಗೂ ತನ್ನ ಕುಟುಂಬದವರ ಸ್ಥಿತಿ ಅತ್ಯಂತ ನಿಕೃಷ್ಟವಾದಾಗಲೂ, ಪ್ರಸನ್ನತಾ ಭಾವದಿಂದ ಇನ್ನೂ ಹೆಚ್ಚಿನ ತ್ಯಾಗಕ್ಕೆ ಸಿದ್ಧನಾದ ಇಳೆಯಾಂಡ ಗುಡಿಮಾರ, ದೈವೀಪ್ರಸನ್ನತೆಯನ್ನು ಪಡೆದನೆಂಬ ದೃಷ್ಟಿಯನ್ನು ಹರಿಹರನು ಇಲ್ಲಿ ಸ್ಪಷ್ಟಗೊಳಿಸಿದ್ದಾನೆ. ಬಿತ್ತಿದ ಬೀಜವನ್ನೇ ಎತ್ತಿ ಶರಣರ ಆಹಾರಕ್ಕೆಂದು ಒದಗಿಸುವಲ್ಲಿ ಮನದಾಸೆಯನ್ನು ಕಿತ್ತು ಭವದ ಬಿತ್ತನ್ನೇ ಹುರಿದು ಹಾಕುವ ಹಾದಿಯನ್ನು ತೋರಿಸಲಾಗಿದೆ."[60]

## 5.13 ಕಣ್ಣಪ್ಪನ ರಗಳೆ

ಈ ಕಥೆಯಲ್ಲಿ ಕವಿ ಪೂಜಾರಿ ಹಾಗೂ ಕಣ್ಣಪ್ಪನ ಭಕ್ತಿಯ ಎರಡು ವಿಭಿನ್ನ ಸ್ವರೂಪಗಳನ್ನು ನಿರೂಪಿಸುತ್ತಾನೆ. ದಿನವೂ ಬೇಟೆಯಾಡಿ ಹಸನಾದ ಮಾಂಸ ತಂದು ಶಿವನಿಗೆ ಅರ್ಪಿಸುವುದು ಕಣ್ಣಪ್ಪನ ಭಕ್ತಿ. ವಿಧಿಯುಕ್ತವಾಗಿ ಮಂತ್ರ ಹೇಳಿ ಬಿಲ್ವ ಪತ್ರೆ, ಧೂಪ ಮುಂತಾದವುಗಳಿಂದ ಶಿವಲಿಂಗವನ್ನು ಪೂಜಿಸುವುದು ಪೂಜಾರಿಯ ಭಕ್ತಿ. ಈ ಎರಡು ತೆರನಾದ ಭಕ್ತಿಯಲ್ಲೂ ಅಪರಿಮಿತವಾದ ನಿಷ್ಠೆ, ಶ್ರದ್ಧೆ ಇದ್ದು ಇದರಲ್ಲಿ ಯಾವ ಭಕ್ತಿಯ ಸ್ವರೂಪ ಶಿವ ಮೆಚ್ಚುವಂತಹದ್ದು? ಯಾವುದು ಶ್ರೇಷ್ಠ? ಎಂಬುದನ್ನು ತಿಳಿಯಪಡಿಸುವುದು ಈ ಕಥೆಯ ಉಸಿರಾಗಿದೆ.

ಕಣ್ಣಪ್ಪನ ಭಕ್ತಿ ಕಥೆಯಲ್ಲಿ ವಿಜೃಂಭಿಸುತ್ತದೆ. ಕಣ್ಣಪ್ಪನ ವೃತ್ತಿ ಬೇಟೆಯಾಡುವುದು. ಒಮ್ಮೆ ಮಾಯಾಮೃಗವೊಂದು ಕಾಣಲು ಅದನ್ನು ಅಟ್ಟಿಸಿಕೊಂಡು ಹೋಗುತ್ತಾನೆ. ಕಾಳ ಹಸ್ತಿಯ ಶಿವದೇವಾಲಯ ಬರುತ್ತಿದ್ದಂತೆಯೇ ಮಾಯಾಮೃಗ ಮಾಯವಾಗುತ್ತದೆ. ದೇವಾಲಯವನ್ನು ಕಾಣುತ್ತಿದ್ದಂತೆಯೇ ಕಣ್ಣಪ್ಪನಿಗೆ ಶಿವಭಕ್ತಿಯುಂಟಾಗುತ್ತದೆ. ಕಣ್ಣಪ್ಪ ಮುಗ್ಧನಾದ ಭಕ್ತ. ಆತನ ಮುಗ್ಧ ಭಕ್ತಿ ಇಡೀ ಕಥೆಯನ್ನು ಆವರಿಸಿಕೊಂಡಿದೆ. ಕವಿ "ಆತನ ದೃಢ ನಿಶ್ಚಯವಾದ ಭಕ್ತಿಯನ್ನು, ಅದರ ಶ್ರದ್ಧೆಯ ತೀವ್ರತೆಯನ್ನೂ ಸೊಗಸಾಗಿ ವರ್ಣಿಸಿದ್ದಾನೆ. ಕಣ್ಣಪ್ಪನಿಗೆ ತನ್ನ ಬೇಟೆಗಿಂತಲೂ, ತನಗಿಂತಲೂ ಶಿವನ ಯೋಗಕ್ಷೇಮದ ಪ್ರೀತಿಯೇ

ಹೆಚ್ಚಾಗುತ್ತದೆ. ಮೃಗವನ್ನು ಕೊಂದು ಅದರ ಮಾಂಸವನ್ನು ಎಚ್ಚರಿಕೆಯಿಂದ ಬೇಯಿಸಿ ಶಿವನಿಗೆ ಉಣ್ಣೆಂದು ಬಿನ್ನವಿಸುತ್ತಾನೆ. ಶಿವಲಿಂಗವು ಆತನಿಗೆ ಬರಿಯ ಕಲ್ಲಲ್ಲ!. ಅಸಹಾಯಕ ಮಗುವಿನ ಹಾಗೆ ಉಪಚಾರ ಯೋಗ್ಯವಾಗುತ್ತದೆ. ನಿನ್ನನ್ನು ಸಲಹುವೆನೆಂದು ಹೇಳಿದ್ದಲ್ಲದೆ, ಶಿಶುವನ್ನು ಮಲಗಿಸಿ ನಿದ್ರೆಮಾಡಿಸುವ ಹಾಗೆ ಮಾಡುತ್ತಾನೆ. ಮೃಗ ಪಕ್ಷಿಗಳ ಗದ್ದಲವನ್ನು ದೂರಮಾಡಲು ಅವನ್ನು ದೂರ ಹೊಡೆದಟ್ಟುತ್ತಾನೆ. ರಾತ್ರಿಯಲ್ಲೆಲ್ಲ ಜಾಗರಣದಿಂದ ತಾನು ಅವನನ್ನು ಕಾದರೆ ಮಾತ್ರ ಅಡವಿಯ ಪ್ರಾಣಿಗಳಿಂದ ಶಿವನು ಉಳಿಯುತ್ತಾನೆ ಎಂದು ನಂಬಿದ್ದಾನೆ. ಅದಕ್ಕೆ ತಕ್ಕ ಎಚ್ಚರಿಕೆಯಿಂದ ಇಡೀ ರಾತ್ರಿ ಜಾಗರಣ ಮಾಡುತ್ತಾನೆ."[61]

"ಬೆಳಗಿನಲ್ಲಿ ಎದ್ದು ಹೊಸ ಮಾಂಸವನ್ನು ತರಲು ಹೊರಡುತ್ತಾನೆ. ಹೋಗುವಾಗ ನಾಲ್ಕು ಹೆಜ್ಜೆ ಮುಂದೆ ಹೋಗಿ ಹೋಗಲಾರದೆ ಹಿಂದೆ ಬರುತ್ತಾನೆ. ಕೆಲ ಹೊತ್ತು ಶಿವನನ್ನು ನೋಡುತ್ತಾ, ಚಿಂತೆಯಿಂದಲೇ ಮೃಗಗಳನ್ನು ಅರಸಲು ಹೋಗುವನು."[62]

ಮೃಗಗಳನ್ನು ಬೇಟೆಯಾಡುವಾಗಲೂ ಆತ ಎಚ್ಚರಿಕೆ ವಹಿಸುತ್ತಾನೆ. ಹೊಡೆದ ಮೃಗ ನೆಲಕ್ಕೆ ಬೀಳುವಷ್ಟರಲ್ಲಿಯೇ ಅದನ್ನು ಹಿಡಿದುಕೊಳ್ಳುತ್ತಾನೆ. 'ಕಲ್ಬಾಳೆಯ' ಎಲೆಯ ಮೇಲೆ ಮಾಂಸವನ್ನು ಹಾಕಿ ಬೇಯಿಸಿ ರುಚಿ ನೋಡುತ್ತಾನೆ. ಸರಿಯಾಗಿ ಬೇಯದ ಮಾಂಸವನ್ನು ಬಿಟ್ಟು ಬೆಂದ ಮಾಂಸವನ್ನು ಮಾತ್ರವೇ ಆರಿಸಿ ತರುತ್ತಾನೆ. ಕಡು ನೇಹದಿಂದ ಪೂಜೆ ಮಾಡಿ ಶಿವನಿಗೆ ಉಣಬಡಿಸುತ್ತಾನೆ. ಊಟಕ್ಕೆ ಇಟ್ಟು -

ಎನ್ನವನೆ ಎನ್ನವನೆ ಹಸಿದಯ್ಯ ಹಸಿದಯ್ಯ
ಚೆನ್ನವನೆ ಚೆನ್ನವನೆ ಹೊತ್ತು ಹೋದುದಯ್ಯ[63]

ಎಂದು ಭಕ್ತನು ಹಾಡುತ್ತಿರಲು, ಕಣ್ಣಪ್ಪ ಅರ್ಪಿಸಿದ ಆಹಾರವನ್ನು ಶಿವ ಸೇವಿಸುತ್ತಾನೆ. ಶಿವನು ತನ್ನ 'ನೇಹದೋಗರ'ವನ್ನು ಉಂಡನೆಂದು ಕಣ್ಣಪ್ಪ ಸಂತಸಪಡುತ್ತಾನೆ. ಆ ಸಂತಸದಲ್ಲಿ ಬಾಗಿ ಚಪ್ಪಾಳೆ ಇಟ್ಟು ಕೂಗುತ್ತ ಒಂದೇ ಕಾಲಿನಲ್ಲಿ ನಿಂತು ಬಿಲಗನ್ನು ಕೈಯಲ್ಲಿ ಹಿಡಿದು ಕುಣಿಯುತ್ತಾನೆ. ಹುಲ್ಲೆ ಕಾಲೂರುವಂತೆ ಎರಡೂ ಕೈಗಳನ್ನು ಮುಂದಕ್ಕಿಟ್ಟು ನಂತರ ನೆಗೆದು ಹಾರುತ್ತಾನೆ. ಬಾಯಿಂದ ವಾದ್ಯ ಬಾರಿಸುತ್ತಾನೆ. ಸಿಳ್ಳು ಹಾಕುತ್ತಾನೆ.

ದಿನದಿನಕ್ಕೂ ಶಿವನ ಸ್ನೇಹ ಕಣ್ಣಪ್ಪನಿಗೆ ಹೆಚ್ಚಾಗುತ್ತಲೇ ಇದೆ. ಒಮ್ಮೆ " ಶಿವಲಿಂಗದ ಕಣ್ಣೊಡೆದು ರಕ್ತ ಸುರಿಯುವುದನ್ನು ನೋಡಿದ ಕಣ್ಣಪ್ಪನು ಬಾಡುವ ಹೆಣದಂತಾಗಿ ಬಿಲ್ಲನ್ನು ಬಿಸುಟು ನೈವೇದ್ಯದ ಮಾಂಸವನ್ನೂ ಚೆಲ್ಲುತ್ತಾನೆ. ಅವನ ದೃಷ್ಟಿಯೆಲ್ಲ ಶಿವನಿಗೆ ಬಂದ ಆಪತ್ತಿನ ಕಡೆ ಕೇಂದ್ರೀಕೃತವಾಗಿತ್ತು. ಶಿವನ ಕಷ್ಟವನ್ನು ಹೇಗೆ ಪರಿಹರಿಸಬೇಕೆಂಬ ಚಿಂತೆ, ಅವನಿಗೆಷ್ಟು ವೇದನೆಯೋ ಎಂಬ ಚಿಂತೆ, ತನ್ನೊಡೆಯನನ್ನು ಅಗಲಿ ಕೆಟ್ಟೆನೆಂಬ ಚಡಪಡಿಕೆ"[64] ಅವನಲ್ಲಿ ನೆಲೆಯೂರಿತ್ತು. ಆ ಚಡಪಡಿಕೆಯಲ್ಲಿ ಹಿಂದು ಮುಂದು ನೋಡದೆ ತನ್ನೊಂದು ಕಣ್ಣನ್ನು ಕಿತ್ತು ಶಿವನಿಗೆ ನೀಡುತ್ತಾನೆ. ಇನ್ನೊಂದು ಕಣ್ಣಿನಲ್ಲೂ ರಕ್ತ ಸುರಿಯುತ್ತಿರಲು, ತನ್ನ ಇನ್ನೊಂದು

ಕಣ್ಣನ್ನು ಕಿತ್ತು ಶಿವನಿಗೆ ನೀಡುತ್ತಾನೆ. "ಅವನಿಗೆ ತಾನು ಕುರುಡನಾದೆನೆಂಬ ಕಳವಳವಿಲ್ಲ, ತನ್ನ ಸ್ವಾರ್ಥದ ಮತಿಯಿಲ್ಲ ತನಗಾಗಿ ಏನೂ ಆಸೆಯಿಲ್ಲ. ಶಿವನ ಮೇಲಿನ ನಂಬಿಕೆಯೇ ಅವನ ಆಸೆ. ಶಿವಭಕ್ತಿಯೇ ಶಕ್ತಿ, ಶಿವಸುಖವೇ ಅವನ ಮುಕ್ತಿ."[65]

ಕಣ್ಣಪ್ಪನ ಈ ಭಕ್ತಿಯಲ್ಲಿ ಶಿವನಿಗಾಗಿ ಸರ್ವಸ್ವವನ್ನೂ ಅರ್ಪಿಸುವ ಅರ್ಪಣಾ ಗುಣ ಎದ್ದುತೋರುತ್ತದೆ. ಇದು ಕಣ್ಣಪ್ಪನ ಶಿವಭಕ್ತಿಯ ಸ್ವರೂಪವಾದರೆ, ಶಿವ ಬ್ರಾಹ್ಮಣನ ಶಿವಭಕ್ತಿಯ ಸ್ವರೂಪ ಇನ್ನೊಂದು ರೀತಿಯದು. ಅವನೊಬ್ಬ ಸಂಪ್ರದಾಯ ನಿಷ್ಠ, ವಿಭೂತಿ ರುದ್ರಾಕ್ಷಿಗಳಿಲ್ಲದೆ ಆತ ಪೂಜೆ ಮಾಡುವುದಿಲ್ಲ. ರುದ್ರಮಂತ್ರ, ಬಿಲ್ವ ಪತ್ರೆ ಮುಂತಾದವುಗಳಿಂದ ಪೂಜೆ ಮಾಡುತ್ತಾನೆ. ದೇವಾಲಯದಲ್ಲಿ ಚೆಲ್ಲಿರುವ ಮಾಂಸವನ್ನು ಕಂಡು ಅಸಹ್ಯಪಡುತ್ತಾನೆ. ಕಟುಕನು ಶುದ್ಧ ಮನದ ಶಿವನ ಮನೆಯನ್ನು ಮಲಿನ ಮಾಡಿದನೆಂದು ಕಸಗುಡಿಸಿ ಸ್ವಚ್ಛಮಾಡುತ್ತಾನೆ. ಹೇಸಿಗೆಯ ಕಿರಾತನನ್ನು ದೇವಾಲಯದೊಳಗೆ ಸೇರಿಸಬೇಡ ಎಂದು ಶಿವನನ್ನು ಕೇಳುತ್ತಾನೆ.

ಎರಡನೆಯ ಸಲ ದೇಗುಲದಲ್ಲಿ ಮಾಂಸದ ರಾಶಿ ಬಿದ್ದಿರುವುದನ್ನು ನೋಡಿದಾಗಲಂತು, ಬ್ರಾಹ್ಮಣನಿಗೆ ಅತಿವೇದನೆಯಾಗುತ್ತದೆ; ರೋಷ ಉಕ್ಕುತ್ತದೆ. "ಅವನಿಗೆ ಶಿವನ ಮೇಲೆಯೇ ಸಿಟ್ಟು ಬರುತ್ತದೆ. ಇಂಥ ಅನಾಚಾರವೇ! ಪ್ರಾಣಿಗಳನ್ನು ಕೊಲ್ಲುವುದು ಧರ್ಮವೇ? ಎಂದು ಶಿವನಿಗೇ ಸವಾಲು ಹಾಕುತ್ತಾನೆ. ಆದರೆ ಹಾಗೆ ಹೇಳಿದ ಅಹಿಂಸಾ ಪ್ರಿಯನು, ಕಿರಾತನನ್ನು ಕೊಲ್ಲುತ್ತೇನೆ ಎಂದು ತನ್ನೊಳಗಿನ ಹಿಂಸೆಯ ಭಾವನೆಯನ್ನು ಪ್ರಕಟಿಸುತ್ತಾನೆ.! ತತ್ವ ಒಂದಾದರೆ ಮಾಡುವ ಕ್ರಿಯೆ ಇನ್ನೊಂದು. ಅವನಿಗೆ ನೇಮದಲ್ಲಿ ನಿಷ್ಠೆಯೇ ಹೊರತು ನೀತಿಯಲ್ಲಿ ನಿಷ್ಠೆ ಇಲ್ಲ. ಬಾಹ್ಯ ಭಕ್ತಿಯ ಆಚರಣೆಯಲ್ಲಿ ಪ್ರೇಮವೇ ಹೊರತು, ಶಿವನಲ್ಲಿ ನಿಜವಾದ ಪ್ರೇಮವಿಲ್ಲ! ಎಲ್ಲಾ ತೋರಿಕೆಗಾಗಿ ಮಾಡುವ ಡಂಭಾಚಾರ."[66]

ಶಿವ ಬ್ರಾಹ್ಮಣನೆಲ್ಲಿ, ಕಣ್ಣಪ್ಪನೆಲ್ಲಿ "ಶಿವ ಬ್ರಾಹ್ಮಣ ಎಂಬ ಪದವೇ ಒಂದು ಅಭಾಸ. ಶಿವನ ಕಣ್ಣಿನಲ್ಲಿ ರಕ್ತ ಸೋರಿದರೆ ಅವನಿಗೆ ಬರುವುದು ಶಿವನ ಮೇಲಿನ ಅನುಕಂಪವಲ್ಲ. ಬದಲಾಗಿ, ಮೊದಲು ತನ್ನ ಸಲುವಾಗಿಯೇ ಭಯಪಟ್ಟನು. ಅನಂತರ, ಅರಸನಿಗೆ ಕೇಡಾಯಿತೋ, ದೇಶಕ್ಕೆ ಕೆಡಕಾಗುವುದೋ, ಇದು ಯಾವ ಉತ್ಪಾತದ ಸೂಚನೆಯೋ ಎಂಬ ಹೆದರಿಕೆ! ಈ ಕೌತುಕದ ಸುದ್ದಿಯನ್ನು ಊರಿನಲ್ಲಿ ಹಂಚಿ ತೆಪ್ಪಗೆ ಉಳಿದವನು. ಶಿವ ಅವನಿಗೆ ನಿಮಿತ್ತ ಮಾತ್ರ."[67]

ಯಾವ ಸನ್ನಿವೇಶದಲ್ಲೂ ಶಿವನ ಮೇಲೆ ಕಣ್ಣಪ್ಪನಿಗಿರುವ ನಿಷ್ಠೆ, ಭಕ್ತಿ, ಪ್ರೇಮ, ಕಳವಳ, ಕೊರಗುಗಳು ಶಿವಬ್ರಾಹ್ಮಣನಿಗೆ ಇರುವುದು ಕಂಡುಬರುವುದಿಲ್ಲ. ಕಣ್ಣಪ್ಪನ ಭಕ್ತಿಯೇ ಶಿವ ಬ್ರಾಹ್ಮಣನ ಭಕ್ತಿಗಿಂತ ಉನ್ನತವಾದದ್ದು. ಇದು ಶಿವಲಿಂಗದ ಕಣ್ಣಲ್ಲಿ ರಕ್ತ ಸುರಿಯಲಾರಂಭಿಸಿದ ಸನ್ನಿವೇಶದಲ್ಲಿ ಇಬ್ಬರೂ ನಡೆದುಕೊಂಡ ರೀತಿಯಿಂದಲೇ ನಿರ್ಧಾರವಾಗುತ್ತದೆ. ಹರಿಹರನಿಗೂ ಕಣ್ಣಪ್ಪನ ಭಕ್ತಿಯಲ್ಲಿ ವಿಶೇಷ ನಂಬಿಕೆಯಿದೆ. ಶಿವನ ಮೂಲಕವೇ ಅದನ್ನು ಪ್ರಕಟಿಸುತ್ತಾನೆ. ಪೂಜಾರಿಯ ಪೂಜೆಗೆ ಮನಸೋತ ಪಾರ್ವತಿ ಒಮ್ಮೆ—

ಜಪ ತಪ ಸಮಾಧಿ ಪ್ರದಕ್ಷಿಣಂಗಳ ಕೂಡಿ
ಪೂಜಿಸುವ ಪಾರ್ವಂಗೆ ಬಾಯುಂಇಡುಕದಿರ್ದಪಿರಿ
ಓಜೆಗೆಟ್ಟಾಲುಬ್ಬಕಂಗೆ ಕರುಣಿಸಿದಪಿರಿ[68]

ಎಂದು ಶಿವನನ್ನು ಕೇಳುತ್ತಾಳೆ. ಆಗ ಶಿವನು ಪಾರ್ವತಿಗೆ -

ಸತ್ಯವಿಲ್ಲದ ಪೂಜೆ ಸಸಿನವಪ್ಪುದೆ ಗೌರಿ
ನಿತ್ಯವಿಲ್ಲದ ಹಾಡು ಸೊಗಸಪ್ಪುದೇ ಗೌರಿ
ಮನವಿಲ್ಲದವ ಮುಟ್ಟೆ ಬಡಿವಡೆದತೆರನೆನಗೆ
ಮನವುಳ್ಳಂ ಬಡಿಯೆ ಪೂಜಿಸಿದತೆರನೆನಗೆ[69]

ಎಂದು ನುಡಿಯುತ್ತಾನೆ. ಈ ಮಾತುಗಳು ಶಿವನು ಕಣ್ಣಪ್ಪನ ಭಕ್ತಿಯ ಸೆಳೆತಕ್ಕೆ ಹೇಗೆ ಒಳಗಾಗಿದ್ದಾನೆ ಎಂಬುದಕ್ಕೆ ಸಾಕ್ಷಿಯಾಗಿವೆ.

## 5.14 ಕಾರಿಕಾಲಮ್ಮೆಯ ರಗಳೆ

ಶಿವ ಮೆಚ್ಚುವ ಗುಪ್ತಭಕ್ತಿ, ಬಾಹ್ಯ ಸೌಂದರ್ಯದ ಅಶಾಶ್ವತತೆ, ಶಿವನ ಸಾಕ್ಷಾತ್ಕಾರಕ್ಕಾಗಿ ಕಷ್ಟದ ಕುಲುಮೆಯಲ್ಲಿ ಬದುಕುವ ಅನಿವಾರ್ಯತೆ - ಇವುಗಳ ಹಿನ್ನೆಲೆಯಲ್ಲಿ ಹರಿಹರ ಕಾರಿಕಾಲಮ್ಮೆಯ ಕಥೆಯನ್ನು ರಚಿಸಿದ್ದಾನೆ.

ಕಾರಿಕಾಲಮ್ಮೆ ಚೋಳನಾಡಿನ ಕಾರಿಕಾಲ್ ಎಂಬ ಶಿವಪುರದವಳು. ಮಾಣಿಕಶೆಟ್ಟಿ ಎಂಬುವನೊಂದಿಗೆ ಅವಳ ಮದುವೆಯಾಗಿತ್ತು. ಮದುವೆಯಾಗಿದ್ದರೂ ಆಕೆ ಶಿವಭಕ್ತಿಯಿಂದ ದೂರ ಸರಿದಿರಲಿಲ್ಲ. ಯಾರಿಗೂ ತೋರಗೊಡದ ಹಾಗೆ ಭಕ್ತಿಯಲ್ಲಿ ನಿರತಳಾಗಿದ್ದಳು. ಅವಳ ಭಕ್ತಿ ಅವಳ ಅತ್ತೆ ಮಾವ ಗಂಡನಿಗೂ ತಿಳಿದಿರಲಿಲ್ಲ. ಅಡುಗೆ ಮನೆಯೇ ಅವಳಿಗೆ ಅರ್ಚನೆಯ ಸ್ಥಳವಾಗಿತ್ತು. ಕರತಳವು ಸಿಂಹಾಸನವಾಗಿತ್ತು, ನಿರ್ಮಲ ಮನವು ಮಡಿನೀರಾಗಿತ್ತು, ಕೈಯಲ್ಲಿನ ಕೀರೆಯು ಪರಿಮಳವಾಗಿತ್ತು, 'ಸುಯ್ಯಕಂಪ'ವು ಗುಗ್ಗುಳ ಧೂಪವಾಗಿತ್ತು, ನೋಟವು ಬೆಳಗಿನ ಆರತಿಯಾಗಿತ್ತು. "ಶಿವನೇ ತಂದೆ ತಾಯಿ ಎಂದು ಭಾವಿಸಿದ್ದಳು. ತನ್ನ ಆಸರಿಕೆ ಬೇಸರಿಕೆಗಳನ್ನು ಶಂಕರನಿಗೆ ನಿವೇದಿಸುತ್ತಿದ್ದಳು. 'ಸಂಸಾರದಿರವಿಂಗೆ ಪೇಸಿ' ಮನದಲ್ಲಿಯೇ ಶಿವನನ್ನು ಅರ್ಚಿಸುತ್ತಿದ್ದಳು. ಮುಟ್ಟುವುದು, ಮೂಸುವುದು, ನೋಡುವುದು, ಕೇಳುವುದು, ರುಚಿಸುವುದು ಎಲ್ಲವೂ ಶಿವಭಾವದಿಂದಲೇ ನಡೆಯುತ್ತಿದ್ದವು."[70]

ಅವಳ ಈ ಗುಪ್ತ ಭಕ್ತಿಯನ್ನು ಕವಿ ಅದ್ಭುತ ಸನ್ನಿವೇಶವೊಂದನ್ನು ಸೃಷ್ಟಿಸುವ ಮೂಲಕ ಪ್ರಕಟಿಸುತ್ತಾನೆ. ಒಮ್ಮೆ ಗಂಡ ಮಾಣಿಕಶೆಟ್ಟಿ ಎರಡು ಉತ್ಕೃಷ್ಟ ಮಾವಿನ ಹಣ್ಣುಗಳನ್ನು ನೀಡಿ, ಬಚ್ಚಿಡುವಂತೆ ಹೇಳಿ ವ್ಯಾಪಾರಕ್ಕೆ ಹೋಗಿರುತ್ತಾನೆ. ಇತ್ತ ತಪಸ್ವಿಯ ವೇಷದಲ್ಲಿ ಬಂದ ಶಿವನು ಆ ಮಾವಿನ ಹಣ್ಣನ್ನು ಬಯಸಲು, ತನ್ನ ಪಾಲಿನ ಒಂದು ಹಣ್ಣನ್ನು ಶಿವನಿಗೆ ನೀಡುತ್ತಾಳೆ.

ತಪಸ್ವಿ ಹಣ್ಣು ತಿನ್ನುತ್ತಿದ್ದಂತೆಯೇ ಮಾಣಿಕಶೆಟ್ಟಿ ಬಂದುಬಿಡುತ್ತಾನೆ. ತಪಸ್ವಿ ಸಂದೇಹಕ್ಕೆಡೆಯಾಗುವ ರೀತಿಯಲ್ಲಿ ಅಲ್ಲಿಂದ ಹೊರಡುತ್ತಾನೆ. ಹಸಿವಿನಿಂದ ಬಂದಿದ್ದ ಶೆಟ್ಟಿ ಒಂದು ಹಣ್ಣನ್ನು ತಿಂದು ಮತ್ತೊಂದು ಹಣ್ಣನ್ನು ಕೇಳುತ್ತಾನೆ. "ಆಗ ಅವಳ ಪ್ರಾಣವೇ ಹೋದಂತಾಗುತ್ತದೆ. 'ಕೈಯೊಡನೆ ಹರಣಮುಂ ಬೆರಸಿ' ಬಚ್ಚಿಟ್ಟ ಸ್ಥಳದಲ್ಲಿ ತೋರಿಕೆಗಾಗಿ ಕೈಹಾಕುತ್ತಾಳೆ. ಶಿವನ ಮಾಯೆಯಿಂದಾಗಿ ತಪಸ್ವಿ ತಿಂದ ಹಣ್ಣು ಕೈ ಮೇಲೆಯೇ ಬರುತ್ತದೆ. ಆಗ ಹರ್ಷಿತಳಾಗಿ ತಂದು ಕೊಡಲು ಶೆಟ್ಟಿ ಆಶ್ಚರ್ಯಚಕಿತ"[71]ನಾಗುತ್ತಾನೆ. ಕಾರಿಕಾಲಮ್ಮೆಯ ಗುಪ್ತ ಭಕ್ತಿಯನ್ನು ಮೆಚ್ಚಿ ಸತಿಯೆಂಬ ಭಾವವಳಿಯುತ್ತಾನೆ.

ಕಾರಿಕಾಲಮ್ಮೆ ಅಪ್ರತಿಮ ಸುಂದರಿ. ಅವಳ ಸೌಂದರ್ಯವನ್ನು ಕುರಿತಂತೆ ಕವಿ -

> ಮದನ ಕೃತಕಾಚಲನಿತಂಬ ಬಿಂಬಂ ತಾನೆ
> ಒದವಿ ಪದುಮಾಸನದ ತಳವೃತಮುಂತಾನೆ
> ಸರಸಿಯುಂ ಪಳಿಕೆಯ್ವ ನಾಭಿಮಂಡಲವಲ್ಲಿ
> ಹರಭಕ್ತಿರಸದ ಮಡುವಿನ ತೆಜಿದೊಳಿರಲಲ್ಲಿ
> ಮುಗಿದ ಸರಸಿಜವನೇಳಿಸುವ ಕುಚವೊಪ್ಪಿರಲು[72]

ಹೀಗೆ ಬಣ್ಣಿಸಿದ್ದಾನೆ. ಆದರೆ ಈ ಸೌಂದರ್ಯ ಶಾಶ್ವತವಾದುದಲ್ಲ ಎಂಬುದು ಕವಿಯ ನಂಬಿಕೆ. ಕಾರಿಕಾಲಮ್ಮೆ ಇಂಥ ಸೌಂದರ್ಯವನ್ನು ತೊರೆದಿದ್ದಾಳೆ. ತಾನು ಮಾಣಿಕಶೆಟ್ಟಿಯ ಮನೆಯಿಂದ ಹೊರಡುವ ಸಂದರ್ಭದಲ್ಲಿ, ಜನ ಸಮೂಹವೇ ಅವಳ ಸೌಂದರ್ಯಕ್ಕೆ ಸೋತು ಹಿಂದೆ ಬರುತ್ತದೆ. ಅವರಿಗೆ "ಪಂಚಭೂತಗಳಿಂದ ಕೂಡಿದ ಈ 'ಬಂಡದಿಂಡೆ'ಗೆ ಮರುಳಾಗಬೇಡಿರಿ ಎಂದು ಬೋಧಿಸುತ್ತಾಳೆ. ಆದರೂ ಅವರು ಅವಳ ಬೆನ್ನ ಹಿಂದೆ ಬರುವುದನ್ನು"[73] ನಿಲ್ಲಿಸುವುದಿಲ್ಲ. ಆಗ ಬೇಸತ್ತ ಕಾರಿಕಾಲಮ್ಮೆ "ವೇಷವೆನ್ನಂ ಕೊಂದಪುದು. ಪಂಚಶರಣಹರಾ ಮಾಯಾ ತಮೋಹರಾ"[74] ಎನ್ನುತ್ತಾ ತನ್ನ ಹೊರ ವೇಷವನ್ನು ಕಳಚುತ್ತಾಳೆ. ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮ ಶರೀರೆಯಾಗು ತ್ತಾಳೆ. ಹೀಗೆ ಸಾಧನೆಗೆ ಅಡ್ಡಲಾಗಿರುವ ಸೌಂದರ್ಯವನ್ನು ತೊರೆದು ಶಿವಸತ್ತ ಸಾಗುತ್ತಾಳೆ.

ಶಿವ ಸುಮ್ಮನೆ ಒಲಿಯುವುದಿಲ್ಲ.; ಅದಕ್ಕಾಗಿ ಅಂತರಂಗದ ಪರಿಶ್ರಮವೂ ಬೇಕು, ಬಹಿರಂಗದ ಪರಿಶ್ರಮವೂ ಬೇಕು. ಇಲ್ಲಿ ಕಾರಿಕಾಲಮ್ಮೆ ಆಂತರಿಕವಾಗಿ ಶಿವನೊಲುಮೆಗೆ ಪಾತ್ರಳಾಗಿದ್ದರೂ ಬಹಿರಂಗದಲ್ಲಿ ಅವಳಿನ್ನೂ ಪರಿಪೂರ್ಣಳಾಗಿಲ್ಲ. "ಕಷ್ಟದ ಕುಲುಮೆಯಲ್ಲಿ ಬೆಂದ ಹೊರತು ಅದೆಂತು ಪರಿಪಕ್ವವಾಗಬಲ್ಲದು."[75] ಅಂತೆಯೇ, ಕಾರಿಕಾಲಮ್ಮೆ ಕೈಲಾಸಪುರಕ್ಕೆ ನಡೆಯುವಾಗ ಅಲ್ಲಿ ಶಿವಭಕ್ತರು ನಡೆದ ದಾರಿಯನ್ನು ಕಾಣುತ್ತಾಳೆ. ಶಿವಭಕ್ತರು ಹಾದು ಹೋದ ದಾರಿಯನ್ನು ತುಳಿಯಲೊಲ್ಲದ ಆಕೆ, ಶರಣರ ಹೆಜ್ಜೆಗಳಲ್ಲಿ ತಲೆಯಿಟ್ಟು ಗಳಿಗೆಗೊಂದಡಿಯಿಡುತ್ತಾ ಹೊರಡುತ್ತಾಳೆ. ಆಗ ಮೈಯೆಲ್ಲ ಎಲುಬಾಗಿ ತಲೆಯೂರಿ ಬರುತ್ತಿರುವ ಕಾರಿಕಾಲಮ್ಮೆಯನ್ನು ಕಂಡು ಶಿವಪಾರ್ವತಿಯರು ಬರಮಾಡಿಕೊಳ್ಳುತ್ತಾರೆ. ಹೀಗೆ ಕಾರಿಕಾಲಮ್ಮೆ ಕವಲಿಲ್ಲದ ಉಗ್ರ ನಿಷ್ಠೆಯಿಂದ ಭಕ್ತರು ನಡೆದ ದಾರಿಯಲ್ಲಿಯೇ ನಡೆದು ಸಿದ್ಧಿಗೊಳ್ಳುತ್ತಾಳೆ.

"ಸ್ತ್ರೀ ರೂಪವು ಪಾಪವುಳ್ಳರ್ಗೆ ಸಿಂಗರದಂತೆ ಪಾಪವಿಲ್ಲದವರ್ಗೆ ತಾಯಂತೆ ತೋರುವುದೆಂದು ಹರಿಹರ ಕವಿಯು ವರ್ಣಿಸಿದ್ದಾನೆ. ಕಾರಿಕಾಲಮ್ಮೆಯ ಕಷ್ಟಸಹಿಷ್ಣುತೆ ಬೆರಗುಗೊಳಿಸುವ ರೀತಿಯಲ್ಲಿ ಚಿತ್ರಿತವಾಗಿದೆ. ದೈವೀಕೃಪೆಗಾಗಿ ಅಂತಹ ನಿಷ್ಠುರತೆ ಅನಿವಾರ್ಯ ವೆಂದೂ, ಭೀಕರ ಕಷ್ಟಗಳನ್ನು ಸಹಿಸುವಲ್ಲಿ ಪರಮಾತ್ಮನ ಕರುಣೆ ಕೈಗೂಡುವುದೆಂದೂ ಹರಿಹರ ಇಲ್ಲಿ ಸ್ಪಷ್ಟಗೊಳಿಸಿದ್ದಾನೆ. ಜನರ ಹಂಗು ತೊರೆದು"[76] ಭಕ್ತಿ ನಿರ್ಭರತೆಯನ್ನು ತೋರ ಬೇಕೆನ್ನುವುದು ಇಲ್ಲಿಯ ಹರಿಹರನ ದೃಷ್ಟಿಯಾಗಿದೆ.

## 5.15 ತಿರುನೀಲಕಂಠನ ರಗಳೆ

ಹರಿಹರ ರಚಿಸಿದ ನೂರಕ್ಕೂ ಮೇಲ್ಪಟ್ಟ ರಗಳೆಗಳಲ್ಲಿ ಪ್ರಸ್ತುತ ತಿರುನೀಲಕಂಠನ ರಗಳೆಯೂ ಒಂದು. ಪುರಾತನರೊಳಗೆ ತಿರುನೀಲಕಂಠ ಬಹಳ ಪ್ರಸಿದ್ಧ. ಈ ರಗಳೆಯೇ ಮೊಟ್ಟಮೊದಲನೆಯ ಕಥೆ ಇದ್ದರೂ ಇರಬಹುದು. "ನೆರೆಸಂದರುವತ್ತುಮೂವರೋಳ್ಮೊದಲ್ ತಿರುನೀಲಕಂಠ ಚರಿತವನವಧಾರು"[77] ಎಂಬ ಕವಿಯ ಪ್ರಸ್ತಾವನೆ ಅದೇ ಅರ್ಥ ಬರುವಂತಿದೆ. ಅವರು ಕೈಕೊಂಡ ವ್ರತ ಮತ್ತು ನಿಷ್ಠೆಯಿಂದ ಈ ಕಥೆ ಪ್ರಸಿದ್ಧವಾಗಿದೆ.

ತಿರುನೀಲಕಂಠ ಕೈಗೊಂಡ ವ್ರತ ತುಂಬ ಸರಳವಾದದ್ದು. 'ಮುಟ್ಟಿದರೆ ಶಿವನಾಣೆ' ಎಂಬುದಷ್ಟೆ. ಆದರೆ ಆ ವ್ರತದ ಪರಿಪಾಲನೆ ಮಾತ್ರ ಅಸದೃಶವಾದದ್ದು. ತೊಂಬತ್ತು ವರ್ಷಗಳಾಗಿ ಜೀವ ಕೊನೆಯ ಹಂತಕ್ಕೆ ಬಂದಿದ್ದರೂ ಅವನು ವ್ರತವನ್ನು ಬಿಟ್ಟಿಲ್ಲ. ವ್ರತಾಚರಣೆಯ ಸಂದರ್ಭದಲ್ಲಿ ಒದಗಿ ಬಂದ ಸನ್ನಿವೇಶಗಳಂತೂ ಅತ್ಯಂತ ಭೀಕರವಾದವುಗಳು; ಇಡೀ ವ್ಯಕ್ತಿತ್ವವನ್ನೇ ಕೊಲ್ಲುವಂಥವು. ಆದರೆ ಎಷ್ಟೇ ಅಪವಾದಗಳು ಬರಲಿ, ಅಪನಿಂದೆಗಳು ಬರಲಿ ಎಲ್ಲವನ್ನೂ ನುಂಗಿಕೊಂಡು ವ್ರತವನ್ನು ಪೂರೈಸುತ್ತಾನೆ. ಆ ವ್ರತ, ನಿಷ್ಠೆ, ಎದುರಾದ ಸನ್ನಿವೇಶಗಳು ಹಾಗೂ ಎದುರಿಸಿದ ರೀತಿ ನೈಜವೆಂಬಂತಿವೆ.

ತಿರನೀಲಕಂಠ ಒಮ್ಮೆ ಶಿವಾಲಯಕ್ಕೆ ಹೋಗಿ ಬರುತ್ತಿರುತ್ತಾನೆ. ಮಧ್ಯರಾತ್ರಿಯಾಗಿರು ತ್ತದೆ. ಹಾಗೆ ಬರುವಾಗ ಹರನೋಲಗದ ವಿಳಾಸಿನಿಯೊಬ್ಬಳು 'ಪರಿಯಾಣ'ದ ನೀರನ್ನು ಚೆಲ್ಲುತ್ತಾಳೆ. ಆ ನೀರು ತಿರುನೀಲಕಂಠನ ಮೇಲೆಯೇ ಬೀಳುತ್ತದೆ - ಘಟನೆ ಆಕಸ್ಮಿಕವಾಗಿ ನಡೆದಿದ್ದು- ತಾನು ಚೆಲ್ಲಿದ ನೀರು ತಿರುನೀಲಕಂಠನ ಮೇಲೆ ಬಿದ್ದಿರುವುದು ಗೊತ್ತಾದಾಗ ವಿಳಾಸಿನಿ ಬಹಳ ನೊಂದುಕೊಳ್ಳುತ್ತಾಳೆ. ಪಶ್ಚಾತ್ತಾಪ ಪಟ್ಟು ತಿರುನೀಲಕಂಠನನ್ನು ತನ್ನ ಮನೆಗೆ ಕರೆದು ಸ್ನಾನ ಮಾಡಿಸಿ ಸುಗಂಧ ಸಿಂಪಡಿಸಿ ಕಳುಹಿಸಿಕೊಡುತ್ತಾಳೆ. ಮಧ್ಯರಾತ್ರಿ ಕಳೆಯುತ್ತಿದ್ದಂತೆ ತಿರುನೀಲಕಂಠ ತನ್ನ ಮನೆಗೆ ಬರುತ್ತಾನೆ. ಪತಿಯಲ್ಲಿ ಆಗಿರುವ ಬದಲಾವಣೆಗಳನ್ನು ಮುತ್ತೈದೆ ಗಮನಿಸುತ್ತಾಳೆ. ತನ್ನ ಗಂಡ ಯಾವುದೋ ವೇಶ್ಯೆಯೊಬ್ಬಳ ಮನೆಗೆ ಹೋಗಿ ಬಂದಿರಬಹುದೆಂದು ತಿಳಿದು- ಸಂದರ್ಭ ಅದಕ್ಕೆ ಸರಿಯಾಗಿಯೇ ಇದ್ದ- ಒಳಗೊಳಗೆ ಸಿಡಿಮಿಡಿಗೊಂಡು ಸುಮ್ಮನಾಗುತ್ತಾಳೆ.

ಸಹಜವಾಗಿಯೇ ಇಬ್ಬರೂ ಮಲಗಿದ್ದಾರೆ. ತಿರುನೀಲಕಂಠ ಎಂದಿನಂತೆ ತಮ್ಮ ಪತ್ನಿಯ ಸಂಗ ಬಯಸಿದ್ದಾನೆ. ಆಗ ಮೊದಲೇ ಸಿಟ್ಟಿನಲ್ಲಿದ್ದ ಪತ್ನಿ 'ಮುಟ್ಟಿದೊಡೆ ಶಿವನಾಣೆ' ಎನ್ನುತ್ತಾಳೆ.

ಈ ಶಿವನಾಣೆಯೇ ಆ ದಂಪತಿಗಳಿಬ್ಬರೂ ಕೈಗೊಂಡ ಭೀಕರ ವ್ರತ. ವ್ರತ ಪ್ರಾರಂಭವಾಗಿ ತೊಂಬತ್ತು ವರ್ಷಗಳು ಕಳೆದಿವೆ. ವಯಸ್ಸು ಮುಗಿಯುತ್ತಾ ಬಂದಿದೆ. ಆದರೂ ವ್ರತದ ನಿಷ್ಠೆ ಕುಗ್ಗಿಲ್ಲ. ವ್ರತ ಸಡಿಲವಾದದ್ದೋ ಅಥವಾ ಬಹುನಿಷ್ಠೆಯುಳ್ಳದ್ದೋ ಎಂದು ಶಿವ ಪರೀಕ್ಷಿಸಲು ಬಯಸುತ್ತಾನೆ. ವೇಷಧರಿಸಿ ತಿರುನೀಲಕಂಠನಲ್ಲಿಗೆ ಬಂದು ಒಂದು ಪಾತ್ರೆಯನ್ನು ನೀಡಿ ಅದರ ಮಹಿಮೆಯನ್ನು ತಿಳಿಸಿ ಇಟ್ಟಿರುವಂತೆ ಕೇಳಿಕೊಳ್ಳುತ್ತಾನೆ. ವೇಷಧಾರಿಯ ಮಾತಿಗೆ ಒಪ್ಪಿ ತಿರುನೀಲಕಂಠ ಪಾತ್ರೆಯನ್ನು ಪಡೆದು ಎಚ್ಚರಿಕೆಯಿಂದ ಇಡುತ್ತಾನೆ. ಪಾತ್ರೆಯನ್ನು ನೀಡಿದ ಶಿವ ಮರುದಿನವೇ ಬಂದು ಪಾತ್ರೆಯನ್ನು ಕೇಳುತ್ತಾನೆ. ಪಾತ್ರೆ ಮಾಯವಾಗಿರುತ್ತದೆ. ಇಲ್ಲಿಂದ ಪ್ರಾರಂಭವಾಗುತ್ತದೆ ಶಿವನ ವಿವಿಧ ಆಟಗಳು.

ಏನಾದರೂ ಮಾಡಿ ತಿರುನೀಲಕಂಠ - ಮುತ್ತೈದೆಯರನ್ನು ಕೈಕೈ ಹಿಡಿಸಬೇಕೆಂಬುದು ಶಿವನ ಉದ್ದೇಶ. ಆದರೆ ತಿರುನೀಲಕಂಠನ ನಿಷ್ಠೆಯ ಎದುರು ಈ ಕಾರ್ಯ ಅಷ್ಟು ಸುಲಭವಾದದ್ದಲ್ಲ ಎಂಬ ಸತ್ಯ ಅವನಿಗೆ ತಿಳಿದಿದೆ. ಅದಕ್ಕಾಗಿ ಆತ ಮಾನಸಿಕವಾಗಿ ತಿರುನೀಲಕಂಠನಿಗೆ ಹಿಂಸೆ ನೀಡಲು ಬಯಸುತ್ತಾನೆ. ಸಾರ್ವಜನಿಕವಾಗಿ ಅವಮಾನಿಸುತ್ತಾನೆ. ಸತ್ಯಸಂಧನೊಬ್ಬನಿಗೆ ಸಾರ್ವಜನಿಕ ಅವಮಾನ ತಡೆಯಲಾಗದ್ದಾದ್ದರಿಂದ ಈ ರೀತಿ ಮಾಡುತ್ತಾನೆ.

ಪಾತ್ರೆ ಇಲ್ಲವಾದದ್ದನ್ನು ಕಂಡು ದಂಪತಿಗಳು 'ನುಡಿಯಲರಿಯದೆ ಕರಗಿ ಕೊರಗಿ ಕಡು ಭೀತಿಯಿಂದ' ತಲ್ಲಣಿಸುತ್ತಾರೆ. ಆಗ ಶಿವ —

> ......ಭಕ್ತರೆಂದೆನಿಸಿದೆನಿದೀ ಪರಿಯ
> ಅಬ್ಬುದಂ ಜೋಪುದಂ ಬಲ್ಲನೇ ಶಿವಯೆನುತೆ
> ಒಬ್ಬರುಂ ಸಾಕ್ಷಿಯಿಲ್ಲೇನ ಮಾಡುವೆನೆನುತೆ[78]

ಎಂದು ಕಿರುಚಾಡತೊಡಗುತ್ತಾನೆ. ದಂಪತಿಗಳು ದಾರಿ ಕಾಣದೆ ಕಲ್ಲು ಗೊಂಬೆಗಳಂತೆ ನಿಲ್ಲುತ್ತಾರೆ. ಕೊನೆಗೆ ಶಿವ ದಂಪತಿಗಳು ಪಾತ್ರೆ ಕದ್ದ ಸುದ್ದಿಯನ್ನು ಪಂಚಾಯತಿಯ ಹತ್ತಿರಕ್ಕೆ ತರುತ್ತಾನೆ. ಕದ್ದಿರುವ ಪಾತ್ರೆಯನ್ನು ತಿರುನೀಲಕಂಠ ದಂಪತಿಗಳಿಂದ ಕೊಡಿಸುವಂತೆ ಕೇಳಿಕೊಳ್ಳುತ್ತಾನೆ. ಆಗ ಇಡೀ ಪಂಚಾಯತಿಯು ದಂಪತಿಗಳ ಈ ಕೃತ್ಯವನ್ನು ಕೇಳಿ ಆಶ್ಚರ್ಯಪಡುತ್ತದೆ. ಆದರೆ ತಿರುನೀಲಕಂಠ ದಂಪತಿಗಳು ಮಾತ್ರ ಮೌನವೇ ಶರಣೆಂದು ನಿಲ್ಲುತ್ತಾರೆ.

ತಿರುನೀಲಕಂಠನ ಇಡೀ ವ್ಯಕ್ತಿತ್ವವನ್ನು ಬಲ್ಲ ಪಂಚಾಯತಿಯವರು ಆದ ಪ್ರಮಾದವನ್ನು ಕ್ಷಮಿಸಿ ಆ ಪಾತ್ರೆಗೆ ಬದಲಾಗಿ ಮುಚ್ಚಾಸಿರ ಬಾಳುವ ಒಂದು ಹೊನ್ನ ಪಾತ್ರೆಯನ್ನು ಕೊಡ ಹೋಗುತ್ತಾರೆ. ಆದರೆ ಶಿವ ಅದನ್ನು ಒಪ್ಪುವುದಿಲ್ಲ. ಆ ಪಾತ್ರೆ ನನಗೆ ಒಡಲು, ಉಸಿರು ಎಂದು ಪಟ್ಟು ಹಿಡಿಯುತ್ತಾನೆ. ಸಮಸ್ತ ಐಶ್ವರ್ಯವನ್ನು ಕಳೆದುಕೊಂಡಂತೆ 'ಪಾತ್ರೆ ಪಾತ್ರೆ ಓ ಎನ್ನ 'ಪಾತ್ರೆ' ಎಂದು ಕೂಗಾಡತೊಡಗುತ್ತಾನೆ. ಇಡೀ ಪಂಚಾಯತಿ ಏನು ಮಾಡಬೇಕೆಂದು ಕಾಣದೆ ಕೂರುತ್ತದೆ. ಆಗ ಶಿವನೇ ಒಂದು ಮಾರ್ಗ ಸೂಚಿಸಿ, ಇಬ್ಬರೂ ಪರಸ್ಪರ ಕೈಹಿಡಿದು

ಕೊಳದಲ್ಲಿ ಮುಳುಗಿ ಬರಲಿ ಎನ್ನುತ್ತಾನೆ. ಇಡೀ ಸಭೆ ಸಂತಸದಿಂದ ಒಪ್ಪುತ್ತದೆ.

ಸಮಸ್ಯೆಯ ಪರಿಹಾರ ಸುಲಭವಾಗಿ ಆಯಿತೆಂದು ಇಡೀ ಪಂಚಾಯತಿ ಕಾದಿದೆ. ಆ ಸಂದರ್ಭದಲ್ಲಿ ತಿರುನೀಲಕಂಠ "ಪಿಡಿಯೆನೆನ್ನಯ ಸತಿಯ ಕೈಯನೇನಾದಡಂ / ಪಿಡೆಯೆನೀ ಧರೆಮೇಲೆ ಕೆಡೆದಡಂ"[79] ಎಂದು ದೃಢವಾಗಿ ನುಡಿಯುತ್ತಾನೆ. ಸಭೆ ನಡುಗುತ್ತದೆ. ನೀವು ಪಾತ್ರೆಗಳ್ಳರಲ್ಲದ ಮೇಲೆ ಕೈ ಹಿಡಿದು ಕೊಳದಲ್ಲಿ ಮುಳಗಲು ಏಕೆ ಅಳುಕು, ಅತಿಯಾದ ಆಸೆಯಿಂದ ಕವಿಲೆಯಾಚಾರದ ಚರಿತವನ್ನು ಆಚರಿಸಬೇಡಿ ಎಂದು ಪಂಚಾಯತಿಯ ಜನ ಕಟಕಿಯಾಡುತ್ತಾರೆ.

ಏನಾದರೂ, ನೀಲಕಂಠ ದಂಪತಿಗಳ ಚಿತ್ತ ಕದಡಲಿಲ್ಲ. ಕೊನೆಗೆ ನೀಲಕಂಠ ದಂಪತಿಗಳ ನಿಷ್ಠೆಗೆ ಶಿವನೇ ಸೋಲುತ್ತಾನೆ. ಕೋಲೊಂದನ್ನು ತಂದು ಈ ಕೋಲಿನ ಒಂದೊಂದು ತುದಿಯನ್ನು ಒಬ್ಬೊಬ್ಬರು ಹಿಡಿದು ಕೊಳದಲ್ಲಿ ಮುಳಗಿದರೆ ನನ್ನ ಪಾತ್ರೆ ನನಗೆ ಬಂದಂತೆ ಎನ್ನುತ್ತಾನೆ. ಆಗ ನೀಲಕಂಠ ದಂಪತಿಗಳು ಸಂತೋಷದಿಂದ ಕೋಲ ತುದಿ ಹಿಡಿದು ಕೊಂಡದಲ್ಲಿ ಮುಳುಗುತ್ತಾರೆ; ಮತ್ತೆ ಹದಿನಾರರ ಹರಯವನ್ನು ಪಡೆಯುತ್ತಾರೆ.

ಹೀಗೆ ಕೊನೆಯವರೆಗೂ ನೀಲಕಂಠ ದಂಪತಿಗಳು ತಮ್ಮ ನಿಷ್ಠೆಯನ್ನು ಬಿಡದೆ ಪಾಲಿಸುತ್ತಾರೆ. ಒಟ್ಟಾರೆಯಾಗಿ ಹೇಳುವುದಾದರೆ ಈ "ಕಥೆಯ ಮುಖ್ಯ ಉದ್ದೇಶ ಶಿವನ ಆಣೆಯ ಮಹತ್ವವನ್ನು ತೋರಿಸುವುದು. ಅದರ ಸುತ್ತ ರೇಷ್ಮೆ ಗೂಡಿನಂತೆ ಕಥೆ ಕಟ್ಟಿದೆ. ಕಥೆಯ ರಚನೆ ಹೆಜ್ಜೆ ಹೆಜ್ಜೆಗೆ ಕುತೂಹಲವನ್ನು ಕೆರಳಿಸುತ್ತ ವೇಗವಾಗಿ ಮುಂದೆ ಓಡುವಂತಿದೆ."[80] ಕಥೆಯ ಪ್ರಾರಂಭದಲ್ಲಿ ಬರುವ ಕಾವೇರಿ ನದೀ ಪ್ರದೇಶದ ಸುಂದರವಾದ ವರ್ಣನೆ, ತಿರುನೀಲಕಂಠನ ಪೂಜಾ ಸಂಭ್ರಮ, ಪೊನ್ನಾಂಬಲನಾಥನ ಪೂಜೆಗೈದು ಬರುವಾಗ ಗಣಿಕೆಯೊಬ್ಬಳು ನೀರೆರಚಿ ಸ್ನಾನ ಮಾಡಿಸಿ ಸುಗಂಧ ಲೇಪಿಸಿ ಕಳುಹಿಸುವ ಸನ್ನಿವೇಶ, ಮನೆಯಲ್ಲಿ ಮುತ್ತೈದೆಯು ನೀಲಕಂಠನಿಗೆ ಶಿವನಾಣೆ ಇಟ್ಟ ಸನ್ನಿವೇಶ, ಶಿವ ಪಾತ್ರೆಯನ್ನು ಕೊಟ್ಟು ಮಾಯಮಾಡಿಸಿ ಅವರನ್ನು ಕಳ್ಳರನ್ನಾಗಿಸಿದ ಸನ್ನಿವೇಶ, ಪಂಚಾಯತಿಯ ಮುಂದೆ ಕರೆದೊಯ್ದು ನೀಲಕಂಠ ದಂಪತಿಗಳನ್ನು ಅಪಮಾನಿಸಿದ ಸನ್ನಿವೇಶ, ಕೈ ಕೈ ಹಿಡಿದು ಕೊಳದಲ್ಲಿ ದಂಪತಿಗಳು ಮುಳುಗುವಂತೆ ಮಾಡುವ ಸನ್ನಿವೇಶ, ತಿರುನೀಲಕಂಠನ ಧರ್ಮ ಸಂಕಟದ ಸನ್ನಿವೇಶ, ಶಿವನ ಪ್ರಯತ್ನವನ್ನು ದೃಢವಾಗಿ ಎದುರಿಸಿದ ಸನ್ನಿವೇಶ, ಕೊನೆಗೆ ಶಿವನೇ ಸೋತು ಲಾತಕೋಲು ಹಿಡಿದು ಕೊಳದಲ್ಲಿ ಮುಳುಗುವಂತೆ ಮಾಡಿ ಮತ್ತೆ ಅವರನ್ನು ಯೌವನಸ್ಥರನ್ನಾಗಿ ಮಾಡುವ ಸನ್ನಿವೇಶ- ಎಲ್ಲವೂ ಸೊಗಸಾಗಿ ಮೂಡಿ ಬಂದಿವೆ. "ಸಂಭಾಷಣೆ ಸನ್ನಿವೇಶಗಳ ರಚನೆಯಲ್ಲಿ ಉತ್ತಮವಾದ ಅಭಿರುಚಿಯೂ ಪ್ರಮಾಣ ಪರಿಜ್ಞಾನವೂ ಭಾವಾವೇಷಗಳ ಮೊರೆತವೂ ಪ್ರಕಟವಾಗಿದೆ. ಪಾತ್ರಗಳ ಮನೋಧರ್ಮ ಬಿಚ್ಚಿ ಕಾಣುತ್ತದೆ."[81] "ವರ್ಣನೆಗಳಲ್ಲಿ ಸಂಯಮವೂ ಔಚಿತ್ಯವೂ ತುಂಬಿವೆ. ಲೀಲಾ ಜಾಲವಾಗಿ ಹರಿಯುವ ವಾಗ್ಧಾರೆ ಬೆರಗುಗೊಳಿಸು ವಂತಿದೆ. ಜಲಪಾತದಂತೆ ನಿರಂತರವಾಗಿ ಘೋಷಿಸುತ್ತಿದೆ. ಇಲ್ಲಿನ ಕಲೆ ನಯವಾದ ಹೊಳಪಾದ ಕುಸುರಿ ಕೆಲಸ."[82] ಇಂಥ ಭಾವತೀವ್ರವಾದ ಕಾವ್ಯ ಮತ್ತೊಂದಿಲ್ಲ ಎಂದೇ ಹೇಳಬೇಕು.

## 5.16 ಭಕ್ತಿ ಪಾರಮ್ಯದಿಂದ ಕುಗ್ಗುವ ಕಲಾತ್ಮಕತೆ

ಯಾವುದನ್ನೇ ಆಗಲಿ ಮಿತಿಯಾಗಿ ಬಳಸಿಕೊಂಡಾಗ ಅದು ಹಿತವಾಗಿರುತ್ತದೆ. ಒಂದು ವೇಳೆ ಮಿತಿಯನ್ನು ಮೀರಿ ಬಳಕೆಯಾದಲ್ಲಿ ಅದರ ಒಟ್ಟು ಅಂದ ಕೆಡುತ್ತಾ ಹೋಗುತ್ತದೆ. ಈ ಮಾತು ಹರಿಹರನ ಭಕ್ತಿಯ ಬಳಕೆಗೆ ಚೆನ್ನಾಗಿ ಹೊಂದಿಕೆಯಾಗುತ್ತದೆ. ಹರಿಹರನ ಕಾವ್ಯದ ಪ್ರಾರಂಭದ ಒಂದೆರಡು ಕಥೆಗಳನ್ನು ಓದಿದರೆ ಅದರಲ್ಲಿ ಬಳಕೆಯಾಗಿರುವ ಭಕ್ತಿಯ ಔನ್ನತ್ಯಕ್ಕೆ, ಕಲಾತ್ಮಕತೆಗೆ ಬೆಚ್ಚಿ ಬೆರಗಾಗುವುದುಂಟು. ಅದರಲ್ಲೂ ತಿರುನೀಲಕಂಠನ ರಗಳೆ, ಇಳೆಯಾಂಡ ಗುಡಿಮಾರನ ರಗಳೆ, ಕಾರಿಕಾಲಮ್ಮೆಯ ರಗಳೆ, ಕಣ್ಣಪ್ಪನ ರಗಳೆ— ಇಂಥ ರಗಳೆಗಳು ಪ್ರಾರಂಭದಲ್ಲಿ ಓದುಗನಿಗೆ ಸಿಕ್ಕಿಬಿಟ್ಟರಂತೂ ಆತ ಭಕ್ತಿ ಪರವಶನಾಗಿಯೇ ಬಿಡುತ್ತಾನೆ. ಆದರೆ ಈ ಭಕ್ತಿ ನಿರಂತರವಾಗಿ ಬಳಕೆಯಾಗಿ ಇಡೀ ಕಥೆ ಏಕತಾನತೆಯನ್ನು ಮೂಡಿಸುವ ಜೊತೆಗೆ ತನ್ನ ಕಲಾತ್ಮಕತೆಯನ್ನೂ ಕೂಡ ಕಳೆದುಕೊಂಡಿರುವುದು ಅವನ ರಗಳೆಗಳಲ್ಲಿ ಕಂಡುಬರುತ್ತದೆ.

ಯಾವಾಗ ಕವಿ ಕಾವ್ಯಕ್ಕೆ ಒಂದು ಮಿತಿಯನ್ನು ಗುರುತಿಸಿಕೊಳ್ಳುತ್ತಾನೋ ಆಗ ಇಡೀ ಕಾವ್ಯ ಬೇರೆ ಬೇರೆ ಹಾದಿಯಲ್ಲಿ ಬೆಳೆದು ಹೋಗಬಹುದಾಗಿದ್ದ ಸಾಧ್ಯತೆಯನ್ನು ತಪ್ಪಿಸಿಕೊಳ್ಳುತ್ತದೆ. ಅದರೊಂದಿಗೆ ಸಹಜವಾಗಿಯೇ ಅದರ ಕಲಾತ್ಮಕತೆಯೂ ಕೂಡ ಕುಗ್ಗುತ್ತದೆ ಎನ್ನಬಹುದು.

ತಿರುನೀಲಕಂಠನ ರಗಳೆ ಬಹಳ ಸುಂದರವಾದ ರಗಳೆ. ಅದಕ್ಕೆ ಒಂದು ಪರಿಮಿತಿಯನ್ನು ಗುರುತಿಸಿಕೊಳ್ಳದೆ ಹೋಗಿದ್ದರೆ ಅದರ ಬೆಳವಣಿಗೆ ಅದ್ಭುತವಾಗಿರುತ್ತಿತ್ತು. ದಾಂಪತ್ಯದ ಬದುಕಿನ ಸೌಂದರ್ಯವನ್ನು ಚಿತ್ರಿಸಬಹುದಿತ್ತು. ಆಗ ಹಲವು ರೀತಿಯ ಸನ್ನಿವೇಶಗಳು ಕಥೆಯೊಳಗೆ ಬಂದು ಹೋಗುತ್ತಿದ್ದವು. ಆದರೆ ಹರಿಹರ ಭಕ್ತಿಯ ಮಿತಿಯನ್ನು ನಿರ್ಮಿಸಿಕೊಂಡಿದ್ದರಿಂದಾಗಿ ಆ ಕಲಾತ್ಮಕತೆಯಿಂದ ನೀಲಕಂಠನ ರಗಳೆ ದೂರವಾಗಿದೆ.

'ಇಳೆಯಾಂಡ ಗುಡಿಮಾರನ ರಗಳೆ'ಯೂ ಬಹಳ ಸುಂದರವಾದ ರಗಳೆಯೇ ಆಗಿದೆ. ಗುಡಿಮಾರ ಒಬ್ಬ ರೈತ. ಸದಾ ದುಡಿಯದೆ ಅವನಿಗೆ ಬದುಕೇ ಇಲ್ಲ. ಹರಿಹರ ಪ್ರಯತ್ನಿಸಿದ್ದರೆ ರೈತನ ಬದುಕಿನ ಸುಖ ದು:ಖಗಳೆಲ್ಲವನ್ನೂ ಈ ರಗಳೆಯಲ್ಲಿ ತರಬಹುದಿತ್ತು. ಆದರೆ ಕವಿಗೆ ಅದರ ಪರಿಜ್ಞಾನವೇ ಇಲ್ಲ. ಅವನಿಗೆ ಮುಖ್ಯವಾದದ್ದು ಭಕ್ತಿ. ಹಾಗಾಗಿ ಇಡೀ ಕಥೆಯನ್ನು ಭಕ್ತಿಯ ಕಡೆ ಪರಿವರ್ತಿಸಿಕೊಳ್ಳಲು ಅನುಕೂಲವಾದ ಸನ್ನಿವೇಶವನ್ನು ಸೃಷ್ಟಿಸುತ್ತಾನೆ. ಆ ಮೂಲಕ ಕಥೆಯಲ್ಲಿ ಭಕ್ತಿಯ ರಸವನ್ನು ಹರಿಸುತ್ತಾನೆ. ಭಕ್ತಿಯ ಈ ಅಮಿತವಾದ ಬಳಕೆಯಿಂದ ಕಥೆ ಸಾಮಾನ್ಯ ನೆಲೆಗೆ ಸೇರುತ್ತದೆ.

ಉದಾಹರಣೆಗೆ ಈ ಎರಡು ರಗಳೆಗಳನ್ನು ಮಾತ್ರ ಹೇಳಿದ್ದೇನೆ. ಆದರೆ ಹರಿಹರನ ಪ್ರತಿಯೊಂದು ರಗಳೆಯಲ್ಲೂ ಈ ಬಗೆಯ ರಚನೆ ಇದ್ದೇ ಇದೆ. ಈ ನಿರಂತರ ಬಳಕೆ ಪ್ರತಿ ಯೊಂದು ರಗಳೆಯಲ್ಲೂ ಅದರ ಕಲಾತ್ಮಕತೆಗೆ ಇದೇ ಬಗೆಯ ಅಡ್ಡಿಯನ್ನು ತಂದಿರುವುದನ್ನು ಗುರುತಿಸಬಹುದು.

ಈವರೆಗೆ ಪುರಾತನ ರಗಳೆಗಳಿಗೆ ಸಂಬಂಧಪಟ್ಟ, ಸುಮಾರು ಹದಿನೈದು ರಗಳೆಯ

ಕಥೆಗಳನ್ನು ವಿಮರ್ಶಾತ್ಮಕವಾಗಿ ಗಮನಿಸಿದ್ದೇವೆ. ಈ ಎಲ್ಲ ರಗಳೆಗಳಲ್ಲಿ ಬಹಳ ಮುಖ್ಯವಾಗಿ ಕಂಡುಬಂದಿರುವ ಒಂದು ಗುಣ ಎಂದರೆ ಭಕ್ತಿ. ಪ್ರತಿಯೊಂದು ರಗಳೆಯಲ್ಲೂ ಒಬ್ಬ ಭಕ್ತ. ಅವನು ತನಗೆ ಹೊಂದಿದ ಯಾವುದೋ ಕಾಯಕದಲ್ಲಿ ತೊಡಗಿಕೊಂಡಿರುವಿಕೆ ಮತ್ತು ಆ ಕಾಯಕವನ್ನೇ ತನ್ನ ಭಕ್ತಿಯ ಮಾರ್ಗವನ್ನಾಗಿ ಮಾಡಿಕೊಂಡು ಅದರಲ್ಲಿ ತಲ್ಲೀನನಾಗಿರುವ ಚಿತ್ರ ಸಾಮಾನ್ಯವಾಗಿ ಕಂಡುಬರುತ್ತದೆ. ಭಕ್ತಿಗೆ ಜಾತಿ, ಮತ, ಕುಲ, ಧರ್ಮ, ಮೇಲು - ಕೀಳು ಇತ್ಯಾದಿ ಯಾವುದೇ ಸೂತಕಗಳಿಲ್ಲ. ಯಾರು ಏನೇ ಆಗಿರಲಿ ಅತ್ಯಂತ ನಿಷ್ಠೆಯಿಂದ ಶಿವನನ್ನು ಧ್ಯಾನಿಸಿದಲ್ಲಿ ಎಲ್ಲರಿಗೂ ಶಿವ ಒಲಿಯುತ್ತಾನೆ ಎಂಬುದನ್ನು ಸಾರುವುದೇ ಈ ಎಲ್ಲ ರಗಳೆಗಳ ಹಿಂದಿನ ಪ್ರಮುಖ ಉದ್ದೇಶವಾಗಿದೆ. ಆ ದೃಷ್ಟಿಯಲ್ಲಿ ಪ್ರಮುಖ ಎಂದು ಕಂಡುಬಂದ ಕೆಲವು ರಗಳೆಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಇದು ಮುಂದಿನ ರಗಳೆಗಳ ಅಧ್ಯಯನಕ್ಕೆ ಒಂದು ಮಾರ್ಗ ಸೂಚಿಯಾಗಿದೆ. ಇದೇ ಹಿನ್ನೆಲೆಯಲ್ಲಿ ಅವುಗಳನ್ನು ಗ್ರಹಿಸಿದಲ್ಲಿ ಅವುಗಳ ಒಟ್ಟು ಉದ್ದೇಶವನ್ನು ಅರ್ಥೈಸಿಕೊಳ್ಳಬಹುದಾಗಿದೆ.

* * * * *

## ಅಡಿಟಿಪ್ಪಣಿಗಳು

1. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 157
2. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 177
3. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 198-199
4. ಆರ್. ಸಿ. ಹಿರೇಮಠ: ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 185
5. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 185
6. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 203
7. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 203
8. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 218

9. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 219
10. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 145
11. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಥರ ದೇವಕೃತ ಪುರಾತನರ ರಗಳೆಗಳು : ಪುಟ : 146-147
12. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 148
13. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 149
14. ಕರ್ನಾಟಕ ಭಾರತಿ : ಸಂಪುಟ 1 ಸಂಚಿಕೆ 2 : ಲೇ: ಅನಂತ ಬುರ್ಲಿ : ಪುಟ : 164
15. ಕರ್ನಾಟಕ ಭಾರತಿ : ಸಂಪುಟ 1 ಸಂಚಿಕೆ 2 : ಲೇ: ಅನಂತ ಬುರ್ಲಿ : ಪುಟ : 164
16. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 172
17. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 144
18. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 213
19. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 214
20. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 225
21. ಜಯಂತಿ : ಸಂಪುಟ 27 :ಸಂಚಿಕೆ 3 :ಇಸವಿ 1964 : ಲೇ : ಶಾಂತಯ್ಯ ಕೆಂಪಯ್ಯ ಮಠ : ಪುಟ 25
22. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ li
23. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 103
24. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಪರ ದೇವರ ಶರಣ ಚರಿತ ಮಾನಸಂ : ಪುಟ lii
25. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 204
26. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 208

27. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 207
28. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 207
29. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 212
30. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 212
31. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ lxxvii
32. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ lxxviii
33. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 319
34. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 320
35. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 330
36. ಸಂ : ಚಂದ್ರ ಶೇಖರ ಪಾಟೀಲ : ಸಂಕ್ರಮಣ : ಸಂಪುಟ 29 : ಸಂಚಿಕೆ 9 : ಲೇ: ಡಿ. ಜಿ. ಹಾಜವಗೋಳ : ಪುಟ 14
37. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 329
38. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 329
39. ಸಂ : ಚಂದ್ರ ಶೇಖರ ಪಾಟೀಲ : ಸಂಕ್ರಮಣ : ಸಂಪುಟ 29 : ಸಂಚಿಕೆ 9 : ಲೇ: ಡಿ. ಜಿ. ಹಾಜವಗೋಳ : ಪುಟ 21
40. ಸಂ : ಚಂದ್ರ ಶೇಖರ ಪಾಟೀಲ : ಸಂಕ್ರಮಣ : ಸಂಪುಟ 29 : ಸಂಚಿಕೆ 9 : ಲೇ: ಡಿ. ಜಿ. ಹಾಜವಗೋಳ : ಪುಟ 22
41. ಸಂ : ಚಂದ್ರ ಶೇಖರ ಪಾಟೀಲ : ಸಂಕ್ರಮಣ : ಸಂಪುಟ 29 : ಸಂಚಿಕೆ 9 : ಲೇ: ಡಿ. ಜಿ. ಹಾಜವಗೋಳ : ಪುಟ 22
42. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ lxiv
43. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 169
44. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 192
45. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ lxxiii
46. ಸಂ : ಎಚ್. ದೇವೀರಪ್ಪ : ಶಿವ ಶರಣ ಸಂಪುಟ : ಪುಟ 12-13
47. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ cvi
48. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ cvi
49. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ cvi

50. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ cvi
51. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 49
52. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 49
53. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 51
54. ಶಿವಾನುಭವ : ಸಂಪುಟ 12 : ಸಂಚಿಕೆ 4 : ಪುಟ 195
55. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 48
56. ಶಿವಾನುಭವ : ಸಂಪುಟ 12 : ಸಂಚಿಕೆ 4 : ಪುಟ 195
57 ಶಿವಾನುಭವ : ಸಂಪುಟ 12 : ಸಂಚಿಕೆ 4 : ಪುಟ 204
58. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 53
59. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 55
60. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 55
61. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 100-101
62. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 101
63. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 137
64. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 103
65. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 103
66. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 104
67. ಎಲ್. ಆರ್. ಹೆಗ್ಗಡೆ : ಕಾವ್ಯ ವ್ಯಾಸಂಗ : ಪುಟ 104
68. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 142
69. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 143
70. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 25
71. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 26
72. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ : 441
73. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 27
74. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 27
75. ಸಂ :ಬಿ. ಎಸ್. ಗಣಾಚಾರಿ, ಸಂಗಮನಾಥ ಜಿ. ಹಂಡಿ : ವಚನ ಪಿತಾಮಹಾ : ಪುಟ 365

76. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 28
77. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 3
78. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 12-13
79. ಸಂ : ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 22
80. ಡಿ. ಎಲ್. ನರಸಿಂಹಾಚಾರ್ : ಹಂಪೆಯ ಹರಿಹರ : ಪುಟ 47
81. ಡಿ. ಎಲ್. ನರಸಿಂಹಾಚಾರ್ : ಹಂಪೆಯ ಹರಿಹರ : ಪುಟ 47
82. ಡಿ. ಎಲ್. ನರಸಿಂಹಾಚಾರ್ : ಹಂಪೆಯ ಹರಿಹರ : ಪುಟ 47

6

# ನೂತನರ ರಗಳೆಗಳು

ಸುಮಾರು ಇಪ್ಪತ್ತೆಂಟು ಶರಣರನ್ನು ನೂತನರು ಎಂದು ಗುರುತಿಸಲಾಗಿದೆ. ಇವರೆಲ್ಲಾ ಹೆಚ್ಚಾಗಿ ಕರ್ನಾಟಕದವರು. ಸುಮಾರು ಹನ್ನೆರಡನೆ ಶತಮಾನದ ಆಚೆ ಈಚೆಯಲ್ಲಿ ಬದುಕಿದವರು. ಹರಿಹರ ಕೂಡ ಇದೇ ಶತಮಾನಕ್ಕೆ ಸಮೀಪದಲ್ಲಿ ಇದ್ದವನು ಎಂಬುದು ನಮಗೆ ಈಗಾಗಲೇ ತಿಳಿದಿದೆ. ಇವರಲ್ಲಿ ಕೆಲವರ ಪರಿಚಯ ಹರಿಹರನಿಗೆ ಇದ್ದರೂ ಇರಬಹುದು. ಹಾಗಾಗಿ ಇವರನ್ನು ಹರಿಹರನ ಸಮೀಪಕಾಲೀನರು ಎಂದು ನಿರ್ಧರಿಸಲಾಗಿದೆ. ಈ ಸಮೀಪಕಾಲೀನರ ಸಾಲಿನಲ್ಲಿ ಅಲ್ಲಮ, ಬಸವಣ್ಣ, ಆದಯ್ಯ, ಅಕ್ಕಮಹಾದೇವಿ, ಮುಂತಾದ ಶರಣ ಶರಣೆಯರು ಬರುತ್ತಾರೆ. ಇವರೆಲ್ಲ ಹರಿಹರನ ಬದುಕಿನ ಮೇಲೆ ಅತೀವ ಪ್ರಭಾವ ಬೀರಿದವರಾಗಿದ್ದು, ಇವರ ಬದುಕನ್ನು ಕುರಿತಂತೆ ಅವನು ತನ್ನ ದೃಷ್ಟಿಗೆ ತಕ್ಕ ಹಾಗೆ ಕಾವ್ಯ ರಚಿಸಿದ್ದಾನೆ. ಈ ಕಥೆಗಳ ರಚನೆಯಲ್ಲಿ ಹರಿಹರನ ದೃಷ್ಟಿ ಏನು ಮತ್ತು ಹೇಗೆ ಚಿತ್ರಿಸಿದ್ದಾನೆ ಎಂಬುದನ್ನು ಪ್ರಮುಖವಾದ ರಗಳೆಗಳ ಮೂಲಕ ವಿಮರ್ಶಾತ್ಮಕವಾಗಿ ಗಮನಿಸುವ ಉದ್ದೇಶ ಈ ಅಧ್ಯಾಯದಲ್ಲಿದೆ.

## 6.1 ಬಸವರಾಜದೇವರ ರಗಳೆ

ಹರಿಹರನ ಅತ್ಯಂತ ಮಹತ್ವದ ಕೃತಿಗಳಲ್ಲಿ 'ಬಸವರಾಜದೇವರ ರಗಳೆ' ಮೊದಲನೆಯದು. ಇದು ಸಾಕಷ್ಟು ವಿದ್ವಾಂಸರಿಂದ ಚರ್ಚೆಗೆ ಒಳಗಾದ ಕೃತಿ. ಹಾಗಿದ್ದರೂ ಈ ಕೃತಿಯ ಚರ್ಚೆ ಮೇಲಿಂದ ಮೇಲೆ ನಡೆಯುತ್ತಲೇ ಇದೆ. ಅಂತಿಮ ತೀರ್ಮಾನವನ್ನು ಕೊಡುವ ಪ್ರಯತ್ನ ಈವರೆಗೆ ಯಾರಿಂದಲೂ ಸಾಧ್ಯವಾಗಿಲ್ಲ. ಬಹುಶಃ ಸಾಧ್ಯವಾಗುವುದೂ ಇಲ್ಲ. ಕೃತಿ ಹದಿಮೂರು ಸ್ಥಲಗಳಷ್ಟು ವಿಸ್ತಾರವಾಗಿದೆ. ಈ ಹದಿಮೂರು ಸ್ಥಲಗಳಲ್ಲಿ ಬಸವಣ್ಣನವರ ಲೌಕಿಕ ಮತ್ತು ಅಲೌಕಿಕ ಬದುಕಿನ ಜೀವನಚಿತ್ರವನ್ನು ಹರಿಹರ ಕೊಟ್ಟಿದ್ದಾನೆ. ಬಸವಣ್ಣನ ಜೀವನ ವಿಕಾಸ ಗೊಳ್ಳುವ ರೀತಿಯನ್ನು ಸಹಜವಾಗಿ ನಿರೂಪಿಸಿರುವುದರಿಂದ 'ಬಸವರಾಜದೇವರ ರಗಳೆ' ಪ್ರಮಾಣಾರ್ಹವಾಗಿದೆ.

### 6.1.1 ಬಸವಣ್ಣನ ಜನನ ಮತ್ತು ಉದ್ದೇಶ

ಮೊದಲು ಬಸವಣ್ಣ, ವೃಷಭಮುಖನೆಂಬ ಗಣೇಶ್ವರನಾಗಿ ಕೈಲಾಸದಲ್ಲಿ ಶಿವನ ಆಸ್ಥಾನದಲ್ಲಿದ್ದನು. ಒಮ್ಮೆ ಶಿವ ಒಡ್ಡೋಲಗದಲ್ಲಿರಲು ಅಲ್ಲಿ ಇಂದ್ರಾಣಿಯರು, ರುದ್ರ ಕನ್ನಿಕೆಯರು, ಬ್ರಹ್ಮ, ವಿಷ್ಣು, ಮನುಮುನಿ-ಎಲ್ಲರೂ ಸೇರಿರುತ್ತಾರೆ. ವೃಷಭೇಂದ್ರನೂ ಹರ್ಷದಿಂದ ಕುಳಿತಿರುತ್ತಾನೆ. ಆಗ ಶಿವ ವೃಷಭೇಂದ್ರನನ್ನು ಕರೆದು ಪ್ರಸಾದವನ್ನು ನೀಡಿ ಅದನ್ನು

ಹರಗಣ ಸಮೂಹಕ್ಕೆ ಹಂಚುವಂತೆ ತಿಳಿಸುತ್ತಾನೆ. ಪ್ರಸಾದ ವಿನಿಯೋಗದ ಈ ಸಂದರ್ಭದಲ್ಲಿ ವೃಷಭೇಂದ್ರ ಶಿವನ ಪ್ರೀತಿಯ ಪುತ್ರನಾದ ಕುಮಾರಸ್ವಾಮಿಗೆ ಪ್ರಸಾದ ಕೊಡುವುದನ್ನು ಮರೆಯುತ್ತಾನೆ. ಕುಮಾರಸ್ವಾಮಿ ತನಗೆ ಪ್ರಸಾದ ಕೊಡಲಿಲ್ಲವೆಂದು ಶಿವನಿಗೆ ತಿಳಿಸಿದಾಗ, ವೃಷಭೇಂದ್ರನು ಕೊಟ್ಟಿದ್ದಾಗಿ ಶಿವನಿಗೆ ಸುಳ್ಳು ಹೇಳುತ್ತಾನೆ. ಆದರೆ ಪ್ರಸಾದವನ್ನು ನಿಜಕ್ಕೂ ಕೊಡದಿರುವುದು ಶಿವನಿಗೆ ತಿಳಿಯುತ್ತದೆ. ಆಗ ಶಿವ -

ಎಮಗೆ ಕುಡದಿರ್ದಡಂ ಸೈರಿಸುವೆವಾಯ್ತು
ವಿಮಳ ಶಿಶುವಿಂಗೆ ಹುಸಿ ನುಡಿಯೆ ಸೈರಿಸೆವಯ್ಯ[1]

ಎಂದು ಹೇಳಿ, ನೀನು ಮಾಡಿದ ತಪ್ಪಿಗೆ ಭೂಲೋಕದಲ್ಲಿ ಹುಟ್ಟಿ ಪ್ರಾಯಶ್ಚಿತ್ತ ಪಡೆದು ಮತ್ತೆ ಕೈಲಾಸಕ್ಕೆ ಬಾ ಎಂದು ವೃಷಭೇಂದ್ರನಿಗೆ ಆಜ್ಞಾಪಿಸುತ್ತಾನೆ. ಶಿವನ ಆಜ್ಞೆಯ ಮೇರೆಗೆ ವೃಷಭೇಂದ್ರ ಬಾಗೇವಾಡಿಯ ಮಾದಿರಾಜನೆಂಬ ಶಿವಬ್ರಾಹ್ಮಣನ ಪತ್ನಿ ಮಾದಲಾಂಬೆಯ ಗರ್ಭದಲ್ಲಿ ಬಸವಣ್ಣನೆಂಬ ಅಭಿದಾನವನ್ನು ಹೊತ್ತು ಜನಿಸುತ್ತಾನೆ.

ಶಿವನ ಆಜ್ಞೆಯನ್ನು ಹೊತ್ತು ಬಸವಣ್ಣ ಬಾಗೇವಾಡಿಯಲ್ಲಿ ಮಾದರಸ ಮಾದಲಾಂಬಿಕೆಯರ ಉದರದಲ್ಲೇನೋ ಜನಿಸಿದನು. ಆದರೆ ಆತನ ಜನನದ ಉದ್ದೇಶವೇ ಬೇರೆಯಾಗಿತ್ತು. ಹರಿಹರನೇ ಹೇಳುವಂತೆ ಬಸವಣ್ಣ ಜನಿಸಿದ್ದು-ಶಿವಸಮಯೋದ್ಧಾರಕ್ಕಾಗಿ. "ಇಳೆಗೆ ಶಿವಭಕ್ತಿಯಂ ತೀವಲ್ ಮನಂಗೊಂಡು / ಚಿಪ್ಪಿನೊಳ್ ಮುತ್ತು ಕಾಸಾರದೊಳ್ ಪಂಕಜಂ ..... ಪುಟ್ಟುವಂತಿರೆ ಪುಟ್ಟಿದಂ"[2] ಎಂದು ಅವನ ಜನನದ ವರ್ಣನೆ ಮಾಡುತ್ತಾನೆ. "ಪ್ರಥಮ ಸ್ಥಲದಲ್ಲೇ ಬಸವಣ್ಣನವರು ಬಾಲ್ಯದಲ್ಲಿ ಬೆಳೆದ ರೀತಿಯನ್ನು ಕುರಿತು ಹರಿಹರ ಬಸವಂ ಪರಸಮಯಕ್ಕುಬ್ಬಸಂ ಮಾಡುತೆ ..... ಬೆಳೆವುತಿರ್ದಂ"[3] ಎನ್ನುತ್ತಾನೆ. ಇನ್ನೊಂದೆಡೆ, 'ಪರಸಮಯದ ಗರ್ವಮಂ ನಿಲಿಸಿ ಭಕ್ತರಂ ಗೆಲೆಸಿ' ಎಂಬ ಮಾತು ಬರುತ್ತದೆ. ಮತ್ತೊಂದೆಡೆ "ಶಿವಸಮಯವನುದ್ಧರಿಸುವೆ ಪರಸಮಯಮಂ ಪರಿಹರಿಸುವೆ"[4] ಎನ್ನುವ ಮಾತಿದೆ. ಇಲ್ಲೆಲ್ಲಾ ಶಿವಸಮಯದ ಉದ್ಧಾರ ಮತ್ತು ಪರಸಮಯದ ಗರ್ವ ಮುರಿದು ಅದನ್ನು ಸಂಹರಿಸುವ ಕಾರಣಿಕತನವನ್ನು ತನ್ನ ಅವತಾರದ ಉದ್ದೇಶವನ್ನಾಗಿ ಬಸವಣ್ಣ ಮಾಡಿಕೊಂಡನೆಂಬ ಅರ್ಥ ಬರುತ್ತದೆ. ಕಾರಣಿಕ ಎಂಬ ಪದವನ್ನು ಹರಿಹರ ಬಸವಣ್ಣನಿಗೆ ನೇರವಾಗಿಯೇ ಹೇಳಿಕೊಂಡು ಹೋಗಿದ್ದಾನೆ. ತನ್ನ ಕೃತಿಯ ಇತರ ಪಾತ್ರಗಳ ಬಾಯಲ್ಲೂ ಹೇಳಿಸಿದ್ದಾನೆ. 'ಧಾರುಣಿಗೆ ಕಾರಣಿಕನಪ್ಪ ಬಸವಂ,' 'ಗಣಪರ್ವಮಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವಂ,' 'ಅಮಮ ಕಾರಣಿಕ ಶಿಶು ಜನಿಯಿಸಿದನುವಾಗೆ' ಎಂದು ಹರಿಹರನೇ ಸ್ತುತಿಸಿದ್ದಾನೆ. ಈ ಸ್ತುತಿಯಲ್ಲಿ ಬಸವಣ್ಣ ಕಾರಣಿಕ ಶಿಶು ಎಂದು ಒತ್ತಿ ಹೇಳಲು ಹೊರಟಿರುವ ಪ್ರಯತ್ನವಿದೆ. ಕಪ್ಪಡಿ ಸಂಗಮಕ್ಕೆ ಬಂದ ಬಸವಣ್ಣನನ್ನು ಕಂಡು ಈಶಾನ್ಯ ಗುರುಗಳು 'ಈತ ಕಾರಣಿಕನಾಗಲೆವೇಳ್ಕುಂ' ಎಂದುಕೊಳ್ಳುತ್ತಾರೆ. ಇಲ್ಲಿಯೂ ಹರಿಹರನಿಗೆ, ಬಸವಣ್ಣ ಕಾರಣಿಕ ವ್ಯಕ್ತಿ, ಶಿವ ಸಮಯವನ್ನುದ್ಧರಿಸಿ ಪರಸಮಯವನ್ನು ಭಂಗಿಸಿ, ಪವಾಡ ಸಾಮರ್ಥ್ಯಗಳನ್ನು ಮೆರೆಯಲೆಂದು

ಬಂದವನು ಎಂದು ಹೇಳುವ ಉದ್ದೇಶವಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಹರಿಹರನ ಪ್ರಕಾರ ಬಸವಣ್ಣ ಒಬ್ಬ ಕಾರಣಿಕ ಪುರುಷ. ಅವನು ಶಿವಸಮಯವನ್ನು ಉದ್ಧರಿಸಿ ಪರಸಮಯವನ್ನು ಸಂಹರಿಸುವುದಕ್ಕಾಗಿ ಭೂಮಿಯ ಮೇಲೆ ಹುಟ್ಟುತ್ತಾನೆ.

## 6.1.2 ಬಸವಣ್ಣನ ಜೀವನ ಮತ್ತು ಜೀವನಮೌಲ್ಯಗಳು

ಬಸವಣ್ಣನ ಜೀವನವನ್ನು ನಾಲ್ಕು ಘಟ್ಟಗಳಾಗಿ ವಿಂಗಡಿಸಿಕೊಳ್ಳಬಹುದು. ಮೊದಲನೆಯದು– ಬಸವಣ್ಣನ ಜನನದಿಂದ ಅವನು ಕಪ್ಪಡಿ ಸಂಗಮಕ್ಕೆ ಹೋಗುವವರೆಗಿನದು. ಎರಡನೆಯದು– ಕಪ್ಪಡಿ ಸಂಗಮಕ್ಕೆ ಹೋದಂದಿನಿಂದ ಮಂಗಳವಾಡಕ್ಕೆ ಬರುವವರೆಗಿನದು. ಮೂರನೆಯದು– ಮಂಗಳವಾಡಕ್ಕೆ ಬಂದಂದಿನಿಂದ ಶಿವಪೂಜಾ ಸಂಭ್ರಮದಲ್ಲಿ ತೊಡಗುವವರೆಗಿನದು. ನಾಲ್ಕನೆಯದು– ಶಿವಪೂಜಾನಂತರದಿಂದ ಸಾಕು ಮಾಡೈ ತಂದೆ ಲೋಕದಾಟವನಿನ್ನು ಎನ್ನುತ್ತಾ ಮರ್ತ್ಯಲೋಕದಿಂದ ನಿರ್ಗಮಿಸುವವರೆಗಿನದು.

**ಮೊದಲನೆಯ ಘಟ್ಟ :** ಬಸವಣ್ಣ ಮಾದರಸ ಮಾದಲಾಂಬಿಕೆಯರ ಮಗನಾಗಿ ಬಾಗೇವಾಡಿಯಲ್ಲಿ ಜನಿಸುತ್ತಾನೆ. ತಂದೆ ತಾಯಿಯರು 'ಜಾತಕರ್ಮ' ಮಾಡಿ ಪ್ರೀತಿಯಿಂದ 'ಬಸವ'ನೆಂದು ನಾಮಕರಣ ಮಾಡುತ್ತಾರೆ. ಕೆಲವು ದಿನಗಳಲ್ಲೇ ತಂದೆ ತಾಯಿಯರು ಮರಣ ಹೊಂದುತ್ತಾರೆ. ಆನಂತರ ಮುತ್ತಜ್ಜಿಯ ಹತ್ತಿರ ಏಳೆಂಟು ವರ್ಷ ಕಳೆಯುತ್ತಾನೆ. ಬಾಲ್ಯವು ಹೋಗಿ ಯೌವನ ಉದಯಿಸುತ್ತದೆ. ಹದಿನಾರು ವರ್ಷ ತುಂಬುತ್ತದೆ. ಆಗ 'ಶಿವಭಕ್ತಿಯುಂ ಕರ್ಮಮುಂ' ಎಂದೂ ಒಂದಾಗಿರದು ಎಂದು ಪರಮ ವೈರಾಗ್ಯಹಿತನಾಗಿ ಕರ್ಮಲತೆಯಂತಿದ್ದ ಜನಿವಾರವನ್ನು ಕಿತ್ತು ಎಸೆದು, ಹೊಸ ರೇಷ್ಮೆ ಬಟ್ಟೆ ತೊಟ್ಟು, ದಿವ್ಯ ವಸ್ತ್ರ ಹೊದ್ದು, ಮನೆಯಿಂದ ಹೊರಗೆ ನಡೆಯುತ್ತಾನೆ. ಹಾಗೆ ನಡೆದು ಮಲಾಪಹಾರಿ-ಕೃಷ್ಣವೇಣಿ ನದಿಗಳ ಸಂಗಮ ಸ್ಥಾನವಾದ ಕಪ್ಪಡಿ ಗ್ರಾಮದ ಬಳಿಯಿರುವ ಕೂಡಲಸಂಗಮ ಕ್ಷೇತ್ರಕ್ಕೆ ಬರುತ್ತಾನೆ.

**ಎರಡನೆಯ ಘಟ್ಟ :** ಕೂಡಲಸಂಗಮದಲ್ಲಿ ಏಕಾಂತ ಭಕ್ತಿಯ ಸಾಧನೆಯಲ್ಲಿ ತೊಡಗುತ್ತಾನೆ. ಈ ಸಾಧನೆಯಿಂದ ಸಂಗಮನಾಥನಿಂದ ಲೋಕಕಲ್ಯಾಣದ ನಿರ್ದೇಶನ ದೊರೆಯುತ್ತದೆ. ಈಶಾನ್ಯ ಗುರುಗಳ ದರ್ಶನವಾಗುತ್ತದೆ. "ಎರಡೂವರೆ ಸ್ಥಲಗಳಷ್ಟು ವಿಸ್ತಾರದಲ್ಲಿ ಹರಿಹರ ಬಸವಣ್ಣನವರ ಏಕಾಂತ ಭಕ್ತಿಸಾಧನೆಯನ್ನು ಬಣ್ಣಿಸಿದ್ದಾನೆ. ಈ ಸಂದರ್ಭದಲ್ಲಿ ಕಂಡುಬರುವ ಬಸವಣ್ಣನ ಭಕ್ತಿಯ ತೀವ್ರತೆ, ಅವರ ಪೂಜಾವಿಧಾನ, ಸಂಗಮೇಶ್ವರನಿಗೂ ಅವರಿಗೂ ಇದ್ದ ವಾತ್ಸಲ್ಯ ಮತ್ತು ಮಧುರ ಭಾವ ಮಿಶ್ರಿತವಾದ ಅನ್ಯೋನ್ಯ ಸಂಬಂಧದ ರಮ್ಯತೆ ಅತಿಶಯವಾಗಿ ಮೈದೋರಿದೆ."[5] ಸಂಗಮನಾಥನೇ ಬಸವಣ್ಣನಿಗೆ; ಎಲೆ ಮಗನೇ ಬಸವಣ್ಣ ನಿನ್ನನ್ನು ಮಹೀತಳ ದಲ್ಲಿ ಮೆರೆಯುತ್ತೇವೆ; ನೀನು ಬಿಜ್ಜಳರಾಯನಿರುವ ಮಂಗಳವಾಡಕ್ಕೆ ಹೋಗು ಎಂದು ಅಪ್ಪಣೆ ಮಾಡಿ ಮಂಗಳವಾಡಕ್ಕೆ ಕಳುಹಿಸಿಕೊಡುತ್ತಾನೆ.

**ಮೂರನೆಯ ಘಟ್ಟ :** ಶಿವನ ಆಜ್ಞೆಯಂತೆ ಮಂಗಳವಾಡಕ್ಕೆ ಬಂದ ಬಸವಣ್ಣ ಬಿಜ್ಜಳನ ಅರಮನೆಗೆ ಹೋಗುತ್ತಾನೆ. ಅಲ್ಲಿ ಸಿದ್ಧರಸ ಮಾಡಿದ ತಪ್ಪು ಲೆಕ್ಕವನ್ನು ತೋರುತ್ತಾನೆ. ಸಿದ್ಧರಸನ ಮೆಚ್ಚುಗೆಗೆ ಒಳಗಾಗಿ ಕರಣಿಕನಾಗಿ ಅಲ್ಲಿಯೇ ಉಳಿಯುತ್ತಾನೆ. ಸಿದ್ಧರಸನ ಮರಣಾನಂತರ ಭಂಡಾರಿಯಾಗಿ ನೇಮಕಗೊಳ್ಳುತ್ತಾನೆ. ದಂಡಾಧೀಶನಾಗುತ್ತಾನೆ. ಗಂಗಾದೇವಿ ಮಾಯಿದೇವಿ

ಯರನ್ನು ಮದುವೆಯಾಗಿ ಸಂಸಾರಿಯಾಗುತ್ತಾನೆ. ಶರಣ ಸಮೂಹದ ಕೇಂದ್ರವಾಗಿ ನಿತ್ಯವೂ ಲಿಂಗಾರ್ಚನೆ, ದಾಸೋಹ ಹಾಗೂ ಶಿವಪೂಜಾ ಸಂಭ್ರಮದಲ್ಲಿ ತೊಡಗುತ್ತಾನೆ. ಬೇಡಿದವರಿಗೆ ಬೇಡಿದ್ದನ್ನು ನೀಡುತ್ತಾ, ಶಿವಸಮಯವನ್ನುದ್ಧರಿಸುತ್ತಾ, ಪರಸಮಯವನ್ನು ಭಂಗಿಸುತ್ತಾ ಇರುತ್ತಾನೆ. ಬಸವನ 'ಮಾತೇ ಮಾತು', 'ಭಕ್ತಿಯೇ ಭಕ್ತಿ', 'ನೇಮವೇ ನೇಮ' ಮುಂತಾದ ಪ್ರಶಂಸೆಗಳನ್ನು ಪಡೆಯುತ್ತಾನೆ.

**ನಾಲ್ಕನೆಯ ಘಟ್ಟ :** ಶಿವಪೂಜೆಯ ನಂತರ ಬಸವಣ್ಣ ಹಲವು ಪವಾಡಗಳನ್ನು ಮೆರೆಯುತ್ತಾನೆ. ಈ ಪವಾಡಗಳು ಮುಗಿಯುತ್ತಾ ಬಂದಂತೆ ಕಥೆಯ ವೇಗ ಹೆಚ್ಚುತ್ತದೆ. ಬಿಜ್ಜಳನ ಕೊಲೆಯಾದ ಮೇಲೆ 'ಸಾಕು ಮಾಡ್ಕೆ ತಂದೆ ಲೋಕದಾಟವನಿನ್ನು' ಎಂದು ಕೇಳಿಕೊಳ್ಳುತ್ತಾನೆ. ಅಲ್ಲಿಗೆ ಕಥೆ ಪೂರ್ಣಗೊಳ್ಳುತ್ತದೆ.

ಹೀಗೆ ಬಸವಣ್ಣನ ಸಾಹಸಮಯವಾದ ಜೀವನ ಹದಿಮೂರು ಸ್ಥಲಗಳ ಉದ್ದಕ್ಕೂ ಹರಡಿವೆ. ಈ ಚಿತ್ರಣದಲ್ಲಿ ಬಸವಣ್ಣನ ಜೀವನದ ಹಲವು ಮೌಲ್ಯಗಳು ಅಡಕಗೊಂಡಿವೆ. ಆ ಮೌಲ್ಯಗಳು ಕೆಲವೆಡೆ ಪ್ರತ್ಯಕ್ಷವಾಗಿ ತೋರಿದರೆ, ಇನ್ನು ಕೆಲವು ಕಡೆ ಪವಾಡಗಳ ರೂಪದಿಂದ ವ್ಯಕ್ತವಾಗುತ್ತವೆ. ಪ್ರತಿಯೊಂದು ಪವಾಡಗಳೂ ಬಸವಣ್ಣನ ಜೀವನ ಮೌಲ್ಯಗಳನ್ನು ಪ್ರತಿಪಾದಿಸುವುದಕ್ಕಾಗಿ ಸಾಂಕೇತಿಕವಾಗಿ ಬರುತ್ತವೆ. ಹಾಗಾಗಿ ನಾವು ಈ ಪವಾಡಗಳನ್ನು ತಿರಸ್ಕರಿಸುವಂತಿಲ್ಲ.

ಬಸವಣ್ಣನ ಪ್ರಕಾರ ರಾಜ್ಯದ ಸಂಪತ್ತು ರಾಜನೂ ಸೇರಿದಂತೆ ಭವಿಗಳ ಭೋಗವಸ್ತುವಲ್ಲ; ಭಕ್ತರ ಭೋಗವಸ್ತು. ಬಸವಣ್ಣನು ಮೊದಲು ಗಣಕಶಾಲೆಗೆ ಬಂದಾಗ ಗಣಕದಲ್ಲಿ ಆದ ತಪ್ಪನ್ನು ನೋಡಿ 'ಭಕ್ತನೊಡವೆ ಕೆಡಲಾಗದಿದು ಕಂಡುದು ಪೇಳ್ವೆನಯ್ಯಾ' ಎನ್ನುತ್ತಾನೆ. ಈ ಮಾತು ಮೇಲಿನ ಬಸವಣ್ಣನ ನಂಬಿಕೆಯನ್ನು ರುಜುವಾತುಪಡಿಸುತ್ತದೆ.

ಬಿಜ್ಜಳನ ಆಸ್ಥಾನದಲ್ಲಿ ಗಣಕವೃತ್ತಿಯನ್ನು ಸ್ವೀಕರಿಸಿದ ಮೇಲೆ ಬಸವಣ್ಣ ಮಡುಗಟ್ಟಿದ್ದ ರಾಜ್ಯಭಾಂಡಾರದ ಉಸ್ತುವಾರಿಕೆ ನಡೆಸುತ್ತಾನೆ. ಆ ಸಂದರ್ಭದಲ್ಲಿ -

ಅಯ್ಯಲಾ ಇಂತಪ್ಪನರ್ಘ್ಯಮಂ ಭಕ್ತರ್ಗೆ
ಕ್ಕೆಯ್ಯಾರೆ ಕೊಡಲಿಲ್ಲ ಪರಶಿವನ ಭಕ್ತರ್ಗೆ
ಎಂದೋ ಮಹೇಶರ್ಗೆ ಸೇರಿಸುವೆನಿಂತಿದಂ
ಎಂದೋ ಸುಚಿತ್ತವಾರಾಧಿಸುವೆ ನಿಂತಿದಂ
ಕಾಕಭಾಜನನಾಗಿ ಪೋಗುತಿರ್ದಪುದಕಟ
ಲೋಕಾಯತರ್ಗೆ ಸಾರುತ್ತಲಿರ್ದಪುದಕಟ[6]

ಎಂದು ಯೋಚಿಸುತ್ತಾನೆ. ಬಸವಣ್ಣನ ಈ ಯೋಚನೆಯಲ್ಲಿ ರಾಜ್ಯದ ಭಂಡಾರ ಪ್ರಭು ವರ್ಗದ್ದೂ ಅಲ್ಲ ಪುರೋಹಿತ ವರ್ಗದ್ದೂ ಅಲ್ಲ; ಪ್ರಜೆಗಳದ್ದು ಎಂಬ ಯೋಚನೆ ಇದೆ. ಹಾಗೆಯೇ ಜಂಗಮರಿಗೆಲ್ಲ ಸಂಪತ್ತನ್ನು ವಿತರಣೆ ಮಾಡುವಾಗ "ನಿಮ್ಮರ್ಥಮಂ ನಿಮಗೆ ತೊತ್ತುಗೆಲಸಂ ಮಾಡಿ ಬೇಡಿತಂ ನೀಡುವ ಕಿಂಕರಂ"[7] ಎಂದು ನುಡಿಯುತ್ತಾನೆ. ಪುರೋಹಿತರ ಚಾಡಿ ಮಾತಿಗೆ ಕಿವಿಗೊಟ್ಟು ಬಿಜ್ಜಳನಿಗೆ "ಶಿವಭಕ್ತರ್ ನಿನ್ನೊಡವೆಗಾಸೆಯ ಮಾಳ್ಪರೇ-

ತಮ್ಮೊಡವೆಯಂ ತಾವು ಕೊಂಡರ್"[8] ಎಂದು ಉತ್ತರ ನೀಡುತ್ತಾನೆ. ಈ ಉತ್ತರಗಳು ರಾಜ್ಯದ ಭಂಡಾರವೆಂಬುದು ಕೆಲವೇ ಪ್ರತಿಷ್ಠಿತರ ಆಸ್ತಿಯಲ್ಲ; ಅದು ಎಲ್ಲಾ ಪ್ರಜೆಗಳ ಆಸ್ತಿ; ಅವರ ಮೇಲೆ ಎಲ್ಲರ ಹಕ್ಕೂ ಇದೆ ಎಂಬ ಬಸವಣ್ಣನ ಧೋರಣೆಯನ್ನು ವ್ಯಕ್ತಪಡಿಸುತ್ತವೆ.

ರಾಜ್ಯದ ಭಂಡಾರ ಮಾತ್ರವಲ್ಲ; ಈ ಲೋಕದ ಯಾವ ವಸ್ತುವಿನ ಮೇಲೂ ಯಾರ ಹಕ್ಕೂ ಇಲ್ಲ; ಇದೆಲ್ಲಾ ಶಿವನ ವಿಶ್ವಸ್ತ ನಿಧಿ ಇದ್ದಂತೆ ಎಂಬುದು ಬಸವಣ್ಣನ ಜೀವನ ಮೌಲ್ಯಗಳಲ್ಲಿ ಒಂದಾಗಿತ್ತು. ಈ ಮೌಲ್ಯ ಕಳ್ಳನು ತನ್ನ ಮನೆಯ ಆಕಳುಗಳನ್ನು ಅಪಹರಿಸಿದ ಸುದ್ದಿಯನ್ನು ಕೇಳಿದಾಗ ಬಸವಣ್ಣ ಆಡುವ "ಮರುಳು ಗೋವಳಾ ಭಕ್ತರೇಂ ಕಳ್ಳರೇ ನಿನಗೇನೋ ತಮ್ಮೊಡವೆಯಂ ತಾವೆ ಕೊಳ್ಳರೇ..... ಸಂಗನೇ ಕೊಡುವವಂ ಸಂಗನೇ ಕೊಂಬವಂ"[9] ಎಂದು ಹೇಳುವ ಮಾತಿನಲ್ಲಿ ಹಾಗೂ ಕಳಿಂಗ ದೇಶದ ಮಹದೇವಶೆಟ್ಟಿಗೆ ಮೂವತ್ತು ಎತ್ತುಗಳ ಭಾರದ ಮುತ್ತು, ರತ್ನ, ಹೊನ್ನು ಕೊಡುತ್ತ 'ಕೊಡುವವಂ ಸಂಗಂ ಬೇಡುವವಂ ಸಂಗಮದೇವಂ' ಎನ್ನುವ ಮಾತಿನಲ್ಲಿ ವ್ಯಕ್ತವಾಗುತ್ತದೆ.

ರಾಜ್ಯದಲ್ಲಿ ಪ್ರಜೆಗಳೇ ಪ್ರಭುಗಳಿದ್ದಂತೆ. ಪ್ರಭು ಪ್ರಜೆಗಳ ಸೇವಕ ಮಾತ್ರ ಎಂಬುದು ಬಸವಣ್ಣನ ನಂಬಿಕೆಯಾಗಿತ್ತು. ಈ ನಂಬಿಕೆಯನ್ನು ಪ್ರತಿಪಾದಿಸುವ ಹಲವು ಸಂದರ್ಭಗಳು ಬಸವರಾಜದೇವರ ರಗಳೆಯಲ್ಲಿ ಬರುತ್ತವೆ. ಕಿನ್ನರಿ ಬ್ರಹ್ಮಯ್ಯನ ಉಳ್ಳಿಯ ಪ್ರಸಂಗದಲ್ಲಿ ಬಸವಣ್ಣನನ್ನು ಹರಿಹರ ಜಂಗಮ ವೇಳೆ ಎಂದು ಕರೆದಿದ್ದಾನೆ. ಈ ಜಂಗಮ ವೇಳೆ ಎಂಬುದು ವೇಳೆವಾಳಿ ಎಂಬ ಪದವನ್ನು ನೆನಪಿಗೆ ತರುತ್ತದೆ. ವೇಳೆವಾಳಿ ಎಂದರೆ ಪ್ರಾಚೀನ ಕನ್ನಡನಾಡಿನಲ್ಲಿ ರೂಢಿಯಲ್ಲಿದ್ದ ಮೌಲ್ಯ. ಇದರ ಪ್ರಕಾರ ಪ್ರಜೆಗಳು ರಾಜನ ವೇಳೆವಾಳಿಯಾಗಿದ್ದು ರಾಜನಿಗಾಗಿ ಪ್ರಾಣತ್ಯಾಗ ಮಾಡಲು ಸಿದ್ಧರಿರುತ್ತಿದ್ದರು. ಆ ರೀತಿ ನೋಡಿದರೆ ಬಸವಣ್ಣ ರಾಜನಿಗೆ ವೇಳೆವಾಳಿಯಾಗಿರಬೇಕಾಗಿತ್ತು. ಆದರೆ ಅವನು ವೇಳೆವಾಳಿ ಯಾಗಿರುವುದು ಜಂಗಮರಿಗೆ. ಇಲ್ಲಿ ಪ್ರಾಚೀನ ಮೌಲ್ಯದ ವಿರೋಧವನ್ನು ಕಾಣುತ್ತೇವೆ. ಜಂಗಮರಿಗೆ ವೇಳೆವಾಳಿಯಾಗುವ ಮೂಲಕ ರಾಜಸತ್ತೆಯನ್ನು ಬಸವಣ್ಣ ಅಲ್ಲಗಳೆಯುತ್ತಾನೆ.

ಆಕಳುಗಳನ್ನು ಸೆರೆಹಿಡಿಯುವ ಪ್ರಸಂಗದಲ್ಲೂ ಪ್ರಜಾಸತ್ತೆಯನ್ನು ಎತ್ತಿ ಹಿಡಿಯುವ ಮೌಲ್ಯ ಅಡಗಿದೆ. ಪ್ರಾಚೀನ ಪದ್ಧತಿಯ ಪ್ರಕಾರ, ಆಕಳುಗಳನ್ನು ಸೆರೆಹಿಡಿದ ಮೇಲೆ ಸೆರೆಹಿಡಿದವರೊಡನೆ ಯುದ್ಧ ಮಾಡಿ ಆಕಳುಗಳನ್ನು ಬಿಡಿಸಿಕೊಂಡು ಬರಬೇಕಾಗಿತ್ತು. ಆದರೆ ಬಸವಣ್ಣ ಆ ಪ್ರಯತ್ನವನ್ನೇ ಮಾಡುವುದಿಲ್ಲ. ಬದಲಾಗಿ ಆಕಳುಗಳ ಕರುಗಳನ್ನೇ ಬಿಟ್ಟು ಬಿಡುತ್ತಾನೆ. ಅವನ ಪ್ರಕಾರ ಕೊಡುವವನೂ ಸಂಗನೇ, ಕೊಳ್ಳುವವನೂ ಸಂಗನ ಬಸವನೇ ಆಗಿದ್ದಾನೆ. ರಾಜನ ಆಸ್ಥಾನದಲ್ಲೇ ಇದ್ದರೂ ಬಸವಣ್ಣ ರಾಜನಿಗೆ ಎಂದೂ ಸಲಾಮು ಹಾಕಿದವನಲ್ಲ. ಎಷ್ಟೋ ಸಂದರ್ಭಗಳಲ್ಲಿ ಅವನು ರಾಜನನ್ನು ನೇರವಾಗಿಯೇ ತೆಗಳಿದ್ದಾನೆ.

ಒಮ್ಮೆ ಬಸವಣ್ಣ ಶರಣಗೋಷ್ಠಿಯೊಂದನ್ನು ಏರ್ಪಡಿಸುತ್ತಾನೆ. ಅಲ್ಲಿಗೆ ನಾಡಿನ ಎಲ್ಲ ಕಡೆಯಿಂದಲೂ ಶರಣರು ಆಗಮಿಸುತ್ತಾರೆ. ಅವರೆಲ್ಲಾ ಬಸವಣ್ಣನನ್ನು ಅನೇಕ ರೀತಿಯಿಂದ ಹೊಗಳುತ್ತಾರೆ. ಹಾಗೆ ಹೊಗಳುವ ಶರಣರನ್ನು ಕುರಿತು ಬಸವಣ್ಣ 'ದೇವರೇ ನೀವೇ ಎನಗೆ

ಪ್ರಾಣ, ಕಣ್ಣು....' ಎನ್ನುತ್ತಾರೆ. ಅಲ್ಲದೆ 'ನಿಮ್ಮ ಪಾದವೇ ಎನಗೆ ತೊಟ್ಟಿಲು' 'ನಿಮ್ಮಯ ನಖರುಚಿಯೇ ಮೊಲೆಯ ಹಾಲು' ಎನ್ನ 'ಪ್ರಾಣವೇ ನಿಮ್ಮಯ ಕರುಣವಾಗಲು ನಾನಿದ್ದೇನೆ' ಎಂದು ದೀನವಾಗಿ ಅವರನ್ನು ಸಂಬೋಧಿಸುತ್ತಾನೆ. ಬಂದ ಶರಣರಿಗೆಲ್ಲ ಬೆಲೆಯುಳ್ಳ ಆಭರಣ, ವಸ್ತ್ರ, ಮೊದಲಾದುವುಗಳನ್ನು ದಾನ ಮಾಡುತ್ತಾನೆ. ಆಗ ಬಸವಣ್ಣನ ಭಕ್ತಿ ದೆಸೆದೆಸೆಗೂ ಹಬ್ಬುತ್ತದೆ. ಇದನ್ನು ಸೈರಿಸಲಾರದೆ ಅನ್ಯಮತೀಯರು ಬಿಜ್ಜಳನ ಹತ್ತಿರ ಬಂದು "ಎಲೆಲೆ ಮರುಳರಸ, ಪುರದೊಳು ಸುಳಿವ ಭಕ್ತರ ಸಿರಿಯನೇನಂ ಬಣ್ಣಿಪೆವು! ನಿನ್ನ ಭಂಡಾರ ದೊಳು ನೀನಿಕ್ಕಲಮ್ಮದ ಪದಕಂ ಶರಣರ ಪೇರುರದೊಳು, ನೀಂ ಮುಟ್ಟಲಂಜುವ ತೋರಹಾರಂ ಭಕ್ತರ ಕೊರಳ್ಗಳೊಳು....... ಭಂಡಾರಂ ಸೂಱೆವೋದುದು"[10] ಎಂದು ಬಿಜ್ಜಳನಿಗೆ ಚಾಡಿ ಹೇಳುತ್ತಾರೆ. ಆ ಚಾಡಿ ಮಾತನ್ನು ಕೇಳಿದ ಬಿಜ್ಜಳ ಬಸವಣ್ಣನನ್ನು ಕರೆಯಿಸಿ ಅರಮನೆಯ ಭಂಡಾರ ಸೂರೆಹೋದುದರ ಬಗೆಗೆ ವಿಚಾರಿಸುತ್ತಾನೆ. ವಿಚಾರಿಸಿ, ಪರಸಮಯಿಗಳು ಮತ್ತು ಕರಣಿಕರ ಜೊತೆ ಭಂಡಾರ ಇರುವಲ್ಲಿಗೇ ಬಂದು ಮೊಹರು ಹಾಕಿದ್ದ ಪೆಟ್ಟಿಗೆಗಳನ್ನು ತೆಗೆಯಿಸಿ ನೋಡುತ್ತಾನೆ. ಭಂಡಾರದ ಸೊತ್ತು ಕಡಿಮೆಯಾಗುವುದಕ್ಕೆ ಬದಲಾಗಿ ಎಷ್ಟೋ ಸಾಸಿರ, ಕೋಟಿಮಡಿ ಹೆಚ್ಚಾಗಿರುವುದು ಕಂಡುಬರುತ್ತದೆ. ಆಗ ಬಸವಣ್ಣ ಬಿಜ್ಜಳ ಮಹಾರಾಜನಿಗೆ "ಮುಗ್ಧ ಭೂಪ ಕೇಳು; ಸರ್ವಬ್ರಹ್ಮಾಂಡಸಾರ್ವಭೌಮನೆನಿಪ ಶ್ರೀಸಂಗಮೇಶ್ವರಲಿಂಗ ದಂಗ್ರಿಯಂ ಮಹಾಪದವಿಗಳು ಬಂದು ಬಿಡದೋಲಗಿಸುತಿಪ್ಪಲ್ಲಿ ಸಂಪದದೊಳೆಲ್ಲನಿತಂ ಕುಡೆ ಕುಬೇರನಾದಂ........ ನೀನೆತ್ತಣ ಪರಮಾಣು, ಕ್ಷುದ್ರಜಂತು, ಶಿವನ ಮನೆಯ ತೊತ್ತಿನ ತೊತ್ತಪ್ಪ ಮಾಯೆಯಾಡಿಸುವ ಮಣ್ಣ ರೂಪು; ಕಪ್ಪಡದ ಹಾಹೆ; ಕಲ್ಲ ಜಂತ್ರ; ಹುಲ್ಲ ಬೊಂಬೆ ತೆಗೆತೆಗೆ, ಸಡಿಫಡಾ; ಶರಣರ ಮುಂದೆ ನೀನಾರು!"[11] ಎಂದು ಜರೆಯುತ್ತಾನೆ. ಬಸವಣ್ಣನ ರೌದ್ರಾವತಾರಕ್ಕೆ ಬೆಚ್ಚಿದ ಬಿಜ್ಜಳ ಕರುಣಿಸುವುದೆಂದು ಬಸವಣ್ಣನನ್ನೇ ಕೇಳಿಕೊಳ್ಳುತ್ತಾನೆ.

ಈ ಸಂದರ್ಭ ಬಸವಣ್ಣ ಪ್ರಜಾಸತ್ತೆಯ ಮೌಲ್ಯದ ಬಗ್ಗೆ ಇಟ್ಟುಕೊಂಡಿದ್ದ ನಂಬಿಕೆ ಯನ್ನು ತೋರುತ್ತದೆ. ಈ ಸಂದರ್ಭದಲ್ಲಿ ಪ್ರಜೆಗಳು ಅರ್ಥಾತ್ ಶರಣರೇ ಮಿಂಚುತ್ತಾರೆ. ಬಿಜ್ಜಳ ಮಹಾರಾಜ ಒಬ್ಬ ಸಾಮಾನ್ಯ ಮಾನವನಾಗಿ ಕಾಣಿಸಿಕೊಳ್ಳುತ್ತಾನೆ. ರಾಜನಾಗಿ ತನ್ನ ಅರಮನೆಯ ಭಂಡಾರಿಯಾದ ಬಸವಣ್ಣನನ್ನೇ 'ಕರುಣಿಸು' ಎಂದು ಕೇಳಿಕೊಳ್ಳುವ ಮಟ್ಟಕ್ಕೆ ಬಂದಿರುವುದು ಪ್ರಭುಸತ್ತೆಯ ವಿರೋಧದ ಸಂಕೇತವಾಗಿದೆ.

ವರ್ಗಭೇದವನ್ನು ಬಸವಣ್ಣ ಎಷ್ಟು ಕಟುವಾಗಿ ವಿರೋಧಿಸಿದನೋ ಅಷ್ಟೇ ಕಟುವಾಗಿ ವರ್ಣಭೇದವನ್ನೂ ವಿರೋಧಿಸುತ್ತಾನೆ. 'ಶ್ರೇಷ್ಠತೆಯ ಮಾನದಂಡ ಜಾತಿಯಲ್ಲ ನಡತೆ' ಎಂಬ ತತ್ತ್ವ ಬಸವಣ್ಣನದು. ಈ ತತ್ತ್ವವನ್ನು ಸಂಬೋಳಿನಾಗಿದೇವನ ಪ್ರಸಂಗ ಸಂಕೇತಿಸುತ್ತದೆ. ಸಂಬೋಳಿನಾಗಿದೇವ ಒಬ್ಬ ಅಸ್ಪೃಶ್ಯರವನು. ಒಮ್ಮೆ ಬಸವಣ್ಣ ಇವನ ಮನೆಯಲ್ಲಿ ಹೋಗಿ ಪ್ರಸಾದ ಸ್ವೀಕರಿಸುತ್ತಾನೆ. ಪರಸಮಯಿಗಳು ಇದನ್ನು ಕಂಡುಕೊಂಡು ಬಿಜ್ಜಳರಾಜನಿಗೆ "ಇಂದೀಗಳಿಗೆಯೊಳು ಹೊಲಗೇರಿಯೊಳೊರ್ವಂ-ಪೊಲೆಯನೆಂದೆಡೆ ಕೋಪಂ ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ ಇಂತಾದಡೆ ಮಗಿರಲ್ಪಾರದು"[12] ಎಂದು ದೂರುತ್ತಾರೆ. ಪರಸಮಯಿಗಳಿಂದ ಈ ಮಾತನ್ನು ಕೇಳುತ್ತಲೇ

ಬಸವಣ್ಣನನ್ನು ಬಿಜ್ಜಳರಾಜ ಕರೆಯಿಸುತ್ತಾನೆ. ಬಯಲಿನಲ್ಲಿಯೇ ಸಭೆಯನ್ನು ನಡೆಯಿಸಿ ಬಸವಣ್ಣನನ್ನು ಈ ಬಗೆಗೆ ಪ್ರಶ್ನಿಸುತ್ತಾನೆ. ಬಸವಣ್ಣ ಅಸ್ಪೃಶ್ಯನ ಮನೆಗೆ ಹೋಗಿ ಪ್ರಸಾದ ಸ್ವೀಕರಿಸಿದ್ದನ್ನು ಸಮರ್ಥಿಸಿಕೊಳ್ಳುವಾಗ ಪರಸಮಯಿಗಳನ್ನು ಹೊಲೆಯರೆಂದು ನಿಂದಿಸುತ್ತಾನೆ. ಆ ನಿಂದನೆಯನ್ನು ಕೇಳಿದ ಪರಸಮಯಿಗಳು ಅದಕ್ಕೆ ಸಮರ್ಥನೆ ಕೇಳುತ್ತಾರೆ. ಆಗ ಬಸವಣ್ಣ "ವಿಪ್ರರ ಮೈಯೊಳು ನೆತ್ತರು ಭಕ್ತರ ಮೈಯೊಳು ಪಾಲ್ ಸುರಿಯದಿರ್ದಡೆ ಸಂಗಂಗೆ ದೂರಂ ....."[13] ಎನ್ನುತ್ತಾನೆ. ಅದನ್ನು ಸಾಬೀತುಪಡಿಸಲು ತಾನು ಪ್ರಸಾದವನ್ನು ಉಂಡ ಮನೆಯ ಯಜಮಾನ ಸಂಯೋಳಿನಾಗಿದೇವನನ್ನು ಕರೆಯಿಸುತ್ತಾನೆ."ನೀನಿದ್ದ ಕುಲವೇ ಸತ್ಕುಲಂ, ನಿನ್ನಿಂದ ನಾ ಕುಲಜನೇ. ಕೂಡಲಸಂಗ ಕರುಣಿಸು"[14] ಎಂದು ಗೀತ ಹಾಡುತ್ತಾ 'ಸುರಧೇನುವಿನ ಪಯೋಧರಮನಿಸುವಂತೆ' ನಾಗಿದೇವನ ಉಂಗುಟದ ಮೊನೆಯನ್ನು ಇಸಿಯುತ್ತಾನೆ. ಒಡನೆಯೇ ಹಾಲು ಹರಿಯುತ್ತದೆ. ಹಾಗೆಯೇ ವಿಪ್ರನೊಬ್ಬನ ಮೈಯನ್ನು ಸೀಳಲು ಹುಳುಗಳ ಸಹಿತ ಕೆನ್ನೆತ್ತರು ಸುರಿಯುತ್ತದೆ. ಈ ಪವಾಡದ ಮೂಲಕ ಅಸ್ಪೃಶ್ಯರು ಕೂಡ ಮಾನವರೇ; ಜಾತಿ ಯಿಂದಾಗಿ ಯಾರೂ ಕೀಳಲ್ಲ ಎಂಬುದನ್ನು ಬಸವಣ್ಣ ಸಮರ್ಥಿಸುತ್ತಾನೆ. ಜಾತಿಯ ಮೇಲು-ಕೀಳುಗಳನ್ನು ಕುರಿತಂತೆ ಬಹಿರಂಗವಾಗಿ ಒಂದು ನ್ಯಾಯ ವಿಚಾರಣೆ ನಡೆದದ್ದು ಜಗತ್ತಿನ ಇತಿಹಾಸ ದಲ್ಲಿ ಇದೇ ಮೊದಲೆನಿಸುತ್ತದೆ.

ಹೆಣ್ಣು, ಹೊನ್ನುಗಳ ಬಗ್ಗೆಯೂ ಬಸವಣ್ಣ ತನ್ನದೇ ಆದ ತತ್ತ್ವಗಳನ್ನು ಇಟ್ಟುಕೊಂಡಿದ್ದ. ಇವು ಪ್ರತಿಯೊಬ್ಬ ಜಂಗಮನಿಗೆ ಸಾಧ್ಯವಾಗಲೇಬೇಕೆಂಬುದು ಬಸವನ ಅಭಿಪ್ರಾಯ. ಒಮ್ಮೆ ವೆಂಕರಸನೆಂಬುವನು ಗಂಗಾದೇವಿಯ ಕಿವಿಯ ಓಲೆಯನ್ನು ಕೇಳಹೋದಾಗ 'ಕೊಡದಿಪ್ಪುದ ನ್ಯಾಯ, ಕೊಳುವುದೆಂತು ನ್ಯಾಯ' ಎನ್ನುತ್ತಾನೆ. ಹಾಗೆಯೇ ಹೆಣ್ಣನ್ನು ಕೇಳಿಬಂದ ಜಂಗಮ ನೊಬ್ಬನಿಗೆ ಹೆಣ್ಣು ಸಿಗದೇ ಇದ್ದಾಗ ತನ್ನ ಸತಿ ಮಾಯಿದೇವಿಯನ್ನೇ ಜಂಗಮನಿಗೆ ಒಪ್ಪಿಸಲು ಸಿದ್ಧವಾಗುತ್ತಾನೆ. ಈ ಸನ್ನಿವೇಶ ಬಸವಣ್ಣನ ಬಸವಭಾವವನ್ನು ಸ್ಪಷ್ಟಗೊಳಿಸುತ್ತದೆ.

ಹೀಗೆ ಮಹಾಮಾನವನಾದ ಬಸವಣ್ಣ, ಹಲವು ಮೌಲ್ಯಗಳನ್ನು ಇಟ್ಟುಕೊಂಡು ಜೀವನವುದ್ದಕ್ಕೂ ಆ ಮೌಲ್ಯಗಳ ಅನುಷ್ಠಾನಕ್ಕಾಗಿ ಹೋರಾಡುವುದನ್ನು ಅವನ ಜೀವನದಲ್ಲಿ ಕಾಣುತ್ತೇವೆ. ಸಮಯೋಚಿತ ಸನ್ನಿವೇಶಗಳನ್ನು ಸೃಷ್ಟಿಸುವ ಮೂಲಕ ಹರಿಹರ ಅವುಗಳನ್ನು ಅಂದವಾಗಿ ನಿರೂಪಿಸಿದ್ದಾನೆ.

### 6.1.3 ಬಸವಣ್ಣನ ಭಕ್ತಿ ಸ್ವರೂಪ

'ಬಸವರಾಜದೇವರ ರಗಳೆ' ಒಂದು ಅಪೂರ್ಣ ಕೃತಿ. ಜೊತೆಗೆ, ಅನೇಕ ಅತೃಪ್ತಿಕರವಾದ, ಪ್ರಶ್ನಾರ್ಥಕವಾದ, ಸಮಸ್ಯಾತ್ಮಕವಾದ ವಿಚಾರಗಳನ್ನು ಒಳಗೊಂಡಿದೆ. ಹಾಗಿದ್ದರೂ ಅಲ್ಲಿ ಬಸವಣ್ಣನವರ ಭಕ್ತಿ ಚಿತ್ರ ಮಾತ್ರ ಸೊಗಸಾಗಿದೆ. ಹರಿಹರ ಕವಿ ಬಸವಣ್ಣನ ಭಕ್ತಿಜೀವನದ ರಸಚಿತ್ರವನ್ನು ಸಂಪೂರ್ಣ ತನ್ಮಯನಾಗಿ ಚಿತ್ರಿಸಿದ್ದಾನೆ.

ಹರಿಹರ ಬಸವಣ್ಣನ ಭಕ್ತಿಜೀವನದ ರಸಚಿತ್ರವನ್ನು ಪರಸ್ಪರ ವಿರುದ್ಧವೆಂಬಂತೆ ತೋರುವ ಎರಡು ಪರಿಸರಗಳಲ್ಲಿ ಚಿತ್ರಿಸಿದ್ದಾನೆ. ಒಂದು – ಅವನು ಕಪ್ಪಡಿ ಸಂಗಮದಲ್ಲಿ ನಡೆಸಿದ ಸ್ವಾತ್ಮ ಸಾಧನಾ ರೂಪದ ಏಕಾಂತ ಭಕ್ತಿ. ಎರಡು – ಬಿಜ್ಜಳನ ಭಂಡಾರಿಯಾದ ನಂತರ

ಮಂಗಳವಾಡದ ಮಹಾಮನೆಯಲ್ಲಿ ತಂಡ ತಂಡವಾಗಿ ಬಂದ ಮಾಹೇಶ್ವರರ ನಡುವೆ, ೕಡಿದವರಿಗೆ ಬೇಡಿದ್ದನ್ನು ನೀಡುತ್ತಾ, ವಿವಿಧ ಮನಸ್ಥಿತಿಯ ಸಾಧಕರ ಸಂತೆಯ ನಡುವೆ ಅವರ ಶಿವಪೂಜಾ ಸಂಭ್ರಮದಲ್ಲಿ ಕೂಡಿಕೊಂಡ ಲೋಕಾಂತ ಭಕ್ತಿ.

ಮೊದಲನೇ ರೀತಿಯ ಭಕ್ತಿಯಲ್ಲಿ ಹರಿಹರ ಭಕ್ತ ಹೃದಯದ ಬಯಕೆಯನ್ನು ಅತ್ಯಂತ ಭಾವಗೀತಾತ್ಮಕವಾಗಿ ತೋಡಿಕೊಂಡಿದ್ದಾನೆ. ಬಸವಣ್ಣ, ನಿತ್ಯವೂ ಮುಂಜಾವದಲ್ಲಿ ಎದ್ದು ಭಸ್ಮವನ್ನು ಧರಿಸಿ, ಸಂಗಮೇಶ್ವರನಿಗೆ ಸಾಷ್ಟಾಂಗದಿಂದ ನಮಿಸಿ, ಶಿವಲಿಂಗವನ್ನಪ್ಪಿ, ೕಳ್ಕೊಂಡು, ಈಶಾನ್ಯ ದೇವರು ನಿಯಮಿಸಿದ ಆದೇಶದ ಮೇರೆಗೆ ಅಘ್ಘವಣಿ, ಪತ್ರೆ, ಪುಷ್ಪವನ್ನು ತರಲು ಹೂದೋಟಕ್ಕೆ ಹೋಗುತ್ತಾನೆ. ಅಲ್ಲಿ-

> **ಅಳಿಯೆಱಗದನಿಲನಲುಗದ ರವಿಕರಂ ಪುಗದ**
> **ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ**[15]

ೕರವಂತಿ, ಸಂಪಿಗೆ, ಹೊಂಗೇದಗೆ, ಮಲ್ಲಿಕಾಕುಟ್ಮಲ, ಮಾಲತೀ ಹೂ, ಜಾಜಿ, ಮಲ್ಲಿಗೆ, ಇದ್ದಳೆ, ಸುರಹೊನ್ನೆ, ಸೇವಂತಿಗೆಗಳನ್ನು ಕೊಂಡು, ಒಲವಿನಿಂದ ನಡೆದು ಶಿವನಿಲಯಕ್ಕೆ ಬರುತ್ತಾನೆ. ಅಲ್ಲಿ "ಎನ್ನಯ್ಯ ಎನ್ನರಸ ಎನ್ನ ಬಂಧುವೆ ಎನುತೆ, ಎನ್ನ ಕಣ್ಣುಂ ಗತಿಯೆ ಪತಿಯೆ ಕರುಣಿಪುದೆನುತೆ......... ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ"[16] ಶಿವನನ್ನು ಕೊಂಡಾಡುತ್ತಾನೆ. ಎನ್ನನಿಧಿಯೇ, ಗುಣನಿಧಿಯೇ, ಭುಜಬಲವೇ, ಎನ್ನ ಮನದೊಲವೆ, ಆರೋಗಿಸಯ್ಯ ಎಂದು ಪ್ರಾರ್ಥಿಸಿ ನವಘೃತ, ನವಶಾಕಪಾಕ, ಪಕ್ವಾನ್ನಗಳನ್ನು ಬಡಿಸುತ್ತಾನೆ. ಆಮೇಲೆ ಮಂಗಳಾರತಿ ಮಾಡಿ-

> **ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ**
> **ನಿತ್ಯನಿರ್ಭಯನೆ ನಿರುಪಮನೆ ಕೂಡಲಸಂಗ**
> **...........................................**
> **ಎನ್ನ ಕಣ್ಣೊಳಗೆ ಪರಿದಾಡು ಕೂಡಲಸಂಗ**
> **ಎನ್ನ ಮನದೊಳಗೆ ಕುಣಿದಾಡು ಕೂಡಲಸಂಗ**[17]

ಎಂದು ಕೂಡಲಸಂಗನ ಸ್ತುತಿಗೈಯುತ್ತಾನೆ. "ಸಲುಗೆಯ ಭಕ್ತಿಯಿಂದ ಬೇಡಿಕೊಂಡು ಬೆವರುತ್ತ, ಉಕ್ಕುತ್ತ, ತೇಗುತ್ತ, ತೂಗುತ್ತ, ಸಂಗಮೇಶ್ವರನ ಭಕ್ತ್ಯಾತಿಶಯದಿಂದ ನಮಿಸುತ್ತ, ಕಂಪಿಸುತ್ತ ಸಾತ್ತ್ವಿಕ ರಸವು ಹೆಚ್ಚಾಗೆ ಮಣಿಮಣಿದು ಕುಣಿಕುಣಿದು, ಕೆಲೆಕೆಲೆದು ನಲಿದಾಡಿ, ಕುಣಿಯುತ್ತಾನೆ."[18] ದಿನ ದಿನ, ಗಳಿಗೆ ಗಳಿಗೆಗಳಿಗೆ ಭಕ್ತಿ ಹೆಚ್ಚಾಗಿ ಕಾಲ ಕಳೆಯುತ್ತಾನೆ. ನಡೆವಲ್ಲಿ, ನುಡಿವಲ್ಲಿ, ಉಡುವಲ್ಲಿ, ಉಂಬಲ್ಲಿ ಕೊಡುವಲ್ಲಿ - ಎಲ್ಲ ವೇಳೆಯಲ್ಲೂ ಸಂಗ ಶರಣು ಎನ್ನುತ್ತಾ ಸಂಗಮ ನಾಮದಲ್ಲೇ ಮೈಮರೆತು "ಲಿಂಗಜಂಗಮವೋ ಮೇಣ್ ಜಂಗಮವೇ ಲಿಂಗವೋ / ಲಿಂಗ ಜಂಗಮವೆರಡು ಇಳೆಯೊಳು ವಿಭೇದವೋ"[19] ಎಂಬಂತೆ ಇರುತ್ತಾನೆ.

ಬಸವಣ್ಣನ ಭಕ್ತಿ ಜೀವನದ ದಿನಚರಿಯ ಪುಟವೊಂದರಂತೆ ತೋರುವ ಈ ಭಾಗ, ಹರಿಹರನ 'ಪುಷ್ಪ ರಗಳೆ'ಮತ್ತು 'ಲಿಂಗಾರ್ಚನೆಯ ರಗಳೆ'ಗಳನ್ನು ನೆನಪಿಗೆ ತರುತ್ತದೆ. ಹರಿಹರನ ಭಕ್ತಿಯಲ್ಲೂ ಇಂಥದ್ದೇ ತಲ್ಲೀನತೆ, ಇಂಥದ್ದೇ ಮುಗ್ಧತೆ, ಇಂಥದ್ದೇ ಭಾವಗಳನ್ನು ಕಾಣುತ್ತೇವೆ. ಹರಿಹರನ ಪುಷ್ಪರಗಳೆಯಲ್ಲಿ ಬರುವ ಪುಷ್ಪಗಳೇ ಇಲ್ಲಿಯೂ ಬರುತ್ತವೆ. ಹರಿಹರ ಮುಂಜಾವೆದಲ್ಲೇ ಎದ್ದು ಹೂ ತೋಟಕ್ಕೆ ಹೋಗುವಂತೆ ಇಲ್ಲಿ ಬಸವಣ್ಣನೂ ಹೋಗುತ್ತಾನೆ. ಅಳಿಯೆರಗದ, ಅನಿಲ ಸೋಕದ, ರವಿಕಿರಣಗಳು ಮುಟ್ಟದ ಹೂಗಳಿಗಾಗಿ ಹರಿಹರ ಹೇಗೆ ಹುಡುಕುತ್ತಾನೆಯೋ ಹಾಗೆಯೇ ಇಲ್ಲಿ ಬಸವಣ್ಣ ಅಂಥದ್ದೇ ಹೂಗಳಿಗಾಗಿ ಹುಡುಕುತ್ತಾನೆ. ಅಲ್ಲಿ ಶಿವನಿಗೆ ಹೂಗಳನ್ನು ಅರ್ಪಿಸಿ ಹರಿಹರ ಹೇಗೆ ನಲಿದಾಡುತ್ತಾನೋ ಹಾಗೆಯೇ ಇಲ್ಲಿ ಬಸವಣ್ಣ ನಲಿದಾಡುತ್ತಾನೆ. ಅದೇ ಭಾವ ಅದೇ ಪದಗಳು, ಜೋಡಣೆ ಮಾತ್ರ ಹಿಂದೆ ಮುಂದೆಯಾಗಿವೆ ಅಷ್ಟೆ, ಎನ್ನಬಹುದು. ಬಸವಣ್ಣ ಎಲ್ಲಿ ಇರುತ್ತಾನೋ ಅಲ್ಲಿ ಹರಿಹರ ಇರುತ್ತಾನೆ. ಹರಿಹರ ಎಲ್ಲಿ ಇರುತ್ತಾನೋ ಅಲ್ಲಿ ಬಸವಣ್ಣ ಇರುತ್ತಾನೆ. ಅವನು ಏನು ಮಾಡುತ್ತಾನೋ ಅದನ್ನು ಇವನೂ ಮಾಡುತ್ತಾನೆ. ಇವನು ಏನು ಮಾಡುತ್ತಾನೋ ಅದನ್ನೇ ಅವನೂ ಮಾಡುತ್ತಾನೆ. ಇವನೇ ಅವನು, ಅವನೇ ಇವನು. ಹೀಗೆ ಹರಿಹರನೇ ಬಸವನಾಗಿ ಬಸವನೇ ಹರಿಹರನಾಗಿ ಇಬ್ಬರ ನಡುವೆಯೂ ಅಭೇದ ಸೃಷ್ಟಿಯಾಗಿದೆ.

ಇಲ್ಲಿಯವರೆಗೆ ಬಸವಣ್ಣನ ಏಕಾಂತ ಭಕ್ತಿಯ ಬಗ್ಗೆ ನೋಡಿದ್ದಾಯಿತು. ಇಲ್ಲಿಂದ ಮುಂದೆ ಅವನ ಲೋಕಾಂತ ಭಕ್ತಿಯನ್ನು ಕೊಂಚಮಟ್ಟಿಗೆ ಗಮನಿಸೋಣ.

ಅಸಂಖ್ಯಾತ ಶರಣರು ಬಸವಣ್ಣನ ಮಹಾಮನೆಗೆ ಬರುತ್ತಾರೆ. ಆಗ ಬಸವಣ್ಣ ತಮ್ಮ ಅರಸಿಯರಿಗೆ ಹೇಳಿ ಬಗೆ ಬಗೆಯ ತಿಂಡಿಗಳನ್ನುಳ್ಳ ರಸಕವಳವನ್ನು ಸಿದ್ಧಪಡಿಸುತ್ತಾನೆ. ಬಂದ ಶರಣರಿಗೆಲ್ಲ ನಮಸ್ಕಾರ ಮಾಡಿ ಪಾದ ತೊಳೆದು ಪ್ರಸಾದ ಸೇವನೆಗೆ ಅಣಿ ಮಾಡುತ್ತಾನೆ. ಪೂಜೆಗಾಗಿ ಯಾವ್ಯಾವ ಹೂವುಗಳು ಬೇಕೋ ಆ ಹೂವುಗಳನ್ನೆಲ್ಲ ಒದಗಿಸುತ್ತಾನೆ. ಶಿವಪೂಜೆಯು ಪ್ರಾರಂಭವಾಗುತ್ತದೆ —

ಮಜ್ಜನಕ್ಕೆಱೆವುತಂ ಕರಗುತಿರ್ಪರ್ ಕೆಲರು
ಉಜ್ವಳಿಪ ಲಿಂಗಮಂ ನೋಡುತಿರ್ಪರ್ ಕೆಲರು
ಪೂಜೆಯಂ ಮಾಡಿ ಪುಟವೆದ್ದಾಡುವರ್ ಕೆಲರು
.........................................
ಧೂಪಮಂ ಮಱೆವಾರತಿಯನೆತ್ತುವರ್ ಕೆಲರು
ದೀಪಮಂ ಧೂಪಮೆಂದರ್ಚಿಸುವವರ್ ಕೆಲರು[20]

ಹೀಗೆ ಶರಣರೆಲ್ಲ ಶಿವಪೂಜಾ ಸಂಭ್ರಮದಲ್ಲಿ ತೊಡಗಿದ್ದಾರೆ. ಆ ಸಂಭ್ರಮದಲ್ಲಿ ತಾನೂ ಮೈಮರೆತಿದ್ದಾನೆ. ಶರಣರ ಶಿವಪೂಜೆ ಮುಗಿಯುತ್ತಿದ್ದಂತೆಯೇ ಆರೋಗಣೆಯು ಪ್ರಾರಂಭವಾಗುತ್ತದೆ. "ಶರಣರೆಲ್ಲ, ಎಡೆಮಾಡಿದ ಮೃಷ್ಟಾನ್ನವನ್ನು ಲಿಂಗಾರ್ಪಿತ ಮಾಡಿ ತಣಿದಿದ್ದಾರೆ. ರಸಬಸಿವ ಪಕ್ವಾನ್ನಗಳನ್ನು ಸವಿದು, ಮೇಲೆ ಆಹಾ! ತುಪ್ಪವನು ಸುರಿಸುರಿದು 'ಬಸವಣ್ಣಾ ಬಾಳೆಂದು' ಅಣ್ಣಾ ಶರಣೆಂದು, ಬಳಲದೆ ಸಲಿಸುತ್ತ; ಮಂದಗಿರುವ ಮಜ್ಜಿಗೆಯನ್ನು ಕುಡಿದ ಮೇಲೆ ಬಸವನ ಪ್ರೀತಿ

ಶರಣರ ತೃಪ್ತಿಗೆ ಎಣೆಯುಂಟೆ? ಬಸವನೆಂದಾದರೂ ಶರಣರ ಬೇಡಿಕೆಗೆ ಬಾಡಿದನೇ? ಬಳಲಿದನೇ? ಬೆದರಿದನೇ? ಎಲ್ಲವನ್ನೂ ಸಂಗಮೇಶ್ವರ ಕರುಣದಿಂದ ಪೂರೈಸುತ್ತಿದ್ದಾನೆ."[21] ಶರಣರ ಸಂತತಿ ಬಸವಣ್ಣನ ಈ ಉಪಚಾರವನ್ನು ಮನಸಾರೆ ಹೊಗಳತೊಡಗುತ್ತದೆ.

ಹೀಗೆ "ಈ ಎರಡು ಪರಿಸರಗಳಲ್ಲೂ ಬಸವಣ್ಣನ ಭಕ್ತಿ ಉಜ್ವಲವಾಗಿ ಪ್ರಕಟವಾಗಿದೆ. ಒಂದರಲ್ಲಿ ಕಿರುತೊರೆಯ ಲಾಲಿತ್ಯ- ಏಕಾಂತತೆಗಳು ತೋರಿದರೆ, ಮತ್ತೊಂದರಲ್ಲಿ ಹತ್ತು ದಿಕ್ಕಿನ ಹಳ್ಳಗಳನ್ನು ತನ್ನಲ್ಲಿ ಕೂಡಿಸಿಕೊಂಡು ಭೋರ್ಗರೆಯುವ ಹೊನಲಿನ ಆವೇಶ-ಸಂಭ್ರಮಗಳು ಗೋಚರಿಸುತ್ತವೆ. ಮೊದಲನೆಯದರಲ್ಲಿ ಬಸವಣ್ಣನ ಸಂಗಮನಾಥನಿಂದ ಲೋಕ ಸಂಗ್ರಹಕ್ಕಾಗಿ ಪಡೆದ ನಿರ್ದೇಶನ ಮತ್ತು ಅಧಿಕಾರ ಸಂಪಾದನೆಗಳು ಕಂಡುಬಂದರೆ, ಎರಡನೆಯದರಲ್ಲಿ ಅವರು ತಮ್ಮ ಸಾಧನೆಯನ್ನು ಸಮೂಹದೊಂದಿಗೆ ವಿಲೀನಗೊಳಿಸಿ, ಭಕ್ತಜೀವನದ ನಿರ್ದೇಶಕರಂತೆ ತೋರುತ್ತಾನೆ."[22]

### 6.1.4 ಬಸವಣ್ಣನ ಮಾನವೀಯ ಬದುಕು

ಹರಿಹರ ತನ್ನ ಕೃತಿಗೆ ಇಟ್ಟ ಹೆಸರು 'ಬಸವರಾಜದೇವರ ರಗಳೆ' ಎಂದು. ಈ ಶೀರ್ಷಿಕೆಯಿಂದಲೇ ಬಹುಶಃ, ಬಸವಣ್ಣನ ಚರಿತೆಯನ್ನು ನಿರ್ಮಿಸುವಲ್ಲಿ ಹರಿಹರನ ದೃಷ್ಟಿ ಏನಾಗಿದೆಯೆಂಬುದನ್ನು ಕಂಡುಕೊಳ್ಳಬಹುದು. ಅಂತೆಯೇ ಕವಿ ಬಸವಣ್ಣನ ಅಲೌಕಿಕ ಬದುಕಿಗೆ ಹೆಚ್ಚಿನ ಮಹತ್ವ ನೀಡಿದ್ದಾನೆ. ಅಂದ ಮಾತ್ರಕ್ಕೆ ಕವಿ ಬಸವಣ್ಣನ ಮಾನವೀಯ ಬದುಕನ್ನು ಮರೆತಿದ್ದಾನೆ ಎಂದರೆ ಸರಿಯಾಗದು. ಇಡೀ ಕಾವ್ಯದಲ್ಲಿ ಎದ್ದು ಕಾಣುವುದೇ ಬಸವಣ್ಣನ ಮಾನವೀಯ ಬದುಕು.

ಬಸವಣ್ಣ ಮೂಲತಃ ಬ್ರಾಹ್ಮಣ. ಅರಸ ಬಿಜ್ಜಳರಾಯನ ಭಂಡಾರಿಯಾಗಿದ್ದವನು. ಅಂದಮೇಲೆ ಅವನಿಗೆ ಸಮಾಜದಲ್ಲಿ ಒಂದು ವಿಶೇಷ ಸ್ಥಾನಮಾನ ಇದ್ದೇ ಇರಬೇಕು, ಇದೆ. ಆದರೆ ಬಸವಣ್ಣ ಇಂಥ ಸ್ಥಾನಮಾನಗಳಿಗಾಗಿ ಎಂದೂ ಬದುಕಲಿಲ್ಲ. ಅವನಿಗೆ ಇಷ್ಟವಾದದ್ದು ಶರಣರ ಸುಂದರವಾದ, ಆದರ್ಶ ತುಂಬಿದ ಬದುಕು. ಅವನ ಒಡನಾಟಗಳೆಲ್ಲವೂ ಅವರೊಡನೆಯೇ. ಒಮ್ಮೆ, ತನ್ನ ಮಹಾಮನೆಯಲ್ಲಿ ಶಿವಗೋಷ್ಠಿಯನ್ನು ನಡೆಸಿ ದಾಸೋಹವನ್ನು ಏರ್ಪಡಿಸುತ್ತಾನೆ. ಅಲ್ಲಿಗೆ ವಿವಿಧ ದೇಶಗಳಿಂದ ಶರಣರು ಬರುತ್ತಾರೆ. ಬಂದ ಶರಣರಿಗೆಲ್ಲ ತನ್ನ ಅರಸಿಯರಿಗೆ ಹೇಳಿ ಅಡುಗೆ ಮಾಡಿಸುತ್ತಾನೆ. ಶರಣರು ಬರುತ್ತಿದ್ದಂತೆಯೇ ಅವರನ್ನು ಪ್ರೀತಿಯಿಂದ ಬರಮಾಡಿಕೊಳ್ಳುತ್ತಾನೆ. ಅವರ ಪಾದಗಳಿಗೆ ನೀರು ಕೊಟ್ಟು ನಮಸ್ಕಾರ ಮಾಡಿಕೊಳ್ಳುತ್ತಾನೆ. ಪೂಜೆಗಾಗಿ ಬಗೆಬಗೆಯ ಹೂಗಳನ್ನು ಸರಬರಾಜು ಮಾಡುತ್ತಾನೆ. ಪೂಜೆಯೆಲ್ಲ ಮುಗಿಯುತ್ತಿದ್ದಂತೆ ಊಟ ಏರ್ಪಡಿಸುತ್ತಾನೆ. ತನ್ನ ಪತ್ನಿಯರು ಮಾಡಿದ ಬಗೆ ಬಗೆಯ ತಿಂಡಿ ಹಾಗೂ ರಸಾನ್ನವನ್ನು ಅವರಿಗೆ ಬಡಿಸುತ್ತಾನೆ. ಎಲ್ಲರನ್ನೂ ತೃಪ್ತಿ ಪಡಿಸುತ್ತಾನೆ. ಇಲ್ಲಿ ಬಸವಣ್ಣನ ವಿನಯ, ವಿನಮ್ರತೆ, ಸೇವಾ ಕೈಂಕರ್ಯ ಎದ್ದು ತೋರುತ್ತದೆ.

ಜಂಗಮರೆಂದರೆ ಬಸವಣ್ಣನಿಗೆ ಪ್ರಾಣವಿದ್ದಂತೆ. ಒಮ್ಮೆ ದೂರದಿಂದ ಶರಣರು ಬಂದಿರುತ್ತಾರೆ-ಬಸವಣ್ಣನನ್ನು ನೋಡಲು. ಆ ಸಂದರ್ಭದಲ್ಲಿ ಬಸವಣ್ಣ ನಿದ್ರಾವಸ್ಥೆ

ಯಲ್ಲಿರುತ್ತಾನೆ. ಹಾಗಾಗಿ ಕಾವಲಿನವರು, ಬಂದ ಶರಣರನ್ನು ಹಾಗೆಯೇ ಕಳುಹಿಸಿಬಿಡುತ್ತಾರೆ. ಆ ಶರಣರ ಹಿಂದೆಯೇ ಬಸವಣ್ಣನ ಜೀವವೂ ಹೋಗುತ್ತದೆ. ದೇಹಮಾತ್ರ ಅಲ್ಲೇ ಇರುತ್ತದೆ. ಇದು ಬಸವಣ್ಣನ ಜಂಗಮರ ಬಗೆಗೆ ಇಟ್ಟುಕೊಂಡಿದ್ದ ಆತ್ಮೀಯ ಪ್ರೀತಿ, ನಂಬಿಕೆಯನ್ನು ವ್ಯಕ್ತಪಡಿಸುತ್ತದೆ.

ಬಸವಣ್ಣ ಬೇರೊಬ್ಬರ ಮನಸ್ಸಿಗೆ ನೋವಾಗುವಂತೆ ಎಂದೂ ನಡೆದುಕೊಂಡವನಲ್ಲ. ಅಚಾನಕ್ಕಾಗಿ ಒಮ್ಮೆ ಈ ಕಾರ್ಯ ನಡೆದುಬಿಡುತ್ತದೆ. ಉಳ್ಳಿಯನ್ನು ಅಭೋಜ್ಯ ವಸ್ತುವೆಂದು ತಿರಸ್ಕರಿಸಿದ್ದಕ್ಕೆ ಕಿನ್ನರಿ ಬೊಮ್ಮಯ್ಯ ಮುನಿಸಿಕೊಂಡು ಹೋಗುತ್ತಾನೆ. ತಕ್ಷಣವೇ ಬಸವಣ್ಣ ತನ್ನಿಂದಾದ ತಪ್ಪನ್ನು ಕಂಡುಕೊಳ್ಳುತ್ತಾನೆ. ಆ ತಪ್ಪಿಗೆ ಪಶ್ಚಾತ್ತಾಪಪಟ್ಟು ಮತ್ತೆ ಕಿನ್ನರಿ ಬೊಮ್ಮಯ್ಯನನ್ನು ದೀನನಾಗಿ ಬೇಡಿ ಕರೆದುಕೊಂಡು ಬರುತ್ತಾನೆ. ಉಳ್ಳಿಯ ಉತ್ಸವವನ್ನೇ ಮಾಡಿ ಕಿನ್ನರಿ ಬೊಮ್ಮಯ್ಯನನ್ನು ಒಲಿಸುತ್ತಾನೆ. ಒಂದು ವೇಳೆ ಇದನ್ನು ಕಡೆಗಣಿಸಿದ್ದರೆ, ಬಸವಣ್ಣನ ಮಾನವೀಯ ವ್ಯಕ್ತಿತ್ವ ಕುಗ್ಗುತ್ತಿತ್ತು.

ಬಸವಣ್ಣನಿಗೆ ಹೊಲೆಯ-ಬ್ರಾಹ್ಮಣ ಎಂಬ ತಾರತಮ್ಯವಿಲ್ಲ. ಒಮ್ಮೆ ಅವನು ಅಸ್ಪೃಶ್ಯನಾದ ಸಂಬೋಳಿನಾಗಿದೇವನ ಮನೆಯಲ್ಲಿ ಊಟ ಮಾಡುತ್ತಾನೆ. ಇದು ದೊಡ್ಡ ವಿವಾದವಾಗಿ ರಾಜನಿಗೆ ತಲುಪುತ್ತದೆ. ಬಿಜ್ಜಳರಾಜ ಬಹಿರಂಗವಾಗಿಯೇ ಸಭೆ ಸೇರಿಸುತ್ತಾನೆ. ಆ ಸಭೆಯಲ್ಲಿ ಬಸವಣ್ಣನ ಅಸ್ಪೃಶ್ಯನ ಘನತೆಯನ್ನು ಎತ್ತಿ ಹಿಡಿದು ಅವನೂ ಎಲ್ಲರಂತೆ ಮನುಷ್ಯನೇ ಎಂಬುದನ್ನು ತೋರ್ಪಡಿಸುತ್ತಾನೆ. ಹೀಗೆ ಬಸವಣ್ಣನ ಮಾನವೀಯ ಬದುಕನ್ನು ವ್ಯಕ್ತಪಡಿಸುವ ಇನ್ನೂ ಹಲವು ಸನ್ನಿವೇಶಗಳು ಕಥೆಯಲ್ಲಿ ಬರುತ್ತವೆ. ಹಸುಗಳನ್ನು ಕಳ್ಳರು ಕದ್ದೊಯ್ದರೆಂದು ತಿಳಿದಾಗ ಕೂಡಲೇ ತಾಯನ್ನಗಲಿದ ಕರುಗಳ ಪಾಡನ್ನು ನೆನೆದು, ಕರುಗಳನ್ನು ಬಿಚ್ಚಿ ಹಸುಗಳ ಕಡೆ ಕಳುಹಿಸುವ ಸನ್ನಿವೇಶ; ತಮ್ಮ ಸತಿಯನ್ನು ಜಂಗಮನಿಗೆ ಒಪ್ಪಿಸಿ ತಾವು ನಿರ್ವಿಕಾರರಾಗಿ ಕುಳಿತ ಸನ್ನಿವೇಶ; ತಮ್ಮ ಸತಿಯ ಕಿವಿಯ ಓಲೆಗೆ ಕಳ್ಳನೊಬ್ಬ ಕೈಹಾಕಿದಾಗ "ಎಲೆಲೆ ಸಂಗನ ಕರಂನೊಂದುದೇ, ಬೆಸಸುವಲ್ಲಿಂ ಮುನ್ನವೆ ಕೊಡದೆನಿಲ್ಲುದೆ."[23] ಎಂಬ, ಈ ಸನ್ನಿವೇಶಗಳಲ್ಲಿ ಬಸವಣ್ಣನ ಅಪೂರ್ವ ಸಮರ್ಪಣ ಶ್ರದ್ಧೆ, ಮನಸ್ಸಿನ ಪರಿಪಾಕ, ಅನುಕಂಪ, ದಯಾಗುಣಗಳು ಮಡುಗಟ್ಟಿ ನಿಂತಿವೆ.

### 6.1.5 ಬಸವರಾಜದೇವರ ರಗಳೆ ಮತ್ತು ಬಸವಣ್ಣನ ವಚನಗಳು

ಬಸವಣ್ಣ ಮತ್ತು ಹರಿಹರನ ಜೀವಿತ ಕಾಲಕ್ಕೆ ಸುಮಾರು ನಲವತ್ತು ಐವತ್ತು ವರ್ಷಗಳ ಅಂತರವಿದೆ. ಈ ಅವಧಿಯಲ್ಲಿ ಹರಿಹರನಿಗೆ ಬಸವಣ್ಣನನ್ನು ಕುರಿತು ಕಾವ್ಯ ಬರೆಯಲು ಇದ್ದ ಆಧಾರಗಳೆಂದರೆ, ಬಸವಣ್ಣನ ಬಗ್ಗೆ ಜನರ ಮನದಲ್ಲಿ ಉಳಿದುಕೊಂಡು ಬಂದಿದ್ದ ಕಥೆಗಳು ಮತ್ತು ಬಸವಣ್ಣನ ವಚನಗಳು. ಜನರ ಮನದಲ್ಲಿದ್ದ ಕಥೆಗಳನ್ನು ಆತ ಬಳಸಿಕೊಂಡಿದ್ದಾನೋ ಇಲ್ಲವೋ ಅದು ನಮಗಿಲ್ಲಿ ಎರಡನೆಯ ಪ್ರಶ್ನೆ. ಆದರೆ ವಚನಗಳನ್ನು ಬಳಸಿಕೊಂಡಿದ್ದಾನೆ ಎಂಬುದಂತೂ ಖಚಿತ. ಅದಕ್ಕೆ ಅವನ ಕಾವ್ಯದಿಂದಲೇ ಹಲವು ಉದಾಹರಣೆಗಳು ದೊರೆಯುತ್ತವೆ. ಹಲವೆಡೆ ಬಸವಣ್ಣನ ವಚನಗಳಿಗೆ ಹರಿಹರ ರಗಳೆಯ

ರೂಪ ಕೊಟ್ಟಿರುವಂತೆ ತೋರುತ್ತದೆ. ಇನ್ನೂ ಹಲವೆಡೆ ವಚನಗಳಲ್ಲಿ ಕಾಣುವ ಬಸವಣ್ಣನ ಮನೋಧರ್ಮಗಳಿಗೆ, ಸನ್ನಿವೇಶಗಳನ್ನು ಕಲ್ಪಿಸಿ, ಅವು ಬಸವಣ್ಣನ ಬದುಕಿನಲ್ಲಿ ನಡೆದಿರ ಬಹುದಾದ ಘಟನೆಗಳು ಎಂಬಂತೆ ಚಿತ್ರಿಸಿದ್ದಾನೆ. ಹಲವು ವಚನಗಳನ್ನಾಧರಿಸಿ ಬಸವರಾಜ ದೇವರ ರಗಳೆಯಲ್ಲಿ ಅವುಗಳ ಛಾಯೆಯನ್ನು ಗುರುತಿಸಬಹುದು.

ಬಸವಣ್ಣನಿಂದ ಭಂಡಾರದ ಸಂಪತ್ತು ಶರಣರಿಗಾಗಿ ಪೋಲಾಗುತ್ತಿದೆ ಎಂದು ವೈಷ್ಣವರು ಒಮ್ಮೆ ಬಿಜ್ಜಳನಿಗೆ ಚಾಡಿ ಹೇಳುತ್ತಾರೆ. ಆ ಚಾಡಿ ಮಾತನ್ನು ಕೇಳಿದ ರಾಜ, ವಿಚಾರಣೆ ನಡೆಸಿ ಬಸವಣ್ಣನಿಗೆ "ನಿಮ್ಮ ನಂಬಿ ಭಂಡಾರಮಂ ಕೊಟ್ಟಡೆನ್ನನಿಂತು ಕೆಡಿಸುವರೆ? ಶಿವಭಕ್ತರ್ಗಿತ್ತು ರಾಜ್ಯಮಂ ನೀರೊಳದ್ದುವರೆ? ಹಲವು ಮಾತೇನು ನಿಂದ ಹೊನ್ನಿಂಗೆ ನಿರ್ಣಯಮಂ ಕೊಡುವುದು"[24] ಎಂದು ಕೇಳುತ್ತಾನೆ. ಆಗ ಬಸವಣ್ಣ "ಕೇಳೆಲೆ ಸಜ್ಜನರನರಿಯದ ಬಿಜ್ಜಳ ಭೂಪ, ಉದದಿ ನದಿಯ ನೀರಂ ಸೀವುದೆ? ಭಾಸ್ಕರಂ ಕನ್ನಡಿಯ ಬೆಳಗಂ ಪಾರ್ವನೆ? ಶಿವಭಕ್ತರು ನಿನ್ನೊಡವೆಗಾಸೆಯ ಮಾಳ್ಪರೇ, ತಮ್ಮೊಡವೆಯ ತಾವು ಕೊಂಡರು ನಡೆ ನಡೆ"[25] ಎಂದು ನಿರ್ಭಿಡೆಯಿಂದ ಹೇಳುತ್ತಾನೆ. ಈ ಭಾಗವು ಬಸವಣ್ಣನ —

> ಊರಮುಂದೆ ಹಾಲ ಹಳ್ಳ ಹರಿವುತ್ತಿರಲು
> ಒರೆಯಾವಿನ ಬೆನ್ನ ಹರಿಯಲದೇಕಯ್ಯ?
> ಲಜ್ಜೆಗೆಡಲೇಕೆ? ನಾಣುಗೆಡಲೇಕೆ?
> ಕೂಡಲ ಸಂಗಮದೇವರುಳ್ಳನ್ನಕ್ಕ
> ಬಿಜ್ಜಳನ ಭಂಡಾರವೆನಗೇಕಯ್ಯ[26]

ಎಂಬ ವಚನದಿಂದ ಪ್ರಭಾವಿತವಾಗಿರುವುದನ್ನು ಗುರುತಿಸಬಹುದು. ಇಲ್ಲಿ ಮುಖ್ಯವಾಗಿ ವಚನದ ಭಾವ ಗದ್ಯದಲ್ಲಿ ರೂಪ ತಳೆದಿದೆ.

ಹರಿಹರ ವಚನಗಳ ಚೆಲುವಿನ ಸತ್ವ ಎಲ್ಲಿದೆ ಎಂಬುದನ್ನು ಕಂಡುಕೊಂಡು ಅದನ್ನು ಬಹಳ ಜಾಣ್ಮೆಯಿಂದ ತನ್ನ ಕೃತಿಯಲ್ಲಿ ಅಳವಡಿಸಿಕೊಳ್ಳುತ್ತಾನೆ. ಇದಕ್ಕೆ ಅವನ ಕೃತಿಯಲ್ಲಿ ಹಲವು ನಿದರ್ಶನಗಳಿವೆ.

"ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು"[27] ಎಂಬ ಗೀತವನ್ನು ಬಸವರಾಜ ಹಾಡುತ್ತಿದ್ದನೆಂದು ಹರಿಹರ ಉಲ್ಲೇಖಿಸಿದ್ದಾನೆ. ಇದನ್ನು ಹರಿಹರ ಬಸವಣ್ಣನ-

> **ತನುವಬೇಡಿದಡೀವೆ, ಮನವಬೇಡಿದಡೀವೆ!**
> **ಧನವ ಬೇಡಿದಡೀವೆ, ಬೇಡು, ಬೇಡಲೆ ಹಂದೆ!**
> **ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ!**[28]

ಎಂಬ ಗೀತೆಯಿಂದ ಪ್ರಭಾವಿತನಾಗಿ ಬರೆದಿದ್ದಾನೆ ಎಂಬುದು ಸ್ಪಷ್ಟ. ಬಸವಣ್ಣ ತಾನು

ಹೇಳಿದ ಹಾಗೆ ನಡೆಯುತ್ತಾನೋ ಇಲ್ಲವೋ ಪರೀಕ್ಷಿಸಬೇಕು ಎಂದು ತಿಳಿದು ಕಳಿಂಗ ದೇಶದ ಮಹಾದೇವಶೆಟ್ಟಿ ಬರುತ್ತಾನೆ. ಆಗ ಬಸವಣ್ಣ "ಪರೀಕ್ಷೆಗೆ ತೆರಹಿಲ್ಲಂ ಕಟ್ಟಿದೆನೊರೆಯ, ಬಿಟ್ಟೆ ಜನ್ನಿಗೆಯ, ಓಡದಿರೋಡದಿರು, ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರೆಲೆ ದೇವ, ಎಲೆ ತಂದೆ, ಎಲೆಲೆ ಹಂದೆ, ಕೂಡಲಸಂಗ ಸ್ವಯವಾಗು ಸ್ವಯವಾಗು"[29] ಎಂಬ ಧೈರ್ಯದ ಮಾತನ್ನು ಹೇಳುತ್ತಾನೆ. ಈ ಪ್ರಸಂಗದ ನಿರ್ವಹಣೆಯಲ್ಲಿ ಹರಿಹರನು ಬಸವಣ್ಣನ-

> ಕಟ್ಟಿದೆನೊರೆಯ ಬಿಟ್ಟೆ, ಜನ್ನಿಗೆಯರ
> ಮುಟ್ಟಿ ಬಂದಿರಿದಡೆ ಓಸರಿಸುವನಲ್ಲ,
> ಓಡದಿರು ಓಡದಿರು-
> ನಿಮ್ಮ ಶರಣರ ಮನೆಯ ಬಿರುದಿನ ಅಂಕಕಾರ
> ಓಡದಿರು ಓಡದಿರು, ಎಲೆ ಎಲೆ ದೇವಾ
> ಎಲೆ ಎಲೆ ಸ್ವಾಮೀ ಎಲೆ ಎಲೆ ಹಂದೆ[30]

ಎಂಬ ವಚನವನ್ನು ಯಥಾವತ್ತಾಗಿ ಉಪಯೋಗಿಸಿಕೊಂಡಿದ್ದಾನೆ ಎನ್ನಬಹುದು. ಇನ್ನೊಂದು ಸಂದರ್ಭದಲ್ಲಿ ಕಳ್ಳರು ಆಕಳುಗಳನ್ನು ಕದ್ದೊಯ್ಯುವ ಪ್ರಸಂಗವನ್ನು ಹರಿಹರ ಸೃಷ್ಟಿಸುತ್ತಾನೆ. ಹರಿಹರನ ಈ ಸೃಷ್ಟಿಗೆ ಬಸವನ-

> ಆಕಳ ಕಳ್ಳರು ಕೊಂಡೊಯ್ವರೆನ್ನದಿರಿಂ ಭೋ ನಿಮ್ಮ ಧರ್ಮ
> ..................................................
> ಅಲ್ಲಿ ಉಂಬಡೆ ಸಂಗ ಇಲ್ಲಿ ಉಂಬಡೆ ಸಂಗ!
> ಕೂಡಲ ಸಂಗಮದೇವ ಏಕೋ ಭಾವ[31]

ಎಂಬ ವಚನದ ಪ್ರೇರಣೆಯು ಇದ್ದಂತೆ ಕಂಡುಬರುತ್ತದೆ. ಇಲ್ಲಿ ಹರಿಹರನು ಬಳಸುವ-

> .... ಮರುಳು ಗೋವಳಾ ಭಕ್ತರೇಂ ಕಳ್ಳರೇ
> ನಿನಗೇನು ತಮ್ಮೊಡವೆಯಂ ತಾವೆ ಕೊಳ್ಳರೇ
> ..............................................
> ಸಂಗನೇ ಕೊಂಬವಂ ಸಂಗನೇ ಕೊಡುವವಂ
> ಸಂಗನೇ ಉಂಬವಂ ಸಂಗನೇ ಉಡುವವಂ [32]

ಎಂಬ ರಗಳೆಯ ಸಾಲುಗಳು ಬಸವಣ್ಣನ ವಚನದ ಪಡಿನೆಳಲಿನಂತಿವೆ.

ಹೀಗೆ, ಹರಿಹರ ಕವಿ ತನ್ನ ಕಾವ್ಯಕ್ಕೆ ವಚನಗಳನ್ನು ಅಳವಡಿಸಿಕೊಳ್ಳುವುದರ ಮೂಲಕ

"ತನ್ನ ನಿರೂಪಣೆಗೆ ಒಂದು ಅಧಿಕೃತತೆಯನ್ನು ತರಲು ಯತ್ನಿಸಿದ್ದಾನೆ. ಬೇರೆ ಬೇರೆ ವಚನಗಳಿಗೆ ಸೂಕ್ತ ಸಂದರ್ಭಗಳನ್ನು ಒದಗಿಸಿ ಅವುಗಳ ಚಾರಿತ್ರಿಕತೆಯನ್ನು ತಿಳಿಯಲು ಸಹಾಯ ಮಾಡಿದ್ದಾನೆ."[33]

## 6.1.6 ಪವಾಡಗಳಿಂದ ಮರೆಯಾಗುವ ಬಸವಣ್ಣನ ವ್ಯಕ್ತಿತ್ವ

ಬಸವಣ್ಣ ಮೂಲತಃ ಮರ್ತ್ಯ ಜೀವಿ. ಭೂಮಿಯ ಮೇಲೇ ಇದ್ದು ಮರ್ತ್ಯ ಮಾನವ ರೊಡನೆ ತನ್ನ ಸುಖ-ದುಃಖಗಳನ್ನು ಹಂಚಿಕೊಂಡು ಬಾಳಿದವನು. ಇತರರ ಸುಖಕ್ಕೆ ಸಂತೋಷಪಟ್ಟವನು; ದುಃಖಕ್ಕೆ ಮರುಗಿದವನು; ಸಮಾನತೆಗಾಗಿ ಹೋರಾಡಿದವನು. ಅವನು ಮಾನವೀಯ ಹೃದಯ ಹೊಂದಿದ ಮಹಾ ವ್ಯಕ್ತಿ. ಹರಿಹರ ಮಾರುಹೋದದ್ದೇ ಬಸವಣ್ಣನ ಈ ಮಾನವೀಯ ಹೃದಯಕ್ಕೆ. ಹಾಗಾಗಿ ಬಸವಣ್ಣನ ಈ ಮಾನವೀಯ ಬದುಕನ್ನು ಹರಿಹರ ತನ್ನ ಕಥೆಯಲ್ಲಿ ಚಿತ್ರಿಸುವ ಪ್ರಯತ್ನ ಮಾಡಿದ್ದಾನೆ. ಚೆನ್ನಾಗಿ ಚಿತ್ರಿಸಿಯೂ ಇದ್ದಾನೆ. ಆದರೆ ಪವಾಡಗಳ ಅತಿಯಾದ ಬಳಕೆಯಿಂದ ಬಸವಣ್ಣನ ಆ ವ್ಯಕ್ತಿತ್ವ ಸ್ವಲ್ಪ ಮಟ್ಟಿಗೆ ಮರೆಯಾಗು ವುದನ್ನು ಕಾಣುತ್ತೇವೆ.

ಕಥೆಯಲ್ಲಿ ಸುಮಾರು ಎಂಟು ಪವಾಡಗಳು ಬರುತ್ತವೆ. ಮೊದಲನೆಯ ಪವಾಡ, ಬಸವಣ್ಣನ ಸಂಗಮ ಕ್ಷೇತ್ರದಿಂದ ಮಂಗಳವಾಡಕ್ಕೆ ಬಂದು, ಬಿಜ್ಜಳ ರಾಯನ ಅರಮನೆಗೆ ಹೋಗಿ, ಅಲ್ಲಿ ಕರಣಸಾಲೆಯಲ್ಲಿ ಗಣಕರು ಮಾಡಿದ ತಪ್ಪು ಲೆಕ್ಕವನ್ನು ನೋಡ ನೋಡುತ್ತಿದ್ದಂತೆಯೇ ತೋರಿಕೊಟ್ಟಿದ್ದು. ಇದು ಕೃತಿಯ ಐದನೆಯ ಸ್ಥಲದಲ್ಲಿ ಬರುತ್ತದೆ. ಎರಡನೆಯ ಪವಾಡ ಕೇದಗೆ ಹೂವನ್ನು ಲಿಂಗಕ್ಕೆ ಏರಿಸಿದ್ದು. ಇದು ಕೃತಿಯ ಆರನೆಯ ಸ್ಥಲದಲ್ಲಿ ಬರುತ್ತದೆ. ಮೂರನೆಯ ಪವಾಡ ಬಿಜ್ಜಳನ ಭಂಡಾರದಲ್ಲಿದ್ದ ಹಣ ನೂರುಪಟ್ಟು ವರ್ಧಿಸು ವಂತೆ ಮಾಡಿದ್ದು. ಇದು ಎಂಟನೆಯ ಸ್ಥಲದಲ್ಲಿ ಬರುತ್ತದೆ. ನಾಲ್ಕನೆಯ ಪವಾಡ ಬದನೆಕಾಯಿ ಯನ್ನು ಲಿಂಗವಾಗಿ ಪರಿವರ್ತಿಸಿದ್ದು. ಇದು ಒಂಭತ್ತನೆಯ ಸ್ಥಲದಲ್ಲಿ ಬರುತ್ತದೆ. ಇದೇ ಸ್ಥಲದಲ್ಲಿ ಜಂಗಮರ ಜೊತೆಯಲ್ಲಿ ಬಸವಣ್ಣನ ಪ್ರಾಣ ಹೋಗುವ ಪವಾಡವೂ ಬರುತ್ತದೆ. ಆರನೆಯ ಪವಾಡ ಸಂಬೋಳಿನಾಗಿದೇವನ ಉಂಗುಟದಿಂದ ಕ್ಷೀರ ಧಾರೆಯನ್ನು ಕರೆಯಿಸಿದ್ದು. ಇದು ಕಥೆಯ ಹತ್ತನೆಯ ಸ್ಥಲದಲ್ಲಿ ಬರುತ್ತದೆ. ಏಳನೆಯ ಪವಾಡ ದವಸ ಧಾನ್ಯಗಳನ್ನು ಕೇಳಿದ ಮಹದೇವ ಶೆಟ್ಟಿಗೆ ನವರತ್ನದ ಮಳೆಯನ್ನೇ ಕರೆಯಿಸಿದ್ದು. ಇದು ಕಥೆಯ ಹನ್ನೆರಡನೆಯ ಸ್ಥಲದಲ್ಲಿ ಬರುತ್ತದೆ.

ಐದನೆಯ ಸ್ಥಲದವರೆಗೆ ಯಾವ ಪವಾಡಗಳೂ ಬರುವುದಿಲ್ಲ. ಆ ಸ್ಥಳ ಬರುತ್ತಿದ್ದಂತೆಯೇ ಒಂದೊಂದೇ ಪವಾಡಗಳು ಕಥೆಯೊಳಗೆ ನುಸುಳುತ್ತವೆ. ಬರುಬರುತ್ತ ಒಂದು ಎರಡಾಗುತ್ತದೆ. ಕೇವಲ ಆರು ಸ್ಥಲಗಳಲ್ಲಿ ಎಂಟೂ ಪವಾಡಗಳನ್ನು ಕವಿ ತಂದಿದ್ದಾನೆ. ಈ ಆರೂ ಸ್ಥಲಗಳು ಬಸವಣ್ಣನ ಪವಾಡಗಳನ್ನು ಮೆರೆಯುವುದಕ್ಕಾಗಿಯೇ ತಂದಿರುವಂತೆ ಕಾಣುತ್ತವೆ. ಈ ಪವಾಡಗಳು ಮೇಲಿಂದ ಮೇಲೆ ಬರುತ್ತಿದ್ದಂತೆ ಸಹಜವಾಗಿಯೇ ಹಿಂದಿನಿಂದ ನಾವು ಕಾಣುತ್ತ ಬಂದಿದ್ದ ಬಸವಣ್ಣನ ವ್ಯಕ್ತಿತ್ವ ಮಂಕಾಗುತ್ತದೆ. ಸಹಜತೆಯಿಂದ ದೂರ ಸರಿಯುತ್ತದೆ. ಅವನು

ಮಾಡಿದ ನಿಜವಾದ ಸಾಧನೆಯೂ ಪವಾಡಗಳ ಜೊತೆಯಲ್ಲಿಯೇ ಸೇರಿಹೋಗುತ್ತದೆ. ಎಲ್ಲವನ್ನೂ ಪವಾಡಗಳ ಮೂಲಕವೇ ಸಾಧಿಸುವುದಾದರೆ ಬಸವಣ್ಣ ಮಾಡಿದ ಸಾಧನೆಯಾದರೂ ಏನು? ಎಂಬ ಭಾವ ಮನದಲ್ಲಿ ಮೂಡುತ್ತದೆ. ಆಗ ನಮ್ಮ ಕಣ್ಣೆದುರು ನಿಲ್ಲುವುದು ಸಾಧಕ ಜೀವಿ ಬಸವಣ್ಣನಲ್ಲ; ಪವಾಡ ಪುರುಷ ಬಸವಣ್ಣ.

ಬಸವರಾಜದೇವರ ರಗಳೆ ಉಪಲಬ್ಧವಿರುವುದು ಕೇವಲ ಅರ್ಧಭಾಗವೇ ಆಗಿದ್ದರೂ, ಅಷ್ಟರಲ್ಲಿಯೇ ಹರಿಹರನು ಬಸವಣ್ಣನವರ ಬದುಕಿನ ಹಲವು ಸಂಗತಿಗಳನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಅದರಲ್ಲೂ ಅವರ ಭಕ್ತಿ ಜೀವನದ ಶ್ರೇಷ್ಠತೆಯನ್ನು ಪವಾಡಗಳ ತಂತ್ರದ ಮೂಲಕ ಬಹು ಸೊಗಸಾಗಿ ಹಬ್ಬಿಸಿದ್ದಾನೆ. "ಹೊಗಳಿಕೆಯ ಬಗ್ಗೆ ಬಸವಣ್ಣನವರಿಗೆ ಇದ್ದ ತಾತ್ಸಾರ ಭಾವ, ಶರಣರನ್ನು ಕುರಿತು ಅವರು ತಾಳಿದ ಕಿಂಕರ ಭಾವ, ಶಿವಸಮಯವನ್ನುದ್ಧರಿಸಿ ಪರಸಮಯವನ್ನು ಭಂಗಿಸುವ ವಿಷಯದಲ್ಲಿ ಅವರಿಗಿದ್ದ ಉತ್ಸಾಹ ಮತ್ತು ರಭಸ, ಸಂಪತ್ತು ಅಧಿಕಾರಗಳ ವಿಚಾರದಲ್ಲಿ ಅವರು ತಾಳಿದ ಅನಾಸಕ್ತಿ, ಕೆಲವು ಸಲ ಯಾರ ಮನಸ್ಸನ್ನೂ ನೋಯಿಸದಂತೆ ನಡೆದುಕೊಳ್ಳುವುದರಲ್ಲಿ ಕಂಡುಬರುವ ವಿನಯ ಮತ್ತು ಭೂತಾನುಕಂಪೆ, ಏಕಾಂತ ಭಕ್ತಿಯಿಂದ ಲೋಕಾಂತ ಭಕ್ತಿಯವರೆಗೂ ಬಗೆಬಗೆಯ ಹಂತಗಳಲ್ಲಿ ಶೋಭಿಸುವ ಅವರ ಭಕ್ತ ಹೃದಯದ ಚಿತ್ರಣ, ಇವೆಲ್ಲಕ್ಕೂ ಮಿಗಿಲಾಗಿ ಅವರು ಸಾಕ್ಷಾತ್ ಕೈಲಾಸದಿಂದಲೆ ಮರ್ತ್ಯಕ್ಕೆ ಕಾರಣಿಕರಾಗಿ ಬಂದರೂ, ಅವರು ಮೂಲತ: ಮನುಷ್ಯರೇ ಆಗಿದ್ದರು ಎಂಬ ಮಾನವೀಯ ಪ್ರಜ್ಞೆ-ಇವು ಹರಿಹರನ ಬಸವಣ್ಣನವರ ಪಾತ್ರದಲ್ಲಿ ಬಹು ಸೊಗಸಾಗಿ ಮೂರ್ತಗೊಂಡಿವೆ."[34] ಹಾಗಿದ್ದರೂ ಬಸವರಾಜದೇವರ ರಗಳೆ ಕೆಲವು ಸಂದೇಹಗಳಿಗೆ ಆಸ್ಪದ ನೀಡುತ್ತದೆ. ಈ ಸಂದೇಹಗಳನ್ನು ಜಿ. ಎಸ್. ಶಿವರುದ್ರಪ್ಪನವರು ಸೋದಾಹರಣವಾಗಿ ಚರ್ಚಿಸಿದ್ದಾರೆ. (ನೋಡಿ: ಅನುರಣನ : ಪುಟ : 70 ರಿಂದ 84)

## 6.2 ಪ್ರಭುದೇವರ ರಗಳೆ

ಅಲ್ಲಮಪ್ರಭು ಹನ್ನೆರಡನೆ ಶತಮಾನದ ಶರಣರ ಸಾಧನೆಯ ಮಾರ್ಗಕ್ಕೆ ಪರಿಪೂರ್ಣತೆಯ ಸ್ವರೂಪವ ನೀಡಿದವನೂ, ಶರಣ ಸಂದೋಹಕ್ಕೆ ಗುರು ಸಮಾನನಾಗಿ ಪೂಜ್ಯನಾಗಿದ್ದವನೂ, ಅನುಭವ ಮಂಟಪದ ಅಗ್ರಗಣ್ಯನೂ ಆಗಿದ್ದವನು. ಇವನನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಲ್ಲಮ, ಅಲ್ಲಮ ಪ್ರಭು, ಪ್ರಭುದೇವ ಎಂಬ ಹೆಸರುಗಳಿಂದ ಕರೆಯಲಾಗಿದೆ. ಇವನನ್ನು ಕುರಿತಂತೆ ಕನ್ನಡದಲ್ಲಿ 'ಶೂನ್ಯ ಸಂಪಾದನೆ, 'ಪ್ರಭುಲಿಂಗ ಲೀಲೆ' ಮುಂತಾದ ಕೃತಿಗಳು ರಚನೆಯಾಗಿವೆ. ಇವುಗಳ ಸಾಲಿನಲ್ಲಿ ಹರಿಹರ ಕವಿಯ 'ಪ್ರಭುದೇವರ ರಗಳೆ'ಯೂ ಒಂದು. ಇದು ಪ್ರಭುದೇವರನ್ನು ಕುರಿತಂತೆ ಕನ್ನಡದಲ್ಲಿ ರಚನೆಯಾದ ಮೊದಲ ಕೃತಿ. ಇತರ ಕೃತಿಗಳಿಗೆ ಹೋಲಿಸಿದರೆ ಹರಿಹರನ ಈ ಕೃತಿ ಬಹಳ ಚಿಕ್ಕದಾಗಿದೆ. ಕೇವಲ ಹದಿನೆಂಟು ಪುಟಗಳ ಒಂದೇ ಒಂದು ಸ್ಥಲದಲ್ಲಿ ಕವಿ ಪ್ರಭುದೇವರ ಕಥೆಯನ್ನು ನಿರೂಪಿಸಿದ್ದಾನೆ. ಆದರೂ ಅಲ್ಲಮನ ಜೀವನ ಚಿತ್ರದ ಸಂದರ್ಭದಲ್ಲಿ ಈ ಕೃತಿಗೆ ಮಹತ್ವದ ಸ್ಥಾನ ಇದೆ. ಕವಿ ಒಂದು ಸ್ಥಲದಲ್ಲಿಯೇ ಅಲ್ಲಮನ ಅಸಾಧಾರಣ ಬದುಕನ್ನು ಚಿತ್ರಿಸಿದ್ದಾನೆ.

ಅಲ್ಲಮನ ಕಥೆಯನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದು-ಅಲ್ಲಮನ ಹುಟ್ಟಿನಿಂದ ಕಾಮಲತೆಯ ಸಾವಿನವರೆಗಿನದು. ಇನ್ನೊಂದು-ಕಾಮಲತೆಯ ಸಾವಿನಿಂದ ಕೈಲಾಸ ಪದವಿಯನ್ನು ಪಡೆಯುವವರೆಗಿನದು.

ಅಲ್ಲಮನ ಹುಟ್ಟಿಗೆ ಹರಿಹರ ಶಾಪದ ರೂಪ ಕೊಟ್ಟಿದ್ದಾನೆ. ಕವಿ ತಿಳಿಸುವಂತೆ ಅಲ್ಲಮ ಮೊದಲು ಕೈಲಾಸದಲ್ಲಿ ನಿರ್ಮಾಯನೆಂಬ ಗಣನಾಗಿದ್ದವನು. ಒಮ್ಮೆ ಕೈಲಾಸದಲ್ಲಿ ಸುರಸತಿಯೊಬ್ಬಳನ್ನು ಆಸೆಯಿಂದ ನೋಡುತ್ತಾನೆ. ಇದನ್ನು ಕಂಡ ಶಿವನು ನಿರ್ಮಾಯ ಮತ್ತು ಸುರಸತಿಯರನ್ನು "ದಯಾಪರದಿಂದೆ ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ, ಕಾವಂಗೆ ವಶವಾದ ಸಕಲಸುಖಮುಂ ಮುಟ್ಟಿ ಹರುಷದಿಂದಿರ್ವರುಂ ಬರ್ಪುದೆಂ......"[35] ಎಂದು ಶಪಿಸುತ್ತಾನೆ. ಆ ಶಾಪದಂತೆ ನಿರ್ಮಾಯ ಮತ್ತು ಸುರಸತಿಯರಿಬ್ಬರೂ ಭೂಮಿಯಲ್ಲಿ ಜನಿಸುತ್ತಾರೆ.

ಭೂಲೋಕದಲ್ಲಿ ಇರುವ ಬಳ್ಳಿಗಾವೆಯೆಂಬ ಪುರದಲ್ಲಿ, ಮಲ್ಲಿಕಾಪುರದ ನಾಗವಾಸಾಧಿಪತಿಯ ಮಗನಾಗಿ, ಅಲ್ಲಯ್ಯನೆಂಬ ಅಭಿದಾನವನ್ನು ಹೊತ್ತು ನಿರ್ಮಾಯ ಜನಿಸುತ್ತಾನೆ. ಸುರಸತಿ ಅದೇ ಪುರದ ಧನದತ್ತನೆಂಬ ಸತಿಯ ಬಸುರಲ್ಲಿ ಕಾಮಲತೆ ಎಂಬ ಅಭಿದಾನವನ್ನು ಹೊತ್ತು ಜನಿಸುತ್ತಾಳೆ.

ಬಾಲ್ಯ ಸಡಿಲಿಸುತ್ತಿದ್ದಂತೆ ಅಲ್ಲಮ ಮೃದಂಗ ವಿದ್ಯೆಯಲ್ಲಿ ಪರಿಣತನಾಗುತ್ತಾನೆ. ದಿನವೂ ಗೋಹೇಶ್ವರನ ದೇವಾಲಯಕ್ಕೆ ಹೋಗಿ ಮೃದಂಗ ಬಾರಿಸತೊಡಗುತ್ತಾನೆ. ಒಮ್ಮೆ ಕಾಮಲತೆ 'ಸುಪಿಟರ ಮೇಲೆ ಧಾಳಿ ಪೂಜಿಮಡುವಂತೆ' ಆ ದೇವಾಲಯಕ್ಕೆ ಬರುತ್ತಾಳೆ. ಅಲ್ಲಿ ಅಲ್ಲಮ ಮತ್ತು ಕಾಮಲತೆಯರ ನಡುವೆ ಪ್ರೇಮಾಂಕುರವಾಗುತ್ತದೆ. ಇಬ್ಬರಲ್ಲೂ ಪ್ರೇಮಾಂಕುರ ವಾಗಿರುವುದು ಸಖಿಯರಿಗೆ ತಿಳಿಯುತ್ತದೆ. ಆಗ ಸಖಿಯರು ಅವರಿಬ್ಬರನ್ನೂ ನೆಜ್ಜೆಮನೆಯಲ್ಲಿ ಸೇರಿಸುತ್ತಾರೆ. ಪ್ರೀತಿಯ ಬೆಸುಗೆಯಲ್ಲಿ ಅಲ್ಲಮ ಕಾಮಲತೆಯರು ಹಲಕೆಲವು ವತ್ಸರಗಳನ್ನು ನಿಮಿಷಗಳಂತೆ ಕಳೆಯುತ್ತಾರೆ. ಅಷ್ಟರಲ್ಲಿಯೇ ಕಾಮಲತೆಗೆ ಮಹಾಜ್ವರ ಬಂದೆರಗುತ್ತದೆ. ಕಾಮಲತೆ ಸಾಯುತ್ತಾಳೆ.

ಇಲ್ಲಿಯವರೆಗೆ ಕಥೆ ಬಹಳ ಅವಸರದಿಂದ ಸಾಗುತ್ತದೆ. ಈ ಭಾಗದಲ್ಲಿ ಅಲ್ಲಮನ ಬದುಕಿನ ಹಲವಾರು ಘಟನೆಗಳು ಬರುತ್ತವೆ. ಅಲ್ಲಮ ನಾಗವಾಸಾಧಿಪತಿಯ ಸತಿಯ ಬಸುರಲ್ಲಿ ಹುಟ್ಟುತ್ತಾನೆ. ಬಾಲ್ಯ ಕಳೆದು ಯೌವನಕ್ಕೆ ಬರುತ್ತಾನೆ. ಮೃದಂಗ ವಿದ್ಯೆಯನ್ನು ಕಲಿಯುತ್ತಾನೆ. ಧನದತ್ತನ ಸತಿಯ ಬಸುರಲ್ಲಿ ಕಾಮಲತೆ ಹುಟ್ಟುತ್ತಾಳೆ. ಬೆಳೆದು ಯೌವನಕ್ಕೆ ಕಾಲಿರಿಸುತ್ತಾಳೆ. ಅಲ್ಲಮ ಕಾಮಲತೆಯರು ಪರಸ್ಪರ ಪ್ರೇಮಿಸುತ್ತಾರೆ.... ಹೀಗೆ ಹಲವು ಘಟನೆಗಳು ಜರುಗುತ್ತವೆ. ಆದರೆ ಯಾವ ಘಟನೆಯನ್ನೂ ಕವಿ ವಿಸ್ತಾರವಾಗಿ ಹೇಳುವ ಪ್ರಯತ್ನವನ್ನೇ ಮಾಡುವುದಿಲ್ಲ. ಒಂದು ಎರಡು ಸಾಲಿನಲ್ಲಿಯೇ ಎಲ್ಲವನ್ನೂ ಮುಗಿಸಿ ಬಿಡುತ್ತಾನೆ. ಒಂದನ್ನು ಹೇಳಿದರೆ ಇನ್ನೊಂದನ್ನು ಹೇಳುವುದೇ ಇಲ್ಲ.

ಅಲ್ಲಮನ ಹುಟ್ಟಿಗೆ ಯಾವುದೋ ಒಂದು ಶಾಪದ ಕಾರಣ ನೀಡುತ್ತಾನೆ. ತಂದೆ ತಾಯಿಯರ ವಿಚಾರವಂತೂ ಇಲ್ಲವೇ ಇಲ್ಲ ಎನ್ನುವಂತಿದೆ. ಅಲ್ಲಮನ ತಂದೆಯನ್ನು

"ಪಲ್ಲೀಪುರದ ನಾಗವಾಸಾಧಿಪತಿಯಪ್ಪ ಸಲ್ಲಲಿತನಾಯಕನ..."[36] ಎಂದು ತಿಳಿಸುತ್ತಾನೆ. ಆದರೆ ಅವನ ಹೆಸರನ್ನು ಸ್ಪಷ್ಟವಾಗಿ ತಿಳಿಸುವುದಿಲ್ಲ. ಅವನ ಇತಿವೃತ್ತವನ್ನು ಸಂಪೂರ್ಣ ಕೈಬಿಟ್ಟಿದ್ದಾನೆ. ತಂದೆಯ ವಿಚಾರ ಕುರಿತಂತೆ ಇಷ್ಟು ಮಾತ್ರವನ್ನಾದರೂ ಹೇಳಿದ್ದಾನೆ. ಆದರೆ ತಾಯಿಯ ಬಗೆಗೆ ಅಷ್ಟನ್ನೂ ಹೇಳುವುದಿಲ್ಲ. 'ನಾಗವಾಸಾಧಿಪತಿಯಪ್ಪ ಸಲ್ಲಲಿತನಾಯಕನ ಸತಿ' ಎಂದು ಮಾತ್ರ ತಿಳಿಸುತ್ತಾನೆ. ಅವಳು ಯಾರು? ಯಾರ ಮಗಳು? ಇತ್ಯಾದಿ ವಿವರಗಳನ್ನು ನೀಡುವುದೇ ಇಲ್ಲ. ಆದರೆ ಅವಳು ಅಲ್ಲಮನನ್ನು ತನ್ನ ಬಸುರಲ್ಲಿ ಹೊತ್ತ ಸನ್ನಿವೇಶವನ್ನು ಮಾತ್ರ ಕೆಲಸಾಲುಗಳಲ್ಲಿ ವಿವರಿಸುತ್ತಾನೆ. ಅಲ್ಲಮ ಜನಿಸಿದ ನಂತರ ಅವನಿಗೆ ಅಲ್ಲಯ್ಯ ಎಂಬ ಹೆಸರನ್ನು ತಂದೆ ತಾಯಿಯರು ಇಟ್ಟರು ಎಂದು ಹೇಳಿ ಮುಂದೆ, ಅಲ್ಲಮನು ವಿರಹ ಸಂಕಟದಲ್ಲಿ ಸಿಕ್ಕಾಗ ಪರಿಜನರು ಅವನನ್ನು ಕರೆದುಕೊಂಡು ಬಂದು ತಂದೆ ತಾಯಿಯರಲ್ಲಿಗೆ ಬಿಟ್ಟರು, ತಂದೆ ತಾಯಿಯರು ಕಂದನ ಸ್ಥಿತಿಯನ್ನು ಕಂಡು ಮರುಗಿದರು ಎಂಬುದಾಗಿ ತಿಳಿಸಿ ಅಲ್ಲಿಗೆ ತಂದೆ ತಾಯಿಯರ ವಿಚಾರವನ್ನು ಕೈ ಬಿಟ್ಟಿದ್ದಾನೆ. ತಂದೆ ತಾಯಿಯರು ಮಗನೊಂದಿಗೆ ಪ್ರೀತಿಯಿಂದ ಕಳೆದಿರಬಹುದಾದ ದಿನಗಳು, ಅವರು ಅನುಭವಿಸಿದ ಸುಖ-ದುಃಖಗಳು, ಎಷ್ಟು ಕಾಲ ಅವರು ಜೀವಿಸಿದ್ದರು? ಎಂಬ ವಿಚಾರಗಳನ್ನು ಸಂಪೂರ್ಣ ಬಿಟ್ಟಿದ್ದಾನೆ.

ಅಲ್ಲಮನ ಬಾಲ್ಯದ ವಿಚಾರದ ಬಗೆಗೆ ಕೂಡ ಹರಿಹರ ವಿವರವಾಗಿ ಹೇಳುವ ಪ್ರಯತ್ನವನ್ನು ಮಾಡಿಲ್ಲ. ಕೇವಲ ಮೂರ್ನಾಲ್ಕು ಸಾಲುಗಳಲ್ಲಿಯೇ ಅವನ ಬಾಲ್ಯದ ದಿನಗಳನ್ನು ವರ್ಣಿಸಿಬಿಡುತ್ತಾನೆ.

ಅಲ್ಲಮನ ಬಾಲ್ಯ ಹಾಗೂ ಅವನ ತಂದಾತಾಯಿಯರ ಚಿತ್ರವನ್ನು ಚಿತ್ರಿಸುವಲ್ಲಿ ಹರಿಹರ ಯಾವ ರೀತಿಯನ್ನು ಅನುಸರಿಸಿದ್ದಾನೋ, ಅದೇ ರೀತಿಯನ್ನು ಕಾಮಲತೆಯ ಸಂದರ್ಭದಲ್ಲೂ ಅನುಸರಿಸುತ್ತಾನೆ. ಕಾಮಲತೆಯ ಹುಟ್ಟನ್ನು 'ಧನದತ್ತನಬಲೆಯುದರದಿ ಪುಟ್ಟೆ...' ಎಂದು ಒಂದು ವಾಕ್ಯದಲ್ಲೇ ತಿಳಿಸುತ್ತಾನೆ. ಧನದತ್ತ ಯಾರು? ಆತ ಏನಾಗಿದ್ದ? ಅವನ ಹೆಂಡತಿಯ ಹೆಸರಾದರೂ ಏನು? ಕಾಮಲತೆಯೊಂದಿಗೆ ಅವರ ಬದುಕು ಹೇಗೆ ಸಾಗುತ್ತಿತ್ತು? ಎಷ್ಟು ಕಾಲ ಬದುಕಿದ್ದರು? ಇತ್ಯಾದಿ ವಿಚಾರಗಳನ್ನು ಹರಿಹರ ಸಂಪೂರ್ಣ ಬಿಟ್ಟಿದ್ದಾನೆ. ಕೇವಲ ಎಂಟು ಹತ್ತು ಸಾಲುಗಳಷ್ಟರಲ್ಲೇ ಕಾಮಲತೆಯ ಹುಟ್ಟು, ಬಾಲ್ಯಗಳೆಲ್ಲವೂ ಸೇರಿಕೊಂಡಿವೆ.

ಹರಿಹರ ತಿಳಿಸುವಂತೆ ಅಲ್ಲಮ ಒಬ್ಬ ನಾಗವಾಸಾಧಿಪತಿಯ ಮಗ. ಮದ್ದಳೆ ಬಾರಿಸುವವನು. ಕಾಮಲತೆಯಾದರೋ ಧನದತ್ತನೆಂಬವನ ಮಗಳು. ಇಬ್ಬರ ಅಂತಸ್ತುಗಳೂ ಬೇರೆ ಬೇರೆ. ಕಾಮಲತೆ ಅಲ್ಲಮನಿಗಿಂತಲೂ ಸುಸ್ಥಿತಿಯಲ್ಲಿ ಬದುಕಿರುವವಳು. ಆದರೆ ಗೋಹೇಶ್ವರ ದೇವಾಲಯದಲ್ಲಿ ಇಬ್ಬರೂ ಪರಸ್ಪರ ಅನುರಾಗಕ್ಕೆ ಒಳಗಾಗುತ್ತಾರೆ. ಕೂಡಲೇ ಸಖಿಯರೆಲ್ಲ ಸೇರಿ ಅಲ್ಲಮ ಕಾಮಲತೆಯರನ್ನು ಸೆಜ್ಜೆಮನೆಗೆ ಸೇರಿಸುತ್ತಾರೆ. ಅಲ್ಲಿ ಅಲ್ಲಮ ಕಾಮಲತೆಯರ ಪ್ರಣಯ ಜೀವನ ಪ್ರಾರಂಭವಾಗುತ್ತದೆ.

ಅಲ್ಲಮ ಮತ್ತು ಕಾಮಲತೆಯರ ನಡುವೆ ಪ್ರಣಯ ಜೀವನ ಪ್ರಾರಂಭವಾದದ್ದು ಸಹಜವಾಗಿಯೇ ಇದೆ. ಕವಿ ಅದನ್ನು ಚೆನ್ನಾಗಿಯೇ ನಿರೂಪಿಸಿದ್ದಾನೆ. ಆದರೆ ಅವರಿಬ್ಬರ ನಡುವೆ ಪ್ರಣಯ ಅಂಕುರಿಸಿದ ಸಂದರ್ಭದಲ್ಲಿ ಯಾವ ಘಟನೆಗಳೂ ಸಂಭವಿಸಲಿಲ್ಲವೇ? ಈ ಬಗ್ಗೆ ಹರಿಹರ ಯಾವ ಸುಳಿವನ್ನೂ ನೀಡುವುದಿಲ್ಲ. ಅವನ ಪ್ರಕಾರ ಎಲ್ಲವೂ ಸಾಂಗವಾಗಿ

ನೆರವೇರುತ್ತದೆ. ಕಾಲಮಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಇದು ಸಾಧ್ಯವಿಲ್ಲ ಎನಿಸುತ್ತದೆ. ಏಕೆಂದರೆ ಅಲ್ಲಮ ಒಬ್ಬ ಸಾಮಾನ್ಯ ಮದ್ದಳೆ ಬಾರಿಸುವವನು. ಕಾಮಲತೆಯಾದರೂ ಧನದತ್ತನೆಂಬ ಶ್ರೀಮಂತನ ಮಗಳು. ಹಾಗಾಗಿ ಇಲ್ಲಿ ವರ್ಗಸಂಘರ್ಷ ನಡೆದಿರುವ ಸಾಧ್ಯತೆಯೂ ಇರುತ್ತದೆ. ಆದರೆ ಕವಿ ಈ ಬಗ್ಗೆ ಏನನ್ನೂ ಹೇಳುವುದಿಲ್ಲ. ಹೋಗಲಿ, ಅಲ್ಲಮ ಕಾಮಲತೆಯರ ಪ್ರೇಮವನ್ನು ಅವರ ತಂದೆ ತಾಯಿಯರು ಒಪ್ಪಿದರೋ, ಬಿಟ್ಟರೋ ಎಂಬುದನ್ನು ತಿಳಿಸುವುದಿಲ್ಲ. ಹಲವು ವತ್ಸರಗಳ ಕಾಲ ಕಾಮಾನುರಾಗದಲ್ಲಿ ಸೆಜ್ಜೆಮನೆಯಲ್ಲಿದ್ದರು ಎಂಬುದಾಗಿ ತಿಳಿಸುತ್ತಾನೆ. ಆದರೆ ಹಲವು ಕಾಲದವರೆಗೆ ಸೆಜ್ಜೆಮನೆಯಲ್ಲಿ ಇವರ ಬದುಕು ಹೇಗೆ ಸಾಗುತ್ತಿತ್ತು? ಮದುವೆಯಾಗಿದ್ದರೇ? ಇಲ್ಲವೆ? ಹಲವು ಕಾಲದವರೆಗೂ ಇವರ ಪ್ರಣಯದ ಬದುಕನ್ನು ಯಾರೂ ಪ್ರಶ್ನಿಸಲಿಲ್ಲವೇ? ಈ ಅವಧಿಯಲ್ಲಿ ಕಾಮಲತೆ ಗರ್ಭಿಣಿಯಾಗಲಿಲ್ಲವೇ? ಮುಂತಾದ ವಿಚಾರಗಳನ್ನು ಕವಿ ಪ್ರಸ್ತಾಪಿಸುವುದೇ ಇಲ್ಲ. ಹಲವು ಕಾಲ ಪ್ರಣಯ ಸುಖವನ್ನು ಅನುಭವಿಸುತ್ತಿರಬೇಕಾದರೆ ಕಾಮಲತೆ ಮಹಾಜ್ವರ ಆವರಿಸಿ ಸಾವನ್ನಪ್ಪಿದಳು ಎಂಬುದಾಗಿ ಕವಿ ತಿಳಿಸುತ್ತಾನೆ. ಇಲ್ಲಿ ಮಹಾಜ್ವರ ಕಾಮಲತೆಗೆ ತಗುಲಿ ಸತ್ತಿರಬಹುದಾದ ಸಾಧ್ಯತೆ ನಿಜವಿರಬಹುದು. ಆದರೆ ಈ ಮಹಾಜ್ವರ ಕಾಮಲತೆಗೆ ಆವರಿಸಿದ ಸಂದರ್ಭದಲ್ಲಿ ತಂದೆಯಾದ ಧನದತ್ತನಿಂದಾಗಲಿ ಅಥವಾ ಇತರ ಹತ್ತಿರದವರಿಂದಾಗಲಿ, ಕಾಮಲತೆಯನ್ನು ಉಪಚರಿಸುವ ಯಾವ ಕಾರ್ಯವೂ ನಡೆಯಲಿಲ್ಲವೇ? ಆ ಸಂದರ್ಭದಲ್ಲಿ ಅಲ್ಲಮನಾದರೂ ಏನು ಮಾಡುತ್ತಿದ್ದ? ಅವನ ಮಾನಸಿಕ ಒಳತೋಟಿ ಏನಾಗಿತ್ತು? ಸತ್ತಮೇಲೆ ಕಾಮಲತೆಯ ದೇಹವನ್ನೇನು ಮಾಡಿದರು? ಇತ್ಯಾದಿ ವಿಚಾರಗಳ ಬಗ್ಗೆ ಹರಿಹರ ಏನನ್ನೂ ಹೇಳುವುದಿಲ್ಲ. ಕಾವ್ಯ ಅಸ್ಪಷ್ಟವಾಗಿ ಆತುರದಲ್ಲಿ ಸಾಗುತ್ತದೆ.

ಮೊದಲನೆಯ ಈ ಭಾಗದಲ್ಲಿ ಇಷ್ಟೆಲ್ಲ ಅಪೂರ್ಣತೆಗಳು ಇದ್ದರೂ, ಕವಿ ತನ್ನ ಕಾವ್ಯದಲ್ಲಿ ಸತ್ವವನ್ನು ಉಳಿಸಿಕೊಂಡಿದ್ದಾನೆ. ತನ್ನ ನಿರೂಪಣಾ ಸಾಮರ್ಥ್ಯದಿಂದಾಗಿ ಕಾವ್ಯವನ್ನು ಮನೋಜ್ಞವಾಗಿಸಿದ್ದಾನೆ.

ಅಲ್ಲಮ ತಾಯಿಯ ಗರ್ಭದಲ್ಲಿರುವಾಗ ಅತ್ಯಂತ ಉಪಯುಕ್ತವಾದ ವರ್ಣನೆಯನ್ನು ಕವಿ ನೀಡುತ್ತಾನೆ. "ವಾಸವಾಶಾಂತರದೊಳಗರ್ಕನುದಯಿಸುವಂತೆ / ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ / ವಸುಧೆಯೊಳು ಸುರಕುಜದ ಸಸಿ ಪುಟ್ಟುವಂದದಿಂ..."[37] ಎಂಬ ಹರಿಹರನ ಹೋಲಿಕೆಗಳು ಭವಿಷ್ಯದ ಅಲ್ಲಮನ ಭವ್ಯ ವ್ಯಕ್ತಿತ್ವವನ್ನು ಸೆರೆಹಿಡಿಯುತ್ತವೆ.

ಅಲ್ಲಮನ ಬಾಲ್ಯದ ವರ್ಣನೆಯ ಸಂದರ್ಭದಲ್ಲಿ ಕವಿ ಬಳಸುವ "ತೊಟ್ಟಿಲೊಳ್ಮೊಗೆಗಳೊಳು ಹೃತ್ಕಮಳದೊಳ್ಳೆಳೆದು / ದಟ್ಟಡಿಯಿಡುತ್ತೆ ಪರಿದಾಡುತ್ತೆ ಬೆಳೆಬೆಳೆದು / ಬೆಳೆದನಾತಂ ಶಿವಪದಕ್ಕೆ ಹೊಸ ತೊಡವೆನಿಸಿ..."[38] ಈ ವಾಕ್ಯಗಳು ವಿಸ್ತಾರವಾದ ಬಾಲ್ಯದ ಬದುಕನ್ನು ಸೆರೆಹಿಡಿಯುತ್ತವೆ.

ಅಲ್ಲಮನ ಯೌವನದ ಸಂದರ್ಭವನ್ನೂ ಸಹ ಕವಿ ಮಿತಿಮೀರಿ ವರ್ಣಿಸುವ ಗೋಜಿಗೆ ಹೋಗುವುದಿಲ್ಲ. "ಕಾವಂಗೆ ಸಿಂಗರದ ಹುರುಡು ಹುಟ್ಟುತ್ತಮಿರೆ.....ವನಿತೆಯರ ಮನವನಿಕ್ಕುಳಿಗೊಳ್ವನಿವನೆನಿಪ"[39] ಎಂಬಷ್ಟರಲ್ಲೇ ಅವನ ಯೌವನದ ತೇಜಸ್ಸನ್ನು ಚಿತ್ರಿಸುತ್ತಾನೆ. ಕಾಮಲತೆಯ ಯೌವನವನ್ನು ಚಿತ್ರಿಸುವಾಗಲೂ ಕವಿ ಇದೇ ಮಾರ್ಗ

ಅನುಸರಿಸುತ್ತಾನೆ. "ಮದನಶರವಿಕ್ಷುಧನುವಿಂದೆ ಪೂಜಿಸುವಂತೆ/ ಪಡೆದು ಸುಪಿಟರ ಮೇಲೆ ಥಾಳಿ ಪೂಜಿಸುವಂತೆ...."[40] ಎಂಬ ಒಂದೆರಡೇ ವಾಕ್ಯದಲ್ಲಿ ಕವಿ ಕಾಮಲತೆಯ ತುಂಬಿದ ಯೌವನವನ್ನು ಬಣ್ಣಿಸುತ್ತಾನೆ. ಅವನ ವರ್ಣನೆಗಳಲ್ಲಿ ಸ್ವಲ್ಪವೂ ಅಶ್ಲೀಲವಿಲ್ಲ, ಅನೌಚಿತ್ಯವಿಲ್ಲ.

ಕಾಮಲತೆ ಮತ್ತು ಅಲ್ಲಮ ಪ್ರಥಮ ಬಾರಿಗೆ ಅನುರಾಗಕ್ಕೆ ಒಳಗಾಗುವ ಸನ್ನಿವೇಶವೂ ಕಥೆಯಲ್ಲಿ ಬಹಳ ಸೊಗಸಾಗಿದೆ. ಹಾಗೆಯೇ ಕವಿ ಅಲ್ಲಮ ಮತ್ತು ಕಾಮಲತೆಯರ ನಡುವಿನ ಪ್ರಣಯವನ್ನು ಸೊಗಸಾಗಿ ನಿರೂಪಿಸಿದ್ದಾನೆ. ಈ ನಿರೂಪಣೆಯಲ್ಲಿ ಕವಿ ಬಹಳಷ್ಟು ಎಚ್ಚರಿಕೆ ವಹಿಸಿದ್ದಾನೆ. ಅನೌಚಿತ್ಯವಾದ ಪದಗಳಾಗಲಿ, ವಾಕ್ಯವಾಗಲಿ ಬಾರದ ಹಾಗೆ ನೋಡಿ ಕೊಂಡಿದ್ದಾನೆ. ಕಾಮಲತೆ ಮತ್ತು ಅಲ್ಲಮರ ನಡುವಿನ ಅತಿಯಾದ ಪ್ರಣಯವೇ ಮುಂದೆ ಅಲ್ಲಮನ ಬದುಕಿನ ಹಾದಿಯ ಮಹತ್ವದ ತಿರುವಾದ್ದರಿಂದ ಕವಿ ಈ ಭಾಗವನ್ನು ರಮ್ಯವಾಗಿ ಚಿತ್ರಿಸಿದ್ದಾನೆ. ಆದರೂ ಅತಿರಮ್ಯವೆಂಬುದು ಕಂಡುಬರುವುದಿಲ್ಲ. ವರ್ಣನೆ ಹಿತಮಿತವಾಗಿ ಮೂಡಿಬಂದಿದೆ.

ಕಥೆಯ ಎರಡನೆಯ ಭಾಗ ಕಾಮಲತೆಯ ಸಾವಿನ ನಂತರದ್ದು. ಅವಳ ಸಾವಿನ ನಂತರ ಅಲ್ಲಮನಿಗೆ ವಿರಹ ಆವರಿಸುತ್ತದೆ. ವಿರಹ ವೇದನೆಯಲ್ಲಿ ನರಳುತ್ತಾನೆ. ಅವನ ಸಂಕಟವನ್ನು ನೋಡಲಾರದ ಜನ ಅವನನ್ನು ತಂದೆ ತಾಯಿಯರ ಬಳಿ ತಂದು ಬಿಡುತ್ತಾರೆ. ತಂದೆ ತಾಯಿಯರೂ ಅವನ ಸಂಕಟಕ್ಕೆ ಮರುಗುತ್ತಾರೆ. ಅವನ ಬದುಕಿನಲ್ಲಿ ಶೂನ್ಯ ಆವರಿಸುತ್ತದೆ. ಆ ಶೂನ್ಯತೆಯಲ್ಲಿ ಒಮ್ಮೆ ಕಣಗಿಲೆಯ ತೋಟದಲ್ಲಿ ಕುಳಿತು ಚಿಂತಾಕ್ರಾಂತನಾಗಿರುತ್ತಾನೆ. ಆ ಚಿಂತೆಯಲ್ಲಿ ನೆಲವನ್ನು ಕೆರೆಯಲು ಹೊನ್ನ ಕಳಶವೊಂದು ಕಾಣಿಸುತ್ತದೆ. ತೆಗೆಯಲು ಪ್ರಯತ್ನಿಸುತ್ತಾನೆ. ಆಗುವುದಿಲ್ಲ. ಆ ಸಂಗತಿಯನ್ನು ರಾಜನಿಗೆ ತಿಳಿಸುತ್ತಾನೆ. ಪರಿಜನರ ಸಮೇತ ಬಂದ ಅರಸ ಆ ಜಾಗವನ್ನು ಅಗೆಯಿಸುತ್ತಾನೆ. ವಿಶಾಲವಾದ ದೇವಾಲಯವೊಂದು ಗೋಚರಿಸುತ್ತದೆ. ಬಾಗಿಲು ತೆರೆದು ಒಳಗೆ ಹೋಗುವ ಧೈರ್ಯ ಯಾರಿಗೂ ಇರುವುದಿಲ್ಲ. ಆಗ ಬದುಕೇ ಬೇಡವಾಗಿದ್ದ ಅಲ್ಲಮ ದೇವಾಲಯದ ಬಾಗಿಲು ತೆಗೆದು ಒಳಹೋಗುತ್ತಾನೆ. ಒಳಗೆ ಹೋಗುತ್ತಿದ್ದಂತೆಯೇ ಅಲ್ಲಮನಿಗೆ ದಿವ್ಯಜ್ಞಾನ ಅಂಕುರಿಸುತ್ತದೆ. ಗೂಹೇಶ್ವರನ ದರ್ಶನ ವಾಗುತ್ತದೆ. ಅಂಗೈಯಲ್ಲಿ 'ಅಮೃತಫಳ'ವನ್ನು ಪಡೆಯುತ್ತಾನೆ.

ಅಲ್ಲಮನ ಸಾಧನೆಗೆ ಪುರಜನವೆಲ್ಲ ಕೌತುಕಪಡುತ್ತದೆ. ದಿವ್ಯಜ್ಞಾನ ಪಡೆದ ಅಲ್ಲಮ ಕ್ಷೇತ್ರ ಪರ್ಯಟನೆಯಲ್ಲಿ ತೊಡಗುತ್ತಾನೆ. ಬಸವಣ್ಣನನ್ನು ಕಂಡು ಮಾತನಾಡಿಸುತ್ತಾನೆ. ಸಿದ್ಧರಾಮನನ್ನು ಕಂಡು ಬುದ್ಧಿ ಹೇಳುತ್ತಾನೆ. ಹಾಗೆ ಬರುಬರುತ್ತ ಕದಳೀವನದ ಕಡೆ ಬರುತ್ತಾನೆ. ಭೈರವನಿಂದ ವಂದಿಸಿಕೊಳ್ಳುತ್ತಾನೆ. ಹೋಗುವ ಹಾದಿಯಲ್ಲಿ ಎದುರಾದ ಎಲ್ಲ ಗಿಡ, ಮರ, ಪ್ರಾಣಿ, ಪಕ್ಷಿ ಸಂಕುಲಗಳನ್ನು ಕೌತುಕದಿಂದ ನೋಡುತ್ತಾನೆ. "ಮುರಿದಿರ್ದ ಹಾವುಗಳ ಬಳ್ಳಿಯಂ ದಾಂಟುತಂ/ನೆರೆದಿರ್ದ ವಿಷಕನ್ನಿಕೆಯರುಮಂ ನೋಡುತಂ/ಉರಿಯ ಪಳ್ಳಂಗಳಂ ಹರುಷದಿಂ ದಾಂಟುತಂ..... ಸಾವಿಲ್ಲದಿರ್ಪ ಸಿದ್ಧರ ಚೆಲ್ವ ಮೂರ್ತಿಯಂ"[41] ನೋಡುತ್ತ ನಡೆಯುವಾಗ ಪರಮೇಶ್ವರನು ಅಲ್ಲಮನನ್ನು ಸ್ವಾಗತಿಸಿ ಅವನ ಮೊದಲಿನ ಹೆಸರಾದ 'ನಿರ್ಮಾಯ' ಎಂಬುದರಿಂದಲೇ ಗಣಪದವಿ ನೀಡಿ ಗೌರವಿಸುತ್ತಾನೆ.

ಪ್ರಭುದೇವರ ಕಥೆಯ ಈ ಭಾಗದಲ್ಲಿ ಕೂಡ ಹರಿಹರ ಕವಿ ಹೇಳಬಹುದಾದ ಇನ್ನೂ

ಹಲವು ವಿಚಾರಗಳನ್ನು ಹೇಳದೆ ಅವಸರದಿಂದ ಕಥೆಯ ನಿರೂಪಣೆ ಮಾಡಿಕೊಂಡು ಹೋಗಿರುವುದನ್ನು ಕಾಣುತ್ತೇವೆ. ಅಲ್ಲಮ ವಿರಹಯಾತನೆಯಲ್ಲಿ ನರಳುವಾಗ ಪರಿಜನರು ಅವನನ್ನು ಕರೆತಂದು ಅವನ ತಂದೆತಾಯಿಯರ ಹತ್ತಿರ ಬಿಟ್ಟರು ಎಂದು ಹರಿಹರ ನಿರೂಪಿಸುತ್ತಾನೆ. ಆದರೆ ವಿರಹದಿಂದ ಬಳಲುತ್ತಿರುವ ಮಗನನ್ನು ತಂದೆತಾಯಿಯರು ಹೇಗೆ ನೋಡಿಕೊಂಡರು ಎಂಬುದರ ಬಗೆಗೆ ಒಂದು ಸಾಲನ್ನೂ ಬರೆಯುವುದಿಲ್ಲ. ಕಣಗಿಲೆ ತೋಟದಲ್ಲಿ ನೆಲವನ್ನು ಅಲ್ಲಮನು ಕೆರೆಯುತ್ತಾ ಕುಳಿತಿರುವ ಸಂದರ್ಭದಲ್ಲಿ ಕಾಣಿಸಿದ ಕಳಸವನ್ನು ತೆಗೆಯಲಾರದೆ ಅರಸನಿಗೆ ತಿಳಿಸಿದ ವಿಚಾರ ಬರುತ್ತದೆ. ಆದರೆ ಆ ಅರಸ ಯಾರು? ಎಂಬ ಬಗೆಗೆ ಹರಿಹರ ಮೌನ ತಾಳಿದ್ದಾನೆ. ಗೊಹೇಶ್ವರನ ದರ್ಶನ ಆದಮೇಲೆ ಬಸವಣ್ಣ ಮತ್ತು ಸಿದ್ಧರಾಮನನ್ನು ಅಲ್ಲಮ ಭೇಟಿ ಮಾಡಿದ ಸಂದರ್ಭವನ್ನು ಕವಿ ಚಿತ್ರಿಸಿದ್ದಾನೆ. ಈ ಸಂದರ್ಭದಲ್ಲಿ ಅಲ್ಲಮ ಮತ್ತು ಬಸವಣ್ಣನವರ ನಡುವೆ ನಡೆದಿರಬಹುದಾದ ಮಾತುಕತೆಗಳು, ಆಧ್ಯಾತ್ಮಿಕ ಗೋಷ್ಠಿಗಳು ಮತ್ತು ಅವರಿಬ್ಬರೂ ಕೂಡಿ ಮಾಡಿರಬಹುದಾದ ಕೆಲಸ ಕಾರ್ಯಗಳ ಬಗೆಗೆ ಹರಿಹರ ಏನನ್ನೂ ಪ್ರಸ್ತಾಪ ಮಾಡುವುದಿಲ್ಲ. ಹಾಗೆಯೇ ಅಲ್ಲಮ ಮಹಾದೇವಿಯಕ್ಕನನ್ನು ಭೆಟ್ಟಿಮಾಡಿ ಅವಳೊಡನೆ ನಡೆಸಿದ ಚರ್ಚೆಯನ್ನು ಹರಿಹರ ತನ್ನ ಕಾವ್ಯದಲ್ಲಿ ಪ್ರಸ್ತಾಪಿಸುವುದಿಲ್ಲ. ಅದಕ್ಕೆ ಬದಲಾಗಿ ಆತ ಕಾಡಿನಲ್ಲಿ ಸುತ್ತುವ ಸನ್ನಿವೇಶವನ್ನು ಹೆಚ್ಚಾಗಿ ಚಿತ್ರಿಸಿದ್ದಾನೆ. ಚಾರಿತ್ರಿಕವಾಗಿ ಮಹತ್ವ ಎನ್ನಬಹುದಾದ ಎಲ್ಲ ವಿಚಾರಗಳನ್ನು ಹರಿಹರ ಪ್ರಸ್ತಾಪ ಮಾಡುವುದೇ ಇಲ್ಲ.

ವಿರಹನೆಯ ಈ ಭಾಗ ಹಲವು ನ್ಯೂನತೆಗಳಿಂದ ಕೂಡಿದ್ದರೂ ಕಾವ್ಯ ತನ್ನ ಸೊಗಸನ್ನು ಕಳೆದುಕೊಂಡಿಲ್ಲ. ಅಲ್ಲಮನ ವಿರಹದ ಜೀವನ ಹಾಗೂ ಸಾಧನೆಯನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಕವಿ ನೀಡುವ ಅಲ್ಲಮನ ವಿರಹದ ಚಿತ್ರ ಅತ್ಯಂತ ಸಹಜ ಎಂಬಂತೆ ಮೂಡಿಬಂದಿದೆ. ಅಲ್ಲಮ ಕಾಮಲತೆಗಾಗಿ ತನ್ನ ತನು, ಮನ, ಧನಗಳನ್ನೆಲ್ಲ ಅರ್ಪಿಸಿಕೊಂಡಿದ್ದವನು. ಆದರೆ ಇದ್ದಕ್ಕಿದ್ದಂತೆ ಮಹಾಜ್ವರ ಬಂದು ಆಕೆ ಸಾಯುತ್ತಾಳೆ. ಅನಿರೀಕ್ಷಿತವಾದ ಈ ಸಾವು ಅಲ್ಲಮನನ್ನು ಭೀಕರವಾಗಿ ಹಿಂಡುತ್ತದೆ. ಆ ಸಂದರ್ಭದಲ್ಲಿ ಅಲ್ಲಮನಲ್ಲಿ ಆಗಿರಬಹುದಾದ ಮಾನಸಿಕ ತೊಳಲಾಟವನ್ನು ಕವಿ-

ಬರೆದಂತೆ ಕಂಡರಿಸಿದಂತೆ ಕರುವಿಟ್ಟಂತೆ
ಮರುಳಂತೆ ಮಹಿಮಿರ್ದರಂತೆ ಮರವಟ್ಟಂತೆ
ಉರವಣೆಯ ದುಃಖದೊಳಗೆಱಗಿ ಬಿಸುಸುಯ್ಯುತಂ
ಪರಿಪರಿಯ ವಿರಹಾಗ್ನಿಯಿಂದುರಿದು ಬೇವುತಂ[42]
ಸಿಂದನಲ್ಲಮನೊಳಗೊಳಗಳಲ್ದು ಬಳಲುತಂ
ಸಂದನೇಹದ ಸದ್ಗುಣಂಗಳಂ ನೆನೆವುತಂ
ಕಾಮಲತೆ ಪೆತ್ತೆ ಮನಮಂ ಸುತ್ತಲಲ್ಲಮಂ

ಎಂಬ ಈ ವಾಕ್ಯಗಳಲ್ಲಿ ಸೆರೆಹಿಡಿದಿದ್ದಾನೆ. ಅಲ್ಲದೆ ವಿರಹದುರಿಯಲ್ಲಿ ಬೆಂದು ಕಣಗಿಲೆಯ ತೋಟದಲ್ಲಿ ನೆಲಕೆರೆದು ಅಳುತ್ತಾ ಕೂರುವ ಸನ್ನಿವೇಶ ಮತ್ತು ಕಾಮಲತೆಯಿಲ್ಲದ ಬದುಕು ಇನ್ನೇಂಥದ್ದು ಎಂದು ಸಾವನ್ನು ಬಯಸಿ ದೇವಸ್ಥಾನದೊಳಗೆ ಪ್ರವೇಶಿಸಲು ಅನುವಾಗುವ ಸನ್ನಿವೇಶಗಳು ಅಲ್ಲಮನ ವಿರಹದ ತೀವ್ರತೆಯನ್ನು ಸ್ವಾಭಾವಿಕವೆಂಬಂತೆ ಚಿತ್ರಿಸುತ್ತವೆ. ಈ ಸಮಯೋಚಿತ ಸನ್ನಿವೇಶ, ಸಮಯೋಚಿತ ಪದ ಹಾಗೂ ಹೋಲಿಕೆಗಳು ಆ ತೀವ್ರತೆಯನ್ನು ಯಥಾವತ್ತಾಗಿ ಚಿತ್ರಿಸುವಲ್ಲಿ ಭಾರೀ ಯಶಸ್ಸನ್ನು ಕಂಡಿವೆ.

ಕವಿ ಅಲ್ಲಮನ ವಿರಹವನ್ನು ಚಿತ್ರಿಸುವಷ್ಟೇ ಸಮರ್ಥವಾಗಿ ಅವನ ಸಾಧನೆಯನ್ನೂ ಚಿತ್ರಿಸುತ್ತಾನೆ. ದೇವಾಲಯವನ್ನು ಅಲ್ಲಮ ಪ್ರವೇಶಿಸುತ್ತಿದ್ದಂತೆಯೇ ಕರತಲದಲ್ಲಿ 'ಅಮೃತಫಳ' ಬರುತ್ತದೆ. ಶಿವಲಿಂಗವು ಅಲ್ಲಮನ ಕೈಸೇರುತ್ತಿದ್ದಂತೆಯೇ ಅನಿಮಿಷಯ್ಯನ ಪ್ರಾಣ ಹೋಗುತ್ತದೆ. ಆಗ ಅಲ್ಲಮ "ಲಿಂಗಸೋಂಕಿಂದೆ/ರಾಗದಿಂದಂಕುರಿಸಿ ನಳನಳಿಸಿ ಚಲ್ವಿಂದೆ/ ಪ್ರಾಜಮುಟ್ಟಿನಲ್ಲಮಂ ಗೋಗೇಶ್ವರಂ ಮೆಚ್ಚೆ/ಬೆರಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚೆ"[14] ಲಿಂಗ ಎತ್ತೆತ್ತ ಹೋಗುತ್ತದೆಯೋ ಅತ್ತತ್ತ ನಡೆಯುತ್ತಾನೆ. ದೇಹಾದಿ ಕರಣಗಳನ್ನು ಮೀರಿದ ಅಲ್ಲಮನಿಗೆ ಸಕಲ ತತ್ವಗಳೂ ಕರತಲಾಮಲಕವಾಗುತ್ತವೆ. ಶಶಿ ರವಿಯಂತೆ ಬೆಳಗತೊಡಗಿದ ಅವನು ಉಸುರಿಲ್ಲದ ಪರಬ್ರಹ್ಮನಾಗಿ ಬಿಚ್ಚಿದ ಮುಡಿಯನ್ನು ಅರಿಯದೆ, ಒಡನೆ ಬರುವವರನ್ನು ಲೆಕ್ಕಿಸದೆ, ಹೊಗಳುವವರು ತೆಗಳುವವರನ್ನು ಅರಿಯದೆ, ಆಳು ಅರಸ ಎಂಬುದನ್ನು ಅರಿಯದೆ, ಮುನ್ನಡೆಯುತ್ತಾನೆ. ಅವನ ಬರವಿಗೆ ಗಿಳಿ ಕೋಗಿಲೆಗಳು ಸುಸ್ವರಗೈಯ್ಯುತ್ತವೆ. ಆತ ನಡೆದುದೇ ದಾರಿ ನುಡಿದುದೇ ವೇದವಾಗುತ್ತದೆ. ಹುಲಿ, ಹುಲ್ಲೆ, ಫಣಿ, ಸಿಂಹ, ಆನೆಗಳೆಲ್ಲ ವೈರವನ್ನು ಮರೆತು ಒಂದಾಗುತ್ತವೆ. ಗಿರಿ ಗಹ್ವರ, ತರುನಿಕಾಯ, ಚಂದ್ರಕಾಂತ ಶಿಲೆ, ಇಂದ್ರ ನೀಲಮಣಿ, ಮಲ್ಲಿಗೆ ಮಾಮರ, ಕೇದಗೆ ಸಂಪಿಗೆ... ಹೀಗೆ ಸರ್ವವನ್ನೂ ಅಲ್ಲಮನೇ ನೆಲೆಸುತ್ತಾನೆ. ಅವನು ಎಲ್ಲಿರುತ್ತಾನೆಯೋ ಅಲ್ಲಿಯೇ ವಸಂತಮಾಸ, ಎಲ್ಲಿರುತ್ತಾನೆಯೋ ಅದೇ ದಿವ್ಯಕ್ಷೇತ್ರವಾಗುತ್ತದೆ.

ಅಲ್ಲಮ ತನ್ನ ಸಾಧನೆಯ ಸಿದ್ಧಿಯನ್ನು ಮುಟ್ಟಿದ ಈ ಹಂತದಲ್ಲಿ ಹರಿಹರ ಪ್ರಕೃತಿಯನ್ನು ಯಥೇಚ್ಛವಾಗಿ ಬಳಸಿಕೊಂಡಿದ್ದಾನೆ. ಪ್ರಕೃತಿಯ ವರ್ಣನೆಯ ಮೂಲಕವೇ ಅಲ್ಲಮನ ಮಹೋನ್ನತ ವ್ಯಕ್ತಿತ್ವವನ್ನು ಚಿತ್ರಿಸುತ್ತಾನೆ. ಯಾವ ಭಾವಗಳು ಭಾಷೆಗೆ ಎಟುಕುವುದಿಲ್ಲವೋ ಅಂಥ ಭಾವಗಳನ್ನು ಪ್ರಕೃತಿಯು ಕಟ್ಟಿಕೊಡುತ್ತದೆ ಎಂಬುದನ್ನು ಹರಿಹರ ಬಲ್ಲವನಾಗಿದ್ದಾನೆ. ಅಂತೆಯೇ ಅವನು ಪ್ರಕೃತಿಯನ್ನು ಯಥೇಚ್ಛವಾಗಿ, ಔಚಿತ್ಯಪೂರ್ಣವಾಗಿ ಬಳಸಿಕೊಂಡಿದ್ದಾನೆ.

ಹರಿಹರನ ಪ್ರಭುದೇವರ ರಗಳೆಯನ್ನು ಸಮಗ್ರವಾಗಿ ಗಮನಿಸಿದಾಗ ಶಿವನ ಮಹಿಮೆಯನ್ನು ಸಾರುವ ಏಕಮಾತ್ರ ಉದ್ದೇಶದಿಂದ ಹರಿಹರ ಈ ಕಥೆಯನ್ನು ಬರೆದಂತೆ ಕಂಡುಬರುತ್ತದೆ. ಕವಿ ಆ ಉದ್ದೇಶದಲ್ಲಿ ಸಫಲವೂ ಆಗಿದ್ದಾನೆ. ಕಥಾನಾಯಕನಾದ ಅಲ್ಲಮ ಕಾಮಲತೆಯ ಪ್ರೇಮಪಾಶಕ್ಕೆ ಸಿಕ್ಕಿ ಕೊನೆಗೆ ಕಾಮಲತೆಯನ್ನು ಕಳೆದುಕೊಂಡು ಅವಳದೇ ಚಿಂತೆಯಲ್ಲಿ ಮಗ್ನನಾಗಿರುತ್ತಾನೆ. ಅವಳ ಚಿಂತೆಯಲ್ಲದೆ ಅವನಿಗೆ ಬೇರೆ ಪ್ರಜ್ಞೆಯೇ ಇಲ್ಲ. ಆ ಅವಸ್ಥೆಯಲ್ಲಿ

ಸಾವನ್ನು ಬಯಸಿ, ಯಾರೂ ಹೋಗಬಾರದ ದೇವಾಲಯವನ್ನು ಪ್ರವೇಶಿಸುತ್ತಾನೆ. ಆದರೆ ಅಲ್ಲಮ ಬಯಸಿದಂತೆ ಆಗುವುದಿಲ್ಲ. ಸಾವಿಗೆ ಬದಲಾಗಿ ಪಾಳು ದೇಗುಲದೊಳಗೆ ಅನಿಮಿಷಯ್ಯನ ದರ್ಶನವಾಗುತ್ತದೆ. ಅನಿಮಿಷಯ್ಯ ಅಲ್ಲಮನ ಕರತಳದಲ್ಲಿ ಲಿಂಗವನ್ನಿರಿಸಿ ತಾವು ಮಾಯವಾಗುತ್ತಾನೆ. ಅಲ್ಲಿಂದ ಅಲ್ಲಮನ ಬದುಕು ಬೇರೆಡೆಗೆ ಸಾಗುತ್ತದೆ. ಮಹಾ ಪ್ರೇಮಿಯಾದ ಅಲ್ಲಮ ಮಹಾಜ್ಞಾನಿಯಾಗುತ್ತಾನೆ, ದಿವ್ಯಜ್ಞಾನಿಯಾಗುತ್ತಾನೆ. ಶಿವನ ಕರುಣೆಯಿಂದ ಅಲ್ಲಮನನ್ನು ದಿವ್ಯಜ್ಞಾನಿಯನ್ನಾಗಿ ಮಾಡುವುದೇ ಹರಿಹರ ಕವಿಯ ಮುಖ್ಯ ಉದ್ದೇಶವೂ ಆಗಿದೆ. ಅದನ್ನು ಕವಿ ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಈ ಉದ್ದೇಶವೇ ಹರಿಹರನ ಕಾವ್ಯದಲ್ಲಿ ಪ್ರಭುದೇವರ ಚಾರಿತ್ರಿಕವಾದ ವಿಚಾರಗಳು ಕಾಣಿಸಿಕೊಳ್ಳದಿರಲು ಕಾರಣವೂ ಆಗಿದೆ ಎಂದರೆ ತಪ್ಪಾಗಲಾರದು. ಒಂದು ವೇಳೆ ಚಾರಿತ್ರಿಕ ವಿಚಾರಗಳನ್ನು ಕಾವ್ಯದಲ್ಲಿ ತಂದಿದ್ದರೆ ಕವಿಯ ಉದ್ದೇಶಕ್ಕೆ ಅಸಗತ್ಯ ಹೊರೆಯಾಗುತ್ತಿದ್ದುದರಲ್ಲಿ ಸಂಶಯವಿಲ್ಲ.

ಒಟ್ಟಿನಲ್ಲಿ ಹರಿಹರನ ಪ್ರಭುದೇವರ ರಗಳೆ ಅವನ ಉತ್ತಮ ಕಾವ್ಯಗಳಲ್ಲಿ ಒಂದು ಎಂಬುದರಲ್ಲಿ ಅನುಮಾನವಿಲ್ಲ. ಕವಿಯ ಔಚಿತ್ಯ ಪ್ರಜ್ಞೆಗೆ ಈ ರಗಳೆ ಉತ್ತಮ ಉದಾಹರಣೆ.

## 6.3 ಮಹಾದೇವಿಯಕ್ಕನ ರಗಳೆ

ಸಾಂಸ್ಕೃತಿಕವಾಗಿ ಕನ್ನಡ ನಾಡಿನ ಇತಿಹಾಸದಲ್ಲಿ ಮಹಾದೇವಿಯಕ್ಕನ ಹೆಸರು ಚಿರಸ್ಮರಣೀಯವಾದುದು. ಅವಳ ಚರಿತ್ರೆ ಹೆಣ್ಣಿನ ಸ್ವಾತಂತ್ರ್ಯ, ಗೌರವ, ಪಾರಮಾರ್ಥ ಸಾಧನೆಯ ಮಹಾಪುರಾಣದಂತೆ. ಅವಳ ಬದುಕನ್ನು ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ಹಲವು ಕವಿಗಳು ಕಾವ್ಯ ಬರೆದಿದ್ದಾರೆ. ಅವರಲ್ಲಿ ಹರಿಹರ, ಚಾಮರಸ, ಸಿದ್ಧವೀರಣಾರ್ಯರ ಕಾವ್ಯಗಳು ಗಮನ ಸೆಳೆಯುತ್ತವೆ. ಈ ಎಲ್ಲ ಕವಿಗಳು ಮಹಾದೇವಿಯಕ್ಕನನ್ನು ಕೇಂದ್ರವಾಗಿಟ್ಟು ಕೊಂಡು ತಮ್ಮತಮ್ಮ ದೃಷ್ಟಿಕೋನಗಳಿಗೆ ತಕ್ಕಂತೆ ಕಾವ್ಯ ಬರೆದಿದ್ದಾರೆ. ಹಾಗಾಗಿ ಅವರ ಕಾವ್ಯದಲ್ಲಿ ಮಹಾದೇವಿಯಕ್ಕನ ನಿಜ ಜೀವನ ವಿಚಾರಗಳನ್ನು ಪೂರ್ಣಪ್ರಮಾಣದಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲ. ಸಧ್ಯದ ಸ್ಥಿತಿಯಲ್ಲಿ ಅವಳ ವಚನಗಳೇ ಅವಳ ಬದುಕಿನ ವಿಚಾರಗಳಿಗೆ ಆಧಾರವಾಗಿವೆ. ಏಕೆಂದರೆ ವಚನಗಳು ಅವಳ ಬದುಕಿನ ಜೀವಂತ ಮತ್ತು ಜ್ವಲಂತ ಅಭಿವ್ಯಕ್ತಿಗಳು. ಅವುಗಳನ್ನು ಬಿಟ್ಟರೆ ಹರಿಹರ ಹೆಚ್ಚು ಪ್ರಸ್ತುತವಾಗುತ್ತಾನೆ. ಕಾರಣ, ಹರಿಹರ ಮಹಾದೇವಿಯಕ್ಕನ ಜೀವಿತ ಕಾಲಕ್ಕೆ ತುಂಬಾ ಹತ್ತಿರದವನು.

ಮಹಾದೇವಿಯಕ್ಕನ ರಗಳೆ ಹರಿಹರನ ಕಾವ್ಯಾಂಬುಧಿಯಿಂದ ಉದ್ಭವಿಸಿದ ಹಲವು ರಸಾತ್ಮಕ ಕೃತಿಗಳಲ್ಲಿ ಒಂದು. ಬಸವರಾಜದೇವರ ರಗಳೆ ಮತ್ತು ನಂಬಿಯಣ್ಣನ ರಗಳೆಗಳನ್ನು ಬಿಟ್ಟರೆ ಇದು ಮೂರನೆಯ ಬಹುಮುಖ್ಯ ಕೃತಿ. ಇದರಲ್ಲಿ ಏಳು ಸ್ಥಲಗಳಿವೆ. ಈ ಏಳು ಸ್ಥಲಗಳಲ್ಲಿ ಮಹಾದೇವಿಯಕ್ಕನ ಮಹೋನ್ನತ ಬದುಕನ್ನು ಕವಿ ಅಳವಡಿಸಿದ್ದಾನೆ. ಚಿಕ್ಕ ವಸ್ತುವಿಗೆಯೇ ರಸೋದ್ದೀಪ್ತವಾದ ನಿರೂಪಣೆಗಳ ಮೂಲಕ ವಿಸ್ತಾರವಾದ ಹರವನ್ನಿತ್ತಿದ್ದಾನೆ. ಕೈಲಾಸದಲ್ಲಿ ರುದ್ರಕನ್ನಿಕೆಯಾಗಿದ್ದ ಮಹಾದೇವಿ, ಗುಪ್ತ ಭಕ್ತನೆಂದರಿಯದೆ ಒಬ್ಬ

ಗಣೇಶ್ವರನನ್ನು ಛಪಿಯಿಂದ ನಿಂದಿಸಿದ ತಪ್ಪಿನ ಪರಿಮಾರ್ಜನೆಗಾಗಿ ಭೂಲೋಕದಲ್ಲಿ ಶಿವಭಕ್ತ ದಂಪತಿಗಳ ಉದರದಲ್ಲಿ ಜನಿಸಿ, ಛಪಿಯು ಹೆಂಡತಿಯಾಗಿ ಬಾಳಿ, ತನ್ನ ಶಿವಭಕ್ತಿಯ ಮುಖಾಂತರ ಪುನಃ ಕೈಲಾಸಕ್ಕೆ ಬರಬೇಕೆಂದು, ಪಾರ್ವತಿಯಿಂದ ಶಾಪಹೊಂದಿ ಉಡುತಡಿಯಲ್ಲಿ ಅವತರಿಸುತ್ತಾಳೆ. ತಾರುಣ್ಯಕ್ಕೆ ಬಂದಾಗ ಕರಾರಿನ ಮೇಲೆ ಕೌಶಿಕನ ಸತಿಯಾಗಿ ಕೆಲವುಕಾಲ ದಾಂಪತ್ಯ ಜೀವನ ನಡೆಸುತ್ತಾಳೆ. ಆಮೇಲೆ, ಕೌಶಿಕನು ಭಕ್ತರ ವಿಷಯದಲ್ಲಿ ತೋರಿದ ಅನಾದರ, ಆಕೆಯ ಶಿವಾರ್ಚನೆ ಹಾಗೂ ಗುರುಭಕ್ತಿಗೆ ಉಂಟುಮಾಡಿದ ಅಡ್ಡಿ- ಈ ಮೂರು ತಪ್ಪುಗಳಿಂದಾಗಿ ಅವನನ್ನು ತ್ಯಜಿಸಿ ವೈರಾಗ್ಯತಾಳಿ ಕೇಶಾಂಬರೆಯಾಗಿ ಶ್ರೀಗಿರಿಗೆ ನಡೆಯುತ್ತಾಳೆ. ಆಕೆಯ ತಾಯ್ತಂದೆಗಳೂ ಕೌಶಿಕನೂ ಅಲ್ಲಿಗೆ ಬಂದು ಅವಳ ಮನವೊಲಿಸಲು ಯತ್ನಿಸಿ ವಿಫಲರಾಗುತ್ತಾರೆ. ಅಲ್ಲಿಯೇ ಉಳಿದ ಮಹಾದೇವಿ, ಚೆನ್ನಮಲ್ಲಿಕಾರ್ಜುನನನ್ನು ಅನನ್ಯವಾದ ಭಕ್ತಿಯಿಂದ ಅರ್ಚಿಸಿ, ಛಪಿಯ ಸಂಗದಿಂದ ಮಲಿನವಾದ ಶರೀರದಿಂದ ಮುಕ್ತಿ ಪಡೆದು ಮತ್ತೆ ಶಿವಲೋಕಕ್ಕೆ ನಡೆಯುತ್ತಾಳೆ. ರುದ್ರಕನ್ನಿಕೆಯ ಪದವಿ ಪಡೆಯುತ್ತಾಳೆ. ಇದಿಷ್ಟು ಹರಿಹರನ ಮಹಾದೇವಿಯಕ್ಕನ ರಗಳೆಯ ಸಂಕ್ಷಿಪ್ತ ರೂಪ.

### 6.3.1 ಹರಿಹರ ಕವಿಯ ಕಾವ್ಯೋದ್ದೇಶ

ಹರಿಹರನಿಗೆ ಮಹಾದೇವಿಯಕ್ಕನನ್ನು ಚಾರಿತ್ರಿಕ ದೃಷ್ಟಿಯಿಂದ ಚಿತ್ರಿಸುವ ಮನಸ್ಸಿದ್ದಂತೆ ಕಾಣುವುದಿಲ್ಲ. ಅವನಿಗೆ ಮಹಾದೇವಿಯಕ್ಕನ ಬದುಕಿನಲ್ಲಿ ಮುಖ್ಯವಾದದ್ದು ಅವಳ ವೈರಾಗ್ಯ ಹಾಗೂ, ಭಕ್ತಿಭಾವದ ಬದುಕು ಮಾತ್ರ. ಹಾಗಾಗಿ ಇಡೀ ಕಾವ್ಯದಲ್ಲಿ ಅವಳ ವೈರಾಗ್ಯದ ಜೀವನವನ್ನು ಸೆರೆಹಿಡಿಯುವ ಪ್ರಯತ್ನ ಮಾಡಿದ್ದಾನೆ. ತನ್ನ ಉದ್ದೇಶವನ್ನು ಆರಂಭದ –

ಭಾವಕಿಯ ಭಕ್ತಿವನಿತೆಯ
ಲಾವಣ್ಯದ ತಿರುಳ ತಂಬೆಲರ ತಣ್ಪಿನ ಸಂ
ಜೀವನೆಯೆಂದೆನಿಪ ಮಹಾ
ದೇವಿಯ ಗುಣಕಥನಮಂ ವಿವರ್ಣಪರಳವೇ[45]

ಈ ಕಂದಪದ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ. ಅವನ ದೃಷ್ಟಿಯಲ್ಲಿ ಮಹಾದೇವಿಯಕ್ಕ ಭಾವಕಿ, ಭಕ್ತಿಯ ವನಿತೆ, ಲಾವಣ್ಯದ ತಿರುಳು, ತಂಬೆಲರ ತಂಪು, ಸಂಜೀವನೆ, ವರ್ಣನಾತೀತವಾದವಳು. ಇದೇ ಗುಣವನ್ನು ಕವಿ ಕಾವ್ಯದಲ್ಲಿ ಸೆರೆಹಿಡಿದಿದ್ದಾನೆ.

### 6.3.2 ಮಹಾದೇವಿಯಕ್ಕನ ಜೀವನ ಮತ್ತು ವ್ಯಕ್ತಿತ್ವ

ಮಹಾದೇವಿಯಕ್ಕ ಮೊದಲು ಕೈಲಾಸದಲ್ಲಿ ಪಾರ್ವತಿಯ ಆಸ್ಥಾನದಲ್ಲಿ ರುದ್ರಕನ್ನಿಕೆಯಾಗಿದ್ದಳು. ಒಮ್ಮೆ ಶಿವ ಗಣೇಶ್ವರನೊಬ್ಬನನ್ನು ಕರೆದು 'ದೇವಿಯರ ಸಮಯಮಂ

ನೋಡಿ ಬಾ' ಎಂದು ಹೇಳುತ್ತಾನೆ. ಶಿವನ ಆಜ್ಞೆಯಂತೆ ಗಣೇಶ್ವರನು ಪಾರ್ವತಿ ಇರುವಲ್ಲಿಗೆ ಬರುತ್ತಾನೆ. ಪಾರ್ವತಿದೇವಿಯರ ಸಭೆಯನ್ನು ಪ್ರವೇಶಿಸಿ, ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡುವಾಗ, ಅವನ ಕಾಲು, ಹಿಂದೆ ಇದ್ದ ರುದ್ರಕನ್ನಿಕೆಗೆ ತಗುಲುತ್ತದೆ. ಅದಕ್ಕೆ ಕೋಪಗೊಂಡ ರುದ್ರಕನ್ನಿಕೆ "ಎಲೆ ಭವಿಯೆ ನೋಡಿಪ್ಪೊಡಮದು........ ಪಿಂದಿರ್ದರಂ ಕಾಣಬಾರದೇ"[46] ಎಂದು ನುಡಿಯುತ್ತಾಳೆ. ಈ ಮಾತಿನಿಂದ ಗಣೇಶ್ವರನ ಮುಖ ಚಿಕ್ಕದಾಗು ತ್ತದೆ. ದೈನ್ಯದಿಂದ ಪಾರ್ವತಿಯ ಮುಖ ನೋಡುತ್ತಾನೆ. ಆಗ ಪಾರ್ವತಿ ಮಹಾದೇವಿ ಯನ್ನು ಕುರಿತು "ಭಕ್ತನಂ ಭವಿಯೆಂದ ದೂಸರಿಂದಪ್ಪುದಿದು/ಭವಿಗೆ ಹೆಂಡತಿಯಾಗಿ ಭಕ್ತರ್ಗೆ ಶರಣೆಂದು/ಭವವಾರ್ಧಿಯಂ ಕಳಿದು ಪರ್ವತಕೆ ನಡೆತಂದು/ಬಳಿಕ ಬಪ್ಪುದು"[47] ಎಂದು ಶಾಪವೀಯುತ್ತಾಳೆ.

ಅದೇ ಸಮಯದಲ್ಲಿ, ಉಡುತಡಿಯಲ್ಲಿ ವಾಸವಾಗಿದ್ದ ಶಿವಭಕ್ತೆ ಮತ್ತು ಶಿವಭಕ್ತ ಎಂಬ ದಂಪತಿಗಳು ಬಹಳ ಕಾಲದಿಂದ ಮಕ್ಕಳಿಲ್ಲದಿರಲು ಶಂಕರನ ನಿಲಯಕ್ಕೆ ಬಂದು ಗಿರಿಜಾತೆಗೆ ಕೈ ಮುಗಿಯುತ್ತಾ "ದೇವಿ ಎಮಗೊರ್ವ ಪುತ್ರಿಯನೀವುದೆಲೆ ತಾಯೇ / ನಾವು ನಿಮ್ಮಯ ಪೆಸರನಿಟ್ಟಪೆವು"[48] ಎಂದು ಬೇಡಿಕೊಳ್ಳುತ್ತಾರೆ. ಆಗ ಗಿರಿಸುತೆಯ ಮುಡಿಯಿಂದ ಒಂದು ಹೂ ಸಿಡಿಯುತ್ತದೆ. ಆ ಹೂವನ್ನು ತೆಗೆದುಕೊಂಡು ಶಿವಭಕ್ತೆಯು ಉದರದಲ್ಲಿರಿಸುತ್ತಾಳೆ. ಶಿವಭಕ್ತೆ ಗರ್ಭ ಧರಿಸುತ್ತಾಳೆ. ನವಮಾಸ ಕಳೆಯುತ್ತದೆ. ಪಾರ್ವತಿಯಿಂದ ಶಾಪ ಪಡೆದ ರುದ್ರಕನ್ನಿಕೆ ಮಹಾದೇವಿಯಾಗಿ ಶಿವಭಕ್ತೆಯ ಹೊಟ್ಟೆಯಲ್ಲಿ ಜನಿಸುತ್ತಾಳೆ. ಹುಟ್ಟಿದ ಮಗುವಿಗೆ ಮಹಾದೇವಿಯೆಂಬ ಹೆಸರಿಟ್ಟು, ಪರಮ ಪ್ರೀತಿಯಿಂದ ಸಲಹುತ್ತಾರೆ. ಇಲ್ಲಿಂದ ಮಹಾದೇವಿ ಯಕ್ಕನ ಬಾಲ್ಯದ ಬದುಕು ಪ್ರಾರಂಭವಾಗುತ್ತದೆ. ಅವಳ ಬಾಲ್ಯವನ್ನು ಕವಿ –

"ತಾಯಮಗ್ಗುಲತಂಪಿನೊಳಂ ಮೊಲೆವಾಲಿನಿಂಪಿನೊಳಂ ತೊಟ್ಟಿಲತೂಕದೊಳಂ ರಾಗಿಸುವರ ಜೋಗುಳದೊಳಂ ಸಾಗಿಸುವರ ಸೋಗಿಲೊಳಂ ಎತ್ತಿಕೊಂಬರ ಆರ್ತಿಯೊಳಂ ಮುಟ್ಟುವರ ಮೋಹದೊಳಂ ಸೋಂಕುವರ ಸುಖದೊಳಂ ತಕ್ಕೈಸುವರಪ್ಪಿನೊಳಂ ಶಶಿಕಳೆಯಂತೆ ದಿನದಿನಕ್ಕೆ ಕಳೆಯೇಱಿ ನಳನಳಿಸಿ ಬೆಳೆವುತ್ತಿಪ್ಪಲ್ಲಿ ಮಹಾದೇವಿಯುತ್ಪಲದೊಳು ಸಿಲ್ಕಿದ ಪೆಣ್ದುಂಬಿ ಜಿನುಂಗುವಂತೊಮ್ಮೊಮ್ಮೆಯಳುತ್ತಂ ಕಮಲಕುಟ್ಮಳವಲರ್ವಂತೆ ನಗುತ್ತಂ ಕುಮುದಂ ಮುಗಿವಂತೆ ಕಣ್ಮುಚ್ಚುತ್ತಂ ಶಿವಭಕ್ತೆಯ ಮುಚ್ಚುಳಂದಱೆವಂತೆ ಕಣ್ದೆರೆವುತ್ತಂ ಮಂದಾನಿಲನ ಸೋಂಕಿಗೆಳೆವಳ್ಳಿಯಲುಗುವಂತೆ ತೋಳಾಡಿಸುತ್ತಂ ಜೀವರತ್ನವೇಳ್ವಂತೆ ಅಂಬೆಳಿಕ್ಕುತ್ತಂ ನಿಷ್ಠೆ ನಿಮಿರ್ವಂತೆ ನಿಂದಿರುತ್ತಂ ಸುಖಂ ಸುಳಿವಂತೆ ನಡೆಗಲಿವುತ್ತಂ ವೀಣೆ ಧನಿ ಗುಡುವಂತೆ ನುಡಿಗಲಿವುತ್ತಂ ಅರಳೆಲೆಯ ಸಿರಿವಂತೆ ನೂಸಕದ ಸುಮ್ಮಾನಿ ಭಸಿತದ ಭಾವಕಿ ಅಂಜನದ ರಂಜನೆ ಮಾಗಾಯ ಮುಗುದೆ ಹೊನ್ನೋಲೆಯ ಚೆನ್ನೆ ಮೂಕುತಿಯ ಮುಗುಳು ಪುಲಿಯುಗುರ ಸುಲಲಿತೆ ಸೇವಳದ ನೀಱೆ ರನ್ನವಾಳಿಯ ರಾಜಹಂಸೆ ತೋಳಬಂದಿಯ ಬಾಲಿಕೆ ಹೊಂಗಡದ ಲಿಂಗವಂತೆ ಕಂಕಣದ ಕಾಮಧೇನು ಉಡುಗೆಯಬೆಡಂಗಿ ಅಂದುಗೆಯ ಮಂದಯಾನೆ ಗೆಜ್ಜೆಗಳ ಸಜ್ಜನೆ ಎನಿಸಿ ನಳನಳಿಸಿ ಬಳೆವುತ್ತಂ"[49] ಎಂದು ಬಣ್ಣಿಸುತ್ತಾನೆ.

ಬಾಲ್ಯ ಮುಗಿದು ಯೌವನಕ್ಕೆ ಕಾಲಿಡುತ್ತಾಳೆ. "ಬಟ್ಟನಡು ಬಡವಾಗಲಿರ್ದುದು ಬಾಸೆಯ ಸೀಮೆ ಸಾಲಱಿಪಲಿರ್ದುದು ಕುಚಸ್ಥಲಂ ಸೀಮಾರೇಖೆಯಂ ಕುಱುಹಿಡಲಿರ್ದುವು ಬರಿಯ

ಮೇಲುದು ವಕ್ಷದೇಶಮಂ ಬಾಸಣಿಸಲಿರ್ದುದು ಕಕ್ಷಮೂಲಂ ಕಪ್ಪುರಿಸಲಿರ್ದುದು ತೋಳು ತಾಳವೇಱಲಿರ್ದುವು... .. ಸೂಸುವ ನೋಟಂ ವಕ್ರತೆಯಂ ಮಱೆಗೊಳಲಿರ್ದುದು"[50] ಹೀಗೆ ತುಂಬ ಆಕರ್ಷಣೀಯವಾಗಿ ಬೆಳೆಯುತ್ತಾಳೆ. ಇಂಥ ಅಪ್ರತಿಮವಾದ ಸುಂದರಿ ಒಮ್ಮೆ ವೈಹಾಳಿಯಿಂದ ಬರುತ್ತಿದ್ದ ಕೌಶಿಕನ ಕಣ್ಣಿಗೆ ಬೀಳುತ್ತಾಳೆ. ಅವಳನ್ನು ನೋಡುತ್ತಿದ್ದಂತೆಯೇ ಕೌಶಿಕ ಅವಳ ಮೋಹಕ್ಕೆ ಒಳಗಾಗುತ್ತಾನೆ.

ಇಲ್ಲಿಂದ ಅವಳ ಬದುಕು ಹೊಸ ತಿರುವು ಪಡೆದುಕೊಳ್ಳುತ್ತದೆ. ಮಹಾದೇವಿಯೊಡನೆ ಮದುವೆಯಾಗಲು ಬಯಸಿ, ಆಕೆಯ ಒಪ್ಪಿಗೆ ಪಡೆಯಲು ತನ್ನ ಸಹವರ್ತಿಗಳನ್ನು ಕೌಶಿಕ ಮಹಾದೇವಿಯ ಮನೆಗೆ ಕಳುಹಿಸುತ್ತಾನೆ. ಮಹಾದೇವಿ ಭವಿಯಾದ ಕೌಶಿಕನನ್ನು ಮದುವೆ ಯಾಗಲು ಒಪ್ಪುವುದಿಲ್ಲ. ಮತ್ತೆ ಮತ್ತೆ ಕೌಶಿಕ ಮಂತ್ರಿಗಳ ಮೂಲಕ ಪ್ರಯತ್ನ ಮಾಡುತ್ತಾನೆ. ಎಷ್ಟು ಪ್ರಯತ್ನಿಸಿದರೂ ಮಹಾದೇವಿ ಒಪ್ಪುವುದಿಲ್ಲ. ಆಗ ಕೌಶಿಕ ಬಲವಂತದಿಂದಲಾದರೂ ಮಹಾದೇವಿಯನ್ನು ಕರೆತರುವಂತೆ ಮಂತ್ರಿಗಳಿಗೆ ಸೂಚಿಸುತ್ತಾನೆ. ಅಂತೆಯೇ ಮಂತ್ರಿಗಳು ಮಹಾದೇವಿಯಕ್ಕನ ತಂದೆ ತಾಯಿಯರ ಬಳಿ ಬಂದು, ರಾಜನನ್ನು ಎದುರು ಹಾಕಿಕೊಳ್ಳುವುದು ಸೂಕ್ತವಲ್ಲ ಎಂಬ ಅರ್ಥದಲ್ಲಿ ಬೆದರಿಸುತ್ತಾರೆ. ತಂದೆ ತಾಯಿಯರ ಇಕ್ಕಟ್ಟನ್ನು ಅರ್ಥ ಮಾಡಿ ಕೊಂಡ ಮಹಾದೇವಿ ಮೂರು ಷರತ್ತುಗಳನ್ನು ಹಾಕಿ, ಕೌಶಿಕನೊಡನೆ ಮದುವೆಯಾಗುತ್ತಾಳೆ.

ಸ್ವಲ್ಪ ಕಾಲ ಅರಮನೆಯಲ್ಲಿ ಇರುತ್ತಾಳೆ. ಅಲ್ಲಿ ಶಿವಪೂಜೆಯಲ್ಲಿ ನಿರತಳಾಗುತ್ತಾಳೆ. ಕಾಮವಾಸನೆ ಮೈಗಂಟಿದ ಕೌಶಿಕನಿಗೆ ಮಹಾದೇವಿ ಶಿವಪೂಜೆಯಲ್ಲಿ ನಿರತಳಾದಷ್ಟೂ ಕಾಮ ಬಯಕೆ ಹೆಚ್ಚುತ್ತಲೇ ಇರುತ್ತದೆ. ಕಾಮೋತ್ಕಟತೆಯಲ್ಲಿ ಮಹಾದೇವಿ ಹಾಕಿದ ಮೂರೂ ಷರತ್ತನ್ನು ಮುರಿಯುತ್ತಾನೆ. ಇದು ಮಹಾದೇವಿಯು ಕೌಶಿಕನ ಸೆರೆಯಿಂದ ಬಿಡಿಸಿಕೊಂಡು ಅರಮನೆಯನ್ನು ಬಿಟ್ಟುಹೋಗುವುದಕ್ಕೆ ಮಾರ್ಗವಾಗುತ್ತದೆ. ಕೂಡಲೇ ಅರಮನೆಯನ್ನು ಬಿಟ್ಟು ಕೇಶಾಂಬರೆಯಾಗಿ ಶ್ರೀಪರ್ವತಾಭಿಮುಖವಾಗಿ ನಡೆಯುತ್ತಾಳೆ.

ಮಗಳ ಮನಸ್ಸನ್ನು ಒಲಿಸಲು ಮಹಾದೇವಿಯಕ್ಕನ ತಂದೆತಾಯಿಯರು ಮತ್ತೆ ಅವಳಿರುವಲ್ಲಿಗೆ ಹೋಗುತ್ತಾರೆ. ಆಗ ಮಹಾದೇವಿಯಕ್ಕ "ಶಿವಭಕ್ತರಾಗಿಯುಂ ನೀವಿಂತು ನುಡಿವರೇ....... ಇರ್ಪುದಂ ಕೆಡಿಸುವರ್ ಮಾತೆಪಿತರೆನಗಲ್ಲ"[51] ಎಂದು ಕಠಿಣವಾಗಿ ನುಡಿಯುತ್ತಾಳೆ. ಹಾಗೆಯೇ ಕಪಟವೇಷ ಧರಿಸಿ ಬಂದ ಕೌಶಿಕನನ್ನು "ಎಲೆಲೆ ಕೌಶಿಕ ಹೋಗು ಹೋಗು ನೀನೇಕೆ ನಾನೇಕೆ.......ತಮವೆತ್ತ ಬೆಳಗೆತ್ತ ಶಿಖಿಯೆತ್ತ ತಂಪೆತ್ತ, ಭ್ರಮೆಯೆತ್ತ, ತಿಳಿವೆತ್ತ ಬಿಸಿಲೆತ್ತ ಶಶಿಯೆತ್ತ"[52] ಎಂದು ನುಡಿದು ಚೆನ್ನಮಲ್ಲಿಕಾರ್ಜುನನ ಧ್ಯಾನದಲ್ಲಿರುತ್ತಾಳೆ. ಮಹಾದೇವಿಯಕ್ಕನ ಸರಳವಾದ ಈ ಜೀವನ ಚಿತ್ರದೊಳಗೆ, ಹರಿಹರ ಅವಳ ವ್ಯಕ್ತಿತ್ವವನ್ನು ಸೆರೆಹಿಡಿದಿದ್ದಾನೆ.

ಕವಿ ಹೇಳುವಂತೆ ಮಹಾದೇವಿಯಕ್ಕ ಭಕ್ತಿಯ ಭಾವಕಿ. ಅವಳ ಭಕ್ತಿಹೃದಯವನ್ನು ವರ್ಣಿಸಲು ಒಂದು ಸ್ಥಲವನ್ನೇ ಮೀಸಲಿಟ್ಟಿದ್ದಾನೆ. ಪರಮ ಭಕ್ತೆಯಾದ ಮಹಾದೇವಿ ಚೆನ್ನಮಲ್ಲಿಕಾರ್ಜುನನನ್ನು ಒಲಿದವಳು. ಅವಳು -

ನಗೆಯುಬೆಳಗಿನೊಳಗೆ ಶಶಿಯ ಬೆಳಗು ಬೆಳಗನಿತ್ತಿಕಟ್ಟಿ,
ಮಲ್ಲಿನಾಥನಫಲ ಭಕ್ತಿಬಗೆದು ನೆನೆದು ಬಪ್ಪತೆರದಿ
ಎಲ್ಲತೆರದಿ ಸಿಂಗರಂಗಳೊಪ್ಪಿ ನೆಗೆದು ಬಪ್ಪ ತೆರದಿ
ಶಿವನ ಸುಖದ ಮುಖದ ಕಣ್ಣಬೆಳಕು ಬೆಳೆದು ನಡೆವತೆರದಿ
ಭವನ ಪೂಜೆ ರೂಪುವಡೆದು ಬರ್ಪತೆರದೆ ಬಂದು
ಏಕನಿಷ್ಠೆನೇಮದಿಂ ಪಿನಾಕಿಯುಲ್ಲಿಗೆಯ್ದುವಂತೆ[53]

ಹೀಗೆ ಮಲ್ಲಿಕಾರ್ಜುನನ ಮುಂದೆ ಕುಳಿತು ಅವನನ್ನು 'ಬಳ್ಳಿವರಿವ ನೇಹದುಸುರ ಧೂಪ'ದಿಂದ ಪೂಜಿಸುತ್ತಾಳೆ. ಮನದಲ್ಲೆಲ್ಲಾ ಮಲ್ಲಿಕಾರ್ಜುನನೇ ಆವರಿಸಿರಲು, ಅಂತರಂಗದಲ್ಲಿನ ಭಕ್ತಿ ಅರ್ಚನೆಯೇ ಬಾಹ್ಯಾರ್ಚನೆಯಾಗಿ ಶಿವನನ್ನು ಆಕೆ -

ದೇವಾ ಎನ್ನ ಹೃದಯಕಮಲದೊಳಗೆ ಪ್ರಜ್ವಲಿಪ್ಪ ಬೆಳಗೆ
ದೇವ ಎನ್ನ ಮನದ ಮೊನೆಯೊಳೊಪ್ಪುತಿರ್ಪ ಬೆಳಗಿನೊಳಗೆ
ಗುರುವೆ ಬಾರಾ ಪರವೆ ಬಾರಾ ವರವೆ ಬಾರಾ ದೇವ ದೇವಾ
ಹರನೆ ಬಾರಾ ಸ್ವಕೃತ ಸಾರಾ ಸರ್ವ ಬಾರಾ ಬಾರ ದೇವ
.............................................
ಬಾರಸಿದ್ಧ ಭವವಿರುದ್ಧ ಸುಪ್ರಸಿದ್ಧ ಮಲ್ಲಿನಾಥ
ಬಾರಾ ಮುಡುಹು ಮುಂದಲೆಗಳ ಕುರುಳನೀವೆ ಮಲ್ಲಿನಾಥ[54]

ಎಂದು ಆರ್ದ್ರಹೃದಯದಿಂದ ಬಗೆಬಗೆಯಾಗಿ ತನ್ನ ಪ್ರಾಣ. ಗತಿ, ಮತಿ, ಪತಿ ಎಲ್ಲವೂ ಆದ ಮಲ್ಲಿಕಾರ್ಜುನನನ್ನು ಕರೆಯುವಳು. ಅವಳ ಆ ಮೊರೆ ಎಷ್ಟು ತೀವ್ರವಾದುದೆಂದರೆ ಅದನ್ನು ಬೇರೆ ಯಾವ ರೀತಿಯಲ್ಲೂ ತರಲಾಗದು. ಆ ವೈಭವದ ಪೂಜೆಯನ್ನು ಓದುತ್ತಿದ್ದಂತೆ ಆ ಶಕ್ತಿ ನಮ್ಮನ್ನು ಪರವಶವಾಗಿಸುತ್ತದೆ. ಅನುಪಮವಾದ ಭಕ್ತಿಯಲ್ಲಿ ವಿರಕ್ತೆಯಾದ ಮಹಾದೇವಿ ನಲೆಗೊಂಡು, ಮೈಯ್ಯಲ್ಲೆಲ್ಲಾ ಪುಳಕ ತುಂಬಲು ಮಲ್ಲಿನಾಥನನ್ನು ನೋಡಿ -

ದೇವ ಭವನೆ ಭವಿಯ ಸಂಗವೆಂದು ಮಾಣ್ಬುದೆನ್ನ ತಂದೆ
ದೇವ ಬೆರಕೆಯಿಲ್ಲದಚ್ಚ ಭಕುತಿ ಸುಖವದೆಂದು ತಂದೆ
ಪೂಜೆಯೊಳಗೆ ಮೆಚ್ಚಿ ಬೆಚ್ಚಿ ಮನವನೆಂತು ತೆಗೆವೆನಯ್ಯಾ
ಪೂಜೆಯೊಳಗೆ ನಟ್ಟ ದಿಟ್ಟಿಗಳನದೆಂತು ಕೀಳ್ವೆನಯ್ಯಾ[55]

ಎಂದು ಹಾಡುತ್ತಾಳೆ. ಈ ಹಾಡು ಅವಳ ಅಂತರಂಗದ ಮೊರೆಯಂತಿದೆ. ಚೆನ್ನಮಲ್ಲಿಕಾರ್ಜುನನಲ್ಲಿ ಅವಳ ಮನ ಬೆಸಗೊಂಡಿರುವುದು ಇಲ್ಲಿ ಕಂಡುಬರುತ್ತದೆ.

ಭಕ್ತಿ ಹೇಗೆ ಅವಳಲ್ಲಿ ತುಂಬಿಕೊಂಡಿದೆಯೋ ಹಾಗೆಯೇ ಸಹಿಸುವ ಹಾಗೂ ಸಿಡಿಯುವ

ಗುಣಗಳೂ ಇವೆ. ಅವಳ ಸಮಯಪ್ರಜ್ಞೆ ಅಪೂರ್ವವಾದದ್ದು.

ಮಹಾದೇವಿಯಕ್ಕನನ್ನು ಕೌಶಿಕನೊಡನೆ ಮದುವೆಯಾಗುವಂತೆ ಕೌಶಿಕನ ಮಂತ್ರಿಗಳು ಕೇಳಲು ಬಂದಾಗ, ಆಕೆ ಸಹಜವಾಗಿ ಕೌಶಿಕನನ್ನು ನಿರಾಕರಿಸುತ್ತಾಳೆ. ಭವಿಯ ಸಂಗವನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದಾಗ, ಕೌಶಿಕ ಅನ್ಯ ಮಾರ್ಗವೇ ಇಲ್ಲದೆ ಬಲವಂತದಿಂದಲಾದರೂ ಅವಳನ್ನು ತರುವಂತೆ ಮಂತ್ರಿಗಳಿಗೆ ಸೂಚಿಸುತ್ತಾನೆ. ಅದರಂತೆ ಮಂತ್ರಿಗಳು ಮಹಾದೇವಿಯಕ್ಕನ ತಂದೆ ತಾಯಿಯರನ್ನು ಕರೆಸಿ, ಕೌಶಿಕನನ್ನು ಮಹಾದೇವಿ ಮದುವೆಯಾಗದಿದ್ದರೆ ಮುಂದಾಗುವ ಅನಾಹುತಗಳ ಬಗೆಗೆ ತಿಳಿಸುತ್ತಾರೆ. ಆಗ ಮಹಾದೇವಿಯಕ್ಕನ ತಂದೆ ತಾಯಿಯರು ಒಂದೆಡೆ ಪ್ರೀತಿಯ ಮಗಳ ಛಲ, ಇನ್ನೊಂದೆಡೆ ಅರಸನ ಬೆದರಿಕೆ, ಮುಂದೆ ಏನಾಗುತ್ತದೆಯೋ ಎಂಬ ಭಯದ ನೆರಳಲ್ಲಿ ಸಿಕ್ಕಿ ನಲುಗುತ್ತಾರೆ. ಹೇಳಿಕೊಳ್ಳಲಾಗದೇ ಸಂಕಟಪಡುತ್ತಾರೆ. ಕೊನೆಗೆ ಮಹಾದೇವಿಯನ್ನೇ ಕಂಡು ಕೌಶಿಕನನ್ನು ಮದುವೆಯಾಗುವಂತೆ ಕೇಳಿಕೊಳ್ಳುತ್ತಾರೆ.

ಇಂಥ ಸನ್ನಿವೇಶದಲ್ಲಿ ಮಹಾದೇವಿಯ ಮರುಗುವ ಗುಣ ಮೆಚ್ಚುವಂಥದ್ದು. ಆಕೆ ತಂದೆ ತಾಯಿಯರಿಗೆ ತನ್ನಿಂದಾಗಿ ಒದಗಲಿರುವ ಸಂಕಟಕ್ಕೆ ಮರುಗುತ್ತಾಳೆ. ಅವರಿಗಾಗಿ ತನಗಾಗಲಿರುವ ಹಿಂಸೆಯನ್ನೆಲ್ಲಾ ಸಹಿಸಿಕೊಳ್ಳಲು ಸಿದ್ಧವಾಗುತ್ತಾಳೆ. ಮನಸ್ಸಿಲ್ಲದ ಮನಸ್ಸಿನಲ್ಲಿ ಮೂರು ಷರತ್ತುಗಳೊಡನೆ ಕೌಶಿಕನನ್ನು ಮದುವೆಯಾಗಲು ಒಪ್ಪುತ್ತಾಳೆ. ಮಹಾದೇವಿಯ ಈ ಸಮಯಪ್ರಜ್ಞೆ ಮುಂದಾಗುವ ಎಲ್ಲ ದುರಂತಗಳನ್ನು ಉಪಶಮನಗೊಳಿಸುತ್ತದೆ. ಇಲ್ಲದಿದ್ದಲ್ಲಿ ಕಾಮಾಂಧ ಕೌಶಿಕನಿಂದ ಮಹಾದೇವಿಯಕ್ಕನನ್ನು ಬಲಾತ್ಕಾರದಿಂದ ಕೊಂಡೊಯ್ಯುವುದಾಗಲಿ, ಅವಳೆದುರಿಗೆ ಅವಳ ತಂದೆ ತಾಯಿಯರನ್ನು ಹಿಂಸಿಸುವ ಸಾಧ್ಯತೆಗಳನ್ನಾಗಲಿ ತಳ್ಳಿಹಾಕುವಂತಿರಲಿಲ್ಲ. ಮದುವೆಯೆಲ್ಲಾ ಮುಗಿದು ಮಹಾದೇವಿಯಕ್ಕ ಕೌಶಿಕನ ಅರಮನೆಗೆ ಬರುತ್ತಾಳೆ. ಷರತ್ತಿನಂತೆ ಅರಮನೆಯಲ್ಲಿ ತನ್ನ ನಿಷ್ಠೆ ನೇಮಗಳನ್ನು ಮುಂದುವರಿಸುತ್ತಾಳೆ. ಈ ಬಂಧನದಿಂದ ಬಿಡುಗಡೆ ಹೊಂದುವ ದಿನಗಳಿಗಾಗಿ ಕಾಯುತ್ತಾಳೆ. ಹಾಗಿರುವಾಗ ಕೌಶಿಕನಿಂದ ಮೂರೂ ಷರತ್ತುಗಳು ಮುರಿದು ಬೀಳುತ್ತವೆ. ಮೂರನೇ ಘಟನೆಯಲ್ಲಿ ಕೌಶಿಕ, ಮಹಾದೇವಿಯು ಮೈಮುಚ್ಚಿಕೊಳ್ಳಲು ಎಳೆದುಕೊಳ್ಳುತ್ತಿದ್ದ ದುಕೂಲವನ್ನು 'ತೆಗೆ ತೆಗೆ ನಿನಗೇನತ್ಯಂತ ಭಕ್ತಿಗೆ' ಎಂದು ಕಟಕಿಯಾಡಿ ಕಿತ್ತುಕೊಳ್ಳಲು ಹೋಗುತ್ತಾನೆ. ಆಗ ಮಹಾದೇವಿ ಆ ದುಕೂಲವನ್ನು ಅಲ್ಲಿಯೇ ಬಿಟ್ಟು, ಕೇಶಾಂಬರೆಯಾಗಿ ಹೊರಗೆ ನಡೆಯುತ್ತಾಳೆ. ಇಲ್ಲಿಂದ ಮಹಾದೇವಿಯ ದಿಟ್ಟ ವ್ಯಕ್ತಿತ್ವದ ಬದುಕು ಆರಂಭವಾಗುತ್ತದೆ.

ಮಹಾದೇವಿ ಅರಮನೆಯಿಂದ ಹೊರಡುವಾಗ, ಅವಳು ನಡೆದುಕೊಂಡ ರೀತಿ ಅವಳ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಂತಿದೆ. ಹೊರಡುವ ಆ ಸನ್ನಿವೇಶದಲ್ಲಿ ಅವಳು ಎಲ್ಲರನ್ನೂ ಪ್ರೀತಿಯಿಂದ ಕಾಣುತ್ತಾಳೆ. ತಂದೆ ತಾಯಿಯರಿಗೆ ತಿಳಿಸಿ, ಗುರುಗಳ ಚರಣಕ್ಕೆ ಎರಗಿ, ಅವರ ಅನುಜ್ಞೆಯನ್ನು ಪಡೆದುಕೊಳ್ಳುತ್ತಾಳೆ. ಪುರದ ಜನರನ್ನೂ ಲೆಕ್ಕಿಸದೆ, ಭವದ ಆಸೆಯನ್ನು ಕಿತ್ತೆಸೆದು ಶಾಂತ ಮನಸ್ಕಳಾಗಿ ಹೊರಡುತ್ತಾಳೆ. ಎಲ್ಲರನ್ನೂ ಬಿಟ್ಟು ಹೋಗುತ್ತಿದ್ದೇನೆ ಎಂಬ ಬೇಸರವಾಗಲಿ, ಆತಂಕವಾಗಲಿ, ನೋವಾಗಲಿ, ಅವಳಲ್ಲಿಲ್ಲ.

ಚೆನ್ನಮಲ್ಲಿಕಾರ್ಜುನನಿಗಾಗಿ ಶ್ರೀಗಿರಿಯಲ್ಲಿ ಅವಳು ಇರುವಾಗ, ತಂದೆ ತಾಯಿಯರು ಮತ್ತೆ ಮಹಾದೇವಿಯನ್ನು ಹುಡುಕಿಕೊಂಡು ಬರುತ್ತಾರೆ. ಮಗಳನ್ನು ಕಂಡು ಕಡುನೊಂದು

ನಾನಾರೀತಿಯಿಂದ ಮಗಳನ್ನು ವಿನಂತಿಸಿಕೊಳ್ಳುತ್ತಾರೆ. ಇಲ್ಲಿಯವರೆಗೆ ಎಲ್ಲವನ್ನೂ ಸಹಿಸಿಕೊಂಡಿದ್ದ ಮಹಾದೇವಿ –

ಶಿವಭಕ್ತರಾಗಿಯುಂ ನೀವಿಂತು ನುಡಿವರೇ
ಭವಿಯ ಸಂಗಂ ತಪ್ಪಿ ಭವನ ಸಂಗವನಪ್ಪಿ
ಶಿವಭಕ್ತಿರಸಭರಿತ ಶರನಿಧಿಯ ನಡುವೊಪ್ಪಿ
ಇರ್ಪುದಂ ಕೆಡಿಸುವರ್ ಮಾತೆ ಪಿತರೆನಗಲ್ಲ[56]

ಎಂದು ತಂದೆತಾಯಿಯರಿಗೆ (ಈವರೆಗೂ ಎದುರಾಡಿರುವುದಿಲ್ಲ) ಎದುರಾಡುತ್ತಾಳೆ. ಹಾಗೆಯೇ ಕಪಟವೇಷ ಧರಿಸಿ ಬಂದ ಕೌಶಿಕನಿಗೆ -

ಎಲೆಲೆ ಕೌಶಿಕ ಹೋಗು ನೀನೇಕೆ ನಾನೇಕೆ
ನೆಲನರಿಯೆ ನಿನ್ನೊಡನೆ ಪುದುವಾಳ್ವುದೆನಗೇಕೆ[57]

ಎಂದು ನಿಂದಿಸಿ ಕಳುಹಿಸುತ್ತಾಳೆ. ಈವರೆಗೂ ಅಸಹಾಯಕತೆಯಿಂದ ಬಾಯಿಕಟ್ಟಿ ಕುಳಿತಿದ್ದ ಮಹಾದೇವಿ ಈಗ ನೇರವಾಗಿ ನುಡಿಯತೊಡಗಿದ್ದಾಳೆ. ಇದು ಆಕೆ ಅನೇಕ ದಿನಗಳಿಂದ ಹೊರಗೆಡಹಲಾಗದೆ ಅದುಮಿಟ್ಟುಕೊಂಡಿದ್ದ ಅವಳ ನೋವಿನ ಕಿಡಿಯಾಗಿದೆ.

## 6.3.3 ಕೌಶಿಕನ ಪಾತ್ರ ವೈಶಿಷ್ಟ್ಯ

ಮಹಾದೇವಿಯಕ್ಕನ ರಗಳೆಯಲ್ಲಿ ಕೆಲವು ಸನ್ನಿವೇಶಗಳು ಬರುತ್ತವೆ.

**ಮೊದಲನೆಯದು :** ಮಹಾದೇವಿ ಮತ್ತು ಕೌಶಿಕರಿಬ್ಬರೂ ಸುರತಸುಖದೊಳಿರಬೇಕಾದರೆ, ದೂರ ದೇಶದಿಂದ ಮಾಹೇಶ್ವರರು ಬಂದು, ತಾವು ಬಂದಿರುವುದಾಗಿ ಮಹಾದೇವಿಯಕ್ಕನಿಗೆ ತಿಳಿಸುವಂತೆ 'ಪಡಿಯರರಿಗೆ' ಹೇಳಿ ಕಳುಹಿಸುತ್ತಾರೆ. ಆಗ ಕೌಶಿಕನು ಬಂದು, ಒಂದು ದಿನವಾದರೂ ದೇವಿಯರು ಸುಖನಿದ್ರೆಯಲ್ಲಿರಲಿ ಹೋಗು ಹೋಗು ಎಂದು ಪಡಿಯರನನ್ನು ಘರ್ಜಿಸಿ ಕಳುಹಿಸುವ ಸನ್ನಿವೇಶ.

**ಎರಡನೆಯದು :** ಒಮ್ಮೆ ಮಹಾದೇವಿ ಪೂಜಾ ನಿರತಳಾಗಿರುವಾಗ ಕಾಮಾಂಧನಾದ ಕೌಶಿಕ ಹಿಂದಿನಿಂದ ಬಂದು ಅವಳನ್ನು ಆಲಂಗಿಸುವ ಸನ್ನಿವೇಶ.

**ಮೂರನೆಯದು :** ದುಕೂಲವನ್ನು ತೆಗೆದುಕೊಳ್ಳಲು ಬಂದ ಮಹಾದೇವಿಯನ್ನು ಕೌಶಿಕ, ಅತಿಭಕ್ತೆಗೆ ದುಕೂಲವೇಕೆ? ಎಂದು ಜರೆಯುವ ಸನ್ನಿವೆಶ.

**ನಾಲ್ಕನೆಯದು :** ಶ್ರೀಗಿರಿಯ ಕಡೆಗೆ ಹೋದ ಮಹಾದೇವಿಯನ್ನು ಮತ್ತೆ ಒಲಿಸಿಕೊಳ್ಳಲು, ಕೌಶಿಕ ಕಪಟವೇಷ ಧರಿಸಿ ಮಹಾದೇವಿಯ ಬಳಿಗೆ ಬರುವ ಸನ್ನಿವೇಶ.

ಈ ನಾಲ್ಕು ಸನ್ನಿವೇಶಗಳ ಮೂಲಕ ಹರಿಹರ ಕೌಶಿಕನನ್ನು ವಿಷಯಲಂಪಟ, ಕಾಮಾಂಧ, ದುರ್ಗುಣಿ, ಅಮಾನವೀಯ ವ್ಯಕ್ತಿ ಎಂಬ ಅರ್ಥದಲ್ಲಿ ಚಿತ್ರಿಸುವ ಪ್ರಯತ್ನ ಮಾಡುತ್ತಾನೆ.

ಆದರೆ ಕಾವ್ಯದೊಳಗೆ ಹರಿಹರನ ಈ ಉದ್ದೇಶ ಅಷ್ಟೊಂದು ಸಫಲವಾಗುವುದಿಲ್ಲ ಎಂದು ಕಾಣಿಸುತ್ತದೆ. ಏಕೆಂದರೆ ಅವನಲ್ಲಿ ಕೂಡ ಕೆಲವೊಂದು ಮಾನವೀಯ ಗುಣಗಳು ಕಂಡುಬರುತ್ತವೆ.

ಕೌಶಿಕ ಎಲ್ಲರಿಗೂ ಗೊತ್ತಿರುವಂತೆ ಆ ಪ್ರಾಂತ್ಯದ ಅರಸ. ಕಾಲದ ಪರಿಮಿತಿಯಲ್ಲಿ ಹೇಳುವುದಾದರೆ, ಕೌಶಿಕ ಮಹಾದೇವಿಯಕ್ಕನ ವಿಚಾರದಲ್ಲಿ ಇನ್ನೂ ಕ್ರೂರವಾಗಿ ವರ್ತಿಸ ಬಹುದಿತ್ತು. ತಂದೆ ತಾಯಿಯರ ಅನುಮತಿಯೇ ಇಲ್ಲದೆ ಅವಳನ್ನು ತನ್ನ ಅರಮನೆಯೊಳಕ್ಕೆ ತಂದುಕೊಳ್ಳಬಹುದಿತ್ತು. ಆದರೆ ಕೌಶಿಕ ಅಂಥ ಮಾರ್ಗವನ್ನು ಹಿಡಿಯುವುದೇ ಇಲ್ಲ. ತನ್ನಿಂದ ಎಷ್ಟು ಸಾಧ್ಯವೋ ಅಷ್ಟೂ ಅವಳ ಮನಸ್ಸನ್ನು ಒಪ್ಪಿಸಲು ಪ್ರಯತ್ನಿಸುತ್ತಾನೆ. ಅಷ್ಟಾದರೂ ಅವನ ಉದ್ದೇಶವಾದರೂ ಏನು? ಮಹಾದೇವಿಯನ್ನು ತನ್ನ ಭೋಗಲಾಲಸೆಗಾಗಿ ಬಳಸಿಕೊಳ್ಳು ವುದಲ್ಲ. ಬದಲಾಗಿ ಅವಳನ್ನು ಮದುವೆಯಾಗಿ ಅವಳೊಡನೆ ಸುಖವಾಗಿ ಬಾಳುವುದು. ಇದು ಮಾನವ ಸಹಜವಾದ ಬಯಕೆ. ಆದರೆ ಈ ಬಯಕೆಗೆ ಮಹಾದೇವಿ ಸರ್ವರೀತಿಯಿಂದಲೂ ಒಪ್ಪದೇ ಹೋದಾಗ ಸ್ವಲ್ಪಮಟ್ಟಿಗೆ ಅವಳನ್ನು ಬೆದರಿಸುವ ಪ್ರಯತ್ನ ಮಾಡಿಸಿದ್ದಾನೆ. ಇದು ಅವನ ಅಸಹಾಯಕತೆಯಿಂದ ಆದ ಪ್ರಮಾದದಂತೆ ಕಾಣಿಸುತ್ತದೆಯೇ ಹೊರತು, ಕ್ರೂರತ್ವದಿಂದ ಆದ ಪ್ರಮಾದದಂತೆ ಕಾಣುವುದಿಲ್ಲ. ಏನೇ ಆಗಲಿ ಬಲವಂತ ಮಾಡಲು ಹೋದ ಆತನ ಪ್ರಯತ್ನದಲ್ಲಿ ತಪ್ಪಂತೂ ಇದೆ. ಆದರೆ ಅದು ಅಕ್ಷಮ್ಯವಾದುದಲ್ಲ. ಒಂದು ವೇಳೆ ಆತ ಈಗಾಗಲೇ ಮದುವೆಯಾಗಿದ್ದರೆ ಅಕ್ಷಮ್ಯವಾಗುತ್ತಿತ್ತೇನೋ.

ಒಮ್ಮೆ ಮಹಾದೇವಿಯನ್ನು ಹುಡುಕಿಕೊಂಡು ದೂರದೇಶದಿಂದ ಮಾಹೇಶ್ವರರು ಬರುತ್ತಾರೆ. ಅವರನ್ನು ಕಂಡ ಕೌಶಿಕ ಸಮಯವಿಲ್ಲವೆಂದು ಹೇಳಿ ಕಳುಹಿಸಿಬಿಡುತ್ತಾನೆ. ಆಗ ಮಹಾದೇವಿ ಕೌಶಿಕನನ್ನು "ಪಚ್ಚಪಸಿಯ ಪಾತಕನೆ ನಿನ್ನ ಸಂಗದಿಂ ಭಕ್ತರಿಂದೆಯುಂ ಕೇಳ್ವಂತಾದುದು"[58] ಎಂದು ನಿಂದಿಸುತ್ತಾಳೆ. ಆಗ ಕೌಶಿಕ ನಡೆದುಕೊಂಡ ರೀತಿಯಂತೂ ಮರುಕ ಹುಟ್ಟಿಸುತ್ತದೆ. ಅವನ ಘನತೆಗೆ ವಿರುದ್ಧವಾಗಿ ಆತ ಮಹಾದೇವಿಯ ಕಾಲಿನಲ್ಲಿ ಬಿದ್ದು, ಬಂದ ಅಪರಾಧವನ್ನು ಮನ್ನಿಸುವಂತೆ ಬೇಡಿಕೊಳ್ಳುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಕೌಶಿಕನು ಶಿವನ ವೇಷ ಧರಿಸಿ ಶ್ರೀಗಿರಿಯ ಕಡೆಗೆ ಮಹಾದೇವಿಯನ್ನು ಹುಡುಕಿಕೊಂಡು ಹೋಗುತ್ತಾನೆ. ಅಲ್ಲಿ ಮಹಾದೇವಿ ಯನ್ನು ಕಂಡು "ಭಕ್ತನಾದೆಂ ಮಹಾದೇವಿ ಕರುಣಿಪುದೆನಗೆ / ಭಕ್ತಿಯಿಲ್ಲದ ಕಿಂಕರಂಗೆ ಕರುಣಿಪುದೆನಗೆ / ಸುಖದ ಸುಗ್ಗಿಯನದಾವರವೆ ಕರುಣಿಪುದೆನಗೆ"[59] ಎಂದು ಕಾಲು ಹಿಡಿದು ಬೇಡಿಕೊಳ್ಳುತ್ತಾನೆ. ಆಗಲೂ ಮಹಾದೇವಿ ಕೌಶಿಕನನ್ನು ನಿಂದಿಸುತ್ತಾಳೆ. ಇಲ್ಲಿ ಹರಿಹರ ಹೇಳುವಂತೆ ಕೌಶಿಕ ದುಷ್ಟ ಮನದಿಂದ ವೇಷ ಬದಲಿಸಿ ಮಹಾದೇವಿಯಕ್ಕನ ಬಳಿ ಸುಳಿದಿದ್ದೇ ಆಗಿದ್ದರೆ, ಅವಳು ನಿಂದಿಸಿ ನುಡಿದಾಗ ಕ್ರೂರವಾಗಿ ವರ್ತಿಸಬೇಕಾಗಿತ್ತು. ಆದರೆ ಕೌಶಿಕ ಆ ಹಾದಿಯನ್ನು ಹಿಡಿಯುವುದಿಲ್ಲ. ಅದಕ್ಕೆ ಬದಲಾಗಿ ಕಲುಮಠದ ರಾಜಗುರುಗಳಿಗೆ ಹುಲುಮಠದ ಮುಖ್ಯರಿಗೆ ಲಂಚವನ್ನಿತ್ತು ಒಪ್ಪಿಸುವ ಪ್ರಯತ್ನ ಮಾಡುತ್ತಾನೆ. ಕೌಶಿಕನ ಈ ವರ್ತನೆಯಲ್ಲಿ ಅಸಹ್ಯವಿದೆ; ಆದರೆ ಕ್ರೂರತ್ವವಿಲ್ಲ. ಅಂಥ ಕ್ರೂರತ್ವವಿದ್ದಲ್ಲಿ ತನಗಾದ ನಿರಾಸೆಗೆ, ಅವಮಾನಕ್ಕೆ, ಕಲುಮಠದ ರಾಜಗುರುಗಳು ಹಾಗೂ ಹುಲುಮಠದ ಮುಖ್ಯರಿಗೆ ಬದಲಾಗಿ ದುರ್ಜನರನ್ನು

ಕಟ್ಟಿಕೊಂಡು ಮಹಾದೇವಿಯನ್ನು ಬಲಾತ್ಕಾರದಿಂದ ತರಬಹುದಿತ್ತು. ಕಥೆಯ ಉದ್ದಕ್ಕೂ ಸಾಗುವ ಅವನ ವಿರಹಯಾತನೆ ಸಹೃದಯರ ಕನಿಕರಕ್ಕೆ ಪಾತ್ರವಾಗುತ್ತದೆ.

ಕೌಶಿಕನ ಪಾತ್ರದಲ್ಲಿ ಗುಣ ಎಷ್ಟಿವೆಯೋ ದೋಷಗಳೂ ಅಷ್ಟೇ ಇವೆ. ಅವುಗಳಿಂದಾಗಿ ಕೌಶಿಕ ಸಹೃದಯರ ಅನಾದರಣೆಗೆ ಹೇಗೆ ಪಾತ್ರವಾಗುತ್ತಾನೋ ಹಾಗೆಯೇ ಕನಿಕರಕ್ಕೂ ಪಾತ್ರವಾಗುತ್ತಾನೆ. ಅಂತೂ ಕೌಶಿಕನ ಪಾತ್ರ ಸನ್ನಿವೇಶಕ್ಕೆ ತಕ್ಕಂತೆ ಚೆನ್ನಾಗಿ ಮೂಡಿಬಂದಿದೆ. ಮಹೋನ್ನತವಾದ ಮಹಾದೇವಿಯಕ್ಕನ ವ್ಯಕ್ತಿತ್ವ ಕಟ್ಟಿಕೊಡಲು ಸಹಕಾರಿಯಾಗಿದೆ.

### 6.3.4 ಶಿವಭಕ್ತ-ಶಿವಭಕ್ತೆಯ ಪಾತ್ರಗಳು

ಮಹಾದೇವಿ ಮತ್ತು ಕೌಶಿಕನ ಪಾತ್ರಗಳನ್ನು ಬಿಟ್ಟರೆ, ಮೂರನೆಯ ಬಹು ಮುಖ್ಯ ಪಾತ್ರಗಳೆಂದರೆ ಶಿವಭಕ್ತ-ಶಿವಭಕ್ತೆಯರದು. ಈ ದಂಪತಿಗಳು ಹಲವು ಕಾಲ ಮಕ್ಕಳಿಲ್ಲದಿರಲು, ಪಾರ್ವತಿಯನ್ನು ಬೇಡಿ ಮಹಾದೇವಿಯೆಂಬ ಕಾರಣಿಕ ಕನ್ಯೆಯನ್ನು ಪಡೆಯುತ್ತಾರೆ. ಇವರನ್ನು ಕವಿ ಅತಿಗುಣಿಗಳು, ಚೆಲುವರು, ಜ್ಞಾನಿಗಳು ಎಂದೆಲ್ಲ ಕರೆಯುತ್ತಾನೆ.

ಮಹಾದೇವಿಯಕ್ಕನಿಗೆ ಹತ್ತು ವರ್ಷಗಳಾಗುವ ಹೊತ್ತಿಗೆ ಅವಳ ತಂದೆ ತಾಯಿಯರು ಸರ್ವಗುಣ ಸಂಪನ್ನರೆನಿಸಿದ ಶೈವಾಚಾರ್ಯರನ್ನು ಕರೆಯಿಸಿ ಗುರುಕಾರುಣ್ಯವನ್ನು ಮಾಡಿಸುತ್ತಾರೆ. ಮಗಳಿಗೆ ಬಾಲ್ಯವು ಸಡಿಲಿ ಯೌವನ ಪ್ರಾಪ್ತವಾಗುತ್ತಿದ್ದಂತೆಯೇ ಅವಳ ಸೌಂದರ್ಯವನ್ನು ಕಂಡು ಅಚ್ಚರಿಪಡುತ್ತಾರೆ. ಯಾರ ದೃಷ್ಟಿಯೂ ತಾಗದಂತೆ ರುದ್ರಾಕ್ಷಿಯ ರಕ್ಷೆ ಕಟ್ಟುತ್ತಾರೆ, 'ಧವಳಾರದಿಂದ ಅಗಲ'ದಂತೆ ಸಲಹುತ್ತಾರೆ.

ಮಹಾದೇವಿಯ ಸೌಂದರ್ಯಕ್ಕೆ ಮೋಹಗೊಂಡ ಕೌಶಿಕ, ಅವಳ ತಂದೆ ತಾಯಿಯರನ್ನು ವಿಚಾರಿಸಲು ವಸಂತಕನನ್ನು ಕಳುಹಿಸುತ್ತಾನೆ. ಮಹಾದೇವಿಯನ್ನು ಮದುವೆಯಾಗಲು ಕೇಳುವ ಉದ್ದೇಶದಿಂದ ಮಹಾದೇವಿಯಕ್ಕನ ಮನೆಗೆ ಬಂದ ವಸಂತಕ ಅವಳ ತಂದೆ ತಾಯಿಯರನ್ನು ಕರೆದು ಅವರಿಗೆ, ಕೌಶಿಕನಿಗೆ ಮಹಾದೇವಿಯರ ಕರುಣವೇ ಹರಣ, ದಯಾವಾಕ್ಯವೇ ಶರಣು, ಎಂದು ತಿಳಿಸಿದ್ದಲ್ಲದೆ ಅವನು ಅತಿಕೋಪಿ; ಅತಿವಿಷಯಿ; ಅತಿನಿಷ್ಠುರ-ಎಂದೂ ತಿಳಿಸುತ್ತಾನೆ. ಆ ಸಂದರ್ಭದಲ್ಲಿ ಮಗಳ ಮನೋಭಾವನೆಯನ್ನು ಅರಿತ ತಂದೆ ತಾಯಿಯರು ಸಂಕಟಕ್ಕೆ ಸಿಕ್ಕುತ್ತಾರೆ. ತಮಗಿಷ್ಟವಿಲ್ಲದ ಸ್ಥಿತಿಯಲ್ಲೆ ಮಗಳಿಗೆ ಉಪಾಯದಿಂದ "ಅರಸು ಕೌಶಿಕನೊಡನೆ ಸುಮಸುಖದೊಳಿರು ಮಗಳೆ / ಸಿರಿದಪ್ಪ ಸಂಪದಂ ನಿನಗೆ ಲೇಸೆಲೆ ಮಗಳೆ"[೪] ಎಂದು ಉಪದೇಶಿಸುತ್ತಾರೆ. ಇಲ್ಲಿ ಅವರು ಅರಸನ ಸಂಪತ್ತಿಗಾಗಿ ಆಸೆ ಪಟ್ಟವರಲ್ಲ; ಸಹಜವಾಗಿಯೇ ಮುಂದಾಗುವ ದುರಂತಗಳಿಗೆ ಹೆದರಿ ಹಾಗೆ ಕೇಳಿದ್ದಾರೆ ಅಷ್ಟೆ.

ಎರಡನೆಯ ಬಾರಿ ಮತ್ತಷ್ಟು ಬೆದರಿಕೆಗಳು ಬಂದಾಗ, ಶಿವಭಕ್ತ-ಶಿವಭಕ್ತೆಯರು ದೀನ ಮುಖರಾಗಿ ಕಣ್ಣೀರು ಸುರಿಸುತ್ತ–

ನೆಲಸಿತು ಮರ್ಮರಣವೇಣಿಂಜೆ ವೃಷ್ಟರಿಗೆ

ಪೊಸತು ನಿನ್ನಯ ಭಕ್ತಿ ತಾನೆಮಗೆ ಸಂಕಟಂ[6]

ಎಂದು ಹೇಳಿ ಕಾರಿಕಾಲಮ್ಮ, ಹೇರೂರ ಹೆಂಗೂಸು, ವೈಜಕವ್ವೆಯರು ಭವಿಗೆ ಸತಿಯಾದ ಉದಾಹರಣೆ ಕೊಡುತ್ತಾರೆ. ಒಂದೆಡೆ ಮಗಳ ಮನದ ಇಂಗಿತ, ಇನ್ನೊಂದು ಕಡೆಗೆ ಪ್ರಾಣಭಯ-ಈ ಸಂಕಟದಲ್ಲಿ ಸಿಕ್ಕಿ ಅನ್ಯಮಾರ್ಗವಿಲ್ಲದೆ ಕೌಶಿಕನನ್ನು ಮದುವೆಯಾಗುವಂತೆ ತಿಳಿಸುತ್ತಾರೆ. ಮದುವೆಯಾದ ಮೇಲೆ ಅವರಿಗೆ ಅಸಮಾಧಾನ ಇದ್ದೇ ಇದೆ. ಆದ್ದರಿಂದಲೇ ಪ್ರೀತಿಯ ಮಗಳು ಕೌಶಿಕನ ಅರಮನೆಗೆ ಹೋಗುವ ಹೊತ್ತಿನಲ್ಲಿ ಎರಡು ಮಾತುಗಳ ಉಪದೇಶವನ್ನೂ ಮಾಡುವುದಿಲ್ಲ; ಸಂಪೂರ್ಣ ನಿಮ್ಮವಿಗೆಡುತ್ತಾರೆ.

ಮುಂದೆ, ಕೌಶಿಕನನ್ನು ತ್ಯಜಿಸಿ ಶ್ರೀಶೈಲದ ಕಡೆ ಹೊರಡಲನುವಾದ ಮಗಳನ್ನು ಕಂಡು ದುಃಖ ಸಾಗರದಲ್ಲಿ ಮುಳುಗುತ್ತಾರೆ. ದುಃಖದಲ್ಲಿ ಮಗಳನ್ನು ಹುಡುಕಿ ಶ್ರೀಶೈಲದ ಕಡೆ ನಡೆಯುತ್ತಾರೆ. ಇದು ಶಿವಭಕ್ತೆ-ಶಿವಭಕ್ತರು ಮಹಾದೇವಿಯಕ್ಕನ ಬಗೆಗೆ ಇಟ್ಟಿದ್ದ ಅಸಾಧಾರಣ ಪ್ರೀತಿಗೆ ಸಾಕ್ಷಿಯಾಗಿದೆ. ಶ್ರೀಶೈಲದಲ್ಲಿ ಮಗಳನ್ನು ಕಂಡು 'ಇಂತು ಇರ್ಪರೇ ಮಗಳೇ', 'ನಾನಾ ನಿರೋಧದೊಳ್ ಸಂದಿರ್ಪರೇ', 'ಮೃದು ಪದಂ ಕಲುನೆಲಕೆ ಸೇರಿರ್ದಪೇ' ಎಂದು ಪ್ರೀತಿಯಿಂದ ಮಾತನಾಡಿಸಿ, ಬಹಳಷ್ಟು ನೊಂದು ಎರಡು ಸಹಸ್ರ ಹೊನ್ನು ನೀಡಿ ಊರಿಗೆ ಮರಳುತ್ತಾರೆ. ಇಲ್ಲಿ ಗ್ರಾಮೀಣ ತಂದೆ ತಾಯಿಯರ ಅಂತರಂಗದ ಪ್ರೀತಿ ತುಂಬಿ ಹರಿಯುತ್ತದೆ.

## 6.3.5 ಮಹಾದೇವಿಯಕ್ಕನ ರಗಳೆ ಮತ್ತು ಚಾರಿತ್ರಿಕ ಮಹತ್ವ

ಹರಿಹರ ಮಹಾದೇವಿಯಕ್ಕನ ಬದುಕನ್ನು ಕುರಿತಂತೆ ಬರೆದಿರುವ ಸುಮಾರು ಏಳು ಸ್ಥಲಗಳ ಕಥೆಯಲ್ಲಿ ಮಹಾದೇವಿಯಕ್ಕನ ಚಾರಿತ್ರಿಕ ವಿಚಾರ ಎಷ್ಟಿದೆ ಎಂಬುದನ್ನು ತಿಳಿದಾಗ ಮಾತ್ರ ನಮಗೆ ಆಶ್ಚರ್ಯವಾಗುತ್ತದೆ. ಏಕೆಂದರೆ ಹರಿಹರ ಅವಳ ಚಾರಿತ್ರಿಕ ವಿಚಾರವನ್ನು ಸಂಪೂರ್ಣ ಕಡೆಗಣಿಸಿದ್ದಾನೆ. ಮಹಾದೇವಿಯಕ್ಕನ ಊರು, ಕೌಶಿಕನ ದೃಷ್ಟಿಗೆ ಮಹಾದೇವಿಯಕ್ಕ ಬಿದ್ದದ್ದು, 'ಬಂದ ಕಿನ್ನರಿಬೊಮ್ಮ ತಂದೆಯಂ ಕಾಣುತಂ' ಎಂದು ಹೇಳುವುದು-ಇತ್ಯಾದಿ ಅಂಶಗಳನ್ನು ಬಿಟ್ಟರೆ ಇನ್ನೂ ಹಲವು ಚಾರಿತ್ರಿಕ ವಿಚಾರಗಳನ್ನು ಮರೆಮಾಚಿದ್ದಾನೆ.

ಮಹಾದೇವಿಯಕ್ಕನ ಹುಟ್ಟಿನ ಬಗ್ಗೆ ಯಾವುದೋ ಒಂದು ಪೌರಾಣಿಕ ಹಿನ್ನೆಲೆಯನ್ನು ಒದಗಿಸಿಕೊಡುತ್ತಾನೆ. ಮಹಾದೇವಿಯಕ್ಕನ ತಂದೆ ತಾಯಿಯರ ಹೆಸರನ್ನು ಹೇಳದೆ ಶಿವಭಕ್ತ-ಶಿವಭಕ್ತೆ ಎಂದು ಹೇಳಿಬಿಡುತ್ತಾನೆ. ಅವಳ ಮದುವೆ ವಿಚಾರದಲ್ಲಿ ಮಹಾದೇವಿಯಕ್ಕ ಕೌಶಿಕನೊಡನೆ ಮದುವೆಯಾಗಿ ವಿಷಮ ಸಂಸಾರ ಸುಖದಲ್ಲಿದ್ದಳು ಎಂದೇ ಚಿತ್ರಿಸಿದ್ದಾನೆ. ಇದರ ಬಗೆಗೆ ಜಿಜ್ಞಾಸೆಗಳು ನಡೆಯುತ್ತಲೇ ಇವೆ.

ಕಿನ್ನರಿ ಬೊಮ್ಮಯ್ಯ ಅಕ್ಕನನ್ನು ಪರೀಕ್ಷಿಸುವ ಸಂದರ್ಭ ಅವಳ ವಚನಗಳಿಂದಲೇ ತಿಳಿದು

ಅಕ್ಕ "......ಚಿಕಿ ಚಿಮಿರ್ ವರೆಲೆ ಧರಿಂಯ ರಿಸಾಣಿನಿಂದು ಸಮುಯಸುತಿರೆ ಮುಟ್ಟು ವರೆ ಫೀ! ಪ್ರೇಲ್ಲ ಮಾಡಿದುಗಂಡ್ಲು ಅವಸ್ಥಾನಿಸುವ ಮಾನಹೀಂಯದ ಮಾನಗಸಗುಚಿಂದು ಮಾನ್ ಮಾನ್" ಎಂದು ಸಿಡುಕುತ್ತಾಳೆ. ಈ ಬಿಡದು ನನ್ನುದೇಶಕ್ಕೆ ಅಕ್ಕನ -

ಎಮ್ಮೆಗೊಂದು ಚಿಂತೆ ಸಮ್ಮಗಾರಗೊಂದು ಚಿಂತೆ
ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ
ಎನಗೆ ಎನ್ನ ಚಿಂತೆ; ತನಗೆ ತನ್ನ ಕಾಮದ ಚಿಂತೆ
ಒಲ್ಲೆ ಹೋಗು ಸೆರಗ ಬಿಡು ಮರುಳೆ!

ಎಂಬ ಈ ವಚನ ಮೂಲವಾಗಿರುವಂತೆ ಕಾಣುತ್ತದೆ.

ಹೀಗೆ ಇನ್ನೂ ಕೆಲವು ಉದಾಹರಣೆಗಳು ಹರಿಹರ ಮಹಾದೇವಿಯಕ್ಕನ ವಚನಗಳಿಂದ ಆಕರವನ್ನು ಪಡೆದುಕೊಂಡಿರುವುದನ್ನು ಸಮರ್ಥಿಸುತ್ತವೆ.

### 6.3.7 ಮಹಾದೇವಿಯಕ್ಕನ ರಗಳೆ ಮತ್ತು ಸಾಂಕೇತಿಕತೆ-

ಹರಿಹರನಿಂದ ನಿರೂಪಿತವಾದ ಮಹಾದೇವಿಯಕ್ಕನ ಕಥೆ ಮೇಲು ನೋಟಕ್ಕೆ ಅತ್ಯಂತ ಭಕ್ತಿಯ ಅಸಾಧಾರಣ ಕಥೆ ಎಂಬಂತೆ ಕಂಡುಬರುತ್ತದೆ. ಆದರೆ ಅದು ಬರಿಯ ಭಕ್ತಿಯ ಕಥೆಯಲ್ಲ. ಅದೊಂದು ಸಾಂಕೇತಿಕ ಕಾವ್ಯ ಎಂಬುದರಲ್ಲಿ ಅನುಮಾನವಿಲ್ಲ

ಹರಿಹರನ ಮಹಾದೇವಿಯಕ್ಕನ ರಗಳೆಯನ್ನು ರಚಿಸಿದುದರ ಮುಖ್ಯ ಉದ್ದೇಶ- ಮಹಾದೇವಿಯಕ್ಕನ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಚಿತ್ರಿಸುವುದು. ಅದನ್ನು ಕವಿ ಧ್ವನಿ ವಿಧಾನದಿಂದ ಸಾಧಿಸಿದ್ದಾನೆ. "ಹರಿಹರಕವಿ ಅಕ್ಕನನ್ನು 'ಬೆಳಗು' 'ತಂಪು', 'ಶಶಿ' ಎಂದು ಕರೆದು, ಕೌಶಿಕನನ್ನು 'ತಮ', 'ಕಿಡಿ', 'ಧೂಮ' , 'ಬಿಸಿಲು'. ಎಂದು ಬಣ್ಣಿಸಿದ್ದಾನೆ. ಕೌಶಿಕ ಎಂಬ ಪದಕ್ಕೆ ಗೂಬೆ, ಬೆಳಕನ್ನು ಕಾಣದ್ದು, ತಮದಲ್ಲಿಯೇ ಸಂಚರಿಸುವಂತಹುದು ಎಂಬ ಅರ್ಥಗಳು ಇರುವುದರಿಂದ, ಕೌಶಿಕ ಎಂಬುದು ದೊರೆಯ ಹೆಸರಾಗಿದ್ದರೂ ಕಾಮುಕ, ತಾಮಸಿ, ಬೆಳಕಿನ ವಿರೋಧಿ ಎಂಬ ಅರ್ಥಗಳನ್ನು ನೀಡುತ್ತದೆ. ಅದೊಂದು ಸಾಂಕೇತಿಕ ಹೆಸರೇ ಎಂಬುದು ಸ್ಪಷ್ಟ." ಆದುದರಿಂದ ಈ ಕಥೆ ಎರಡು ಭಿನ್ನ ತತ್ವಗಳನ್ನು ಎಂದರೆ; ಕಾಮತತ್ವ ಮತ್ತು ಪ್ರೇಮ ತತ್ವಗಳನ್ನು ಸಾಂಕೇತಿಸುತ್ತದೆ ಎನ್ನಬಹುದು. ಈ ಎರಡು ತತ್ವಗಳ ಹೋರಾಟದಲ್ಲಿ ಭಕ್ತಿ ತತ್ವವು ಕಾಮತತ್ವವನ್ನು ಗೆಲ್ಲುವುದನ್ನು ಇಲ್ಲಿ ಕಾಣಬಹುದು.

ಈವರೆಗೆ ಹರಿಹರ ಮಹಾದೇವಿಯಕ್ಕನ ರಗಳೆಯಲ್ಲಿ, ಆಕೆಯ ಬದುಕನ್ನು ಹೇಗೆ ಚಿತ್ರಿಸಿದ್ದಾನೆ ಎಂಬುದನ್ನು ವಿವರವಾಗಿ ಗಮನಿಸಲಾಗಿದೆ. ಕಥೆಯಲ್ಲಿ ಗುಣದೋಷಗಳೇನೇ ಇರಲಿ, ಅದೊಂದು ಸುಂದರ ಕಾವ್ಯ ಎಂಬುದಂತೂ ಸ್ಪಷ್ಟ. "ಹರಿಹರನ ಕಥೆಯಲ್ಲಿ ನೂರಕ್ಕೆ ನೂರರಷ್ಟು ಚಾರಿತ್ರಿಕ ಸತ್ಯವನ್ನು ಹುಡುಕಬೇಕಾಗಿಲ್ಲ. ಆತನು ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದ ಶಿವಶರಣರ ಚರಿತ್ರೆಗಳನ್ನು ಕಾವ್ಯಕ್ಷೇತ್ರಕ್ಕೆ ತಂದು, ಕನ್ನಡ ಕಾವ್ಯದ ವಸ್ತು ಪ್ರಪಂಚವನ್ನು ಹಿಗ್ಗಿಸಿದುದು ಸತ್ಯ. ಅಷ್ಟು ಮಟ್ಟಿಗೆ ಆತನ ಐತಿಹಾಸಿಕ ಪ್ರಜ್ಞೆ ಪ್ರಶಂಸನೀಯ. ಆದರೂ ಆತನು ಬರೆದ ರಗಳೆಗಳಿಗೆಲ್ಲ ಕೇವಲ ಇತಿಹಾಸವೇ ಪ್ರೇರಕ ಶಕ್ತಿಯಾಗಿರದೆ, ಭಕ್ತಿ ಮೂಲ

ಸೆಲೆಯಾಗಿದೆ ಎಂಬ ಮಾತನ್ನು ಇಲ್ಲಿ ಸದಾ ನೆನಪಿನಲ್ಲಿಟ್ಟುಕೊಂಡಿರುವುದು ವಿಹಿತ."[67] ಕಥೆಯಲ್ಲಿ ಮಹಾದೇವಿಯಕ್ಕನ ಅಚಲಭಕ್ತಿ, ಕ್ರಿಂಕರ್ಯ, ಸ್ತ್ರೀಯರ ಅನುಕಂಪ ಎಲ್ಲವೂ ನಮ್ಮ ಕಣ್ಮುಂದೆ ಸುಳಿಯುತ್ತದೆ.

## 6.4 ಮಲುಹಣನ ರಗಳೆ

ಹೆಣ್ಣು ಮತ್ತು ಹೊನ್ನು ಸಮೃದ್ಧವಾಗಿ ಸಿಕ್ಕಿದೆ ಎಂದರೆ, ವ್ಯಕ್ತಿ ಅದರ ಸುಖದಲ್ಲಿಯೇ ಲೀನವಾಗಿಬಿಡುತ್ತಾನೆ. ಅವುಗಳೇ ಶಾಶ್ವತ ಎಂದು ನಂಬುತ್ತಾನೆ. ಒಂದು ವೇಳೆ ಅವು ತನ್ನಿಂದ ದೂರಾದರೂ ಅದೇ ಕೊರಗಿನಲ್ಲಿ ಕಾಲ ದೂಡುತ್ತಾನೆ. ಆದರೆ ಈ ರೀತಿಯ ಕೊರಗುವಿಕೆಯಿಂದ ಯಾವ ಪ್ರಯೋಜನವೂ ಇಲ್ಲ. ಪ್ರಯೋಜನ ಆಗಬೇಕಾದರೆ ಶಿವನ ಮೊರೆ ಹೋಗು ವುದೊಂದೇ ಮಾರ್ಗ. ಹಾಗೆ ಶಿವನ ಮೊರೆಹೊಕ್ಕರೆ ಶಿವ ಭಕ್ತನನ್ನು ನಂಬಿ ಸಲಹುತ್ತಾನೆ. ಈ ನಂಬಿಕೆಯ ಆಶಯದಲ್ಲಿ ಹರಿಹರ ಮಲುಹಣನ ಕಥೆಯನ್ನು ನಿರೂಪಿಸುತ್ತಾನೆ.

ಕಥಾನಾಯಕನಾದ ಮಲುಹಣ ಶಿವಭಕ್ತ. ದಿನವೂ ಹತ್ತಿರದ ವಿಜಯೇಶ್ವರ ದೇವಾಲಯಕ್ಕೆ ಹೋಗಿ ಪೂಜಾ ಕಾರ್ಯದಲ್ಲಿ ತೊಡಗುತ್ತಿದ್ದ. ಇವನಲ್ಲಿ ಅಪಾರ ಸಂಪತ್ತು ಇತ್ತು. ಇವನ ತಂದೆ ಸುವರ್ಣ ಭಟ್ಟ ತಾನು ಸಾಯುವಾಗ ತನ್ನ ಮಗನಿಗಾಗಿ ಅವನ ಆಯಸ್ಸು ನೂರುವರ್ಷ ಎಂದು ಎಣಿಸಿ, ದಿನಕ್ಕೆ ಸಾವಿರ ಹೊನ್ನಿನಂತೆ ನೂರುವರ್ಷ ಗಳಿಗಾಗುವಷ್ಟು ಹಣವನ್ನು ಎತ್ತಿಟ್ಟಿದ್ದ. ಹಾಗಾಗಿ ಬದುಕಿನಲ್ಲಿ ಅವನಿಗೆ ಹಣದ ಚಿಂತೆಯೇ ಇಲ್ಲ. ಹೀಗಿರುವಾಗ ಒಮ್ಮೆ ಅವನು ವಿಜಯೇಶ್ವರ ದೇವಾಲಯದಲ್ಲಿ, ಶಿವಭಕ್ತಿಯಲ್ಲಿರಬೇಕಾದರೆ ಅಲ್ಲಿಗೆ ಪೂಜೆಗಾಗಿ ಬಂದಿದ್ದ ಮಲುಹಣೆ ಎಂಬ ಅಪ್ರತಿಮ ಸುಂದರಿಯ ಮೋಹಕ್ಕೆ ಒಳಗಾಗುತ್ತಾನೆ. ಮಲುಹಣೆ ಅದೇ ದೇವಾಲಯದ ವೇಶ್ಯೆ ಪದ್ಮಾವತಿಯ ಮಗಳು. ಮಲುಹಣೆಯ ಸನಿಹ ದೊರೆಯುತ್ತಿದ್ದಂತೆಯೇ ಮಲುಹಣ ಬಾಹ್ಯ ಪ್ರಪಂಚವನ್ನೇ ಮರೆಯುತ್ತಾನೆ. ಇಬ್ಬರ ಬದುಕೂ ಸೆಜ್ಜೆಮನೆಯಲ್ಲಿಯೇ ಸಾಗುತ್ತದೆ. ಕಾಮಾನುರಾಗಕ್ಕೆ ಒಳಗಾದ ಅವರಿಬ್ಬರೂ "..ಸುಕುಮಾರಾಂಗಿಗೆ ನೆರೆದ ಸಮ ಸುಖಸಮಯದೊಳ್ ಕರಣವೆಲ್ಲಂ ನೋಟ, ನೋಟವೆಲ್ಲಂ ನುಡಿ, ನುಡಿಯೆಲ್ಲಂ ವಿರಹ, ವಿರಹವೆಲ್ಲಂ ದೈನ್ಯ, ದೈನ್ಯವೆಲ್ಲಂ ಸಾತ್ವಿಕಂ, ಸಾತ್ವಿಕವೆಲ್ಲಂ ಮೆಯ್, ಮೆಯ್ಯೆಲ್ಲಂ ಕೂಟಂ, ಕೂಟವೆಲ್ಲಂ ಮನಂ, ಮನಮೆಲ್ಲಂ, ಮೆಚ್ಚೆಲ್ಲಂ ಸೋಲಂ, ಸೋಲವೆಲ್ಲಂ ಸುಖಮಯ"[68] ಎಂಬಂತೆ ಹಲವು ದಿನಗಳನ್ನು ನಿಮಿಷಗಳಾಗಿ ಕಳೆಯುತ್ತಾರೆ. ಆ ಹೊತ್ತಿಗೆ ಮಲುಹಣನ ಇಡೀ ಸಂಪತ್ತು ಬರಿದಾಗಿರುತ್ತದೆ. ಹಣದಾಸೆಗಾಗಿ ಮಾತ್ರ ಮಲುಹಣೆಯೊಡನೆ ಸೇರಲು ಪರವಾನಗಿ ನೀಡಿದ್ದ ಪದ್ಮಾವತಿ, ಮಲುಹಣನ ಸಂಪತ್ತೆಲ್ಲವೂ ಮುಗಿದಿದೆ ಎಂದು ತಿಳಿದಾಗ, ಮಲುಹಣೆಯನ್ನು ಅವನಿಂದ ದೂರಮಾಡಲು ಪ್ರಯತ್ನಿಸುತ್ತಾಳೆ. ಹಂತ ಹಂತವಾಗಿ ಪ್ರಯತ್ನಿಸಿ, ಒಮ್ಮೆ ಕ್ರೂರವಾಗಿ ನಡೆದುಕೊಂಡು ಇಬ್ಬರನ್ನೂ ಬೇರ್ಪಡಿಸುತ್ತಾಳೆ. ಮಲುಹಣೆಯನ್ನು ಅಪಾರವಾಗಿ ತಲೆಗೆ ಹಚ್ಚಿಕೊಂಡಿದ್ದ ಮಲುಹಣ ವಿರಹ ತಾಪಕ್ಕೆ ಸಿಕ್ಕುತ್ತಾನೆ. ಮಲುಹಣೆಯೂ ವಿರಹತಾಪದಲ್ಲಿ ಸಿಕ್ಕುತ್ತಾಳೆ.

ಮಲುಹಣನ ವಿರಹದ ವರ್ಣನೆಯನ್ನು ಹರಿಹರ ಚಿತ್ತಾಕರ್ಷಕವಾಗಿ ವರ್ಣಿಸಿದ್ದಾನೆ. ಮಲುಹಣೆ ದೂರವಾದ ಮೇಲೆ ಮಲುಹಣ ದಿಕ್ಕು ಕಾಣದಾಗುತ್ತಾನೆ. ಮರುಗಿ ಮನವುಕ್ಕಿ

ತಾಪಿಸುತ ನಿಲ್ಲುತ್ತಾನೆ. ಎಲ್ಲಿಗೆ ಹೋಗಬೇಕೆಂಬುದನ್ನು, ಏನು ಮಾಡಬೇಕೆಂಬುದನ್ನು ತಿಳಿಯದಾಗುತ್ತಾನೆ. ತನ್ನಷ್ಟಕ್ಕೆ ತಾನೇ ಮಾತನಾಡುತ್ತಾನೆ. ಸುಮ್ಮಸುಮ್ಮನೆ ಅತ್ತಿತ್ತ ಅಡ್ಡಾಡುತ್ತಾನೆ. ನಿಂತವರನ್ನು ಕಂಡು ಮಲುಹಣೆ ಎಂದು 'ಸೋಂಕು'ತ್ತಾನೆ. ಬಂದವರನ್ನು ಕಂಡು ಮಲುಹಣೇ ಎಂದು ಅಪ್ಪುತ್ತಾನೆ. ಕಮಲವನ್ನು ಕಂಡು ಮಲುಹಣೆಯ ಮುಖ ಎಂದು ಮುಟ್ಟುತ್ತಾನೆ. ವಿರಹಾವಸ್ಥೆಯಲ್ಲಿ ಜಗತ್ತಿನ ಎಲ್ಲ ವಸ್ತುಗಳಲ್ಲೂ ಮಲುಹಣೆಯ ರೂಪವನ್ನೇ ಕಾಣುತ್ತಾನೆ. ಅವಳ ಚಿತ್ತ ಮಲುಹಣನ ಚಿತ್ತದಲ್ಲಿ ಸೇರಿ ಹೋಗಿದೆ. ಕ್ಷಣ ಕ್ಷಣಕ್ಕೂ ಅವಳ ಮೇಲಿನ ಮೋಹ ಹೆಚ್ಚಾಗುತ್ತಲೇ ಇದೆ. ಆ ವಿರಹದಲ್ಲಿ ಅವನಿಗೆ ಬೆಳದಿಂಗಳು ಉರಿಬಿಸಿಲಿಗಿಂತ ಬಿಸಿಯಾಗಿದೆ. ಮಂದಮಾರುತ ಮೈಕೊರೆದಂತಾಗುತ್ತದೆ. ಮೃದುವಾದ ಚಿಗುರೆಲೆಗಳು ಚುಚ್ಚಿದಂತಾಗುತ್ತವೆ. ಸಹಿಸಲಾಗದ ದುಃಖದಲ್ಲಿ ಮಲುಹಣೆಯು ಮನೆಯ ಬಳಿಯ ಎಂಜಲು ಚೆಲ್ಲುವ ಕುಳಿಯೊಳಗೆ ನಿಂತು, ಮಲುಹಣೆಯ ಧ್ಯಾನದಲ್ಲಿ ತೊಡಗುತ್ತಾನೆ. ಆ ಸಂದರ್ಭದಲ್ಲಿ ಊಟ ಮಾಡಿದ ತಟ್ಟೆಯನ್ನು ತೊಳೆದ ಮಲುಹಣೆ, ಆ ನೀರನ್ನು ಧ್ಯಾನದಲ್ಲಿ ತೊಡಗಿರುವ ಮಲುಹಣನ ಮೇಲೆ ಕಾಣದೆ ಎರಚುತ್ತಾಳೆ. ನೀರು ಬೀಳುತ್ತಿದ್ದಂತೆಯೇ ಮಲುಹಣ, ಹಾ! ಮಲುಹಣೇ!! ಹಾ! ಮಲುಹಣೇ!!! ಎಂದು ಕೂಗುತ್ತಾನೆ. ಆ ಕೂಗು ಮಲುಹಣೆಗೆ ಕೇಳಿಸುತ್ತಿದ್ದಂತೆಯೇ ನೊಂದುಕೊಂಡು ಬಂದು ಅವನನ್ನು ಸಂತೈಸಿ, ಹೊರಟು ಹೋಗುವಂತೆ ತಿಳಿಸಿ ತಾನು ಪಜ್ಜೆಮನೆಗೆ ಹೊರಡುತ್ತಾಳೆ. ಆದರೆ ಮಲುಹಣ ಹಿಂದಿರುಗುವುದಿಲ್ಲ. ಅಲ್ಲಿಯೇ ಉಳಿದುಬಿಡುತ್ತಾನೆ. ಇಡೀ ರಾತ್ರಿ ಅಲ್ಲಿಯೇ ನಿಂತುಬಿಡುತ್ತಾನೆ. ಕೊರೆಯುವ ಹಿಮ ಅವನ ಮೇಲೆ ಬೀಳುತ್ತಲೇ ಇರುತ್ತದೆ. ಆದರೂ ಅವನಿಗೆ ಹಿಮದ ಪ್ರಜ್ಞೆಯೇ ಇಲ್ಲ. ಹಿಮ ಸುರಿದು ಬೆಳಗಾಗುವ ವೇಳೆಗೆ ಮಲುಹಣ ಹಿಮದಲ್ಲಿಯೇ ಮರೆಯಾಗುತ್ತಾನೆ. ಹಿಮವೇ ಅವನಿಗೆ ಶಿಶಿರೋಪಚಾರವಾಗುತ್ತದೆ.

ಇಲ್ಲಿ ಹರಿಹರ ಕವಿ ಎರಡು ಅತಿರೇಕಗಳನ್ನು (EXTREAM) ಬೇಕೆಂದೇ ಸೃಷ್ಟಿಸಿದ್ದಾನೆ. ಒಂದು-ಮಲುಹಣ ಅಪಾರ ಸಂಪತ್ತನ್ನು ಹೊಂದಿ ಮಲುಹಣೆಯ ಸುಖದಲ್ಲಿ ಮುಳುಗಿ ಹೋಗಿರುವುದು; ಇನ್ನೊಂದು-ಅಪಾರ ಸಂಪತ್ತನ್ನು ಕಳೆದುಕೊಂಡು ಮಲುಹಣೆಯಿಂದ ದೂರವಾಗಿ ವಿರಹಯಾತನೆಯಲ್ಲಿ ನರಳುವುದು. ಈ ಎರಡೂ ಸಂದರ್ಭದಲ್ಲೂ ಮಲುಹಣ - ಶಿವಭಕ್ತನಾಗಿಯೂ - ಒಮ್ಮೆಯಾದರೂ ಶಿವನನ್ನು ನೆನೆಯುವ ಪ್ರಯತ್ನವನ್ನೇ ಮಾಡುವುದಿಲ್ಲ. ಅಲ್ಲಿ ಪ್ರೇಮಾವಸ್ಥೆಯಲ್ಲಿ ಬಾಹ್ಯಪ್ರಪಂಚವನ್ನೇ ಮರೆತು ಲೀನವಾಗಿದ್ದರೆ; ಇಲ್ಲಿ, ವಿರಹಾವಸ್ಥೆಯಲ್ಲಿ ಬಾಹ್ಯಪ್ರಪಂಚವನ್ನು ಮರೆತಿದ್ದಾನೆ. ಈ ಎರಡು ಅವಸ್ಥೆಯಲ್ಲಿ ಅವನು ಶಿವನನ್ನು ನೆನೆದಿದ್ದರೆ, ಅವನಿಗೆ ಇಂಥ ದುರವಸ್ಥೆ ಒದಗಿ ಬರುತ್ತಿರಲಿಲ್ಲ. ಅದಕ್ಕೆ ಬದಲಾಗಿ ಅವನು ಪ್ರಾಪಂಚಿಕ ಸುಖದಲ್ಲಿಯೇ ಮುಳುಗಿ ಹೋಗಿದ್ದ.

ಶಿವನನ್ನು ನೆನೆದಿದ್ದರೆ ಮಲುಹಣನಿಗೆ ಇಂಥ ದುರ್ಗತಿ ಬರುತ್ತಿರಲಿಲ್ಲ ಎಂಬುದನ್ನು ಕಥೆಯ ಮುಂದಿನ ಭಾಗದಲ್ಲಿ ಮಲುಹಣೆಯಿಂದ ಮಲುಹಣನಿಗೆ ಬೋಧಿಸುವ ಮೂಲಕ ಹರಿಹರ ನಿರೂಪಿಸಿದ್ದಾನೆ. ಆ ಮೂಲಕ ಮಲುಹಣೆಯ ವ್ಯಕ್ತಿತ್ವವನ್ನು ಎತ್ತಿ ಹಿಡಿದಿದ್ದಾನೆ.

ವಿರಹ ವ್ಯಥೆಯಲ್ಲಿ ಮಂಜಿನೊಳಗೆ ಸೇರಿಹೋಗಿರುವ ಮಲುಹಣನನ್ನು ಕಂಡ ಮಲುಹಣೆ

ಅತೀವ ವ್ಯಥೆಯಿಂದ "ಅಕಟಕಟ ಮಲುಹಣಂ ಹಿಮದೊಳ್ಮುರುಂಟಿದಂ, ಪಾಪಿ ಎನಗೊಲ್ದು ನೆರೆಮಗ್ಗಿದಂ"[69] ಎಂದೆನ್ನುತ್ತಾ, ತನ್ನ ಗೆಳತಿಯರೊಡನೆ ಬಂದು ಅವನ ಸುತ್ತಣ ಹಿಮವನ್ನು ತೆಗೆಯಿಸುತ್ತಾಳೆ. ಪ್ರಾಪಂಚಿಕ ಸುಖದಲ್ಲಿ ಮಗ್ನನಾಗಿರುವ ಮಲುಹಣನನ್ನು ಕಂಡು ಶಿವನನ್ನು ನೆನೆಯದೆ ಈ ಸಮಸ್ಯೆಗೆ ಪರಿಹಾರವಿಲ್ಲ ಎಂದುಕೊಳ್ಳುತ್ತಾಳೆ. ತನ್ನಂತಹವಳಿಗಾಗಿ ಇಷ್ಟು ಕಷ್ಟವನ್ನು ಸಹಿಸಿದವನು ಪರಮೇಶ್ವರನನ್ನು ಇಷ್ಟೇ ನಿಷ್ಠೆಯಿಂದ ಧ್ಯಾನಿಸಿದ್ದರೆ, ದೊರಕುವ ಫಲ ಹಿರಿದಾದದ್ದು ಎಂಬುದು ಆಕೆಯ ಬುದ್ಧಿಗೆ ಹೊಳೆಯುತ್ತದೆ. ಆಗ ಮಲುಹಣನನ್ನು ಕಂಡು-

ಎನ್ನಮೇಲಿಕ್ಕುವೀ ಚಿತ್ತದಾತುರತೆಯಂ
ಪನ್ನಗಾಭರಣನೊಳ್ಮಾಳ್ಪುದೆನ್ನೊಲ್ಮೆಯಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ
ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣೆಯರಾಗರೇ[70]

ಎಂದು ಉಪದೇಶ ಮಾಡುತ್ತಾಳೆ. ಈ ಉಪದೇಶ ಮಲುಹಣನ ಚಿತ್ತದಲ್ಲಿ ನಾಟುತ್ತದೆ. ಕಾಮವನ್ನು ಬಯಸಿದ ಮಲುಹಣ ಪ್ರೀತಿಯ ಭಕ್ತನಾಗುತ್ತಾನೆ. ಅವಳ ಮಾತಿನಿಂದ ಪ್ರೇರಿತನಾಗಿ-

ವಿರಹಮಂ ತೆಗೆದು ಹರನ ಮೇಲಿಕ್ಕಿದಂ
ತನಿನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ[71]

ಭಕ್ತಿ ಉಕ್ಕುತ್ತದೆ. ಆತುರ ಚಿತ್ತನಾಗಿ ವಿಜಯೇಶ್ವರ ದೇವಾಲಯಕ್ಕೆ ಬಂದು ಶಿವನನ್ನು ಪ್ರಾರ್ಥಿಸುತ್ತಾನೆ. ಬಗೆಬಗೆಯಾಗಿ ಬೇಡಿಕೊಳ್ಳುವ ಮಲುಹಣನ ವಿರಹ ಸ್ತೋತ್ರಕ್ಕೆ ಮೆಚ್ಚಿ ಶಂಕರ ವರವನ್ನು ನೀಡಲು ಬಯಸುತ್ತಾನೆ. ಶಿವನ ಪ್ರೀತಿಗೆ ಪಾತ್ರನಾದ ಮಲುಹಣ-

ಕಾಮಂ ಕ್ರೋಧಂ ಶಂಕರಂಗರ್ಪಿತಂ
ನೇಮಂ ಪ್ರೇಮಂ ಶಶಿಧರಂಗರ್ಪಿತಂ
ಕೂಟಮುಂ ತೃಪ್ತಿಯುಂ ತ್ರಿಣಯನಂಗರ್ಪಿತಂ[72]

ಎಂಪು ಸರ್ವಸ್ವವನ್ನೂ ಶಿವನಿಗೆ ಅರ್ಪಣೆ ಮಾಡುತ್ತಾನೆ. ಆಗ ಶಿವನ ಆಶೀರ್ವಾದ ದೊರೆಯುತ್ತದೆ. ಮಲುಹಣ ಮತ್ತೆ ಮಲುಹಣೆಯೊಡನೆ ಸೇರುತ್ತಾನೆ. ನೂರು ವರ್ಷಗಳವರೆಗೆ ಅವರಿಬ್ಬರೂ ತುಂಬು ಜೀವನ ಸಾಗಿಸಿ ಆನಂದದಿಂದ ಕೈಲಾಸ ಸೇರುವರು.

ಕಥೆಯಲ್ಲಿ, ಉತ್ಕಟ ಪ್ರೇಮ ವಿರಹಕ್ಕೆ ತಿರುಗಿ ಮತ್ತೆ ಭಕ್ತಿಯ ಕಡೆ ಹರಿಯುವುದನ್ನು ಕವಿ ಚಿತ್ರಿಸಿದ್ದಾನೆ. ಮಲುಹಣನ ಪ್ರೇಮ-ವಿರಹ ಹಾಗೂ ಭಕ್ತ ಹೃದಯ ಭಾವವನ್ನು ಸುಂದರವಾಗಿ ನಿರೂಪಿಸಿದ್ದಾನೆ. ಸಂದರ್ಭೋಚಿತ ವರ್ಣನೆ ಮತ್ತು ಹೋಲಿಕೆಗಳು ಹರಿಹರನ

ಕಲೆಗಾರಿಕೆಯ ಔನ್ನತ್ಯವನ್ನು ಮೆರೆಯುತ್ತವೆ. ತನ್ನ ಕಲಾ ಕುಸುರಿಯ ಮೂಲಕ ಮಲುಹಣನ ಪಾತ್ರವನ್ನು ಉನ್ನತೀಕರಿಸಿದ್ದಾನೆ. ಯಾವುದೇ ಕುಲ, ಜಾತಿ, ಮತ, ಮೇಲು-ಕೀಳುಗಳ ಅರಿವಿಲ್ಲದೆ ಯೌವನ ಸಹಜ ಅನುರಾಗಕ್ಕೆ ಒಳಗಾದ ಗಂಡು ಹೆಣ್ಣುಗಳು, ವೇಶ್ಯೆಯೊಬ್ಬಳ ಧನದಾಹಕ್ಕೆ ಬಲಿಯಾಗಿ ಬೇರ್ಪಟ್ಟು ವಿರಹದ ಬೇಗೆಯಲ್ಲಿ ಬೆಂದು ಕೊನೆಗೆ ಶಿವಾನುಗ್ರಹ ಪಡೆದು, ಮತ್ತೆ ಒಂದಾದ ಕಥೆಯನ್ನು ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ.

ಸುಂದರವಾದ ಈ ಪ್ರೇಮಕಥೆಯಲ್ಲಿ ಮಲುಹಣೆ ಮತ್ತು ಪದ್ಮಾವತಿಯರ ಪಾತ್ರಗಳು ಮಲುಹಣನ ಪಾತ್ರದಷ್ಟೇ ಪ್ರಮುಖವಾದವು. ಕಥೆಯ ಬೆಳವಣಿಗೆಗೆ ಈ ಪಾತ್ರಗಳೇ ಮುಖ್ಯ. ಕವಿ ಎರಡು ಪಾತ್ರಗಳ ಮೂಲಕ ಎರಡು ತೆರನಾದ ವ್ಯಕ್ತಿತ್ವವನ್ನು ಚಿತ್ರಿಸುತ್ತಾನೆ. ಮಲುಹಣೆಯ ಪಾತ್ರದ ಮೂಲಕ ಹೆಣ್ಣಿನ ಸಹನೆ ಹಾಗೂ ಸಂಯಮ ಗುಣಗಳನ್ನು ಚಿತ್ರಿಸಿದರೆ, ಪದ್ಮಾವತಿ ಪಾತ್ರದ ಮೂಲಕ ಕಠೋರ, ಕ್ರೂರ ಸ್ವಭಾವದ ಹೆಣ್ಣಿನ ಚಿತ್ರಣವನ್ನು ಚಿತ್ರಿಸಿದ್ದಾನೆ.

ಕಥೆಯಲ್ಲಿ ಮಲುಹಣನ ಪಾತ್ರದಷ್ಟೇ ಮಹತ್ವ ಮಲುಹಣೆಗೆ ಇದೆ. ಮಲುಹಣೆ ಮೂಲತಃ ವೇಶ್ಯೆಯ ಮಗಳು. ಸಹಜವಾಗಿಯೇ ವೇಶ್ಯಾ ಜೀವನಶೈಲಿ ಅವಳದಾಗಿರಬೇಕು. ಆದರೆ ಮಲುಹಣೆ ಅದರಿಂದ ದೂರವಿದ್ದಾಳೆ. ತಾಯಿಯ ಗುಣ ತಿಲಮಾತ್ರವೂ ಅವಳಲ್ಲಿಲ್ಲ. ಆದರೆ ಪರಿಸ್ಥಿತಿಯ ಒತ್ತಡದಿಂದಾಗಿ ಆ ಪರಿಸರದಿಂದ ಹೊರಬರಲಾಗದೆ ತೊಳಲಾಡುತ್ತಿದ್ದಾಳೆ. ತಾನು ಒಪ್ಪಿದ ಹುಡುಗನ ಜೊತೆ ನೆಮ್ಮದಿಯಿಂದ ಬದುಕುವುದು ಅವಳ ಮನದಾಸೆ. ಆದರೆ ವೇಶ್ಯೆಯಾದ ತಾಯಿಗೆ ಅದು ಒಪ್ಪಿಗೆಯಾಗುವುದಿಲ್ಲ. ಒಳಗೊಳಗೇ ಅವಳು ತನ್ನ ತಾಯಿಯ ವಿರುದ್ಧ ಸಿಡಿದೇಳುತ್ತಾಳೆ. ಒಮ್ಮೆ ಮಲುಹಣನಿಂದ ತನ್ನನ್ನು ಬೇರ್ಪಡಿಸಲು ಮುಂದಾದ ಸಂದರ್ಭದಲ್ಲಿ, ಅವಳು ತನ್ನ ತಾಯಿಯನ್ನು ಕುರಿತು "ಎಲೆ, ಲೋಭ ಮುಂತಾಗಿ ಹುಟ್ಟಿದ ಹೇನೆ, ಕ್ರೋಧ ಮುಂತಾಗಿ ಹುಟ್ಟಿದ ನೀರಸೆ, ಸುಖಮಂ ಕೊಯ್ವ ಮಾನಸಗರಗಸವೆ, ಅಯ್ಯೋ, ಏಕೆನ್ನನರಿದರಿದು ಬಿಸುಟಿರಿರಿದಿರಿದು ಸುಟ್ಟಪೇ"[73] ಎಂದು ಪ್ರಲಾಪಿಸುತ್ತಾ ತನ್ನ ಕೋಪವನ್ನು ವ್ಯಕ್ತಪಡಿಸುತ್ತಾಳೆ.

ಅವಳದು ಉದಾತ್ತ ಪ್ರೇಮ. ಇಂದ್ರಿಯ ಸುಖ ಬಯಸಿ ಅವಳು ಕುಲ ಗೋತ್ರ ನೋಡದೆ ಮಲುಹಣನನ್ನು ಬಯಸಿದ್ದಾಳೆ. ಅವನ ಸುಂದರ ರೂಪವನ್ನು ತನ್ನ ಮನಸ್ಸಿನಲ್ಲಿ ಅಚ್ಚೊತ್ತಿಕೊಂಡಿದ್ದಾಳೆ. ಅವನು ಕೊರಗಿದರೆ ತಾನೂ ಕೊರಗುತ್ತಾಳೆ. ಅವನ ಸುಖದಲ್ಲಿ ತಾನೂ ಸುಖಿಸುತ್ತಾಳೆ. ಇಬ್ಬರೂ ಬೇರ್ಪಟ್ಟ ಸಂದರ್ಭದಲ್ಲಿ ವಿರಹತಾಪದಿಂದ ಬಳಲುವ ಮಲುಹಣನನ್ನು ಕಂಡು ಮರುಗುತ್ತಾಳೆ. ಒಮ್ಮೆ ತಾನು ಸುರಿದ ಎಂಜಲು ನೀರು ಮಲುಹಣನ ಮೇಲೆ ಬಿದ್ದಾಗ ತಾನೇ ಬಂದು ಮಲುಹಣನನ್ನು ಸ್ವಚ್ಛ ಮಾಡಿ ಸಮಾಧಾನಿಸುತ್ತಾಳೆ. ಹಿಮದೊಳಗೆ ಸೇರಿಹೋಗಿರುವ ಮಲುಹಣನನ್ನು ಕಂಡು ಪರಿಚಾರಿಕೆಯರೊಡನೆ ಬಂದ ಅವಳು ಕರುಣೆಯಿಂದ ಮನನೊಂದುಕೊಂಡು, ತನ್ನ ಮೇಲಿಟ್ಟಿರುವ ಚಿತ್ತದಾತುರತೆಯನ್ನು ಪನ್ನಗಾಭರಣನ ಮೇಲೆ ಇಡುವಂತೆ ಕೇಳಿಕೊಳ್ಳುತ್ತಾಳೆ. ಅವಳ ನಡತೆ ಶುದ್ಧವಾದದ್ದು, ನುಡಿ ಶುದ್ಧವಾದದ್ದು, ವಿನಯ ಮೆಚ್ಚುವಂಥದ್ದು, "ರೂಪಕ್ಕೆ ತಕ್ಕ ನಯ, ನಯಕ್ಕೆ ತಕ್ಕ ನಡತೆ, ಪರಿಸರಕ್ಕೆ ತಕ್ಕ ವರ್ತನೆ, ಒಳ್ಳೆಯದನ್ನು ಮೆಚ್ಚುವ ಸ್ವಭಾವ"[74] ಅವಳಲ್ಲಿದೆ. ಹರಿಹರ

ಮಲುಹಣೆಯ ಪಾತ್ರದ ಮೂಲಕ ಬೆಲೆವೆಣ್ಣಿನ ಬದುಕಿಗೆ ಬೆಲೆ ಬರುವ ಹಾಗೆ ಚಿತ್ರಿಸಿದ್ದಾನೆ. ಅವಳು "ತಾನು ಮಾತ್ರವಲ್ಲದೆ ತನ್ನ ಪ್ರಿಯತಮನ ಬದುಕಿಗೂ ಸಾರ್ಥಕತೆಯನ್ನು ತಂದು ಕೊಟ್ಟಿದ್ದಾಳೆ. ಅವಳು ತೋರಿದ ಕರುಣೆಯೇ ಮಲುಹಣನಿಗೆ ಶ್ರೀರಕ್ಷೆ. ಅತೀ ವಿಷಯಾಸಕ್ತನಾದ ಮಲುಹಣನನ್ನು ಸನ್ಮಾರ್ಗಕ್ಕೆ ಹಚ್ಚಿದ ಜಾಣೆ ಮಲುಹಣೆ. ಗಂಡನ ಬದುಕಿಗೆ ಶಾಂತಿ, ಕಾಂತಿ ಮತ್ತು ಪರಮಸುಖವನ್ನು ಒದಗಿಸಿ, ಭಗವಂತನ ಅನುಗ್ರಹಕ್ಕೆ ಕಾರಣ"[75]ಳಾದವಳು.

ಮಲುಹಣೆಯ ಪಾತ್ರಕ್ಕೆ ವ್ಯತಿರಿಕ್ತವಾದದ್ದು ಪದ್ಮಾವತಿಯ ಪಾತ್ರ. ಪದ್ಮಾವತಿ ನಿಷ್ಕರುಣೆ ಹಾಗೂ ಪಕ್ಕಾ ವೇಶ್ಯೆಯ ಗುಣವನ್ನು ಹೊಂದಿದವಳು. ಅವಳಿಗೆ ತನ್ನ ಮಗಳಾದರೇನು, ಇನ್ನೊಬ್ಬಳಾದರೇನು ; ಹಣವೇ ಮುಖ್ಯ. ಹಣದಾಸೆಯಿಂದಲೇ ಅವಳು ತನ್ನ ಮಗಳನ್ನು ಅಲಂಕಾರ ಮಾಡಿಕೊಂಡು ವಿಜಯೇಶ್ವರ ದೇವಾಲಯಕ್ಕೆ ಕರೆದೊಯ್ದು ಅಲ್ಲಿ ಬೇಟೆಗಾಗಿ ಕಾಯುತ್ತಾಳೆ. ವೇಶ್ಯಾ ವೃತ್ತಿಯೇ ಅವಳ ವೃತ್ತಿ ಧರ್ಮ. ಅದನ್ನೇ ತನ್ನ ಮಗಳಿಗೂ ಕಲಿಸುವ ಪ್ರಯತ್ನ ಮಾಡುತ್ತಾಳೆ. ಮಲುಹಣನಂಥ ಶ್ರೀಮಂತ ಯುವಕ ಸಿಕ್ಕಿದ್ದು ಅವಳಿಗೆ ಅಪಾರ ನಿಧಿಯೇ ದೊರೆತಂತೆ. ಮಲುಹಣ-ಮಲುಹಣೆ ಇಬ್ಬರೂ ಪರಸ್ಪರ ಅನುರಾಗಕ್ಕೆ ಒಳಗಾಗುತ್ತಿದ್ದಂತೆಯೇ ಇಬ್ಬರನ್ನೂ ಸೆಜ್ಜೆಮನೆಗೆ ಸೇರಿಸುತ್ತಾಳೆ. ಮಲುಹಣನ ಹಣ ತೀರುವವರೆಗೂ ಅವನನ್ನು ಅತ್ಯಂತ ಆದರದಿಂದ ನೋಡಿಕೊಳ್ಳುತ್ತಾಳೆ. ಅವನ ಹಣ ತೀರುತ್ತಾ ಬರುತ್ತಿದ್ದಂತೆಯೇ, ಅವಳ ನೈಜ ವ್ಯಕ್ತಿತ್ವದ ಭೀಕರ ದರ್ಶನವಾಗುತ್ತದೆ. ಸಲ್ಲದ ಜಗಳವನ್ನು ತೆಗೆದು ಮಲುಹಣನನ್ನು ಬೇರ್ಪಡಿಸುತ್ತಾಳೆ. ಮಲುಹಣನನ್ನು ದೂರ ತಳ್ಳುವ ಸಂದರ್ಭದಲ್ಲಿ "ಎಲೆ ಮರುಳ್ ಮಗಳೆ ಅರ್ಥಂ ತೀರ್ದುದು; ಯೌವನಂ ಸಾರ್ದುದು"[76] ಎಂದು ಹೇಳುವ ಮಾತು, ಅವಳು ಹೇಗೆ ಹಣ ಕೀಳುವುದನ್ನೇ ಮುಖ್ಯವಾಗಿಸಿಕೊಂಡಿದ್ದಳು ಎಂಬುದನ್ನು ತೋರುತ್ತದೆ. ಪದ್ಮಾವತಿಯ ಮಾತನ್ನು ಮಲುಹಣೆ ತಿರಸ್ಕರಿಸಿದ ಸಂದರ್ಭದಲ್ಲಿ, ಅವಳು ನಡೆಮುಕೊಂಡ ರೀತಿ ವಿಚಿತ್ರವಾದದ್ದು. ಆ ಸಂದರ್ಭದಲ್ಲಿ ಅವಳು ನಿಂತಲ್ಲಿ ನಿಲ್ಲುವುದಿಲ್ಲ. ಕುಂತಲ್ಲಿ ಕೂರುವುದಿಲ್ಲ. ನಿಂತೆಡೆ ನೀರು ಚೆಲ್ಲುತ್ತಾಳೆ. ಕೌಡು ಕಚ್ಚುತ್ತಾಳೆ. ವಿಳಾಸಿನಿಯರನ್ನು ಅನಾಕಾರಣ ಬಡಿಯುತ್ತಾಳೆ. ಬೇನೆ ಇಲ್ಲದೆ ನರಳುತ್ತಾಳೆ. ಸಾವಿಲ್ಲದೆ ಶೋಕಗೈಯ್ಯುತ್ತಾಳೆ. ಹೀಗೆ ಎಂದು ರೀತಿಯಲ್ಲಿ ಅವಳ ನಡತೆ ವೇಶ್ಯಾಗುಣಕ್ಕೆ ಅನುಗುಣವಾಗಿಯೇ ಇದೆ. ಮಗಳ ಯೋಗಕ್ಷೇಮವನ್ನು ಬಯಸುವುದು ತಾಯಿಯಾದವಳ ಕರ್ತವ್ಯ. ಆದರೆ ಪದ್ಮಾವತಿ ಹಣದಾಸೆಗಾಗಿ ತನ್ನ ಮಗಳ ಯೋಗಕ್ಷೇಮವನ್ನು ನರಕಕ್ಕೆ ಒಡ್ಡುವ ರಾಕ್ಷಸಿಯಂತೆ ತೋರುವಳು. ಅವಳಿಗೆ ಹಣ ನೀಡಿದವರೆಲ್ಲಾ ಮಾವಂದಿರಿದ್ದಂತೆ. ಒಟ್ಟಿನಲ್ಲಿ ಇಡೀ ಕಥೆಯಲ್ಲಿ ಮಾನವನ ಚಿತ್ತದಾತುರದ ಸಹಜ ಸನ್ನಿವೇಶವನ್ನು ಕವಿ ಸ್ವಾರಸ್ಯವಾಗಿ ತಂದಿದ್ದಾನೆ. ವಿಷಯವಾಸನೆಯ ಉದಾತ್ತೀಕರಣವನ್ನು ಮನ ಮುಟ್ಟುವ ಹಾಗೆ ಚಿತ್ರಿಸಿದ್ದಾನೆ.

## .5 ಕುಂಬರಗುಂಡಯ್ಯನ ರಗಳೆ

ಕಾಯಕಕ್ಕೂ ಶಿವನಿಗೂ ಯಾವ ಸಂಬಂಧವೂ ಇಲ್ಲ. ನಿಷ್ಠೆಯುಳ್ಳ ಭಕ್ತ ಯಾವ ಕಾಯಕವನ್ನೇ ಮಾಡಲಿ, ಅದು ಶಿವನಿಗೆ ಪ್ರಿಯವಾದುದೆ. ಅಂತಹ ಕಾಯಕನಿಷ್ಠ ಭಕ್ತನನ್ನು

ಶಿವ ಒಲಿದು ಕಾಪಾಡುತ್ತಾನೆ. ಇಲ್ಲಿ ಶಿವನಾಗಲೀ ಭಕ್ತನಾಗಲೀ ಬೇರೆ ಬೇರೆ ಅಲ್ಲ; ಇಬ್ಬರೂ ಒಂದೇ. ದೇವ-ಜೀವರು ಸಮರಸವಾದಾಗ ಎಲ್ಲವೂ ಶೂನ್ಯ ಎಂಬ ಭಾವವನ್ನು ಕವಿ ಈ ರಗಳೆಯಲ್ಲಿ ವ್ಯಕ್ತಪಡಿಸಿದ್ದಾನೆ.

ಈ ರಗಳೆಯನ್ನು ಪೂರ್ವಾರ್ಧ ಮತ್ತು ಉತ್ತರಾರ್ಧಗಳೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಪೂರ್ವಾರ್ಧದಲ್ಲಿ ಗುಂಡಯ್ಯನ ಭಕ್ತಿ ಹಾಗೂ ಕಾಯಕ ನಿಷ್ಠೆಯ ಚಿತ್ರಣವಿದ್ದರೆ, ಉತ್ತರಾರ್ಧದಲ್ಲಿ ಶಿವನು ಭಕ್ತನ ಭಕ್ತಿಯ ಆನಂದದಲ್ಲಿ ಒಂದಾಗಿ ನಲಿಯುವ ಚಿತ್ರಣವಿದೆ.

ಗುಂಡಯ್ಯ ಒಬ್ಬ ಸಾಮಾನ್ಯ ಭಕ್ತ. ಮಡಕೆ ಮಾಡುವುದೇ ಅವನ ಕಾಯಕ. ನಿಷ್ಠೆಯಿಂದ ಕಾಯಕ ಮಾಡುವುದು, ಅದರ ಮೂಲಕ ಶಿವಾರ್ಚನೆ ಸಲ್ಲಿಸುವುದು ಅವನ ದಿನಚರಿ. ಆ ವೃತ್ತಿಯನ್ನೇ ತನ್ನ ಅಧ್ಯಾತ್ಮಕ್ಕೂ ಅಳವಡಿಸಿಕೊಂಡಿದ್ದ.

**ಆಧಾರಮೆಯಾಧಾರಮದಾಗಿರೆ**
**ಮಿಗೆ ಷಟ್ಚಕ್ರಮೆ ಚಕ್ರಮದಾಗಿರೆ**
**ಸೊಗಯಿಪ ನಾಭಿಯೆ ನಾಭಿಯದಾಗಿರೆ**
**ಕನಸಿನ ಕಾಯಂ ಮೃತ್ತಿಕೆಯಾಗಿರೆ**
**ನೆನಹಂ ಚಟಿದಾರಂಗಳವಾಗಿರೆ**
**ನಿಷ್ಠೆಯೇ ತಿರುಹುವ ದಂಡವದಾಗಿರೆ**
**ಮಾಡುವ ಭಕ್ತಿ ಕಟಾಹಮದಾಗಲು**
**ಕೂಡಿದ ಕರಣವೆ ಮರ್ಧಿಸುತಾಗಲು**[77]

ಹೀಗೆ ಅವನ ವೃತ್ತಿ ಅಧ್ಯಾತ್ಮಮಯವಾಗಿತ್ತು. ಬಾಹ್ಯದಲ್ಲಿ ಮಡಕೆ ಸಿದ್ಧಗೊಳಿಸುವ ಕಾಯಕ ಕೈಗೊಂಡು, ಅದನ್ನು ಅಂತರಂಗದ ವಿಕಾಸಕ್ಕಾಗಿ ಅಳವಡಿಸಿಕೊಂಡಿದ್ದ. ಅವನು ಮಡಕೆ ಮಾಡಲು ಬಳಸುವ ತಿಗರಿಯೇ ಷಟ್‌ಚಕ್ರವಿದ್ದಂತೆ, ಚಕ್ರದಲ್ಲಿನ ಮೊಳೆ ನೆಡುವ ರಂಧ್ರ ನಾಭಿಯಿದ್ದಂತೆ, ಶರೀರವು ಮೃತ್ತಿಕೆ ಇದ್ದಂತೆ, ನಿಷ್ಠೆಯೆಂಬ ದಂಡದಿಂದ ಚಕ್ರವನ್ನು ತಿರುಗಿಸಿ ಮಡಕೆ ಮಾಡುತ್ತಾನೆ. ಅದನ್ನು ನೆನಹೆಂಬ ದಾರಗಳಿಂದ ಕೊಯ್ದು, ಕರಣಗಳಿಂದ ತಿದ್ದಿ, ಬಡಿದು, ಆರಿಸಿ, ಭಕ್ತಿಯೆಂಬ ಆವಿಗೆಯಲ್ಲಿ ಹಾಕಿ, ಉದರಾಗ್ನಿಯಿಂದ ಬೇಯಿಸುತ್ತಾನೆ. ಇಂತಹ ಅಂತರಂಗದ ಶುದ್ಧಿ ವಿಕಾಸಗಳಿಂದಲೇ ದೈವೀಕೃಪೆ ಉಂಟಾಗುತ್ತದೆ ಎಂಬುದು ಇಲ್ಲಿಯ ಭಾವ.

ಶಿವಪೂಜೆಯಲ್ಲಿ ನಿರತನಾದರೆ ಕಣ್ಣುರೆಪ್ಪೆ ಬಡಿಯುವುದನ್ನೇ ಮರೆಯುತ್ತಿದ್ದ. ಮನದ ತುಂಬ ಪೂಜಾಭಾವ ತುಂಬಿಕೊಂಡು, ಊಟ-ನಿದ್ರೆಯನ್ನು ಮರೆಯುತ್ತಿದ್ದ. ಶಿವನಲ್ಲದೆ ಅನ್ಯ ವಸ್ತುಗಳನ್ನು ನೋಡುತ್ತಲೂ ಇರಲಿಲ್ಲ. ಅದರ ಬಗೆಗೆ ಮಾತನಾಡುತ್ತಿರಲಿಲ್ಲ. ಆತನ ಮನವೆಲ್ಲಾ ದೇವರಲ್ಲಿ ತಲ್ಲೀನವಾಗುತ್ತಿತ್ತು. ಆತನ ಶಿವಪೂಜಾ ವೈಖರಿಯನ್ನು ಕವಿ "ಶಿವಪೂಜೆಯ ಕರಡಿಗೆಯಂತಿರ್ಪಂ / ಶಿವಪೂಜೆಯ ಗವಸಣಿಗೆಯೊಳಿರ್ದಂ"[78] ಎಂದು

..ರ್ಣಿಸುತ್ತಾನೆ.

ಇಷ್ಟಾದರೂ ಆತ ತೃಪ್ತನಾಗುತ್ತಿರಲಿಲ್ಲ. ಮತ್ತೆ ಮನೆಯಲ್ಲಿಯೂ ಅವನ ಮಾನಸ ಪೂಜೆ ಮುಂದುವರೆಯುತ್ತಿತ್ತು. ಪೂಜೆಯ ಆನಂದದಲ್ಲಿ "ಬಂದರನರಿಯದೆ ..ೋದರನರಿಯದೆ/ನಿಂದರನರಿಯದೆ ನೆನೆದರನರಿಯದೆ/ನೋಟವನರಿಯದೆ ನೆನೆವುದನರಿಯದೆ ..ಟಪಟ ಧಂಧಣದಿಂ ಧಿಮಿಕೆನಿಸುವ/ತಟಕಂಟಕ ದಿಕ್ಕಟತಟಕೆನಿಸುವ/ತೂಗಾಡುತ......"[79] ..ಡೀ ರಾತ್ರಿ ನಿರಂತರವಾಗಿ ಮಡಕೆ ಬಾರಿಸುತ್ತಾ ಹರ್ಷಚಿತ್ತನಾಗಿ ಕುಣಿದಾಡುತ್ತಾ ..್ರಹ್ಮಾನಂದದಲ್ಲಿ ಓಲಾಡುತ್ತಾನೆ. ಮಡಕೆ ಬಾರಿಸುವುದನ್ನೇ ತನ್ನ ನೇಮವಾಗಿ ಕೈಗೊಳ್ಳುತ್ತಾನೆ. ..ವನದು ಅಪೂರ್ವ ಭಕ್ತಿ.

ಗುಂಡಯ್ಯನ ಅಪೂರ್ವ ಭಕ್ತಿಗೆ ಮನಸೋತ ಶಿವನ ವರ್ಣನೆ ಕಾವ್ಯದ ಎರಡನೆ ..ಾಗದಲ್ಲಿದೆ. ಗುಂಡಯ್ಯನ ಭಕ್ತಿ ಪರವಶತೆಗೆ ಒಳಗಾದ ಶಿವನನ್ನು ಕವಿ ಸುಂದರವಾಗಿ ..ತ್ರಿಸಿದ್ದಾನೆ. ಒಮ್ಮೆ ಶಿವನು ಕೈಲಾಸದ ಓಲಗದಲ್ಲಿ ಕುಳಿತಿರಬೇಕಾದರೆ ಗುಂಡಯ್ಯ ಗಡಿಗೆ ..ಾರಿಸಲು ಪ್ರಾರಂಭಿಸುತ್ತಾನೆ. ಓಲಗದಲ್ಲಿ ಪಾರ್ವತಿಯೊಡನೆ ಕುಳಿತಿದ್ದ ಶಿವ, ಗುಂಡಯ್ಯನ ..ಡಿಗೆ ಶಬ್ದ ಕೇಳುತ್ತಿದ್ದಂತೆಯೇ ಆ ನಾದಕ್ಕೆ ನರ್ತಿಸತೊಡಗುತ್ತಾನೆ. ಹೀಗೇಕೆ? ಇಂದಿನ ನಿಮ್ಮ ..ೀತಿ ಹೊಸಪರಿಯಾಗಿದೆ ಎಂದು ಪಾರ್ವತಿ ಎಚ್ಚರಿಸುತ್ತಾಳೆ. ಆಗ ಶಿವನು "ಗುಂಡನ ..ೃದಯದೊಳಾಡುತಿರ್ದೆಂ/ತಂಡದಸುಖ ದೋಳ್‌ಮೂಡುತ್ತಿರ್ದೆಂ/ಸಲ್ಲೀಲೆಯೋಳ್ ಎನ್ನಂ ..ರೆದಿರ್ದೆಂ"[80] ಎನ್ನುತ್ತಾನೆ. ಪಾರ್ವತಿಗೆ ಅಚ್ಚರಿಯಾಗಿ ನಿಮ್ಮನ್ನು ಆಡಿಸಿದ ಆ ಭಕ್ತನನ್ನು ..ೋಡಬೇಕೆಂದು ಬಯಸುತ್ತಾಳೆ. ಆಗ ಶಿವ 'ಆಗಲಿ ಬಾ ತೋರಿಸುವೆ' ಎಂದು ಕರೆತಂದು, ..ಗನ ಮಧ್ಯದಲ್ಲಿ ಅವಳನ್ನು ಇರಿಸಿ ತಾನು ಗುಂಡಯ್ಯನ ಮನೆಯ ಮುಂದೆ ಇಳಿಯುತ್ತಾನೆ. ..ುಂಡಯ್ಯ ಏಕನಿಷ್ಠೆಯಿಂದ ಕಣ್ಮುಚ್ಚಿ ಮಡಕೆ ಬಾರಿಸುವುದನ್ನು ಕಂಡು ಹರ್ಷಿಸುತ್ತಾನೆ. ..ಕ್ತನನ್ನು ಎಚ್ಚರಿಸುವ ಸಲುವಾಗಿ ಶಿವ ಗುಂಡಯ್ಯನ ಮನದಲ್ಲಿನ ಲಿಂಗವನ್ನು ತನ್ನೆಡೆಗೆ ..ಕರ್ಷಿಸಿ, ಅದರೊಡನೆ ತಾನೂ ಸಮರಸ ಹೊಂದಿ ಲಿಂಗವಾಗಿ ಗೋಚರಿಸುತ್ತಾನೆ. ಹೊರಗಿನ ..ಂಗವನ್ನು ಕಂಡ ಮೇಲಂತೂ ಗುಂಡಯ್ಯನ ಆನಂದಕ್ಕೆ ಮೇರೆ ಇಲ್ಲದಂತಾಗುತ್ತದೆ. ಆ ಭಕ್ತಿ ..ವೇಶದಲ್ಲಿ -

ಕುಣಿವುತೆ ಕೊರಲೆತ್ತುತೆ ನಿಜೆತೂಗುತೆ
ಮಣಿವುತೆ ತೂಗಾಡುತೆ ಸುಖಿಯಾಗುತೆ[81]

..ಂದು ಶಿವನನ್ನು ಸ್ತುತಿಸುತ್ತಾ ಮಡಕೆ ಬಾರಿಸತೊಡಗುತ್ತಾನೆ. ಗುಂಡಯ್ಯನ ಕುಣಿತವನ್ನು ..ಂಡ ಶಿವ ತಾನೂ ಕುಣಿಯಲಾರಂಭಿಸುತ್ತಾನೆ. ದಶ ಭುಜಗಳೂ ದಶ ದಿಕ್ಕುಗಳಲ್ಲಿ ..ಸರಿಸುತ್ತವೆ. ಒಂದು ಪಾದ ಪಾತಾಳವನ್ನೊತ್ತಿದರೆ, ಇನ್ನೊಂದು ಪಾದ ಬ್ರಹ್ಮಾಂಡ ..ನ್ನೊತ್ತುತ್ತದೆ. ಮುಡಿಯಲ್ಲಿನ ಗಂಗೆ ತುಳುಕುತ್ತದೆ. ಚಂದ್ರಕಲೆ ಅಲ್ಲಾಡುತ್ತದೆ. ಮೈಮೇಲಿನ

ಸರ್ಪ ಹೆಡೆ ಬಿಚ್ಚುತ್ತದೆ. ಎಲ್ಲೆಡೆ ಢಮರುಗದ ಸಪ್ಪಳ ಕೇಳಿಬರುತ್ತದೆ. ಶಿವನನ್ನು ಕಂಡು ಭಕ್ತ, ಭಕ್ತನನ್ನು ಕಂಡು ಶಿವ ಹೀಗೆ ಇಬ್ಬರೂ ಮೈಮರೆತು ಕುಣಿಯಲಾರಂಭಿಸುತ್ತಾರೆ. ಇವರಿಬ್ಬರ ಕುಣಿತಕ್ಕೆ ನೆರೆದಿದ್ದ ಗಣತತಿ, ಸಕಲ ಸ್ಥಾವರ ಜಂಗಮವೆಲ್ಲಾ ಕುಣಿದಾಡ ತೊಡಗುತ್ತದೆ.

ಹೀಗೆ ಕವಿ ಕುಂಬರಗುಂಡಯ್ಯನ ರಗಳೆಯ ಮೂಲಕ ಜೀವ ಮತ್ತು ದೇವರ ನಡುವಿನ ಸಂಬಂಧವನ್ನು ಚಿತ್ರಿಸುತ್ತಾನೆ. ಜಗತ್ತೆಲ್ಲವೂ ಶಿವನ ಸ್ವರೂಪ. ಶಿವನೇ ಕುಣಿಯಲು ತೊಡಗಿದಾಗ, ಎಲ್ಲವೂ ಕುಣಿಯತೊಡಗುವುದು ಸಹಜ. ಇದಕ್ಕೆಲ್ಲಾ ಒಬ್ಬ ಭಕ್ತನ ದೇವಭಾವವೇ ಕಾರಣವಾಗಿರುವುದು ಇಲ್ಲಿ ಮುಖ್ಯ.

## 6.6 ಉದ್ಭಟಯ್ಯನ ರಗಳೆ

ಈ ರಗಳೆಯಲ್ಲಿ ಮಂಗಳಾಂಬೆ ಮತ್ತು ಉದ್ಭಟಯ್ಯನ ಮಧುರ ಸಂಭಾಷಣೆಯ ಮೂಲಕ ಉದ್ಭಟಯ್ಯನ ಭಕ್ತಿಯ ಮಹಿಮೆಯನ್ನು ಕವಿ ಚಿತ್ರಿಸುತ್ತಾನೆ.

ಉದ್ಭಟಯ್ಯ ಮತ್ತು ಮಂಗಳಾಂಬೆ ಇಬ್ಬರೂ ಶಿವಭಕ್ತರು. ಅವರು ಮಾಡಿದುದೆಲ್ಲಾ ಶಿವಪೂಜೆ. ನೆನೆವುದೆಲ್ಲಾ ಪರಮಾತ್ಮನ ಧ್ಯಾನ. ಶಿವಸಾಮರಸ್ಯವೇ ಅವರ ನಿತ್ಯ ಕರ್ತವ್ಯ. ಒಮ್ಮೆ ಇಬ್ಬರೂ ಕುಳಿತು ಲೆತ್ತವನ್ನಾಡುತ್ತಿದ್ದ ಸಂದರ್ಭದಲ್ಲಿ, ಉದ್ಭಟಯ್ಯ ಇದ್ದಕ್ಕಿದ್ದಂತೆ ನಗಲು ಪ್ರಾರಂಭಿಸುತ್ತಾನೆ. ಉದ್ಭಟಯ್ಯನ ಈ ನಗುವಿನಿಂದ ಮಂಗಳಾಂಬೆಗೆ ಸಿಟ್ಟು ಬರುತ್ತದೆ. ಆ ಸಿಟ್ಟಿನಲ್ಲಿ ಉದ್ಭಟಯ್ಯನ ನಗುವಿಗೆ ಕಾರಣವನ್ನು ಕೇಳುತ್ತಾಳೆ. ಇಬ್ಬರ ನಡುವೆ ದೀರ್ಘವಾದ ಮಾತುಕತೆ ನಡೆಯುತ್ತದೆ. ಮಂಗಳಾಂಬೆ ಕಟಕಿಯನ್ನಾಡುತ್ತಾಳೆ. ಈ ಕಟಕಿಯನ್ನು ಸಹಿಸಲಾರದ ಉದ್ಭಟಯ್ಯ, ಇಡೀ ಪುರವನ್ನೇ ಕೈಲಾಸಕ್ಕೆ ಕೊಂಡೊಯ್ಯುವೆನೆಂದು ನುಡಿಯುತ್ತಾನೆ. ಅಂತೆಯೇ ಕೊಂಡೊಯ್ಯುತ್ತಾನೆ.

ಕೈಲಾಸಕ್ಕೆ ಇಡೀ ಪುರವನ್ನೇ ಕೊಂಡೊಯ್ಯುವುದಿರಲಿ, ಒಬ್ಬನೇ ಹೋಗುವುದೂ ಕೂಡ ಲೌಕಿಕನಿಗೆ ಅಸಾಧ್ಯ ಕೆಲಸ. ಆದರೆ ಭಕ್ತನಾದವನಿಗೆ ಇದು ಅಸಾಧ್ಯ ಕೆಲಸವೇನಲ್ಲ. ಉದ್ಭಟಯ್ಯನೂ ಒಬ್ಬ ಶ್ರೇಷ್ಠ ಶಿವಭಕ್ತ. ತನ್ನ ಭಕ್ತಿಯಿಂದಾಗಿ ಪುರವನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಾನೆ. ಅವನ ಕರಣಗಳು ಶಿವನ ಉಪಕರಣಗಳಾಗಿದ್ದವು. ಪ್ರಾಣವೇ ಶಿವಲಿಂಗವಾಗಿತ್ತು. ಹಗಲು ಇರುಳೆನ್ನದೆ ಶಿವನನ್ನು ಆರಾಧಿಸುತ್ತಿದ್ದ. ಅವನ ನೋಟ, ಮಾಟ, ಬೇಟ, ಕೂಟಗಳೆಲ್ಲಾ ಶಿವನಲ್ಲೇ ಇದ್ದು, ಮಾಡಿದ್ದೆಲ್ಲವೂ ಪೂಜೆಯಾದರೆ, ಆಡಿದ್ದೆಲ್ಲವೂ ಸ್ತೋತ್ರವಾಗಿತ್ತು. ಇಂಥ ಭಕ್ತನ ಬಯಕೆಯನ್ನು ಶಿವ ಪೂರೈಸುವುದಿಲ್ಲ ಎನ್ನುತ್ತಾನೆಯೇ!

ಒಮ್ಮೆ ಪುರವನ್ನು ಕೈಲಾಸಕ್ಕೆ ಕೊಂಡೊಯ್ಯುವ ಬಯಕೆ ಹೊತ್ತು, ಉದ್ಭಟಯ್ಯ ಶಿವಾಲಯಕ್ಕೆ ಬರುತ್ತಾನೆ. ರುದ್ರಾಕ್ಷಿಯನ್ನು ಧರಿಸಿ "ಶಿವಲಿಂಗಕ್ಕಭಿಷೇಕಂ ಮಾಡಿಸಿ ನವಪೂಜೆಗಳಂ ಮಾಡಿಸಿ/ಧೂಪಾರತಿಗಳನೊಲವಿಂದೀವುತೆ/ಭಾಪುರೆ ಶಿವಯೆಂದಭವ ನನೋವುತೆ/ಆರೋಗಿಸಲಿತ್ತನುನಯದಿಂದಂ/ಧೀರಂ ತಾಂಬೂಲವನೊಲವಿಂದಂ"[೮೨] ಕೊಡುತ್ತಾ ಶಿವನ ಸದ್ಭಕ್ತನೂ ಆದ ಉದ್ಭಟಯ್ಯ, ಶಿವನ ಸಮ್ಮುಖದಲ್ಲಿ ಕುಳಿತುಕೊಳ್ಳುತ್ತಾನೆ. ಆನಂದರಸ

ಉಕ್ಕಿ ಹರಿದು ಶಿವನ ವರ್ಣನೆಯಲ್ಲಿ ತೊಡಗುತ್ತಾನೆ. ಶಿವನ ಮೇಲೆ ಹಲವು ಪದ್ಯಗಳನ್ನು ಹಾಡುತ್ತಾನೆ. ಉದ್ಭಟಯ್ಯನ ಹೃದಯ ತುಂಬಿದ ಭಕ್ತಿಗೆ ಶಿವ ತಾನಾಗಿಯೇ ಒಲಿಯುತ್ತಾನೆ. ಅವನ ಬಯಕೆಯನ್ನು ಈಡೇರಿಸುತ್ತಾನೆ.

ಉದ್ಭಟಯ್ಯನ ಭಕ್ತಿಯನ್ನು ವರ್ಣಿಸುವ ಹರಿಹರನ ಈ ರಗಳೆಯಲ್ಲಿ ಗಮನ ಸೆಳೆಯುವ ಇನ್ನೊಂದು ಅಂಶ: ಉದ್ಭಟಯ್ಯ ಮತ್ತು ಮಂಗಳಾಂಬೆಯರ ನಡುವಣ ಮಧುರ ಸಂಭಾಷಣೆ. ನಾಟಕೀಯವಾದ ಈ ಸಂಭಾಷಣೆ ಮುದ್ದಣ ಮನೋರಮೆಯರ ಸರಸ ಸಲ್ಲಾಪವನ್ನು ನೆನಪಿಗೆ ತರುತ್ತದೆ :

ಮಂಗಳಾಂಬೆ : ಏಕಾಯ್ತೀಗಳ ಕಾರಣ ಹಾಸ್ಯಂ
ಏಕಿನ್ನೆಂದುಂಟೇ ಅಪಹಾಸ್ಯಂ
ಏತಟಕುಂದಂಕಂಡಿರಿನೀವೆನೆ
ಏತಕ್ಕಾದುದು ನಸುನಗೆ ನಿಮಗೆನೆ[83]

ಉದ್ಭಟಯ್ಯ : ನಿನ್ನಯ ಕಾರಣವಲ್ಲಂಭುಜಮುಖೀ
ಎನ್ನಯ ಶರಣರ ಸರಸಂ ಶಶಿಮುಖೀ[84]

ಮಂಗಳಾಂಬೆ : ನಗೆಯೊಪ್ಪುವುದೀ ಪುರಸಹಿತೊಯ್ವೊಡೆ

ಉದ್ಭಟಯ್ಯ : ಪುರಮಂ ಕೊಂಡೊಯ್ವುಪೆಸರಿದಾವುದು
ಧರೆ ಚಿತ್ರವೆನಲ್ಕೊಯ್ವುವೆನೇವುದು
ನಾಡಿದು ಪೋಪೆಂ ಸೋಮನ ವಾರಂ[85]

ಹೀಗೆ, ಇಡೀ ಕಾವ್ಯದ ತುಂಬಾ ಮೊದಲಿಂದ ಕೊನೆಯವರೆಗೂ ಮುಂದುವರಿಯುವ ಈ ಮಧುರ ಸಂಭಾಷಣೆಯಲ್ಲಿ, ಕವಿ ಅತ್ಯಂತ ಸುಂದರವಾದ ಪ್ರೇಮದ ಬದುಕನ್ನು ಸೆರೆಹಿಡಿಯುತ್ತಾನೆ. ಆ ಸಂಭಾಷಣೆಯಲ್ಲಿಯೇ ಶಿವನ ಮಹತ್ವ ಭಕ್ತಿಯ ಹಿರಿಮೆಯನ್ನು ಸಾರುತ್ತಾನೆ.

## 6.7 ಶಂಕರದಾಸಿಮಯ್ಯನ ರಗಳೆ

'ಶಂಕರದಾಸಿಮಯ್ಯನ ರಗಳೆ' ಕವಿಯ ಅನುಭವ ತುಂಬಿದ ರಗಳೆಗಳಲ್ಲಿ ಒಂದು. ಈ ರಗಳೆ ಮೂರು ಸ್ಥಲಗಳಿಂದ ಕೂಡಿದೆ. ಮೊದಲ ಸ್ಥಲದಲ್ಲಿ ದಾಸಿಮಯ್ಯನು ಶಿವಭಕ್ತಿ ಸ್ವೀಕರಿಸಿ, ಈಶ್ವರನಿಂದ ಹಣೆಗಣ್ಣನ್ನು ಪಡೆಯುವವರೆಗಿನ ಪೂರ್ವ ವೃತ್ತಾಂತವಿದೆ. ಎರಡು ಮತ್ತು ಮೂರನೆ ಸ್ಥಲದಲ್ಲಿ ದೇವರದಾಸಿಮಯ್ಯನ ಅಹಂಕಾರ ಶಮನ, ಕಲ್ಯಾಣದಲ್ಲಿ ನರಸಿಂಹ ವಿಗ್ರಹವನ್ನು ಶಂಕರದಾಸಿಮಯ್ಯನು ಹಣೆಗಣ್ಣಿನಿಂದ ಸುಟ್ಟುಹಾಕಿದ ಮತ್ತು ಅರಸ ಜಯಸಿಂಹನ ಅಹಂಕಾರವನ್ನು ಶಮನ ಮಾಡಿದ ಪವಾಡಗಳಿವೆ. ಜೊತೆಗೆ, ಮೈಲಾರದೇವನ ಮಹಿಮೆಯನ್ನು ತಗ್ಗಿಸಿ, ಮರುಳ ತಂಡಗಳಿಂದ ಕೊಟ್ಟಣ ಕುಟ್ಟಿಸಿದ ಪವಾಡಗಳೂ ಇವೆ.

ಮೊದಲನೆ ಸ್ಥಲದಲ್ಲಿ ಶಂಕರದಾಸಿಮಯ್ಯನ ಸಾಧಕ ಜೀವನದ ಆರ್ದ್ರಭಕ್ತಿ ಹಾಗೂ ವಿನಮ್ರ ಭಾವ ವ್ಯಕ್ತವಾದರೆ ಎರಡು ಮತ್ತು ಮೂರನೆ ಸ್ಥಲಗಳಲ್ಲಿ ಅವನ ಸಿದ್ಧಜೀವನದ ಅಗಾಧತೆ ಮತ್ತು ಸ್ಥೈರ್ಯ ವ್ಯಕ್ತವಾಗಿವೆ. ಇವುಗಳ ಜೊತೆಗೆ ತೀರ್ಥಕ್ಷೇತ್ರಾದಿ ಯಾತ್ರೆಗಳ ನಿರಸನ; ನಿರಹಂಕಾರಯುತ ಶುದ್ಧದಾಸೋಹದ ನೆಲೆ; ಕ್ಷುದ್ರ ದೈವಗಳ ಖಂಡನೆಯೂ ಈ ರಗಳೆಯಲ್ಲಿದೆ.

ಶಿವನ ಅನುಗ್ರಹ ಪಡೆಯಲು ತೀರ್ಥಯಾತ್ರೆ ಮಾಡಬೇಕಾಗಿಲ್ಲ ಎಂಬುದು ಹರಿಹರನ ನಂಬಿಕೆಗಳಲ್ಲಿ ಒಂದಾಗಿತ್ತು. ಆ ನಂಬಿಕೆಯನ್ನು ಪ್ರತಿಪಾದಿಸುವ ಕಥೆಯೊಂದನ್ನು ಶಂಕರ ದಾಸಿಮಯ್ಯನ ರಗಳೆಯಲ್ಲಿ ಹೇಳುತ್ತಾನೆ. ಈ ಕಥೆಯಲ್ಲಿ ಬರುವ ನಾಯಕ ಶಂಕರದಾಸಿಮಯ್ಯ ಆರಂಭದಲ್ಲಿ ಸಾಂಸಾರಿಕ ಸುಖಭೋಗಗಳ ನಡುವೆ ಬದುಕುತ್ತಿದ್ದ ಒಬ್ಬ ಸಾಮಾನ್ಯ ಮನುಷ್ಯ. ಅವನ ಮೊದಲ ಹೆಸರು ಗೋವಿಂದ ದೇವ. ನಿರಂತರ ಸಾಂಸಾರಿಕ ಸುಖಭೋಗಗಳಿಂದ ಬೇಸತ್ತ ಆತ, ವೈರಾಗ್ಯದ ಬಯಕೆಯಿಂದ ವಾರಣಾಸಿಗೆ ಹೋಗುವ ಮೊದಲು, ಅವನ ಊರಿಗೆ ಗಾವುದ ದೂರದ ನಪಿಲೆಯಲ್ಲಿನ ಶಿವನಿಲಯವೊಂದಕ್ಕೆ ಹೋಗುತ್ತಾನೆ. ಅಲ್ಲಿನ ರಂಗಮಂಟಪದಲ್ಲಿ ಗಂಗಾಧರನಿಗೆ ನಮಸ್ಕರಿಸಿ ಶಂಕರದಾಸಿಮಯ್ಯ ಕುಳಿತಿರುವಾಗ, ಶರಣ ಸಂಕುಲವು ಶಿವಪೂಜಾ ವೈಭವದಲ್ಲಿ ತೊಡಗಿರುವುದನ್ನು ಕಾಣುತ್ತಾನೆ. ಆಗ ಅವನಲ್ಲಿಯೂ ಶಿವಭಕ್ತಿಯ ಸಂಚಾರ ಆರಂಭವಾಗತೊಡಗುತ್ತದೆ. ಆ ಸಂಭ್ರಮದಲ್ಲಿ ವಾರಣಾಸಿಯನ್ನೇ ಮರೆತು ಮತ್ತೆ ತಮ್ಮೂರಿಗೆ ಹೋಗಿ ಜೆಡೆಯ ಶಂಕರದೇವನ ದರ್ಶನ ಮಾಡುತ್ತಾನೆ. ಕುಣಿದು ಕುಪ್ಪಳಿಸಿ, ಕಂಪಿಸಿ, ಪುಳಕಿಸುತ್ತಾ, ಆನಂದಪರವಶನಾಗಿ—

> ಎನಗೆ ವಾರಣಾಸಿಯುಮಮರ ನದಿಯುಂ ನೀನೆ
> ಎನಗೆ ದಿವ್ಯ ಕ್ಷೇತ್ರ ಮಂತ್ರ ತಂತ್ರಂ ನೀನೆ......[86]

ಎನ್ನುತ್ತಾ, ಶಿವಸ್ತುತಿಗೈಯ್ಯುತ್ತಾನೆ. ಹಗಲು-ಇರುಳು, ಗಾಳಿ-ಮಳೆ ಬಿಸಿಲೆನ್ನದೆ ಇಂದುಧರನನ್ನು ಅನುದಿನವೂ ಮರೆಯದೆ ನೆನೆಯುತ್ತಾನೆ. ಅವನ ಆರ್ತ ಕೋರಿಕೆಗೆ ಶಿವ ಪ್ರತ್ಯಕ್ಷನಾಗಲು -

> ದೇವ ಕರುಣಿಸಿತಕ್ಕೆ ನೊಸಲಕಣ್ಣಂ ಕೊಟ್ಟು
> ದೇವ ಕರತಳವನೆನ್ನುತ್ತಮಾಂಗದೊಳಿಟ್ಟು
> ಅಪ್ರತಿಮ ಗುರುವೆ ಸುರತರುವೆ ಕರುಣಿಪುದೆನಗೆ[87]

ಎಂದು ಬೇಡುತ್ತಾನೆ. ಅಂತೆಯೇ ಶಿವನಿಂದ ನೊಸಲಕಣ್ಣನ್ನು ಪಡೆಯುತ್ತಾನೆ. 'ಜ್ಯೋತಿಯಿಂ ಜ್ಯೋತಿಯಂ' ಹೊತ್ತಿಸಿದ ರೀತಿಯಲ್ಲಿ ನೊಸಲಕಣ್ಣನ್ನು ಪಡೆಯುವ ಮೂಲಕ ಶಂಕರ ದಾಸಿಮಯ್ಯನ ಅಜ್ಞಾನ ಮರೆಯಾಗಿ, ಜ್ಞಾನ ಆವರಿಸಿತು ಎಂಬುದನ್ನು ಕವಿ ಸಾಂಕೇತಿಕವಾಗಿ ತಿಳಿಸುತ್ತಾನೆ. ಮುಂದೆ, ಶಂಕರದಾಸಿಮಯ್ಯನ ಜ್ಞಾನದ ಮಹತ್ವವನ್ನು ಎತ್ತಿ ಹಿಡಿಯು ವುದಕ್ಕಾಗಿಯೇ ಹಲವು ಸನ್ನಿವೇಶಗಳು ಸೃಷ್ಟಿಯಾಗಿವೆ. ಅಲ್ಲಿ ಮೊದಲೇ ಹೇಳಿದಂತೆ ದಾಸಿಮಯ್ಯನ ಕ್ಷುದ್ರ ದೈವಗಳ ಖಂಡನೆ, ನಿರಹಂಕಾರದಿಂದ ಕೂಡಿದ ಶುದ್ಧ ದಾಸೋಹದ ಮಹತ್ವ ಕುರಿತ ಪ್ರತಿಪಾದನೆಯನ್ನು ಕಾಣುತ್ತೇವೆ.

ಅಸಮಾಕ್ಷ ನೀಡಿದ 'ಸಿಡಿಲೆಜಿಕೆ'ಯಂತಿರುವ ನೊಸಲಕಣ್ಣನ್ನು ಪರೀಕ್ಷಿಸುವ ಸಲುವಾಗಿ, ಒಮ್ಮೆ ಶಂಕರದಾಸಿಮಯ್ಯ ನೊಸಲಕಣ್ಣನ್ನು ತೆರೆಯುತ್ತಾನೆ. ಹಾಗೆ ತೆರೆಯುತ್ತಿದ್ದಂತೆಯೇ ಘುಡು ಘುಡಿಸುವ ಜ್ವಾಲೆಗಳೇಳುತ್ತವೆ. ಆ ಜ್ವಾಲೆಗೆ ಸಿಕ್ಕ ವಿಷ್ಣು ಪ್ರತಿಮೆಗಳು 'ಸಿಕ್ಕನೆ' ಸೀಳುತ್ತವೆ. ಸಪ್ತಮಾತೃಕೆಯರು ಉರಿದು ಮಣ್ಣಲ್ಲಿ ಬೀಳುತ್ತಾರೆ. ಸುತ್ತಲಿನ ಪ್ರತಿಮೆಗಳೆಲ್ಲ ಹೇಳ ಹೆಸರಿಲ್ಲದಂತಾಗುತ್ತವೆ. ಆಗ ಶಿವ ಪ್ರತ್ಯಕ್ಷನಾಗಿ "ಪುರವುರಿದು ಜಗವುರಿದು ಧರೆವುರಿವುದೆಲೆ ಮಗನೆ/ನರರೊಬ್ಬರುಳಿಯದಂತಿಪ್ಪುದಿನ್ನೆಲೆ ಮಗನೆ/ಜೇಡಯ್ಯ ಬೇಡ"[88] ಎನ್ನುತ್ತಾ ಉರಿವಗ್ನಿಯನ್ನು ನಂದಿಸುತ್ತಾನೆ. ಅನಂತರ ಗೋವಿಂದದೇವನಿಗೆ ಶಂಕರದಾಸಿಮಯ್ಯ ಎಂಬ ಹೆಸರನ್ನಿಟ್ಟು ಲಿಂಗದಲ್ಲಿ ಐಕ್ಯನಾಗುತ್ತಾನೆ. ಶಿವ ಮತ್ತು ದಾಸಿಮಯ್ಯರ ನಡುವಿನ ಅತ್ಯಂತ ಆತ್ಮೀಯ ಸಂಬಂಧ ಮತ್ತು ಅನ್ಯಮತಗಳ ದುರ್ಬಲತೆ ಈ ಭಾಗದಲ್ಲಿ ವ್ಯಕ್ತವಾಗುತ್ತದೆ.

ನೊಸಲಕಣ್ಣನ್ನು ಪಡೆದ ಶಂಕರದಾಸಿಮಯ್ಯ ದೇಶ ಪರ್ಯಟನೆಯಲ್ಲಿ ತೊಡಗುತ್ತಾನೆ. ಗೌಳ, ಲಾಳ, ಮಗಧ, ಮಾಳವ, ಮುಂತಾದ ಕಡೆ ಸುತ್ತಿ ಕೊನೆಗೆ ಮುದನೂರಿಗೆ ಬರುತ್ತಾನೆ. ಅಲ್ಲಿ ಗರ್ವದಿಂದ ಮೆರೆಯುತ್ತಿದ್ದ ಜೇಡರ ದಾಸಿಮಯ್ಯನ ಅಹಂಕಾರವನ್ನು ನಿರಸನ ಗೊಳಿಸುತ್ತಾನೆ. ತವನಿಧಿಯುಂಟೆಂಬ ಗರ್ವದಿಂದ ಮೆರೆಯುತ್ತಿದ್ದ ದಾಸಿಮಯ್ಯ (ಜೇಡರ) 'ಶೀತಕರನಿಗೆ ತಂಪನ್ನು ನೀಡುವ ಹಾಗೆ "ಎನ್ನ ಮನೆಯೊಳು ಸುಕುಮಾರಕ ಧಾನ್ಯಮುಂಟು ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದಾಪ ನಿರೋಧಂ ಬೇಡ ಹತ್ತಿಪ್ಪತ್ತು ಸಾವಿರ ನೆಲ್ಲಹೇಜಂ ಕಳುಹುವೆಂ"[89] ಎಂದು ತನ್ನ ಸಿರಿಯನ್ನು ಶಂಕರದಾಸಿಮಯ್ಯನಿಗೆ ತಿಳಿಸುತ್ತಾನೆ. ಆಗ ಶಂಕರದಾಸಿಮಯ್ಯನು "ತಿರಿದಾಡಿದನ ಮಕ್ಕಳ್ಗೆ ಸಿರಿಯೆಲ್ಲಿಯದೆಲೆ ದಾಸ? ನೀಂ ಕುಡುವವಂ ನಾಂ ಕೊಳುವವನುಂಟು"[90] ಎಂದು ಕಟಕಿಯನ್ನಾಡುತ್ತ ಬಿಡಾರದ ಮನೆಯ ಮುಂದಿದ್ದ ತಿಪ್ಪೆಯನ್ನು ಆತನಿಂದ ತೆಗೆಯಿಸಿ, ಕಡವರವನ್ನು ತೋರಿ ಬೇಕಾದಷ್ಟನ್ನು ತೆಗೆದು ಕೊಳ್ಳುವಂತೆ ಸೂಚಿಸುತ್ತಾನೆ. ಶಂಕರದಾಸಿಮಯ್ಯನ ಶಕ್ತಿ ಸಾಮರ್ಥ್ಯವನ್ನರಿತ ದುಗ್ಗಳೆ (ಜೇಡರ ದಾಸಿಮಯ್ಯನ ಹೆಂಡತಿ)" ಶಿವ ಶಿವ ಕಾಲಾಗ್ನಿಯುಂ ಕೆಣಕುವರೆ....... ಶಿವಾರ್ಚನ ಸಂಪನ್ನ ಕರುಣಿಸು ಕರುಣಿಸೆಂದು"[91] ಪತಿಯ ಅಪರಾಧವನ್ನು ಮನ್ನಿಸುವಂತೆ ಕೇಳಿಕೊಳ್ಳುತ್ತಾಳೆ. ಹೀಗೆ ದೇವರದಾಸಿಮಯ್ಯನ ಗರ್ವವನ್ನು ಶಮನಗೊಳಿಸಿ ಶಂಕರದಾಸಿಮಯ್ಯ ಮುದನೂರಿನಲ್ಲಿರು ತ್ತಾನೆ. ಇಲ್ಲಿ ದುಗ್ಗಳೆ ತನ್ನ ಪತಿಯ ಅಪರಾಧವನ್ನು ಮನ್ನಿಸುವಂತೆ, ಶಂಕರದಾಸಿಮಯ್ಯ ನನ್ನು ಪ್ರಾರ್ಥಿಸುವ ದೃಶ್ಯ ಬಹಳ ಸುಂದರವಾಗಿ ಮೂಡಿದೆ. ಅದು ದೇವರದಾಸಿಮಯ್ಯ ನಿಗಿಂತಲೂ ದುಗ್ಗಳೆಯೇ ಶ್ರೇಷ್ಠ ಎಂದು ಗುರುತಿಸುವುದರ ಜೊತೆಗೆ, ಸ್ತ್ರೀಯ ಅಂತರಂಗದ ಭಕ್ತಿಯನ್ನು ಎತ್ತಿಹಿಡಿಯುತ್ತದೆ.

ಮುಂದೆ ಇಂಥದ್ದೇ ಸಂದರ್ಭದಲ್ಲಿ ಅರಸ ಜಯಸಿಂಹರಾಯನ ಗರ್ವವನ್ನು ಮೆಟ್ಟುತ್ತಾನೆ. "ದೇವಾ ಕಳಾಸಾನ್ನಿಧ್ಯಮಾದ ನರಸಿಂಹ ಪ್ರತಿಮೆಯಂ ನಿಮ್ಮ ನೊಸಲಗಣ್ಣಿಂ ನೋಡಲು ಘನ ಪ್ರತಿಷ್ಠೆಯಾದಪುದು ನೋಡಿ ಕರುಣಿಸಬೇಹು"[92]ದೆಂದು ಕಟಕಿಯಾಡಿದ ಜಯಸಿಂಹರಾಯನಿಗೆ, ತನ್ನ ನೊಸಲಕಣ್ಣನ್ನು ತೆರೆಯುವ ಮೂಲಕ ನರಸಿಂಹ ಪ್ರತಿಮೆಯನ್ನೇ ಸುಟ್ಟುರುಹುತ್ತಾನೆ. ಶಂಕರದಾಸಿಮಯ್ಯನ ಈ ಸಾಮರ್ಥ್ಯಕ್ಕೆ ಬೆರಗಾದ ಜಯಸಿಂಹ ಮತ್ತು

ಇತರ ವೈಷ್ಣವರೆಲ್ಲ ದಾಸಿಮಯ್ಯನ ಚರಣದಲ್ಲಿ ಬಿದ್ದು ಮನ್ನಿಸುವಂತೆ ಕೇಳಿಕೊಳ್ಳುತ್ತಾರೆ. ಕವಿ ಜಯಸಿಂಹನ ಕಥೆ ಹೇಳುವ ಮೂಲಕ ಶಂಕರದಾಸಿಮಯ್ಯನು ವೈಷ್ಣವಮತ ಖಂಡನೆಯಲ್ಲಿ ತೊಡಗಿದ್ದನೆಂಬುದನ್ನು, ವೈಷ್ಣವಮತ ವಿರೋಧಿ ಎಂಬುದನ್ನು ಪ್ರಸ್ತುತಪಡಿಸುತ್ತಾನೆ.

ಕ್ಷುದ್ರ ದೈವಗಳ ಖಂಡನೆಯನ್ನೂ ಹರಿಹರ ಈ ರಗಳೆಯಲ್ಲಿ ಚಿತ್ರಿಸುತ್ತಾನೆ. ಶಂಕರದಾಸಿಮಯ್ಯ ಒಮ್ಮೆ ಶಿವದಾಸಿಯೊಡನೆ ಹೆಂಬೇಜಿ ಪಟ್ಟಣಕ್ಕೆ ಬರುತ್ತಾನೆ. ಆ ಪಟ್ಟಣದ ಪ್ರಮುಖ ದೇವರೆಂದರೆ ಮೈಲಾರದೇವ. ದೇವರ ಬಗ್ಗೆ ವಿಶೇಷ ಭಕ್ತಿ ಗೌರವಗಳೂ ಜನರಲ್ಲಿ ತುಂಬಿಕೊಂಡಿರುತ್ತವೆ. ಆದರೆ ಶಂಕರದಾಸಿಮಯ್ಯ ಮೈಳುಗೆ ಎಂಬುವಳು ಮೈಲಾರದೇವನಿಗೆ ಅರ್ಪಿಸಲು ನೀಡಿದ ವೀಳಯವನ್ನು ತಾನೇ ಭೋಗಿಸಿದುದಲ್ಲದೆ, ತನ್ನ ಬಾಯ ತಂಬುಲವನ್ನೇ ಮೈಲಾರನಿಗೂ ಇಕ್ಕಿ, ದೇವರ ಪಾವಿತ್ರ್ಯವನ್ನು ನಾಶಮಾಡುತ್ತಾನೆ. ವಿಷಯ ತಿಳಿದ ಹೆಂಬೇಜಿ ಪಟ್ಟಣದ ಜನ ಬೆರಗಾಗಿ ಈ ಚೋದ್ಯವನ್ನು ನೋಡಲು ನೆರೆಯುವರು. ಆ ಸಂದರ್ಭದಲ್ಲಿ ಮೈಲಾರದೇವನು ಶಂಕರದಾಸಿಮಯ್ಯನ ಹಿಂದೆ ಕೊಡೆ ಹಿಡಿದು ನಡೆಯುತ್ತಿರುವುದನ್ನು ಕಂಡು ಅಚ್ಚರಿಪಡುತ್ತಾರೆ. ಬೇಡವೆಂದರೂ ಬಿಡದೆ "ದೇವಾ ಈ ಕೊಡೆ ಎನಗೆ ತೊಡವೆನಗೆ ಶಂಕರಾ-ದೇವಾ ಈ ಕೊಡೆಯ ನಾಂ ಕೊಡೆ ಬಿಡೆಂ ಶಶಿಧರಾ"[93] ಎನ್ನುತ್ತಾ ಮೈಲಾರದೇವ ಶಂಕರದಾಸಿಮಯ್ಯನ ಹಿಂದೆ ನಡೆಯುತ್ತಾನೆ. ಲೋಕವೇ ಪೂಜಿಸುತ್ತಿದ್ದ ದೈವವೊಂದು, ಸಾಮಾನ್ಯ ಮನುಷ್ಯನಂತೆ ಕಾಣುವ ಶಿವಾನುಗ್ರಹಿಯಾದ ಶಂಕರದಾಸಿಮಯ್ಯನ ಹಿಂದೆ ನಡೆಯುವ ದೃಶ್ಯ. ದಾಸಿಮಯ್ಯನ ಮಹಿಮೆಯ ಬಣ್ಣನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಹಾಗೆಯೇ ಇನ್ನೊಂದು ಪ್ರಸಂಗದಲ್ಲಿ ಬೆನ್ನು ಹತ್ತಿದ ಭೈರವನನ್ನು ಉದ್ಧರಿಸಿ ಊರ್ಜಿತಗೊಳಿಸುತ್ತಾನೆ.

ಕೊನೆಯದಾಗಿ ಮಾರಿ ಮಸಣಿಗಳಿಂದ ಕೊಟ್ಟಣ ಕುಟ್ಟಿಸುವ ಪವಾಡವೊಂದು ಬರುತ್ತದೆ. ಈ ಪವಾಡ ಶಿವನ ಬೆಂಬಲವುಳ್ಳ ಭಕ್ತನಿಗೆ ಈ ಲೋಕದಲ್ಲಿ ಅಸಾಧ್ಯವೆನ್ನುವಂಥದು ಯಾವುದೂ ಇಲ್ಲ ಎಂಬುದನ್ನು ತಿಳಿಸುತ್ತದೆ. ಮಾರಿ ಮಸಣಿಯರೆಲ್ಲ ಒಂದೆಡೆ ಸೇರಿ ಬತ್ತ ಕುಟ್ಟುವ ದೃಶ್ಯ ಅತ್ಯಂತ ಸಹಜವಾಗಿ ಚಿತ್ರಣಗೊಂಡಿದೆ.

ಹೀಗೆ ಶಿವನ ಕಾರುಣ್ಯ ಪಡೆದ ದಾಸಿಮಯ್ಯ ಲೋಕದಲ್ಲೆಲ್ಲಾ ಸಂಚರಿಸಿ ಶಿವ ಮಹಿಮೆಯನ್ನು ಮೆರೆಯುತ್ತಾನೆ. ಶಿವನ ಮಹಿಮೆಯನ್ನು ಸಾರುವ ಒಂದು ಅಂಶವನ್ನು ಬಿಟ್ಟರೆ ಉಳಿದಂತೆ ಹೊಸ ವಿಚಾರಗಳನ್ನೇನೂ ಕವಿ ರಗಳೆಯಲ್ಲಿ ತಿಳಿಸುವುದಿಲ್ಲ. ಆದರೆ ರಗಳೆಯಲ್ಲಿ ಕವಿ ಮಾಡಿಕೊಂಡಿರುವ ಒಂದೇ ಒಂದು ಬದಲಾವಣೆ, ಶಂಕರದಾಸಿಮಯ್ಯ ಮತ್ತು ಶಿವದಾಸಿಗಳಿಗೆ ಮಗುವಾಗುವ ಸನ್ನಿವೇಶ ಕಥೆಯ ಕೊನೆಯಲ್ಲಿ ಬರುವಂತೆ ಮಾಡಿರುವುದು. ಸಾಮಾನ್ಯವಾಗಿ ಹರಿಹರನ ಎಲ್ಲ ರಗಳೆಗಳಲ್ಲೂ ಈ ದೃಶ್ಯ ಕಥೆಯ ಮೊದಲಲ್ಲೇ ಬರುತ್ತದೆ.

## 6.8 ವೈಜಕವ್ವೆಯ ರಗಳೆ

ವೈಜಕವ್ವೆಯ ಅಸಾಧಾರಣ ಗುಣವನ್ನು ಕುರಿತಂತೆ ಕವಿ "ಜಲದ ಜಲಜದಂತೆ ಪವನನಂತೆ ತರಣಿ ಕಿರಣದಂತೆ / ತಿಲದ ತೈಲದಂತೆ ನನ್ನಿಯಂತೆ ಯಾತ್ಮತೇಜದಂತೆ / ಜೈನರೊಳಗೆ ಹೊದ್ದಿ

ಹೊಪ್ಪ ವಿಪ್ರಕುಳವಧು ನಿರ್ಮಳಾಂಗಿ / ದಾನನಿಧಿ ನವೀನಭಕ್ತೆ ಮಾನಶೀಲೆ ಸುರುಚಿರಾಂಗಿ / ಅಮಮ ಗುಪ್ತ ಭಕ್ತೆ ಭವನಮಾಪ್ತೆ ಶೈವಶಕ್ತೆ ವೈಜಕವ್ವೆ"[94] ಎಂದು ವರ್ಣಿಸಿದ್ದಾನೆ. ಈ ವರ್ಣನೆ ವೈಜಕವ್ವೆಯ ಇಡೀ ಕಥೆಯ ತಿರುಳು. ಮುಂದಿನ ಕಥೆಯೆಲ್ಲವೂ ಈ ವರ್ಣನೆಯ ಬೆಳವಣಿಗೆಯಾಗಿದೆ. ವೈಜಕವ್ವೆಯ ಕಥೆಯ ಮೂಲಕ ಕವಿ ಪ್ರಧಾನವಾಗಿ ಅನ್ಯ ಧರ್ಮಗಳಿಗಿಂತ ಶೈವ ಧರ್ಮವೇ ಶ್ರೇಷ್ಠ ಎಂಬುದನ್ನು ತಿಳಿಸಲು ಹೊರಟಿದ್ದಾನೆ.

ವೈಜಕವ್ವೆ ಶಿವನ ಸದ್ಭಕ್ತೆ. ಆದರೆ ದುರ್ದೈವದಿಂದ ಅವಳು ಜೈನನೊಬ್ಬನನ್ನು ಮದುವೆಯಾಗಬೇಕಾಗುತ್ತದೆ. ತನ್ನ ಮನದ ಬಯಕೆಗೆ ಅನುಗುಣನಲ್ಲದವನನ್ನು ಮದುವೆಯಾಗಿ ಸಂಸಾರ ಹೂಡಿದ ಅವಳು ತಮದ ನಡುವೆ ಚಂದ್ರನಿರುವಂತೆ ಇದ್ದು, ಅಂತರ್ಯದಲ್ಲಿ ಶಿವಾರ್ಚನೆ ಮಾಡುತ್ತಾಳೆ. ಜೈನನಿಂದ ಬಿಡುಗಡೆಗಾಗಿ ಒಳಗೊಳಗೇ ಶಿವನನ್ನು ಬೇಡುತ್ತಾಳೆ. ಈ ಸಂದರ್ಭದಲ್ಲಿ ಕವಿ, ಬರಲಿರುವ ಜೈನ ಋಷಿಗಳಿಗೆ ಬೋನ ತಯಾರಿಸುವ ಒಂದು ಸನ್ನಿವೇಶವನ್ನು ಸೃಷ್ಟಿಸುತ್ತಾನೆ.

ಒಮ್ಮೆ ನೇಮಿಶೆಟ್ಟಿ, ಹೆಂಡತಿಯಾದ ವೈಜಕವ್ವೆಗೆ ಋಷಿಗಳಿಗೆ ಬೋನವನ್ನು ಸಿದ್ಧಪಡಿಸುವಂತೆ ತಿಳಿಸುತ್ತಾನೆ. ಅದರಂತೆ ಅವಳು ಹಾಲುಂಡೆ, ಹಾಲವುಗೆ, ಪಾಯಸ ಮುಂತಾದ ಬಗೆಬಗೆಯ ಆಹಾರವನ್ನು ತಯಾರಿಸುತ್ತಾಳೆ. ಹಾಗೆ ತಯಾರಿಸಿ ಶಿವನನ್ನು ನೆನೆಯುತ್ತಾಳೆ. ಆ ಸಮಯಕ್ಕೆ ಸರಿಯಾಗಿ ಶಿವ ಭಿಕ್ಷುಕನ ವೇಷ ಧರಿಸಿ, ವೈಜಕವ್ವೆಯ ಬಳಿ ಬಂದು ಭಿಕ್ಷೆ ಕೇಳುತ್ತಾನೆ. ಭಿಕ್ಷುಕನ ಧ್ವನಿ ಕೇಳುತ್ತಿದ್ದಂತೆ ವೈಜಕವ್ವೆಗೆ, ಬಂದವನು ಶಿವನೇ ಇರಬೇಕೆಂದು ತಿಳಿಯುತ್ತದೆ. ಭಿಕ್ಷೆ ತಂದು ಭಿಕ್ಷಾ ಪಾತ್ರೆಯಲ್ಲಿಡುತ್ತಾಳೆ. ಎಷ್ಟು ಭಿಕ್ಷೆ ಹಾಕಿದರೂ ಪಾತ್ರೆ ತುಂಬುವುದೇ ಇಲ್ಲ. ನೀಡಿ ನೀಡಿ ಕೊನೆಗೆ, ಜೈನರಿಗಾಗಿ ತಯಾರಿಸಿದ ಅಡುಗೆಯೆಲ್ಲವೂ ತೀರುತ್ತದೆ. ಆದರೂ ವೈಜಕವ್ವೆ ಹರ್ಷದಿಂದ ಬೀಗುತ್ತಾಳೆ. ಅದೇ ಹರ್ಷದಲ್ಲಿ ಶಿವನನ್ನು ಕೂಡಲೇ ಹೋಗಬೇಕೆಂದು ಬಿನ್ನವಿಸಿಕೊಳ್ಳುತ್ತಾಳೆ. ಆ ಹೊತ್ತಿಗೆ ನೇಮಿಶೆಟ್ಟಿ ಋಷಿಗಳೊಡನೆ ಬರುತ್ತಾನೆ. 'ಮುಟ್ಟು, ವಡವಾದ' ಬೋನವನ್ನು ಋಷಿಗಳು ಆರೋಗಿಸದೆ ಹಿಂದಿರುಗುತ್ತಾರೆ. ಇದರಿಂದ ಮುನಿದ ನೇಮಿಶೆಟ್ಟಿ -

> ರಿಸಿಯರೋಗರಂಗಳಂ ತಪಸ್ವಿಗಿಕ್ಕಿ ಕೆಡಿಸಿ ಕಳೆದೆ
> ಪೊಸೆದ ಪೂವಿನಂತೆ ರಿಸಿಯರೆಲ್ಲ ಪಸಿದು ಪೋದರಱಿದೆ
> ಗೊರವರೆಂಬಲಾಯ್ತು ಮುಟ್ಟುವಡವನಿಂತು ಮಾಡಿನಿಂದೆ
> ಅರುಹನ ವ್ರತಕ್ಕೆ ಹೊಲ್ಲಗೆಯ್ದು ಕುಂದನಿಂದು ತಂದೆ[95]

ಎಂದು ನುಡಿಯುತ್ತಾನೆ. ಆಗ ವೈಜಕವ್ವೆ-

> ಶಿವನ ನೊಸಲ ನಯನದೆಂಜಲೆಂಬುದಱಿಯ ಲೋಕವೆಲ್ಲ
> ಭವನಕರುಣದಿಂದವಿಪ್ಪುದೆಂಬುದಱಿಯ ಭುವನವೆಲ್ಲ
> ನೇಮಿಶೆಟ್ಟಿ, ನೀನದಕ್ಕೆ ಮರುಳನಾಗಿ ಕೆಟ್ಟು ನುಡಿದೆ.

..........................................

ಆಯುರವಿಪದಪರದ ನರಕ ಬಡಿದೆ ಕೆಟ್ಟು ಪೋಗಲೇಕೆ[96]

ಎಂದು ನುಡಿಯುತ್ತಾಳೆ. ವೈಜಕವ್ವೆಯ ಮಾತನ್ನು ಕೇಳಿದ ನೇಮಿಶೆಟ್ಟಿ, ಪುಣ್ಯದ ಫಲವನ್ನು ಘಾಸಿಗೊಳಿಸುವ ಹಾಗೆ ಅವಳನ್ನು ಚೆನ್ನಾಗಿ ಥಳಿಸುತ್ತಾನೆ. ದುಃಖದಲ್ಲಿ ವೈಜಕವ್ವೆ ಮುಳುಗಿರುವಾಗ ಶಿವ ಕನಸಿನಲ್ಲಿ ಬಂದು ಅಂಜಬೇಡ 'ಜಿನನ ಶಿರವನೊಡೆದು ಜಡಿದು ಮೂಡಿಸಿಲುವೆ' ಎಂದು ಅಭಯವಿತ್ತು ಮಾಯವಾಗುತ್ತಾನೆ.

ಮರುದಿನ ಎಂದಿನಂತೆ ಜೈನರೆಲ್ಲಾ ಬಸದಿಗೆ ಬರುತ್ತಾರೆ. ಎಷ್ಟು ಪ್ರಯತ್ನಿಸಿದರೂ ಬಸದಿಯ ಕದ ತೆರೆಯದಿರುವುದನ್ನು ಕಂಡು ಕೌತುಕಗೊಳ್ಳುತ್ತಾರೆ. ಯಾರಾದರೂ ಜೀವತತಿಗೆ ಹಾನಿ ಮಾಡಿದವರು ಇರುವಿರಾ? ಎಂದು ಕೇಳಿದಾಗ, ನೇಮಿಶೆಟ್ಟಿ ವೈಜಕವ್ವೆಗೆ ಥಳಿಸಿದ ಸುದ್ದಿಯನ್ನು ತಿಳಿಸುತ್ತಾನೆ. ಆಗ ಜೈನರೆಲ್ಲರೂ ವೈಜಕವ್ವೆಯ ಬಳಿಗೆ ಹೋಗಿ ಅವಳ ಚರಣದಲ್ಲಿ ಬಿದ್ದು ದೇವಾಲಯದ ಕದವನ್ನು ತೆರೆದು ಕರುಣಿಸಬೇಕೆಂದು ಕೇಳಿಕೊಳ್ಳುತ್ತಾರೆ. ಅವರ ಕೋರಿಕೆಗೆ ಮನ್ನಿಸಿದ ವೈಜಕವ್ವೆ ಜಿನಾಲಯದ ಬಾಗಿಲಲ್ಲಿ ನಿಂತು "ದೇವಾ ಸತ್ಯ ನಿತ್ಯ ಭರ್ಗ ಭೀಮ ರುದ್ರ ಕರುಣಿಸಯ್ಯಾ.........."[97] ಎಂದು ಪ್ರಾರ್ಥನೆ ಸಲ್ಲಿಸುತ್ತಾಳೆ.

ವೈಜಕವ್ವೆ ಪ್ರಾರ್ಥನೆ ಸಲ್ಲಿಸುತ್ತಿದ್ದಂತೆಯೇ ಜಿನಾಲಯದ ಬಾಗಿಲು ತೆರೆಯುತ್ತದೆ. ಎಲ್ಲ ಕಡೆಯೂ ಬೆಳಕು ಪಸರಿಸಿ ಜಿನನ ಶಿರವೊಡೆದು ಶಿವಲಿಂಗ ಬೆಳೆದು ಶೋಭಿಸುತ್ತದೆ. ವೈಜಕವ್ವೆ ಪರಮಹರ್ಷಿತಳಾಗುತ್ತಾಳೆ. ನೆರೆದ ಜೈನರೆಲ್ಲರೂ ವೈಜಕವ್ವೆಯ ಮಹಾಭಕ್ತಿಗೆ ಮೂಕವಿಸ್ಮಿತರಾದರು. ನೇಮಿಶೆಟ್ಟಿ ವೈಜಕವ್ವೆಯ ಪಾದಗಳಿಗೆ ನಮಸ್ಕರಿಸುತ್ತಾನೆ. ಅವಳು ತನ್ನನ್ನು ನಮಿಸಿದ ಪತಿಗೆ ಭಸಿತವಿಟ್ಟು ಶಿವದೀಕ್ಷೆ ನೀಡುತ್ತಾಳೆ.

ಜೈನನಾದ ನೇಮಿಶೆಟ್ಟಿ, ವೈಜಕವ್ವೆಯ ಪಾದಗಳಿಗೆ ನಮಸ್ಕರಿಸಿ, ವೈಜಕವ್ವೆಯಿಂದ ದೀಕ್ಷೆಯನ್ನು ಪಡೆದು ಶಿವಧರ್ಮವನ್ನು ಸ್ವೀಕರಿಸುವ ಈ ಸನ್ನಿವೇಶದ ಮೂಲಕ, ಕವಿ ಶಿವಧರ್ಮದ ಶ್ರೇಷ್ಠತೆಯನ್ನು ಸಾರುತ್ತಾನೆ.

ವಿರಕ್ತಿಯು ಮನಸ್ಸಿಗೆ ಸಂಬಂಧಿಸಿದ್ದೇ ಹೊರತು ಇಂದ್ರಿಯಗಳನ್ನು ಆಶ್ರಯಿಸಿದ ಗುಣವಲ್ಲ. ವಿರಕ್ತಿಗೂ ಮದುವೆಗೂ ಯಾವ್ಯಾವ ಸಂಬಂಧವೂ ಇಲ್ಲ ಎಂಬುದನ್ನು ತೋರಿಕೊಟ್ಟವಳು ವೈಜಕವ್ವೆ. ಅವಳು ಉತ್ತಮ ಶಿವಭಕ್ತೆಯಾದಂತೆ ಉತ್ತಮ ಗೃಹಿಣಿಯೂ ಹೌದು. ಆಕೆ ಶಿವಭಕ್ತಿಯ ಸಾಧನೆಯನ್ನು ಮಾಡುತ್ತಲೇ ಗಂಡನೊಡನೆ ಸಂಸಾರವನ್ನು ನಡೆಸುತ್ತಾಳೆ. ಜೈನಋಷಿಗಳಿಗೆ ಅವಳು ತಯಾರಿಸಿದ ರುಚಿಯಾದ ಆಹಾರ ದ್ರವ್ಯಗಳು ಅವಳ ಪಾಕ ಪ್ರಾವೀಣ್ಯತೆಯ ನಿದರ್ಶನವಾಗಿದೆ. ಪ್ರತಿಭಟನೆ ಎಂಬುದು ಅವಳಿಗೆ ತಿಳಿಯದ ವಿಚಾರವಾಗಿದ್ದರೂ, ಧೀರಳಾದ ಹೆಂಗಸು ಎಂಬುದರಲ್ಲಿ ಎರಡು ಮಾತಿಲ್ಲ. ನೇಮಿಶೆಟ್ಟಿ ಶಿವನನ್ನು ಹಂಗಿಸಿದ ಸಂದರ್ಭದಲ್ಲಿ ವೈಜಕವ್ವೆ ನೀಡುವ ಉತ್ತರ ಅವಳ ದಿಟ್ಟತನಕ್ಕೆ ಉತ್ತಮ ನಿದರ್ಶನ. ಕವಿ ಆಕೆಯನ್ನು 'ಛಲದ ಲಲನೆ' ಎಂದು ಕರೆಯುತ್ತಾನೆ. ಆಕೆ ಛಲದ ಲಲನೆಯಷ್ಟೇ ಅಲ್ಲ, ಸಂಯಮಿಯೂ ಹೌದು. ಗಂಡ ನೇಮಿಶೆಟ್ಟಿ ಸಾಯುವ ಹಾಗೆ ಹೊಡೆದರೂ, ವೈಜಕವ್ವೆ ಅದನ್ನು ಶಿವಾನುಗ್ರಹವೆಂದು ಸ್ವೀಕರಿಸುವ ರೀತಿ ಆಕೆಯ ಸಂಯಮಶೀಲಗುಣದ

ಪ್ರತೀಕವಾಗಿದೆ. ಹೀಗೆ ಕವಿ ಪೈಜಕವ್ವೆಯ ಪಾತ್ರವನ್ನು ಔನ್ನತ್ಯಕ್ಕೇರಿಸುವ ಮೂಲಕ, ಪುರುಷ ಪ್ರಾಧಾನ್ಯತೆಯನ್ನು ತಿರಸ್ಕರಿಸುವ ಮನೋಧರ್ಮವನ್ನು ಕಥೆಯ ಒಡಲಲ್ಲಿ ಸೇರಿಸಿದ್ದಾನೆ.

ಜೈನಧರ್ಮಕ್ಕಿಂತ ಶಿವಧರ್ಮವೇ ಶ್ರೇಷ್ಠವಾದದ್ದು. ಆ ಧರ್ಮದ ಶ್ರೇಷ್ಠತೆಯನ್ನು ಸಾರಲು ಹಿಂದಣ ಸ್ತ್ರೀಯರು ಮಾಡಿದ ಕಾರ್ಯ ಹೇಗೆ ಪ್ರಶಂಸನೀಯವಾಗಿತ್ತೆಂಬುದನ್ನು ತೋರಿಸುವುದೇ ಈ ಕಥೆಯ ಮುಖ್ಯ ಉದ್ದೇಶ. ತಾನು ನಂಬಿದ ಧರ್ಮವನ್ನು ಪ್ರಸಾರ ಮಾಡಲು ಹಾಗೂ ಸ್ತ್ರೀಯರ ಬಗೆಗೆ ಗೌರವವನ್ನು ಮೂಡಿಸಲು ಹರಿಹರ ಇಲ್ಲಿ ಪ್ರಯತ್ನಿಸಿದ್ದಾನೆ. ಆ ದೃಷ್ಟಿಯಲ್ಲಿ ಕಾವ್ಯ ಮಹತ್ವದ ಕಾರ್ಯವನ್ನು ನಿರ್ವಹಿಸುತ್ತದೆ.

## 6.9 ಏಕಾಂತರಾಮಿತಂದೆಯ ರಗಳೆ

ಜೈನರಿಗೆ ಮತ್ತು ಜೈನ ಬಸದಿಗಳಿಗೆ ಅಬ್ಬಲೂರು ಪ್ರಸಿದ್ಧ ಸ್ಥಳ. ಎಲ್ಲೆಲ್ಲಿ ನೋಡಿದರೂ ಜೈನ ಬಸದಿಗಳೇ. ಅವುಗಳ ಮಧ್ಯೆಯೇ ಬ್ರಹ್ಮೇಶ್ವರ ಶಿವ ದೇವಾಲಯವೂ ಇದ್ದು ಅದು ಜೈನರ ವಿರೋಧದಿಂದಾಗಿ ಪಾಳು ಬಿದ್ದಿರುತ್ತದೆ. ಪೂಜೆಯಿಲ್ಲ, ನಮಸ್ಕಾರಗಳಿಲ್ಲ, ಸದ್ಭಕ್ತರೊಬ್ಬರೂ ಅತ್ತ ಸುಳಿಯುವುದೂ ಇಲ್ಲ. ಈ ವಿರೋಧಗಳ ಮುಕ್ತಿಗಾಗಿ ಶಿವ ಶರಣನೊಬ್ಬನ ನಿರೀಕ್ಷೆಯಲ್ಲಿರುವಾಗ ಆ ಸಮಯಕ್ಕೆ ಸರಿಯಾಗಿ ಕಲಿಯೂ ಛಲಿಯೂ ಅಪ್ರತಿಮ ಶಿವಭಕ್ತನೂ ಆದ ಏಕಾಂತರಾಮಯ್ಯ ಆ ಮಾರ್ಗವಾಗಿ ಬರುತ್ತಾನೆ. ಶಿವನ ದುಸ್ಥಿತಿಯನ್ನು ಕಂಡು ಮರುಗಿ, ಜೈನರನ್ನೆಲ್ಲಾ ಸದೆಬಡಿದು, ಜೈನ ಬಸದಿಗಳನ್ನೆಲ್ಲಾ ಕಿತ್ತು ಬಿಸಾಡಿ, ಮತ್ತೆ ಶಿವಧರ್ಮವು ನೆಲೆಗೊಳ್ಳುವಂತೆ ಮಾಡುತ್ತಾನೆ. ಹಾಳುಬಿದ್ದ ಶಿವದೇವಾಲಯವೊಂದರ ಪುನರುಜ್ಜೀವನದ ಈ ಕಥೆಯಲ್ಲಿ ಏಕಾಂತರಾಮಯ್ಯನ ಭಕ್ತಿ, ಶಕ್ತಿ, ವೀರೋಚಿತ ಹೋರಾಟಗಳಲ್ಲದೆ ಜೈನರ ದುರ್ನಡತೆ ಮತ್ತು ಅವುಗಳಿಂದಾಗಿ ಅವರು ಅವನತಿ ಹೊಂದಿದ ಮನೋಜ್ಞ ಚಿತ್ರಣ ಇದೆ.

ಏಕಾಂತರಾಮಯ್ಯ 'ಸರ್ಪಭೂಷಣನೊಲ್ಮೆಯವತಾರಿ'ಯೂ 'ಅಡಿಯನಿಡನಿಟ್ಟು ಹಿಮ್ಮೆಟ್ಟದ ಕಲಿ'ಯೂ ಆಗಿದ್ದನು. ಒಮ್ಮೆ ಶಿವಲಿಂಗ ಮತ್ತು ಶಿವಕ್ಷೇತ್ರಗಳನ್ನು ನೋಡುವ ಉದ್ದೇಶದಿಂದ ಅಬ್ಬಲೂರಿಗೆ ಬರುತ್ತಾನೆ. ಅವನು ಬರುತ್ತಿದ್ದಂತೆಯೇ ಅಬ್ಬಲೂರಿನ ಜಿನಪ್ರತಿಮೆಗಳು ನಡುಗಲಾರಂಭಿಸುತ್ತವೆ. ಜಿನಬೊಂಬೆಗಳ ಕಣ್ಣಲ್ಲಿ ಕಣ್ಣೀರು ಸುರಿಯ ಲಾರಂಭಿಸುತ್ತದೆ. ಅವುಗಳನ್ನು ಕಾಣುತ್ತಿದ್ದಂತೆಯೇ ಏಕಾಂತರಾಮಯ್ಯ ಸಿಡಿಮಿಡಿಗೊಳ್ಳುತ್ತಾನೆ. ಛೀ ಛೀ ಎನ್ನುತ್ತಾ ನೆಲವನ್ನು ಒದೆದು ತನ್ನನ್ನು ತಾನು ಬೈದುಕೊಳ್ಳುತ್ತಾನೆ. ಆ ಹೊತ್ತಿಗೆ ಶಿವಭಕ್ತನೊಬ್ಬನ ಆಗಮನವನ್ನೇ ಕಾಯುತ್ತಿದ್ದ ಶಿವ ಪ್ರತ್ಯಕ್ಷನಾಗುತ್ತಾನೆ. ಶಿವದರ್ಶನವನ್ನು ಪಡೆದ ರಾಮಯ್ಯ 'ಏನಯ್ಯ ಶಿವನೇ ಉಮ್ಮಳಿಸುತಿರ್ಪೆ ತಂದೆ' ಎಂದು ಶಿವನನ್ನು ಕೇಳುತ್ತಾನೆ. ಆಗ ಶಿವನು ಜೈನರಿಂದಾಗಿ ತಾನು ಅನುಭವಿಸುತ್ತಿರುವ ವಿರೋಧಗಳನ್ನೆಲ್ಲಾ ರಾಮಿತಂದೆಯನ್ನು ಬಿಗಿದಪ್ಪಿಕೊಂಡು ವಿವರಿಸುತ್ತಾನೆ. ಪ್ರತಿಯಾಗಿ "ಅರುಹನ ಪ್ರತಿಮೆಗಳನ್ನೆತ್ತಿ ಬಿಸುಡಯ್ಯ/ ನೆರೆದಿರ್ದಜೈನಸಂಕುಳವನೆಚ್ಚೆಟ್ಟಯ್ಯಾ"[98] ಎಂದು ತನ್ನ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಭಕ್ತನನ್ನು ರಕ್ಷಿಸಬೇಕಾದ ಶಿವನೇ ತನ್ನನ್ನು ದುಸ್ಥಿತಿಯಿಂದ ಪಾರು ಮಾಡು ಎಂದು,

ಭಕ್ತನೊಬ್ಬನನ್ನು ಬೇಡಿಕೊಳ್ಳುವ ವೃತ್ತ ಅತ್ಯಂತ ಕುತೂಹಲಕರವಾಗಿದ್ದು ಏಕಾಂತರಾಮಯ್ಯನ ಅಸದೃಶ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ.

ಶಿವ ಪ್ರತ್ಯಕ್ಷನಾಗಿ, ಜೈನರನ್ನು ಸಂಹರಿಸುವಂತೆ ತಿಳಿಸಿಯೂ ಬಿಟ್ಟ. ಆದರೆ ಭಕ್ತನಾದ ರಾಮಯ್ಯ ಶಿವನ ಈ ಇಂಗಿತದಂತೆ ಖಡ್ಗ ಹಿಡಿದು ಜೈನರನ್ನು ಸಂಹರಿಸಲು ಹೊರಟಿದ್ದರೆ, ಕಥೆ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿತ್ತು. ಧರ್ಮದ್ವೇಷದ ಹಿನ್ನೆಲೆಯಲ್ಲಿ ರಚನೆಯಾದ ಧಾರ್ಮಿಕ ಅಸೂಯೆಯ ಕಾವ್ಯ ಎಂದೆನಿಸಿಕೊಳ್ಳುತ್ತಿತ್ತು. ಆದರೆ ಕವಿ ತನ್ನ ಚಾಣಾಕ್ಷತೆಯಿಂದ ಬೇರೊಂದು ಸನ್ನಿವೇಶವನ್ನು ಸೃಷ್ಟಿಮಾಡುತ್ತಾನೆ. ಜೈನರ ದುರ್ವರ್ತನೆಗಳು ಅವನಿಗೇ ಗೋಚರವಾಗುವಂತೆ ಮಾಡುತ್ತಾನೆ.

ಏಕಾಂತರಾಮಯ್ಯ ಶಿವಪೂಜೆಗಾಗಿ ಬರುವಾಗ, ರಂಗಮಂಟಪದ ಮಧ್ಯೆ ಶಿವನಿಗೆ ಎದುರಾಗಿ, ಕಾಲು ಚಾಚಿ ಸವಣನೊಬ್ಬ ಮಲಗಿರುವುದನ್ನು ಕಾಣುತ್ತಾನೆ. ಇದು ರಾಮಯ್ಯನಿಗೆ ಸಿಡಿಮಿಡಿಗೊಳ್ಳುವಂತೆ ಮಾಡುತ್ತದೆ. ಸವಣ ಮತ್ತು ರಾಮಯ್ಯರ ನಡುವೆ ಮಾತಿನ ಚಕಮಕಿ ನಡೆಯುತ್ತದೆ. ಸವಣ ಶಿವನನ್ನು ಕನಿಷ್ಠವಾಗಿ ಕಾಣುತ್ತಾನೆ. ರಾಮಯ್ಯ ಸಹನೆ ಕಳೆದುಕೊಳ್ಳುತ್ತಾನೆ.

> ಕೇಳೆಲವೋ ಮೂಱುಂ ಪುರವನುರುಹಿದನನಱಿಯ
> ಕಾಲನಂ ಬಸ್ಮೀಕೃತಂ ಮಾಡಿದವನಱಿಯ
> ...................................
> ಆಹಾ ಪುರವೆರಸಿ ಉದ್ಭಟಯ್ಯನನೊಯ್ದನನಱಿಯ
> ಎಲವೋ ದಾಸಂಗೆ ತವನಿಧಿಯನಿತ್ತನನಱಿಯ[99]

ಎಂದು ಹಲವು ರೀತಿಯಿಂದ ಶಿವನ ಬಣ್ಣನೆಯನ್ನು ಮಾಡುತ್ತಾನೆ. ಆದರೂ ಸವಣನಿಗೆ ಶಿವನ ಮಹಿಮೆಯ ಅರಿವಾಗುವುದಿಲ್ಲ. 'ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ' ಎಂದು ಅಣಕವಾಡುತ್ತಾನೆ. ಎಲ್ಲರೂ ನೋಡುತ್ತಿರುವಂತೆಯೇ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಪಡೆಯಬೇಕೆಂದು ಸವಾಲು ಹಾಕುತ್ತಾನೆ.

ಈ ಘಟನೆ ರಾಮಯ್ಯನನ್ನು ಮತ್ತಷ್ಟು ಕೆಣಕುತ್ತದೆ. ಶಿವನನ್ನು ಕೀಳಾಗಿ ಕಂಡವನಿಗೆ ತಕ್ಕ ಪಾಠ ಕಲಿಸಲು ಸಿದ್ಧವಾಗುತ್ತಾನೆ. ಇಬ್ಬರೂ ಭಾಷಾ ಪತ್ರವನ್ನು ಬರೆಯಿಸುತ್ತಾರೆ.

ಒಂದು ಕಡೆ ಅಗ್ಗಣಿಯ ಹೊನ್ನತಂದೆ ಹಾಗೂ ಅನೇಕ ಶರಣರ ಸಮೂಹ, ಮತ್ತೊಂದು ಕಡೆ ಅರುಹಂತನ ಭಕ್ತರ ಸಮೂಹ, ಏಕಾಂತರಾಮಯ್ಯನ ಸಾಹಸವನ್ನು ನೋಡಲು ಕಿಕ್ಕಿರಿದು ನೆರೆಯುತ್ತದೆ. ಆ ಸಮಯದಲ್ಲಿ ಸರ್ಪಭೂಷಣನ ಭಕ್ತನಾದ ರಾಮಯ್ಯ ಬೆಳಗುವ ಹೊಸ ಭಸಿತವನ್ನು ಧರಿಸಿ "ಕರಮುರಂ ಕಂಠದೊಳು ರುದ್ರಾಕ್ಷಿಯಂ ಧರಿಸಿ 'ಶಿರಕರ್ಣ ತೋಳ್ಗಳೊಳಗಂತವಂ ಸಿಂಗರಿಸಿ........ಶಿವಭಕ್ತರಿಗೆ ಮೈಯಿಕ್ಕಿ ಹೋ ಹೋ ಎಂದು 'ಭವನತ್ತ

ಕೈಯೆತ್ತಿ ಶರಣಾರ್ಥಿ ಶರಣೆಂದು' ಇಂದು ನಿಮ್ಮಯ ಕರುಣಮುಂ ಈವುದೆನಗೆಂದು"[100] ತನ್ನ ಶಿರವನರಿದುಕೊಳ್ಳುತ್ತಾನೆ.

ಭಾಷಾ ಪತ್ರದಂತೆ ಜೈನರ ಸೋಲು ಖಚಿತವಾಗಿದೆ. ಜಿನಪ್ರತಿಮೆಗಳನ್ನೆಲ್ಲಾ ಎತ್ತಿ ಬಿಸುಟು ಶಿವಲಿಂಗಗಳನ್ನು ಸ್ಥಾಪಿಸಬೇಕಾಗಿದೆ. ಆದರೆ ಕಪಟ ಜೈನರಿಗೆ ತಮ್ಮ ಸೋಲನ್ನು ಒಪ್ಪಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಹಾಗಾಗಿ ಮತ್ತೆ ಅಣಕವಾಡುತ್ತಾರೆ. 'ಮಾಯವಿದು ಮಂತ್ರವಿದು ಮಾಹೇಂದ್ರಜಾಲವಿದು' ಎನ್ನುತ್ತಾ ಬೇರೆಯಾದ ರುಂಡ ಮುಂಡಗಳನ್ನು ಏಳು ದಿವಸಗಳ ನಂತರ ಮತ್ತೆ ಪಡೆಯುವಂತೆ ನುಡಿಯುತ್ತಾರೆ.

ವಾಸ್ತವವಾಗಿ ಶರಣರು ಮತ್ತು ಜೈನರ ನಡುವೆ ಇಲ್ಲಿಯೇ ಭೀಕರ ಹೋರಾಟ ಆರಂಭವಾಗಬೇಕಾಗಿತ್ತು. ಆದರೆ ಶರಣರು ಜೈನರ ಈ ಸವಾಲನ್ನೂ ಪ್ರೀತಿಯಿಂದಲೇ ಸ್ವೀಕರಿಸುತ್ತಾರೆ. ಅಲ್ಲೇ ಇದ್ದ ಹೊನ್ನತಂದೆಗಳು ಹೊನ್ನ 'ಪರಿಯಾಣ'ವೊಂದನ್ನು ತರಿಸಿ ಅದರೊಳಗೆ ರಾಮಯ್ಯನ ಶಿರವನಿರಿಸುತ್ತಾರೆ. ವೀರಶರಣರನ್ನು ದೇಹದ ರಕ್ಷಣೆಗೆ ನೇಮಿಸಿ ಹೊನ್ನ 'ಪರಿಯಾಣ'ವನ್ನು ಹೊತ್ತು ಶಿವಪುರಗಳಲ್ಲೆಲ್ಲಾ ಮೆರೆಸುತ್ತಾರೆ. ಪುಲಿಗೆರೆಯ ಸೋಮನಾಥ, ಅಣ್ಣಿಗೆರೆಯ ಅಮೃತನಾಥ, ಕೆಂಭಾವಿಯ ಭೋಗನಾಥ, ಕಪ್ಪಡಿಯ ಸಂಗಮೇಶ, ಸೊನ್ನಲಿಗೆಯ ಸಿದ್ಧರಾಮರಲ್ಲಿಗೆ ಬಂದು, 'ದೇವ ನಿಮ್ಮಯ ಕರುಣವೀಯೆನುತ್ತ' ಅವರ ಕರುಣವನ್ನು ಪಡೆಯುತ್ತಾರೆ. ಏಳು ದಿನಗಳ ಕಾಲ ಹೀಗೆ ಮೆರೆಸಿದ ಹೊನ್ನತಂದೆ ಏಳನೆ ದಿನಕ್ಕೆ ಸರಿಯಾಗಿ ಆ ಶಿರವನ್ನು ತಂದು, ಬ್ರಹ್ಮೇಶ್ವರ ದೇವಾಲಯದ ಶಿವನ ಪೀಠಮೂಲದಲ್ಲಿ ಹೊನ್ನ ಪರಿಯಾಣದ ಸಹಿತ ಇಳುಹುತ್ತಾರೆ. ಸುತ್ತಮುತ್ತ ನೆರೆದಿದ್ದ ಸವಣರನ್ನೆಲ್ಲಾ ಕಂಡು 'ಬಗುಳ್ದ ಸವಣರ್ನೋಡಿರೋ' ಎನ್ನುತ್ತಾ "ಇಂದು ಶಿವಲಿಂಗ ಪ್ರತಿಷ್ಠೆಯಂ ಮಾಳ್ಪಂತೆ/ತಂದು ಪೀಠಿಗೆಯೊಳಗೆ ಲಿಂಗವನಿಳುಪುವಂತೆ"[101] ರಾಮಿತಂದೆಗಳ ಶಿರವನ್ನು ತಂದು ಅವರ ದೇಹದ ಮೇಲಿರಿಸುತ್ತಾರೆ. ಹಾಗೆ ಇಳುಹುತ್ತಿದ್ದಂತೆಯೇ ರಾಮಿತಂದೆಯ ದೇಹ ಜೀವ ಪಡೆಯುತ್ತದೆ. ಒಂದು ಕೈಯಲ್ಲಿ ತನ್ನ ಶಿರವ ಹತ್ತಿಸಿಕೊಳ್ಳುತ್ತಾ, ಮತ್ತೊಂದು ಕೈಯಲ್ಲಿ ಕೂರಲಗಿನಾಯುಧ ವನ್ನಿಡಿದು ಘರ್ಜಿಸುತ್ತಾ, ರಾಮಿತಂದೆಗಳು ಸವಣರ ಮೇಲೆ ಬೀಳುತ್ತಾರೆ. ಶಿವಪಡೆಯನ್ನು ಕೈಬೀಸಿ ಕರೆಯುತ್ತಿದ್ದಂತೆಯೇ ಕಾರಮಿಂಚಿನ ಹಾಗೆ ಮುತ್ತಿ, ಅರುಹಕುಲ ನಿಕರವನ್ನು 'ಪರಿದಟ್ಟಿ' ಓಡಿಸುತ್ತಾರೆ. ಬಸದಿಗಳೊಳಗೆ ನುಗ್ಗಿ ಜಿನಪ್ರತಿಮೆಗಳನ್ನೆಲ್ಲಾ ಕಿತ್ತು ಬಿಸಾಡುತ್ತಾರೆ. ಆ ಉತ್ಸಾಹದಲ್ಲಿ ಶರಣಪಡೆ 'ನಲಿನಲಿದು ನೆಗೆನೆಗೆದು' ನಿಂತು ಆಡತೊಡಗುತ್ತದೆ. ಅವರನ್ನೆಲ್ಲಾ ಈಕ್ಷಿಸುತ್ತಾ ನಿಂತ ರಾಮಯ್ಯ ಆನಂದದಿಂದ ಶಿವಲಿಂಗಗಳನ್ನು ಧರಿಸಿ 'ನಾನಾ ಮುಹೂರ್ತದಿಂದಂ ಲಿಂಗವಂ ಇರಿಸಿ' ಲಿಂಗ ಪ್ರತಿಷ್ಠೆಯನ್ನು ಮಾಡುತ್ತಾನೆ. ಹೀಗೆ ಇಡೀ ಸವಣ ಸಮೂಹ ತಾವು ಮಾಡಿದ ಕುಹಕಗಳಿಂದಾಗಿ ಸರ್ವನಾಶಹೊಂದಿ, ಅಬ್ಬಲೂರಿನಲ್ಲಿ ಮತ್ತೆ ಶಿವನ ಪ್ರತಿಷ್ಠಾಪನೆಯಾಗುತ್ತದೆ.

ಒಟ್ಟಿನಲ್ಲಿ ವೀರರಸದ ತೀಕ್ಷ್ಣತೆ ಹಾಗೂ ಭಾವಾವೇಶದ ಕೆಚ್ಚು ಈ ರಗಳೆಯ ಮುಖ್ಯಶಕ್ತಿ. ಮಾತಿಗೆ ಮಾತು ಬೆಳೆದು ಕಲಹದ ಕಿಡಿಗೆದರಿ, ಸನ್ನಿವೇಶ ಕಾವೇರುವಂತೆ ನಿರೂಪಿಸುವ ಕವಿಯ

ಕಲೆ ಇಲ್ಲಿ ಯಶಸ್ವಿಯಾಗಿದೆ. ಏಕಾಂತರಾಮಯ್ಯ ತನ್ನ ತಲೆಯನ್ನು ಕಡಿದಿಡುವ ಸನ್ನಿವೇಶ ರೋಮಾಂಚಕಾರಿಯಾಗಿದೆ. ಮತೀಯ ಘರ್ಷಣೆ ಎಂಬೊಂದು ಅಂಶವನ್ನು ಬದಿಗಿರಿಸಿ ರಸಿಕ ದೃಷ್ಟಿಯಿಂದ ಅವಲೋಕಿಸಿದಲ್ಲಿ, ಸ್ಫುಟವಾದ ವ್ಯಕ್ತಿತ್ವ ಚಿತ್ರಣ ಹಾಗೂ ಭಾವಾವೇಶದ ದೃಷ್ಟಿಯಿಂದ ಈ ಕೃತಿ ಮನಸೆಳೆಯಬಲ್ಲದು.

## 6.10 ಆದಯ್ಯನ ರಗಳೆ

ಹರಿಹರನಿಗೆ ಶಿವಮತವಲ್ಲದೆ ಬೇರೆ ಮತದ ಬಗ್ಗೆ ಸ್ವಲ್ಪವೂ ಗೌರವ ಇರಲಿಲ್ಲ. ಆತ ಅನ್ಯಮತಗಳ ಕಟ್ಟಾ ವಿರೋಧಿ. ಆದ್ದರಿಂದಲೇ ಆತನ ಅನೇಕ ರಗಳೆಗಳಲ್ಲಿ ಅನ್ಯಮತಗಳ ಬಗೆಗಿನ ರೊಚ್ಚು, ಆಕ್ರೋಶ, ಆವೇಶಗಳು ವ್ಯಕ್ತವಾಗಿವೆ. ಪ್ರಸ್ತುತ ಆದಯ್ಯನ ರಗಳೆಯಲ್ಲೂ ಹರಿಹರನ ಅನ್ಯಮತ ವಿರೋಧದ ಧೋರಣೆಯನ್ನು ಕಾಣಬಹುದು. ಇಲ್ಲಿ ಆದಯ್ಯ ಮತ್ತು ಜೈನ ಧರ್ಮೀಯರ ನಡುವಣ ಸಂಘರ್ಷದ ಚಿತ್ರ ಇದೆ. ಈ ಸಂಘರ್ಷವನ್ನು ಆದಯ್ಯ ಮತ್ತು ಪದ್ಮಾವತಿಯರ ಪ್ರೇಮದ ಮೂಲಕ ಕವಿ ಕಲಾತ್ಮಕವಾಗಿ ಚಿತ್ರಿಸುತ್ತಾನೆ.

ಮೂರು ಸ್ಥಲಗಳಲ್ಲಿ ಹರಡಿಕೊಂಡಿರುವ ಈ ಕಥೆಯನ್ನು ಆದಯ್ಯನ ಹುಟ್ಟು ಹಾಗೂ ಭಕ್ತಿ; ಆದಯ್ಯ ಮತ್ತು ಪದ್ಮಾವತಿಯರ ಪ್ರೇಮ ಹಾಗೂ ದಾಂಪತ್ಯ; ಆದಯ್ಯ ಮತ್ತು ಜೈನರ ಸಂಘರ್ಷ ಎಂದು ಮೂರು ಭಾಗಗಳಾಗಿ ವಿಂಗಡಿಸಿಕೊಂಡಿದೆ.

### 6.10.1 ಆದಯ್ಯನ ಹುಟ್ಟು ಹಾಗೂ ಭಕ್ತಿ

ಭಕ್ತ ಆದಯ್ಯ ಭೂಮಿಯ ಉತ್ತರ ಭಾಗದಲ್ಲಿದ್ದ ಶಿವಪುರದಲ್ಲಿ, ಶಿವಭಕ್ತ ಮತ್ತು ಶಿವಭಕ್ತೆಯರ ಮಗನಾಗಿ ಹುಟ್ಟುವುದಕ್ಕೆ ಮೊದಲು, ಶಿವನ ಆಸ್ಥಾನದ ಗಣ ಸಮೂಹದಲ್ಲಿ ಒಬ್ಬನಾಗಿದ್ದ. ಶಿವನ ಸಮ್ಮುಖದಲ್ಲಿ ಗಣ ಸಮೂಹವೆಲ್ಲ ನೆರೆದಿರುವ ಸಮಯದಲ್ಲಿ, ಸುರ ಕನ್ನೆಯೊಬ್ಬಳು ಪ್ರವೇಶಿಸುತ್ತಾಳೆ. ಆದಯ್ಯ ಸುರಕನ್ಯೆಯನ್ನು ನೋಡಿ ಕಾಮಾನುರಾಗಕ್ಕೆ ಒಳಗಾಗುತ್ತಾನೆ. ಸುರಕನ್ಯೆಯೂ ಆದಯ್ಯನನ್ನು ಬಯಸುತ್ತಾಳೆ. ಇದನ್ನೆಲ್ಲ ಗಮನಿಸುತ್ತಿದ್ದ ಶಿವ ಅವರಿಬ್ಬರನ್ನೂ ಕರೆದು, ನೀವಿಬ್ಬರೂ ಭೂಲೋಕದಲ್ಲಿ ಹುಟ್ಟಿ 'ಕಾಮನನೇಳಿಪ ಸುಖಮಂ ಧರಿಯಿಸಿ' ಬರುವುದೆಂದು ಆದೇಶಿಸುತ್ತಾನೆ. ಶಿವನ ಆಜ್ಞೆಯಿಂದ ಆದಯ್ಯ ವಿಚಲಿತನಾಗುತ್ತಾನೆ. ಭೂಲೋಕದ ದುರಾಚಾರಗಳನ್ನೆಲ್ಲ ಬಲ್ಲ ಆದಯ್ಯ "ಕಾಮಂ ಕ್ರೋಧಂ ಪಿರಿದಾ ಧರೆಯೊಳು 'ವ್ಯಾಮೋಹಂ ಪಿರಿದವನೀ ತಳದೊಳು 'ವಂಚನೆಯುಂ ಡಂಬುಂ ಪುಸಿಯುವ ನಿಯೊಳು ಸಂಚಿತ ಪಾಪಂಗಳುಂಟವರೊಳು"[102] ಎಂದು ಶಿವನನ್ನು ಭೂಮಿಗೆ ಕಳುಹಿಸದಿರುವಂತೆ ಭೂಮಿಯ ದೋಷಗಳನ್ನು ಹೇಳಿ ಪ್ರಾರ್ಥಿಸಿಕೊಳ್ಳುತ್ತಾನೆ; ಆದರೂ ಶಿವ ಒಪ್ಪುವುದಿಲ್ಲ. ಆದಯ್ಯನನ್ನು ಭೂಮಿಗೆ ಕಳುಹಿಸುವುದರಲ್ಲಿ ಆತನಿಗೊಂದು ಉದ್ದೇಶವಿದೆ. ಅದೆಂದರೆ, ಸವಣರ ಸರ್ವನಾಶ. ಭೂಮಂಡಲದಲ್ಲಿ ಈ ಸವಣರ ಪ್ರಾಬಲ್ಯ ಹೆಚ್ಚಾಗಿ ಶಿವನ ವರ್ಚಸ್ಸು ಕಡಿಮೆಯಾಗತೊಡಗಿದೆ. ಎಲ್ಲೆಲ್ಲೂ ಅಂಧಕಾರ ತುಂಬಿದೆ. ಅವರ ಸರ್ವನಾಶವಾಗದೆ ಶಿವಧರ್ಮ ಉದ್ಧಾರ ಸಾಧ್ಯವಿಲ್ಲ.

ಅದಕ್ಕಾಗಿ ಒಬ್ಬನನ್ನು ನೇಮಿಸುವುದು ಅಗತ್ಯವಿದೆ. ಅದಕ್ಕೆ ಸೂಕ್ತ ವ್ಯಕ್ತಿ ಆದಯ್ಯ. ಆದ್ದರಿಂದ ಜೈನರನ್ನು ಸಂಹರಿಸಿ ಶಿವಧರ್ಮವನ್ನು ಮತ್ತೆ ಬೆಳಕಿಗೆ ತರುವ ಹೊಣೆಯನ್ನು ಆದಯ್ಯನಿಗೆ ವಹಿಸಿ 'ನಿನಗಂಜಲೇಕಾನೇ ರಕ್ಷಿಸಿ ನಡೆಯಿಸುವೆಂ' ಎಂದು ಧೈರ್ಯ ತುಂಬಿ ಆದಯ್ಯ ಭೂಲೋಕದಲ್ಲಿ ಹುಟ್ಟುವಂತೆ ಮಾಡುತ್ತಾನೆ. ಅದರಂತೆ ಆದಯ್ಯ ಶಿವನಾಜ್ಞೆಯನ್ನು ಹೊತ್ತು, ಜೈನರನ್ನು ಸಂಹರಿಸಿ ಶಿವಧರ್ಮವನ್ನು ಸ್ಥಾಪಿಸುವ ಉದ್ದೇಶದಿಂದ, ಭೂಮಿಯ ಮೇಲೆ ಜನಿಸುವನು.

ಶಿವನ ಆಜ್ಞೆಯನ್ನು ಹೊತ್ತು ಬಂದ ಆದಯ್ಯನಿಗೆ ಸಹಜವಾಗಿ ಹುಟ್ಟಿನಿಂದಲೇ ಶಿವ ಭಕ್ತಿ ಬೆಳೆಯಿತು. ಶಿವನಣುಗನಾದ ಅವನು ಸದಾ ಶಿವಧ್ಯಾನದಲ್ಲಿಯೇ ಬೆಳೆಯ ತೊಡಗಿದನು. ಆತ ಶಿವನಿಂದೆಯನ್ನು ಎಂದೂ ಸಹಿಸಿದವನಲ್ಲ. ಶಿವನಿಂದೆಗೈದವರನ್ನು ಮುಗಿಸಲೂ ಹೆದರಿದವನಲ್ಲ. ಒಮ್ಮೆ, ಇಂಥ ಛಲವುಳ್ಳ ಆದಯ್ಯ ತಾನು ಪೂಜಿಸುವ ಸೋಮನಾಥನನ್ನು ಸುರಹೊನ್ನೆಯ ಬಸದಿಗೆ ತರದೆ ಊಟ ಮಾಡುವುದಿಲ್ಲ ಎಂದು ಅವನ ಮಾವ ಕಟಕಿಯಾಡುತ್ತಾನೆ. ಆ ಮಾತಿಗೆ "ಕೇಳ ಕೇಳ ಮರುಳ ಜೈನ ನೀಂ ಪ್ರತಿಯಲ್ಲಂ ನಿನ್ನ ಮನವಂ ಪ್ರೇರಿಪನೀಶ್ವರಂ ನೀನೆಂದಂತೆ ನಿನ್ನ ಜಿನಪ್ರತಿಮೆಯನೆರಳ್ಕಾಗವಂ ಮಾಡಿ ಸೌರಾಷ್ಟ್ರದೊಡೆಯನಂ ಬಿಜಯಂಗೆಯ್ಸಿ ತಂದಲ್ಲದೂಟವಿಲ್ಲ"[103] ಎಂದು ಗುಡುಗುತ್ತಾನೆ. ಅದರಂತೆ ಆತ ಸೋಮನಾಥನನ್ನು ಪುಲಿಗೆರೆಗೆ ಕರೆತರಲು ಅವನಿರುವ ಕಡೆ ಹುಡುಕಿ ಹೊರಡುತ್ತಾನೆ. ಹೋಗುವಾಗ "ನಡೆದು ಬರುತ್ತಂ ಗಿಡವುಂ ಮುಳ್ಳುಂ ಮೆಳೆಯುಂ ಸರಿಯುಂ ದರಿಯುಂ ಹಳ್ಳಂ ಕೊಳ್ಳಂ ನದಿನದಂ ಕಱೆ ತೊಱೆ ಬೆಟ್ಟ ಘಟ್ಟಂಗಳೆನ್ನದೆ ಹುಲಿ ಕರಡಿ ಸರ್ಪಸಮ್ಮಾವು ಕಾಡುಕೋಣಂ ಕರಿ ಮೃಗಪತಿ ಶರಭ ಶಾರ್ದೂಲ ಪುರುಷಾಮೃಗಂಗಳಂ ಲೆಕ್ಕಿಸದೆ ಮಳೆಗಾಳಿ ಶೀತಾತಪ ಕಡುಗಾಳಂ ಗುಹೆಗಹ್ವರವಿರುಳ್ಪಗಲ್ಪಸಿವು ನಿದ್ರೆ ಪಿಪಾಸೆಗಳಂ ಕೈಕೊಳ್ಳದೆ ನಡೆಯಲಂಗಾಲಂ ಮೊಗೆಗಲ್ಲುಗಳೊತ್ತೆ ಹಲ್ಲಯಿಸಿ ಬಿರಿದು ಬಿಸಿನೆತ್ತರ್ಜಿಗಿಲ್ತು ರಕ್ತಪಂಕದಿಂ ಮುಳ್ಳು ಕಡ್ಡಿ ಕಸಂ ದಸಿಗಳ್ಪತ್ತಿ ಮುತ್ತಿದಡಂ ಕರಯುಗಮಂ ಬೀಸಿ ಘಾಸಿಯಾಗಿ ಲೋಳರಕ್ತಂ ಜಾಳಿಸುತ್ತಿಳಿದಂಗುಳಿಗಳ್ ಕೆಂಗಲ್ಮಸಗೆ ತೂಗಿ ಬೀಗಿ ದಡ ದೋರಂತೆ ನೆತ್ತರ್ಧಾರೆಯಿಟ್ಟಡಂ ಹಸಿವು ತೃಷೆಗಳಿಂ ಬಸುರ್ವತ್ತಿ ಬಾಯಿಬತ್ತಿ ಬಡಕರಿಸಿ ಪಲ್ತೋಱಿ ಬೆನ್ನು ಕೂನುತ್ತಮೊಗವೊಣಗಿ ಕಣ್ಕಂದಿ ಕಾವುಳಂ ಕವಿದಡಂ ಸೋಮನಾಥನ ದರ್ಶನ ಭರಭರಿತಂ ಸರ್ವಾಂಗವಂ ಬಗೆಗೊಳ್ಳದೆ ಭಾವಿಸದೆ ಸರ್ಪಭೂಷಣಧ್ಯಾನದಿಂದಿಪ್ಪತ್ತೆಂಟು ದಿವಸಮೀತೆರದೊಳಾತುರದಿಂ."[104] ಹೀಗೆ ನರಕಯಾತನೆ ಅನುಭವಿಸುತ್ತಾನೆ. ಆದರೂ ಆತನಲ್ಲಿ ಶಿವಭಕ್ತಿಯ ಹಸಿವು ಕುಂದುವುದಿಲ್ಲ. ಮುಂದೆ ಹೋಗುತ್ತಿದ್ದಂತೆ ಅವನಿಗೆ ಸೋಮನಾಥನ ದರ್ಶನವಾಗುತ್ತದೆ. ಕೂಡಲೇ ನಮಸ್ಕರಿಸಿ "ತಂಡವ ಪುಳಕವನಂಗದೊಳಿಡಿದಂ, ಅಧ್ವಶ್ರಮಮಂ ಕಳೆದಂ ಸಾಧ್ವಿಯೆನಿಪ ಭಕ್ತಿಯನುರೆತಳೆದಂ, ನಿಂದಿರ್ದಂ ಕೈಮುಗಿದಗಿ ದಗಿದಂ, ಇಂದುಧರನ ವೀಕ್ಷಿಸುತ್ತೊಳಸುಗಿದಂ, ದೇವಮುನ್ನಿನತೇಜದಿಂದಿರ್ಪುದು, ದೇವಾ ನೋಡುವಡೆ

ನಗರಿವಪ್ಪುದು"[105] ಎಂದು ಶಿವನನ್ನು ಪ್ರಾರ್ಥಿಸತೊಡಗುತ್ತಾನೆ. ಆದಯ್ಯನ ಭಕ್ತಿ, ನಿಷ್ಠೆ, ಶಿವನ ಹಂಬಲ, ಕೋರಿಕೆಗಳನ್ನು ಈ ಭಾಗಗಳು ಅಷ್ಟೇ ಸಮರ್ಥವಾಗಿ ನಿರೂಪಿಸುತ್ತವೆ.

## 6.10.2 ಆದಯ್ಯ-ಪದ್ಮಾವತಿಯರ ಪ್ರೇಮ ಹಾಗೂ ದಾಂಪತ್ಯ

ಶಿವನನ್ನು ನೋಡಲು ಕಣ್ತೆರೆದ ಆದಯ್ಯ ಸಂಸಾರದ ಸವಿಗಾಣುತ ಹಂಸ ಬೆಳೆಯುವಂತೆ ಬೆಳೆಯುತ್ತಾನೆ. ಗುರುಕುಲವೂ ಒದಗುತ್ತದೆ. ಸೋಮಯ್ಯನೇ ತನ್ನ ಗುರುವೆಂದು ಅರಿತ ಮೇಲೆ ನಿತ್ಯವೂ ನೇಮ ಮಾಡುತ್ತಾ ಶಿವಸುಖದಲ್ಲಿಯೇ ಓಲಾಡುತ್ತಾನೆ. ಯೌವನ ಬಲಿಯುಸಿದಂತೆಲ್ಲಾ ಹರಭಕ್ತಿಯೂ ಪುಟವೇಳುತ್ತದೆ. ವ್ಯವಹಾರದಲ್ಲಿಯೂ ಚತುರನಾಗುತ್ತಾನೆ. ಇತ್ತ ಸುರಕನ್ಯೆಯಾದ ಪದ್ಮಾವತಿ ಪುಲಿಗೆರೆಯ ಬಸದಿಯೊಂದರಲ್ಲಿ ಅರುಹಂತನನ್ನು ಅರ್ಚಿಸುವ ಪೂಜಾರಿಯಾದ ಪಾರಿಷಪಂಡಿತನ ಲಲನೆಯ ಹೊಟ್ಟೆಯಲ್ಲಿ ಪಂಕಜದಂತೆ, ಕೆಸರಿನಲ್ಲಿದ್ದೂ ಇಲ್ಲದಂತೆ ಜನಿಸುತ್ತಾಳೆ. ಶೈಶವವನ್ನು ಕಳೆದು 'ಶಶಿಕಳೆಯಂದದೆ ಕೌಮುದಿ ಯುಂದವೆ', ಬೆಳೆಯುತ್ತಾಳೆ. ನಡೆನುಡಿಗಳು ಕಿರಿದಾಗುತ್ತವೆ. ಮುಡಿ ಮೊಲೆ ಜಘನಗಳು ಹಿರಿದಾಗುತ್ತವೆ. ಸೌಂದರ್ಯ ತುಂಬಿ ನಳನಳಿಸುತ್ತಾಳೆ. ಅವಳ ಸೌಂದರ್ಯಕ್ಕೆ 'ಅವ್ವಳಿ'ಸುವ ವಿಟರ ಎದೆ ನಡುಗುತ್ತದೆ. ತಾಯಿತಂದೆಯರಿಗೂ ಮಗಳ ಮದುವೆಯ ಚಿಂತೆ ಕಾಡುತ್ತದೆ. ಹೀಗೆ ಆದಯ್ಯ ಪದ್ಮಾವತಿ ಇಬ್ಬರೂ ಸರ್ವಾಂಗ ಸುಂದರವಾಗಿ ಶೋಭಿಸುತ್ತಿರುತ್ತಾರೆ.

ವ್ಯಾಪಾರದ ಉದ್ದೇಶದಿಂದ ಪುಲಿಗೆರೆಗೆ (ಪದ್ಮಾವತಿಯ ಊರು) ಬಂದಿದ್ದ ಆದಯ್ಯ, ಪುಲಿಗೆರೆಯನ್ನು ನೋಡುವ ಉದ್ದೇಶದಿಂದ ಪುರಬೀದಿಗಳನ್ನು ವೀಕ್ಷಿಸುತ್ತಾ ಬರುತ್ತಿರುತ್ತಾನೆ. [ಇಂಥದ್ದೇ ಒಂದು ಸಂದರ್ಭ ಅಕ್ಕಮಹಾದೇವಿ ಮತ್ತು ಕೌಶಿಕರ ಪ್ರೇಮ ಸಂದರ್ಭದಲ್ಲಿ ನಡೆಯುತ್ತದೆ]. ಹಾಗೆ ಬರುವಾಗ ಪದ್ಮಾವತಿಯನ್ನು ಕಂಡು ಅವಳ ಸೌಂದರ್ಯರಾಶಿಗೆ ಸೋಲುತ್ತಾನೆ. ಪದ್ಮಾವತಿಯೂ ಆದಯ್ಯನ ಪ್ರೇಮ ಪಾಶಕ್ಕೆ ಸಿಲುಕುತ್ತಾಳೆ. ಇಬ್ಬರಲ್ಲೂ ಮೂಡಿದ ಪ್ರೇಮವನ್ನು ಕಂಡ ಮಿತ್ರ ಜನರು 'ಕಮಳಾಕರಕ್ಕೆ ಹಂಸಮಿಥುನಂಗಳಂತಪ್ಪಂತೆ' ಇಬ್ಬರನ್ನೂ ತಂದು ಪದ್ಮಾವತಿಯ ಸೆಜ್ಜೆಮನೆಯ 'ಮೃದುತರ ಹಂಸತೂಲತಲ್ಪ'ದಲ್ಲಿ ಇರಿಸುತ್ತಾರೆ. ಪದ್ಮಾವತಿ ಆದಯ್ಯ ಇಬ್ಬರೂ ಗಾಢಾಲಿಂಗನದ ಮುತ್ತಿಗೆಯಲ್ಲಿ ಸಮಸುಖ ಸಾರ್ವಭೌಮರಾಗಿ ಹಲವು ಸಂವತ್ಸರಗಳನ್ನು ಕಳೆಯುತ್ತಾರೆ.

ಆದಯ್ಯ ಮತ್ತು ಪದ್ಮಾವತಿಯರ ಈ ಪ್ರೇಮ ಅತ್ಯಂತ ಆದರ್ಶವಾದದ್ದು. ಇಬ್ಬರೂ ಅಪರಿಚಿತರು. ಬೇರೆ ಬೇರೆ ಕಡೆಯಿಂದ ಹಾಗೂ ಧರ್ಮಗಳಿಂದ ಬಂದವರು (ಆದಯ್ಯ ಶಿವಭಕ್ತನಾದರೆ ಪದ್ಮಾವತಿ ಜೈನರವಳು) ಇವರ ಪ್ರೇಮದ ನಡುವೆ ಯಾರ ಪ್ರವೇಶವೂ ಇಲ್ಲ. ತಮ್ಮನ್ನು ತಾವೇ ಗುರುತಿಸಿಕೊಂಡು ದಾಂಪತ್ಯ ನಡೆಸುತ್ತಿದ್ದಾರೆ. ಅವರಿಬ್ಬರಲ್ಲೂ ಪರಸ್ಪರ ಪ್ರೀತಿ ಕೊಡು-ಕೊಳ್ಳುವಿಕೆಗಳು ಸಮಸಮವಾಗಿ ಯಾವ ಅಡ್ಡಿ-ಆತಂಕಗಳೂ ಇಲ್ಲದೆ ನೆರವೇರುತ್ತಿವೆ.

ಜಾತಿ, ಮತ, ಕುಲ, ಗೋತ್ರಗಳನ್ನು ನೋಡದೆ ಗಂಡು ಹೆಣ್ಣುಗಳು ಪರಸ್ಪರ ಪ್ರೀತಿಸಿ ಮದುವೆಯಾಗಬೇಕೆಂಬುದು ಹರಿಹರನ ಆಶಯ. ಅದರಂತೆ ವಿವಿಧ ಕುಲ ಗೋತ್ರಗಳಿಂದ

ಬಂದ ಆದಯ್ಯ ಪದ್ಮಾವತಿಯರ ಮದುವೆಯನ್ನು ತನ್ನ ಕಾವ್ಯದಲ್ಲಿ ಚಿತ್ರಿಸಿದ್ದಾನೆ. ಕಾವ್ಯದ ಈ ಭಾಗ ಎಷ್ಟೇ ಅಂದವಾಗಿ ಮೂಡಿಬಂದಿದ್ದರೂ ಸಹಜತೆಯಿಂದ ದೂರ ಸರಿದಿದೆ ಎನ್ನಬಹುದು. ಕವಿ ಹೊಸ ಬದುಕಿನ ಅನ್ವೇಷಣೆಯ ಹಾದಿಯಲ್ಲಿ ಎದುರಾಗಬಹುದಾದ ದುರಂತಗಳನ್ನು ಗಮನಿಸುವ ಕೆಲಸ ಮಾಡುವುದಿಲ್ಲ. ಏಕೆಂದರೆ 12ನೆ ಶತಮಾನದ ಅಂಥ ಸಮಾಜದಲ್ಲಿ ಪ್ರೇಮ ವಿವಾಹವಾಗಲೀ, ಅಂತರ್ಜಾತೀಯ ಮದುವೆಯಾಗಲಿ ನಡೆಯುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಇದಕ್ಕೆ ಹರಳಯ್ಯ ಮಧುವರಸರ ಮಕ್ಕಳ ಘಟನೆಯೇ ಸಾಕ್ಷಿ. ಅಂಥದ್ದರಲ್ಲಿ ಬೇರೆ ಬೇರೆ ಸಮುದಾಯಗಳಿಂದ ಬಂದ ಆದಯ್ಯ ಪದ್ಮಾವತಿಯರು ಪರಸ್ಪರ ಬೆರೆತಾಗ ಯಾವ ಚಕಾರಗಳು ಯಾರಿಂದಲೂ ಬಂದಿಲ್ಲ ಎನ್ನುವುದಾದರೂ ಹೇಗೆ? ವಾಸ್ತವವಾಗಿ ಆದಯ್ಯ -ಸವಣರ ಘರ್ಷಣೆ ಇಲ್ಲಿಂದಲೇ ಆರಂಭವಾಗಬೇಕಿತ್ತು. ಆದರೆ ಹರಿಹರ ಇಂಥದ್ದೊಂದು ಸಂದರ್ಭವನ್ನು ಮರೆಮಾಚುತ್ತಾನೆ.

ಕಾವ್ಯದಲ್ಲಿ ಪದ್ಮಾವತಿ ಆದಯ್ಯರ ದಾಂಪತ್ಯ ಬದುಕು ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಪದ್ಮಾವತಿ ಜೈನರವಳಾದರೂ ತನ್ನ ಜೈನತ್ವವನ್ನು ಎಂದೂ ಪ್ರದರ್ಶಿಸಿದವಳಲ್ಲ. ಕಥೆಯ ಉದ್ದಕ್ಕೂ ಆದರ್ಶ ಗೃಹಿಣಿಯಾಗಿ ಕಾಣಿಸಿಕೊಳ್ಳುತ್ತಾಳೆ. ಗಂಡನ ಆಗುಹೋಗುಗಳಲ್ಲಿ ಭಾಗಿಯಾಗುತ್ತಾಳೆ. ಎಂತಹ ಸಂದರ್ಭದಲ್ಲೂ ಗಂಡನೊಡನೆ ಅಸಭ್ಯವಾಗಿ ವರ್ತಿಸಿದಂತೆ ಕಂಡುಬರುವುದಿಲ್ಲ. ಅಂತೆಯೇ ಆದಯ್ಯನೂ ಹೆಂಡತಿಯೊಡನೆ ಅಷ್ಟೇ ಪ್ರೀತಿಯಿಂದ ಬಾಳುತ್ತಾನೆ. ಅವನು ನುಡಿದಂತೆ ನಡೆವ, ನಡೆದಂತೆ ನುಡಿವ ಸುಂದರ ವ್ಯಕ್ತಿತ್ವ ಅವಳದು. "ಅವಳಿಗೆ ತಂದೆತಾಯಿಯರ ಮಾನಕ್ಕಿಂತ ಗಂಡನ ಮೇಲಿನ ಅಭಿಮಾನವೂ ಪ್ರೀತಿಯೂ ಅಧಿಕವಾದವು. ಗಂಡನಿಗುಂಟಾದ ಕೋಪವನ್ನು ನೋಡಿ ಪ್ರತಿಭಟಿಸದೇ ನಿಲ್ಲುತ್ತಾಳೆ. ಗಂಡನು ಉಣ್ಣದೇ ಮಲಗಿದಾಗ ಎಬ್ಬಿಸುತ್ತಾಳೆ. ಆದಯ್ಯನು ಪ್ರತಿಜ್ಞೆ ಮಾಡಿ ಹೊರಟಾಗ ತಾನೂ ಹೊರಡಲಣಿಯಾಗುತ್ತಾಳೆ. ಆದಯ್ಯನ ಅಪ್ಪಣೆಯ ಮೇರೆಗೆ ಪುಲಿಗೆರೆಯಲ್ಲಿಯೇ 'ಅನಶನವ್ರತ'ಧಾರಿಯಾಗಿ ಆದಯ್ಯನಿಗೆ ಧರ್ಮರಕ್ಷೆಯಾಗಿ ಕೆಲಸ ಕೈಗೊಳ್ಳುತ್ತಾಳೆ."[106] 'ಅನಶನವ್ರತ'ಧಾರಿಯಾಗಿ ಹೊರಟ ಆದಯ್ಯನಿಗೆ ಪತ್ನಿಯ ಮಾತುಗಳೇ ದಾರಿ ದೀವಿಗೆ. ಶಿವಲಿಂಗ ಸ್ಥಾಪನೆಯ ಕಾಲದಲ್ಲಿ ಗಂಡನು ಪರಮತೀಯರೊಡನೆ ಹೋರಾಡುವಾಗ ತಾನೂ ನೆರವಾಗುತ್ತಾಳೆ. "ಅವಳು ರೂಪದಲ್ಲಿ ಸುವರ್ಣದ ಪುತ್ಥಳಿ; ಸಮಯವನ್ನರಿತು ಮಾತನಾಡುವ ವಿವೇಕಿ; ನೀತಿಯಲ್ಲಿ ಉತ್ತಮ ಸಾಧ್ವಿ. ಅವಳ ಸಹಕಾರದಿಂದಾಗಿಯೇ ಆದಯ್ಯ ಮಹಾಕಾರ್ಯಗಳನ್ನು ನೆರವೇರಿಸಿದ."[107] ಹೀಗೆ ಹರಿಹರ ತನ್ನ ಕಾವ್ಯದಲ್ಲಿ ಆದಯ್ಯ ಮತ್ತು ಪದ್ಮಾವತಿಯರ ಪ್ರೇಮದ ಬದುಕನ್ನು ಚಿತ್ರಿಸುತ್ತಾನೆ.

### 6.10.3 ಆದಯ್ಯ ಮತ್ತು ಜೈನರ ಸಂಘರ್ಷ

ಕೊಲೆ ಸುಲಿಗೆಯಂಥ ಹಿಂಸಾಮಾರ್ಗಗಳು ಯಾವುದೇ ಸಮಸ್ಯೆಗಳಿಗೆ ಪರಿಹಾರ ವಾಗುವುದಿಲ್ಲ. ಆಕಸ್ಮಿಕವಾಗಿ ಸಿಕ್ಕಿದರೂ ಅದು ತಾತ್ಕಾಲಿಕವಾದುದಾಗಿರುತ್ತದೆ. ಆದ್ದರಿಂದ ವಿವೇಕ ಇರುವ ವ್ಯಕ್ತಿ ಇಂಥ ಮಾರ್ಗಗಳಿಂದ ಸಮಸ್ಯೆಗಳಿಗೆ ಪರಿಹಾರವನ್ನು ಬಯಸುವುದಿಲ್ಲ.

ಆದರೆ ಕೆಲವೊಂದು ಸಮಯ ಹಾಗೂ ಸನ್ನಿವೇಶಗಳು; ಮನುಷ್ಯ ಅದೆನಿಷ್ಟೇ ತಾಳ್ಮೆಯ ವ್ಯಕ್ತಿಯಾಗಿದ್ದರೂ ಆ ತಾಳ್ಮೆಯನ್ನು ಕೆಣಕಿ ಹಿಂಸಾಮಾರ್ಗವನ್ನು ಹಿಡಿಯುವಂತೆ ಮಾಡುತ್ತವೆ. ಇಂಥದೊಂದು ಸನ್ನಿವೇಶ ಈ ರಗಳೆಯಲ್ಲಿ ಬರುತ್ತದೆ. ಇಲ್ಲಿ ಬರುವ ಸವಣರೇ ಕೆಣಕುವ ವ್ಯಕ್ತಿತ್ವದವರು. ವಾಸ್ತವವಾಗಿ ಆದಯ್ಯನ ವ್ಯಕ್ತಿತ್ವವೇ ತಾಳ್ಮೆಯದು. ಎರಡು ಸಾರಿ ಸವಣರು ಕೆಣಕಿದಾಗಲೂ ಆತ ಸಿಟ್ಟಾದವನಲ್ಲ. ಆದರೆ ಸವಣರು ಮತ್ತೆ ಮತ್ತೆ ಕೆಣಕುವುದನ್ನು ಮುಂದುವರಿಸಿದಾಗ ಆದಯ್ಯನಿಗೆ' ಹಿಂಸೆಯಲ್ಲದೆ ಮಾರ್ಗವಿರಲಿಲ್ಲ. ಹಾಗಾಗಿ ಆತ ಹಿಂಸೆಯಲ್ಲಿ ತೊಡಗಿದ. ತಮ್ಮ ಕೆಣಕುವ ಬುದ್ಧಿಯಿಂದಾಗಿ ಸವಣರೂ ನಾಶವಾದರು. ಕಥೆಯಲ್ಲಿ ಬರುವ ಒಂದೆರಡು ಘಟನೆಗಳನ್ನು ಸವಣರ ಕೆಣಕು ಬುದ್ಧಿಗೆ ಉದಾಹರಿಸಬಹುದು.

ಮೊದಲನೆಯದು: ಆದಯ್ಯ ತಪೋಧನರಿಗಾಗಿ ಮಾಡಿಸಿಟ್ಟ ಅಡುಗೆಯನ್ನು ಪಾರಿಷ ಪಂಡಿತನು (ಪದ್ಮಾವತಿಯ ತಂದೆ, ಜೈನ) ಪದ್ಮಾವತಿ ತಡೆದರೂ ಲೆಕ್ಕಿಸದೆ ತೆಗೆದುಕೊಂಡು ಹೋಗಿ ಋಷಿಗಳಿಗೆ ಬಡಿಸಿದ್ದು. ಅದನ್ನು ಕವಿ "ಕರೆದು ಕೆಸಱ ಕೊಱತೆಗೆ ಕತ್ತುರಿಯಂ ಕೊಳುವಂತೆ ಸುಣ್ಣದ ಕೊಱತೆಗೆ ಬೆಣ್ಣೆಯಂ ಬಳಸುವಂತೆ ಬೇಲಿಯ ಕೊಱತೆಗೆ ಕಲ್ಪತಱುವಂ ತಱಿವಂತೆ ಪದ್ಮಾವತಿಯಂ ಬೋನಮಂ ಬೇಡೆ ಪದ್ಮಾವತಿ ನಡನಡಂ ನಡುಗಿ ಬೇಡಬೇಡ ಕೊಡುವುದಿಲ್ಲೆಂದು ಬಾಗಿಲೊಳ್ನಿಲೆ ಚಂದ್ರ ಕಳೆಯಂ ರಾಹು ಪಿಡಿವಂತೆ ಪಿಡಿದು ಒಳಪೊಕ್ಕು ಕೊಂಡು ಪೋಗಿ ಸುರಹೊನ್ನೆಯ.........ಪೊಱಮಡುವ ಸಮಯದೊಳ್"[108] ಎಂದು ಚಿತ್ರಿಸುತ್ತಾನೆ. ಇಲ್ಲಿ ಕವಿ ಜೈನರ ಸಣ್ಣತನವನ್ನು ಚೆನ್ನಾಗಿ ಹಿಡಿದಿಟ್ಟಿದ್ದಾನೆ. ಪದ್ಮಾವತಿ ತಮ್ಮ ಮಗಳು, ಆದಯ್ಯ ತಮ್ಮ ಅಳಿಯ ಎಂಬುದನ್ನೂ ಕಾಣದೆ ತಮ್ಮ ಮುಖದ ನೇರಕ್ಕೆ ನಡೆದುಕೊಳ್ಳುತ್ತಾರೆ. ಪದ್ಮಾವತಿ ಗಡಗಡನೆ ನಡುಗುತ್ತಾ ಬೇಡಬೇಡವೆಂದರೂ ಬಿಡದೆ, ಬಲವಂತವಾಗಿ ಕಿತ್ತೊಯ್ಯುವುದು ಅವರ ಅಮಾನವೀಯ, ಹೇಯ ವ್ಯಕ್ತಿತ್ವದ ಘೋರ ರೂಪ. ಅವರಲ್ಲಿ ಕಿಂಚಿತ್ತೂ ವಿನಯವಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಎರಡನೆಯದು : ಆದಯ್ಯ ಊಟವನ್ನು ತ್ಯಜಿಸಿದ್ದು. ತನಗಾದ ನೋವನ್ನು ವ್ಯಕ್ತಪಡಿಸಿ ಕೊಳ್ಳಲಾಗದ ಆದಯ್ಯ ಊಟ ಬಿಡುವುದು ಸಹಜವೇ ಆಗಿದೆ. ಅವನು ಊಟ ಬಿಡಲು ಕಾರಣ ಪಾರಿಷಪಂಡಿತ. ಆದ್ದರಿಂದ ಏನನ್ನಾದರೂ ಮಾಡಿ ಆದಯ್ಯ ಊಟ ಮಾಡುವಂತೆ ಮಾಡಬೇಕಾದದ್ದು ಅವನ ಕರ್ತವ್ಯವಾಗಿತ್ತು. ನೊಂದ ಮನಸ್ಸಿಗೆ ಶಾಂತಿಯನ್ನು ಹೇಳಬೇಕಾಗಿತ್ತು. ಹಾಗೆ ನಡೆದುಕೊಂಡಿದ್ದರೆ ಪಂಡಿತನ ವ್ಯಕ್ತಿತ್ವ ಹೆಚ್ಚುತ್ತಿತ್ತು. ಆದರೆ ಗರ್ವ ತುಂಬಿದ ಪಂಡಿತನಿಗೆ ಅದು ಹೇಗೆ ತಾನೇ ಸಾಧ್ಯ? ಅದಕ್ಕೆ ಬದಲಾಗಿ "ಇಂತಪ್ಪ ಛಲಿಯೆಂತಾದೊಡಂ ತಾನರ್ಚಿಪ ಸೋಮನಾಥನಂ ಸುರಹೊನ್ನೆಯ ಬಸದಿಗೆ ತಂದಲ್ಲ ದುಂಬನಲ್ಲ"[109] ಎಂದು ಕಟಕಿಯಾಡುತ್ತಾನೆ. ತಮ್ಮ ತಪ್ಪಿನಿಂದಾಗಿಯೇ ಆತ ಊಟ ಬಿಟ್ಟಿರುವುದು ಎಂದು ತಿಳಿದಾಗಲೂ ಹೀಗೆ ನಡೆದುಕೊಳ್ಳುವುದು, ಅವನ ದುರ್ಜನತೆಯ ಅತಿರೇಕವನ್ನು ವ್ಯಕ್ತಪಡಿಸುತ್ತದೆ.

ಒಟ್ಟಾರೆ ಹೇಳುವುದಾದರೆ ಇದೊಂದು ಮತೀಯ ಕಾವ್ಯ. ಹರಿಹರ ತನ್ನ ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುವುದಕ್ಕಾಗಿಯೇ ಪ್ರತಿಯೊಂದು ಸನ್ನಿವೇಶವನ್ನು ಸೃಷ್ಟಿಸಿದ್ದಾನೆ.

ಆದರೂ ಕಾವ್ಯದಲ್ಲಿ ಭಕ್ತಿ, ಪ್ರೇಮ, ವೀರತ್ವ, ಜೈನರ ದುರ್ನಡತೆಗಳು ಆಕರ್ಷಕವಾಗಿ ಮೂಡಿ ಬಂದಿವೆ.

## 6.11 ಹಾವಿನಹಾಳ ಕಲ್ಲಯ್ಯನ ರಗಳೆ

ಹರಿಹರನ ರಸಾತ್ಮಕ ರಗಳೆಗಳಲ್ಲಿ ಹಾವಿನಹಾಳ ಕಲ್ಲಯ್ಯನ ರಗಳೆಯೂ ಒಂದು. ಇದು ಕಲ್ಲಯ್ಯನ ಭಕ್ತಿ ಸಾಧನೆ ಮತ್ತು ಪರಿಶ್ರಮಗಳನ್ನು ಮನೋಜ್ಞವಾಗಿ ಚಿತ್ರಿಸುತ್ತದೆ. ಸಾಧಕನಿಗೆ ಸಾಧನೆಯ ಹಾದಿಯಲ್ಲಿ ನಡೆಯುವಾಗ ಎಡರು ತೊಡರುಗಳು ಎದುರಾಗುವುದು ಸಹಜ. ಆದರೆ ಸಾಧಕನಾದವನು ಅಂಥ ಕಷ್ಟಗಳು ಎದುರಾದಾಗ ಯಾವ ಕಾರಣಕ್ಕೂ ಎದೆಗುಂದಬಾರದು. ಹಾಗೆ ಎದೆಗುಂದದೆ ಮುನ್ನಡೆದಲ್ಲಿ ಆತ ಗುರಿ ತಲುಪುವುದರಲ್ಲಿ ಯಾವ ಅನುಮಾನವೂ ಇಲ್ಲ. ಅಂತೆಯೇ ಈ ರಗಳೆಯಲ್ಲಿ ಬರುವ ಕಥಾನಾಯಕನಾದ ಕಲ್ಲಯ್ಯ, ತನ್ನ ಸಾಧನೆಯ ಹಾದಿಯಲ್ಲಿ ಎದುರಾಗುವ ಎಲ್ಲ ಕಷ್ಟಗಳನ್ನು ಎದೆಗುಂದದೆ ಎದುರಿಸಿ ಕೊನೆಗೆ ಗುರಿ ತಲುಪುತ್ತಾನೆ. ಆತ ಯಾವ ಗಳಿಗೆಯಲ್ಲೂ ಶಿವನ ಮೇಲಿನ ನಂಬಿಕೆಯಿಂದ ದೂರ ಸರಿಯದೆ ತನ್ನ ಸರ್ವಸ್ವವನ್ನೂ ಅವನಿಗಾಗಿ ಮುಡಿಪಾಗಿಡುತ್ತಾನೆ. ಅನ್ಯಮತಾಭಿಮಾನಿಗಳ ಸೊಕ್ಕನ್ನು ಮುರಿದು ತನ್ನ ಮತದ ಘನತೆಯನ್ನು ಎತ್ತಿಹಿಡಿಯುತ್ತಾನೆ. ಆ ಮೂಲಕ ಶಿವಕೃಪೆಗೆ ಪಾತ್ರನಾಗುತ್ತಾನೆ. ಕಲ್ಲಯ್ಯನ ಸಾಧನೆಗಳೇ ಹಾವಿನಹಾಳ ಕಲ್ಲಯ್ಯನ ರಗಳೆಯ ಮುಖ್ಯಕಥಾವಸ್ತು.

ಕಲ್ಲಯ್ಯನ ಭಕ್ತಿಯ ಹಿರಿಮೆಯನ್ನು ಸಾರಲು ಕವಿ ಕೆಲವು ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ. ಈ ಸನ್ನಿವೇಶಗಳಲ್ಲಿ ಮೊದಲನೆಯದು, ಕಲ್ಲಯ್ಯನು ಕರುಳನ್ನು ಕಿತ್ತುಕೊಂಡು ಲಿಂಗವನ್ನು ಅಪ್ಪಿಕೊಳ್ಳುವ ಸನ್ನಿವೇಶ. ಒಮ್ಮೆ ಶಿವನಯ್ಯನು 'ಚೆಲ್ವುತ್ತರಿಗೆ' ಮಾಡಲು ಕಲ್ಲಯ್ಯನನ್ನು ಕರೆಯುತ್ತಾನೆ. ಎಷ್ಟು ಕರೆದರೂ ಕಲ್ಲಯ್ಯ ಶಿವನಯ್ಯನ ಕರೆಗೆ ಓಗೊಡುವುದಿಲ್ಲ. ಆಗ ಶಿವನಯ್ಯ ಸಂಪಾದನೆ ಹೋಗುವ ಸಿಟ್ಟಿನಲ್ಲಿ ಕಲ್ಲಯ್ಯನಿಗೆ ಚೆನ್ನಾಗಿ ಹೊಡೆಯುತ್ತಾನೆ. ತಂದೆಯಿಂದ ಪೆಟ್ಟುತಿಂದ ಕಲ್ಲಯ್ಯ ಶಿವಾಲಯಕ್ಕೆ ಹೋಗಿ ತನ್ನ ಕರುಳನ್ನು ಇರಿದುಕೊಂಡು ಶಿವಲಿಂಗವನ್ನು ಅಪ್ಪಿ ಮಲಗುತ್ತಾನೆ. ಬೆಳಿಗ್ಗೆ ಎಂದಿನಂತೆ ಪೂಜೆಗೆ ಬಂದ ಪೂಜಾರಿ ಕಲ್ಲಯ್ಯನ ಸ್ಥಿತಿಯನ್ನು ನೋಡಿ ಬೆದರುತ್ತಾನೆ, ಅಸಹ್ಯಪಡುತ್ತಾನೆ. ಕಲ್ಲಯ್ಯನ ತಂದೆ ತಾಯಿ ಮತ್ತು ಇತರರಿಗೆಲ್ಲಾ ಸುದ್ದಿ ಮುಟ್ಟಿಸುತ್ತಾನೆ. ಎಲ್ಲರೂ ಬಂದು ಕಲ್ಲಯ್ಯನ ಇರುವಿಕೆಯನ್ನು ನೋಡಿ ಮರುಕಪಡುತ್ತಾರೆ. ಚೆಲ್ಲಿದ ಕರುಳನ್ನು ಕಲ್ಲಯ್ಯನ ಹೊಟ್ಟೆಯಲ್ಲಿಟ್ಟು ಭಸಿತವನ್ನು ಸವರುತ್ತಾರೆ. ಹಾಗೆ ಸವರುತ್ತಿದಂತೆಯೇ ಕಲ್ಲಯ್ಯನ ದೇಹ ಜೀವ ಪಡೆಯುತ್ತದೆ. ಈ ಮಹಿಮೆಗೆ ನೆರೆದ ಜನ ಅಚ್ಚರಿಪಡುತ್ತಾರೆ.

ಇನ್ನೊಂದು ಸನ್ನಿವೇಶ ಕಲ್ಲಯ್ಯನಿಗೆ ಹಾವು ಕಚ್ಚುವಂತಹದ್ದು. ಒಮ್ಮೆ ಶಿವಪೂಜೆಯಲ್ಲಿ ಕಲ್ಲಯ್ಯ ನಿರತನಾಗಿರುವಾಗ ಹಾವೊಂದು ಹಿಂದಿನಿಂದ ಬಂದು ಕಚ್ಚುತ್ತದೆ. ಸಾಧಾರಣ ಭಕ್ತನಾಗಿದ್ದರೆ ಆ ಹಾವನ್ನು ಕೊಂದುಬಿಡುತ್ತಿದ್ದ, ಇಲ್ಲವೇ ಕೊಲ್ಲಿಸುತ್ತಿದ್ದ. ಆದರೆ ಕಲ್ಲಯ್ಯ ಹಾಗೆ ಮಾಡುವುದಿಲ್ಲ, ತನ್ನನ್ನು ಕಚ್ಚಿ ಸತ್ತ ಹಾವಿಗಾಗಿ ಮರುಕಪಡುತ್ತಾನೆ. ಮತ್ತೆ ಆ ಹಾವನ್ನು ಬದುಕಿಸುತ್ತಾನೆ.

ವಾಸ್ತವವಾಗಿ ಕಲ್ಲಯ್ಯ ವೈರಾಗ್ಯ ಬದುಕನ್ನು ಇಷ್ಟಪಟ್ಟವನು. ಒಮ್ಮೆ ಸಿದ್ಧರಾಮಯ್ಯ ಕಲ್ಲಯ್ಯನಿಗೆ ಮದುವೆ ಮಾಡಿಕೊಳ್ಳುವಂತೆ ತಿಳಿಸುತ್ತಾನೆ. ಆದರೂ ಒಪ್ಪದೆ ಕಲ್ಲಯ್ಯ ಸಾಂಸಾರಿಕ ಬದುಕನ್ನು ತಿರಸ್ಕರಿಸುತ್ತಾನೆ. ಅಂದಮಾತ್ರಕ್ಕೆ ಆತ ಸಂಸಾರವನ್ನು ಸಂಪೂರ್ಣವಾಗಿ ತ್ಯಜಿಸಿದ್ದ ಎಂದರೆ ತಪ್ಪಾಗುತ್ತದೆ. ಏಕೆಂದರೆ ಅವನು ಸಂಸಾರಿಯೂ ಆಗಿದ್ದು ದು ಉಂಟು. ಒಮ್ಮೆ ತನ್ನನ್ನು ಒಲಿದು ಬಂದ ಭಕ್ತೆಯೊಬ್ಬಳನ್ನು ಮೋಹಿಸಿ ಮದುವೆಯಾಗುತ್ತಾನೆ. ಕಲ್ಲವ್ವೆ ಎಂಬ ಮಗಳನ್ನು ಪಡೆಯುತ್ತಾನೆ. ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದದ್ದು, ಕಲ್ಲಯ್ಯ ತಿರಸ್ಕರಿಸಿದ್ದು ಲೌಕಿಕ ಸುಖ - ಭೋಗಗಳಿಂದ ತುಂಬಿದ ಸಂಸಾರವನ್ನೇ ಹೊರತು ಶಿವಭಕ್ತಿ ತುಂಬಿದ ಸಂಸಾರವನ್ನಲ್ಲ. ಸಂಸಾರದಲ್ಲಿ ಶಿವಭಕ್ತಿ ಇದ್ದಲ್ಲಿ ಅಂತಹ ಸಾಂಸಾರಿಕ ಬದುಕು ವರ್ಜ್ಯವೇನಲ್ಲ ಎಂಬುದು ಇಲ್ಲಿಯ ಸಾರ.

ಕಲ್ಲಯ್ಯ ಮತ್ತು ಸಿದ್ಧರಾಮರ ಭೇಟಿಯ ಸಂದರ್ಭವೂ ಕಲ್ಲಯ್ಯನ ಭಕ್ತಿಯನ್ನು ವ್ಯಕ್ತಪಡಿಸುವಲ್ಲಿ ಮುಖ್ಯವಾಗಿದೆ. ಈ ಎಲ್ಲವುಗಳಿಗಿಂತ ಮುಖ್ಯವಾದದ್ದು ಕಲ್ಲಯ್ಯನು ನಾಯಿಯಿಂದ ವೇದವನ್ನು ಓದಿಸುವ ಪ್ರಸಂಗ. ಈ ಪ್ರಸಂಗ ಕಲ್ಲಯ್ಯನ ಪಾರಮಾರ್ಥಿಕ ಬದುಕಿನ ಔನ್ನತ್ಯಕ್ಕೆ ಹಿಡಿದ ಕನ್ನಡಿ ಹಾಗೂ ಎಲ್ಲ ದೈವಗಳಿಗಿಂತಲೂ ಶಿವನೇ ಶ್ರೇಷ್ಠ ಎಂಬುದರ ಸಮರ್ಥ ಅಭಿವ್ಯಕ್ತಿ. ಈ ಪ್ರಸಂಗದಲ್ಲಿ ಕಲ್ಲವ್ವೆಯ ಕಾರಣಕ್ಕಾಗಿ ಬ್ರಾಹ್ಮಣರು ಮತ್ತು ಕಲ್ಲಯ್ಯನ ನಡುವೆ ವಾದ-ವಿವಾದಗಳು ನಡೆಯುತ್ತವೆ. ಆ ಸಂದರ್ಭದಲ್ಲಿ ಕಲ್ಲಯ್ಯ ಬ್ರಾಹ್ಮಣೋತ್ತಮ ಸೋಮಯಾಜಿಯನ್ನು ಶಿವಭಕ್ತರ ಮನೆಯ ನಾಯಿಯೂ ನಿಮ್ಮನ್ನು ಮುಟ್ಟುವುದಿಲ್ಲವೆಂದು ಹೀಯಾಳಿಸುತ್ತಾನೆ. ಆಗ ಸೋಮಯಾಜಿ ನಾವು ನಾಯಿಗಳಿಗಿಂತ ಕಡೆ ಎಂದ ಮೇಲೆ ನಾಯಿಯಿಂದ ವೇದವನ್ನು ಓದಿಸಿ, ಶಿವಭಕ್ತರು ಬ್ರಾಹ್ಮಣರಿಗಿಂತಲೂ ಶ್ರೇಷ್ಠರು ಎಂದು ಪ್ರಮಾಣೀಕರಿಸಲು ಕೇಳುತ್ತಾನೆ. ಆಗ ಕಲ್ಲಯ್ಯನು ಶುನಕವನ್ನು ಕರೆಯಿಸಿ "ಉಚ್ಚ ಲಿಂಗೋಚ್ಛಿಷ್ಟ ಭೋಗಿಯೇ ಉಚ್ಚರಿಸು 'ಉಚ್ಚ ಓಂಕಾರಾಂಕ ಯೋಗಿಯೇ ಉಚ್ಚರಿಸು' ಆವ ವೇದದೊಳೊಂದು ಠಾವ ಪೇಳು"[110] ಎನ್ನುತ್ತಾನೆ. ಹಾಗೆ ಹೇಳುತ್ತಿದ್ದಂತೆಯೇ ನಾಯಿ 'ವೇದಾಂತದೊಳಗುಳ್ಳ ಅರ್ಥನಿಚಯಂ'ಗಳನ್ನು ತನ್ನ ಚಾತುಃಶ್ರುತಿಗಳಿಂದ ವಿಸ್ತರಿಸುತ್ತದೆ. ನಾಯಿಯೊಂದು ವೇದ ಓದಿದ್ದನ್ನು ಕೇಳಿ ಬ್ರಾಹ್ಮಣರೆಲ್ಲರು ಬ್ರಾಹ್ಮಣತ್ವವನ್ನು ಕಳಚಿ ಶಿವ ಸ್ತೋತ್ರ ಮಾಡಿ, ಶಿವಭಕ್ತರಾಗುತ್ತಾರೆ. ಹೀಗೆ ಕಲ್ಲಯ್ಯ ಶಿವನ ಮಹತ್ವವನ್ನು ಎತ್ತಿ ಹಿಡಿಯುತ್ತಾನೆ.

ಒಟ್ಟಿನಲ್ಲಿ ಈ ರಗಳೆ ಕಲ್ಲಯ್ಯನ ಪಾರಮಾರ್ಥಿಕ ಜೀವನದ ವಿಕಾಸ ಮತ್ತು ಸಾಧನೆಯನ್ನು ಚೆನ್ನಾಗಿ ನಿರೂಪಿಸುತ್ತದೆ. "ತಂದೆ ಮಕ್ಕಳಲ್ಲಿ ನಡೆದ ವಿರಸ ಪ್ರಸಂಗ ನಾಟಕೀಯವಾಗಿದೆ. ಎರಡು ಭಿನ್ನ ಭಿನ್ನ ಸ್ತರಗಳಲ್ಲಿ ನಿಂತ ವ್ಯಕ್ತಿಗಳ ನಡುವಿನ ತಾಕಲಾಟ; ತಂದೆಯ ಲೌಕಿಕ ನಿಲುವನ್ನೂ ಮಗನ ಪಾರಮಾರ್ಥಿಕ ನಿಲುವನ್ನೂ ಯಶಸ್ವಿಯಾಗಿ ಚಿತ್ರಿಸುತ್ತದೆ. ಕಲ್ಲಯ್ಯ ಸಿದ್ಧರಾಮರ ನಡುವೆ ಇದ್ದಂತಹ ಅನ್ಯೋನ್ಯತೆ ಮನ ಸೆಳೆಯುವಂತಹದ್ದಾಗಿದೆ. ಕೆಲವು ಕ್ಷಣದಲ್ಲಿ ಮಾತ್ರ ಸುಳಿದು ಹೋಗುವ ಸಿದ್ಧರಾಮನ ನಿಲುವು, ರಗಳೆಯಲ್ಲಿ ಜೀವಂತವಾಗಿ

ಮೂರ್ತಿವೆತ್ತಿದೆ. ಒಂದೇ ಸ್ಥಲದ ರಗಳೆಯಲ್ಲಿ ಕವಿ ಇಷ್ಟೆಲ್ಲಾ ಯಶಸ್ಸನ್ನು ಸಂಪಾದಿಸಿರುವುದು"[111] ಅಚ್ಚರಿ ಹುಟ್ಟಿಸುತ್ತದೆ.

## 6.12 ನಿಂಬಿಯಕ್ಕನ ರಗಳೆ

ಅತ್ಯಂತ ಬಡ ಕುಟುಂಬವೊಂದರಲ್ಲಿ ಜನಿಸಿದ ನಿಂಬಿಯಕ್ಕ, ಬದುಕಿನುದ್ದಕ್ಕೂ ಅನುಭವಿಸಿದ ಸಂಕಷ್ಟದ ಕಥೆಯನ್ನು ಕವಿ ಈ ರಗಳೆಯಲ್ಲಿ ಹೇಳುತ್ತಾನೆ.- ಆ ಮೂಲಕ ಶಿವ ನಿರ್ಮಿತ ಪ್ರಪಂಚದಲ್ಲಿ ಜೀವನದ ಕಷ್ಟಗಳನ್ನು ಶಿವನಡಿಯಲ್ಲಿರಿಸಿ ಬಾಳಿದರೆ ಬದುಕು ಬೆಲೆಯುಳ್ಳದ್ದಾಗುತ್ತದೆ ಎಂಬ ತತ್ವವನ್ನು ಸಾರುತ್ತಾನೆ.

ನಿಂಬವ್ವೆಯ ಬದುಕು ಸಂಕಟಗಳ ಸರಮಾಲೆ. ಮೊದಲಿನಿಂದ ಕೊನೆಯವರೆಗೂ ಆಕೆ ಸುಖವನ್ನು ಕಂಡವಳಲ್ಲ. ಅವಳು ಜನಿಸಿದ ಕೆಲ ವರ್ಷಗಳಲ್ಲಿ ಅವಳ ತಾಯಿ ಮತ್ತು ಸೋದರರು ಸಾಯುತ್ತಾರೆ. ತಂದೆ ಮಾತ್ರ ಉಳಿಯುತ್ತಾನೆ. ಸ್ವಲ್ಪ ದಿನಗಳಲ್ಲಿಯೇ ಕಡು ಬಡತನ ಆವರಿಸುತ್ತದೆ. ಹುಟ್ಟಿದೂರಲ್ಲಿ ಭಿಕ್ಷೆ ಬೇಡಿ ತಿನ್ನುವುದು ಸರಿಯಲ್ಲವೆಂದು ತಂದೆ - ಮಗಳು ಪರವೂರಿಗೆ ಹೋಗುವರು. ತಂದೆ ರೋಗಪೀಡಿತನಾಗಿ ಹಾಸಿಗೆ ಹಿಡಿಯುತ್ತಾನೆ. ತಂದೆಯನ್ನು ಸಲಹುವ ಸಂಪೂರ್ಣ ಹೊಣೆ ಹೊರುತ್ತಾಳೆ. ವಿಪ್ರನೊಬ್ಬನ ಮನೆಯಲ್ಲಿ ತೊತ್ತಾಗಿ ದುಡಿಯುತ್ತಾಳೆ. ಕೆಲ ದಿನಗಳಲ್ಲಿ ರೋಗಪೀಡಿತ ತಂದೆಯೂ ಸಾಯುತ್ತಾನೆ. ದಿನಗಳೆದಂತೆ ಬದುಕು ಭೀಕರವಾಗುತ್ತದೆ. ತನ್ನ ಕಷ್ಟಗಳನ್ನೆಲ್ಲಾ ತೋಡಿಕೊಳ್ಳಲು ತನ್ನವರೆಂಬುವರು ಯಾರೂ ಇಲ್ಲ. ಭಕ್ತರಲ್ಲಿ ಯಾರೂ ಅವಳನ್ನು ಸ್ವೀಕರಿಸಲಿಲ್ಲ. ಆದರೂ ಒದಗಿ ಬರುವ ಕಷ್ಟಗಳಿಗೆ ಎಂದೂ ಹೆದರಲಿಲ್ಲ. ಎಲ್ಲವನ್ನೂ ಪ್ರೀತಿಯಿಂದಲೇ ಸ್ವೀಕರಿಸುತ್ತಾಳೆ.

ಹೀಗೆ ಕವಿ ಒಂದೆಡೆ ನಿಂಬಿಯಕ್ಕನ ಸಾಹಸಪೂರ್ಣ ಬದುಕನ್ನು ಚಿತ್ರಿಸಿದರೆ, ಮತ್ತೊಂದೆಡೆ ಶಿವಭಕ್ತಿಯನ್ನು ಅಷ್ಟೇ ಮನಮುಟ್ಟುವಂತೆ ಚಿತ್ರಿಸುತ್ತಾನೆ. ಶಿವಭಕ್ತಿ ಅವಳ ಕಾಯಕದೊಡನೆಯೇ ಬೆರೆತು ಹೋಗಿತ್ತು. 'ಶಿವನನ್ನು ನೆನೆ, ಶಿವಾರ್ಚನೆಗೆ ಚಿತ್ತವನ್ನು ಸೇರಿಸು' ಎಂದು ತಂದೆ ಹೇಳಿದಂತೆಯೇ ಚಿತ್ತವನ್ನು ಶಿವನೆಡೆಗೆ ಹರಿಸುತ್ತಾಳೆ. ಕಾಯಕದ ಪ್ರತಿಫಲದಿಂದಲೇ ಗಣಾರಾಧನೆ ನಡೆಸುತ್ತಾಳೆ. ಅಸಾಧ್ಯ ಕಷ್ಟಗಳು ಬಂದರೂ ಶಿವಭಕ್ತರ ಯೋಗಕ್ಷೇಮವನ್ನು ಮರೆಯುವುದಿಲ್ಲ. ಶಿವಪೂಜೆಗೆ ಹಣವಿಲ್ಲದಾಗ -

ದೇವ ಭಕ್ತರ್ಗೆ ಮಾಡುವಡೆನಗೆಯನುವಿಲ್ಲ
ದೇವ ಬೆಸಕೈವಡೆನಗರ್ಥವೆಳ್ಳನಿತಿಲ್ಲ[112]

ಎಂದು ದೇವರಲ್ಲಿ ಪ್ರಾರ್ಥಿಸುತ್ತಾಳೆ. ಶಿವಾರ್ಚನೆ ಮಾಡಿ ತನ್ನ ತಾಪತ್ರಯಗಳನ್ನು ನಿವೇದಿಸಿಕೊಳ್ಳುತ್ತಾಳೆ.

ಅವಳದು 'ಸರ್ವಂಶಿವಮಯಂ' ಎಂಬ ಸಿದ್ಧಾಂತ. ಹಾಗಾಗಿ ಎಲ್ಲದರಲ್ಲಿಯೂ ಶಿವನನ್ನೇ ಕಾಣುತ್ತಾಳೆ. ತನ್ನ ಯೌವನವು ತನ್ನ ಭಕ್ತಿಗೆ ತೊಂದರೆಯಾಗಬಹುದೆಂದು ತಿಳಿದು 'ಕಂತುವಂ

ಹೊದ್ದಿಸದೆ ಸುಖದೊಳಿರಿಸೈ ತಂದೆ 'ಎಂದು ಬೇಡಿಕೊಳ್ಳುತ್ತಾಳೆ. ತನ್ನ ದೇಹವು ಕಾಮುಕ್ಕೆ ಪಕ್ಕಾಗದಂತೆ ನೋಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತಾಳೆ. ಕಾಮಾರಿಗಲ್ಲದೆ ದೇಹವನ್ನು ಅನ್ಯರಿಗೆ ಒಪ್ಪಿಸುವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾಳೆ. ಈ ಭಾವವನ್ನು ಅವಳು 'ಮಾಟವಾ ಜಂಗಮಕೆ ಕೂಟವಾ ಲಿಂಗಕ್ಕೆ' ಎಂಬ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾಳೆ. ಅವಳ ದೃಷ್ಟಿಯಲ್ಲಿ ಲಿಂಗವಾಗಲೀ, ಜಂಗಮವಾಗಲೀ ಬೇರೆಬೇರೆಯಲ್ಲ. ಯಾವ ಕಾಯಕವನ್ನೇ ಮಾಡಲಿ, ಅಲ್ಲಿ ಶಿವನಿರುತ್ತಾನೆ ಎಂಬುದು ಅವಳ ನಂಬಿಕೆ. 'ದೇವ ಜಗದ್ಭರಿತ ನೀವಿಲ್ಲದೆಡೆಯುಂಟೆ' ಎಂಬ ಮಾತು ಈ ನಿರ್ಧಾರವನ್ನು ಸ್ಪಷ್ಟಪಡಿಸುತ್ತದೆ. ಶಿವವೇಷದಲ್ಲಿ ಕಂಡವರೆಲ್ಲರೂ ಶಿವರೂಪಿಗಳೇ ಎಂದು ತಿಳಿಯುವಂಥ ಮುಗ್ಧ ಮನಸ್ಸು ಆಕೆಯದು. ಒಮ್ಮೆ ಕೈಕಾಲು ತೊಳೆದು ಭಸಿತವನ್ನು ಧರಿಸಿ ಶಿವಧ್ಯಾನಿಯಾಗಿ ಶಿವಾಲಯದಲ್ಲಿ ನಿಂತಾಗ, ಶಿವವೇಷದ ಭಕ್ತನೊಬ್ಬ ತನುವನ್ನು ಬಯಸಲು, ಅದನ್ನು ಅವನಿಗೆ ಅರ್ಪಿಸಿಕೊಂಡುದನ್ನು ಕವಿ ಬಣ್ಣಿಸುತ್ತಾನೆ. ಶಿವಧ್ಯಾನಿಯಾದ ಅವಳಿಗೆ ಇದು ಅಮಂಗಳ ಎಂಬ ಕಲ್ಪನೆಯೇ ಇಲ್ಲ. ನಿಂಬಿಯಕ್ಕ ಮತ್ತು ಶಿವವೇಷಿಯ ಸಂಗಮವನ್ನು ಕಂಡ ಶಿವ, ಶಿವಲಿಂಗದಿಂದ ಮುಖವನ್ನು ಪಡೆದು ಭಕ್ತೆಗೆ ಹೇಸಿಗೆಯಾಗುವಂತೆ, ಎಲೆ ನಿಂಬಿ 'ಆನಿದ್ದೆಡೆಯೊಳಿಂತುಮಾಳ್ಪುದುಚಿತವೇ' ಎಂದೆನ್ನುತ್ತಾನೆ. ಅದಕ್ಕೆ ನಿಂಬವ್ವೆಯು ನೀಡುವ 'ದೇವಾ ಈ ಸುಖವ ಕೈಕೊಂಬವರ್ ಪೆಜರುಂಟೇ?' ಎಂಬ ಉತ್ತರ ಅವಳ ಮನಸ್ಥಿತಿಯ ನೇರ ಚಿತ್ರಣಕ್ಕೆ ಸಾಕ್ಷಿ.

ಹೀಗೆ ನಿಂಬಿಯಕ್ಕನ ನಿತ್ಯ ನರಕಗಳ ನಡುವಿನ ಸಾಹಸಪೂರ್ಣ ಬದುಕು, ಅವಳ ಶಿವನಿಷ್ಠೆ, ಕಾಯಕ ನಿಷ್ಠೆ ಮತ್ತು ಸರ್ವಾಂತರ್ಯಾಮಿ ಶಿವನ ಸ್ವರೂಪಗಳನ್ನು ಮನಮುಟ್ಟುವಂತೆ ಚಿತ್ರಿಸುತ್ತಾನೆ. ಆ ಮೂಲಕ ಶಿವ ಎಲ್ಲೆಡೆಯೂ ಇದ್ದಾನೆ, ಅವನು ನೀಡುವ ಎಲ್ಲ ಸಂಕಟಗಳನ್ನು ಭಕ್ತರು ತಾಳಿಕೊಂಡು ಬಾಳಬೇಕು. ಹಾಗೆ ತಾಳಿಕೊಂಡರೆ ಶಿವಾನುಗ್ರಹ ಸಾಧ್ಯ ಎಂಬ ಸಂದೇಶವನ್ನು ನೀಡುತ್ತಾನೆ. ನಿಂಬಿಯಕ್ಕನ ಕಥೆಯನ್ನು ಮುನ್ನಡೆಸುವಲ್ಲಿ ಹರಿಹರನ ಶೈಲಿ ಸಾರ್ಥಕ ಪಡೆದಿದೆ.

## 6.13 ಅವತಾರ ಕಲ್ಪನೆಯಿಂದ ಕಥೆಗೆ ಬರುವ ಅತಿಶಯತೆ

"ಕರ್ಮಾಧೀನವಲ್ಲದ ಹುಟ್ಟು ಅವತಾರವೆನಿಸುವುದು. ಅಲೌಕಿಕ ಪುರುಷರ ಬದುಕಿನ ಹಿನ್ನೆಲೆಯನ್ನು ನೋಡಿದಾಗ ಅವರ ಹುಟ್ಟು ಸಾಮಾನ್ಯ ಉದ್ದೇಶವನ್ನು ಹೊಂದಿರದೆ ಇರುವುದನ್ನು ಕಾಣುತ್ತೇವೆ. ಅವರ ಸಾಧನೆ ಸಿದ್ಧಿಗಳನ್ನು ಗಮನಿಸಿದಾಗ 'ಭುವನದ ಭಾಗ್ಯ'ದಿಂದ ಉದಿಸಿ ಬಂದ ಅವರು, ಲೋಕಕಲ್ಯಾಣಾರ್ಥವಾಗಿ ಮಾನವ ದೇಹಧಾರಿಗಳಾಗಿ ಅವತರಿಸಿದಂತೆ ಕಂಡುಬರುತ್ತದೆ."[113] ಅವತಾರ ಎಂದರೆ ಭಾರತೀಯ ಕಲ್ಪನೆಯ ಪ್ರಕಾರ "ಜಗದುದ್ಧಾರಕ್ಕಾಗಿ ದೇವನು ಮಾನವನಾಗಿ ಸ್ವರ್ಗದಿಂದ ಮರ್ತ್ಯಕ್ಕೆ ಇಳಿದು ಬರುವುದು"[114] ಎಂದರ್ಥ.

ಹರಿಹರನ ನೂತನರ ಕಥೆಗಳಲ್ಲಿ ಪವಾಡಗಳು ಹೇಗೆ ಕಥೆಯ ಒಂದು ಭಾಗವಾಗಿ ಕಾರ್ಯನಿರ್ವಹಿಸುತ್ತವೆಯೋ, ಹಾಗೆಯೇ ಅವತಾರಗಳು ಕೂಡ ಕಾರ್ಯ ನಿರ್ವಹಿಸುತ್ತವೆ. ಈ ಅವತಾರಗಳು ಆರಂಭದಲ್ಲೋ ಅಥವಾ ನಡುವೆಯೋ ಬರುವ ಮೂಲಕ ಕಥೆಯ ಮೆರುಗನ್ನು ಹೆಚ್ಚಿಸುತ್ತವೆ.

ಪ್ರಾರಂಭದಲ್ಲಿ ಬಸವಣ್ಣನವರು ಶಿವನ ಆಸ್ಥಾನದಲ್ಲಿ ವೃಷಭೇಂದ್ರ ಎಂಬ ಗಣಾಧೀಶ ...ಾಗಿದ್ದವರು. ಅಲ್ಲಿ ಮಾಡಿದ ಒಂದು ತಪ್ಪಿನಿಂದಾಗಿ ಅವರು ಬಸವಣ್ಣ ಎಂಬ ಹೆಸರನ್ನು ...ೊತ್ತು, ಬಾಗೇವಾಡಿಯಲ್ಲಿ ಮಾದರಸ ಮಾದಲಾಂಬಿಕೆಯರ ಮಗನಾಗಿ ಜನಿಸುತ್ತಾರೆ. ...ರಂತರ ಸಾಧನೆಯಲ್ಲಿ ತೊಡಗಿ. ಲೋಕಕಲ್ಯಾಣವನ್ನು ಸಾಧಿಸುತ್ತಾರೆ. ಇಲ್ಲಿ, ಬಸವಣ್ಣ ...ಬ್ಬ ಅಸಾಮಾನ್ಯ ಪುರುಷನಾಗಿ ಭೂಮಿಗೆ ಬಂದು ಸಾಧನೆಯಲ್ಲಿ ತೊಡಗಿದ್ದರಿಂದ ಅವನ ...ಾಧನೆಗೆ ಮಹತ್ವ ಬಂದೊದಗುತ್ತದೆ. ಅದೇ ಅವನು ಸಾಮಾನ್ಯ ಮನುಷ್ಯನಾಗಿದ್ದರೆ ...ಂಥದ್ದೊಂದು ಸಾಧನೆ ಸಾಧ್ಯವಾಗುತ್ತಿರಲಿಲ್ಲ. ಆ ಸಾಧನೆಗೆ ಇಷ್ಟು ಮಹತ್ವವೂ ...ಭಿಸುತ್ತಿರಲಿಲ್ಲ. ಅವತಾರಿಯಾಗದಿದ್ದರೆ ಆ ಸಾಧನೆ ಅವನಿಗೆ ಸಾಧ್ಯವೂ ಆಗುತ್ತಿರಲಿಲ್ಲ.

ಮಹಾದೇವಿಯಕ್ಕ ಮೊದಲು ರುದ್ರಕನ್ನಿಕೆಯಾಗಿ ಪಾರ್ವತಿಯ ಆಸ್ಥಾನದಲ್ಲಿದ್ದಳು. ...ಲ್ಲಿ ಗುಪ್ತಗಣನಾಥನನ್ನು ಭವಿ ಎಂದು ನಿಂದಿಸಿದ ತಪ್ಪಿಗೆ ಭೂಮಿಯಲ್ಲಿ ಮಹಾದೇವಿಯಾಗಿ ...ವತರಿಸಬೇಕಾಗುತ್ತದೆ. ಮಹಾದೇವಿಯಕ್ಕ ಕೌಶಿಕನೊಡನೆ ವಿಷಮ ಸಂಸಾರ ಸುಖದಲ್ಲಿ ...ಳಲುತ್ತಾಳೆ. ಅದು ಪ್ರತಿಯೊಬ್ಬರಿಗೂ ಕರುಣೆ ತರುವಂತೆ ಇದೆ. ಇದು ಸಾಧ್ಯವಾದದ್ದು ಆಕೆ ...ಮರ್ಥ್ಯಳಾದುದರಿಂದ. ಇಲ್ಲದಿದ್ದಲ್ಲಿ ಕಥೆ ಇಷ್ಟು ಹೃದ್ಯವಾಗುತ್ತಿರಲಿಲ್ಲ.

ಪ್ರಭುದೇವ ಮೊದಲು ನಿರ್ಮಾಯನೆಂಬ ಗಣನಾಗಿ ಕೈಲಾಸದಲ್ಲಿ ಇದ್ದವನು. ಒಮ್ಮೆ ...ರ್ಮಾಯನು ಸುರಸತಿಯರಲ್ಲಿ ಒಬ್ಬಳನ್ನು ಪ್ರೀತಿಯಿಂದ ನೋಡುತ್ತಾನೆ. ಇದನ್ನು ನೋಡಿದ ...ವ ದಯಾಪರನಾಗಿ "ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ 'ಕಾಮಂಗೆ ವಶನಾಗಿ ...ಕಲ ಸುಖಮಂ ಮುಟ್ಟಿ 'ಹರುಷದಿಂದಿರ್ಬರು ಬರ್ಪುದೆಂದೊಲಿದಿತ್ತ"[115] ಎಂದು ಹೇಳುತ್ತಾನೆ. ...ದರಂತೆ ಪ್ರಭುದೇವ ಭೂಮಿಯಲ್ಲಿ ಅವತರಿಸುತ್ತಾರೆ. ಹಾಗೆ ಅವರು ಭೂಮಿಯಲ್ಲಿ ...ವತರಿಸಿದ್ದರಿಂದ, ಭೂಮಿಯಲ್ಲಿ ಕಾಮಲತೆ ಎಂಬ ಸುಂದರ ತರುಣಿಯನ್ನು ಮೋಹಿಸಿ ...ವಳ ಅಕಾಲ ಮರಣದಿಂದ ವಿರಹಯಾತನೆಗೆ ಸಿಕ್ಕಿ, ನರಳಿ ಅಂತ್ಯದಲ್ಲಿ ಗೋಹೇಶ್ವರನ ...ಾನ್ನಿಧ್ಯವನ್ನು ಪಡೆಯಲು ಸಾಧ್ಯವಾಗುತ್ತದೆ. ಇದು ಸಾಧ್ಯವಾದದ್ದು ಪ್ರಭುದೇವರ ...ವತಾರದಿಂದ. ಇಲ್ಲದಿದ್ದರೆ ಪ್ರಭುದೇವರು ಎಲ್ಲ ಗಣಗಳಂತೆ ಕೈಲಾಸದಲ್ಲೇ ಇರಬೇಕಿತ್ತು. ...ಈ ಒಂದು ಅವತಾರವೇ ಪ್ರಭುದೇವರ ಅಧ್ಯಾತ್ಮಶಕ್ತಿಯನ್ನು ಬೆಳಗಲು ಕಾರಣವಾಗಿದೆ.

ಇಂಥದ್ದೇ ಅವತಾರದ ಕಲ್ಪನೆ ಆದಯ್ಯ ಮತ್ತು ರೇವಣಸಿದ್ಧೇಶ್ವರ ರಗಳೆಗಳಲ್ಲೂ ...ರುತ್ತದೆ. ಆದಯ್ಯನ ರಗಳೆಯಲ್ಲಿ ನಾಯಕನಾದ ಆದಯ್ಯ ಮೊದಲು ಆದಿಗಣೇಶನೆಂಬ ...ಣನಾಥನಾಗಿ ಶಿವನ ಓಲಗದಲ್ಲಿರುತ್ತಾನೆ. ಅಲ್ಲಿ ಸುರಕನ್ಯೆಯೊಬ್ಬಳನ್ನು ಕಂಡು ...ೋಹಗೊಂಡ ತಪ್ಪಿಗೆ ಶಿವನು ಆದಿಗಣೇಶ ಮತ್ತು ಆ ಸುರಕನ್ಯೆಯನ್ನು "ನೀವಿರ್ವರುವಾ ...ರೆಯೊಳ್ಜನಿಯಿಸಿ' ಕಾಮನನೇಳಿಪ ಸುಖಮಂಧರಿಯಿಸಿ...."[116] ಶಪಿಸುತ್ತಾನೆ. ಅದರಂತೆ ...ದಯ್ಯನಾಗಿ ಆದಿಗಣೇಶನು ಭೂಮಿಯಲ್ಲಿ ಜನಿಸುತ್ತಾನೆ. ಹಾಗೆ ಅವರು ಅವತರಿಸಿದ್ದ ...ಂದಲೇ ಭೂಮಿಯಲ್ಲಿ ನಿರಂತರ ಸಾಧನೆಗೈಯಲು ಸಾಧ್ಯವಾಗುತ್ತದೆ. ಆದಯ್ಯ ಪದ್ಮಾವತಿ ...ುರ ಪ್ರೇಮಬಾಳ್ವೆ ಹೃದ್ಯವಾಗಲು ಸಾಧ್ಯವಾಗುತ್ತದೆ.

ರೇವಣಸಿದ್ಧೇಶ್ವರನೂ ಶಿವನ ಓಲಗದಲ್ಲಿದ್ದವನು. ಅಲ್ಲಿ ದಾರುಕನೆಂಬ ಗಣನಾಥನನ್ನು

ಮಾಡಿದ ತಪ್ಪಿಗೆ ರೇವಣಸಿದ್ಧೇಶ್ವರನಾಗಿ ಭೂಮಿಯಲ್ಲಿ ಜನಿಸುತ್ತಾನೆ. ಹಾಗೆ ಅವತರಿಸಿ ಹಲವು ಪವಾಡಗಳನ್ನು ಮೆರೆಯುತ್ತಾನೆ. ರೇವಣಸಿದ್ಧೇಶ್ವರ ಅವತಾರ ಪುರುಷನಾದ್ದರಿಂದಲೇ ಇಷ್ಟೆಲ್ಲ ಪವಾಡಗಳು ಮೆರೆಯುವುದು ಸಾಧ್ಯವಾಗುತ್ತದೆ: ಲೋಕೋಪಯೋಗಿ ಕಾರ್ಯಗಳನ್ನು ನೆರವೇರಿಸಲು ಸಾಧ್ಯವಾಗುತ್ತದೆ. ಕಥೆಯ ಪೂರ್ಣ ಯಶಸ್ಸಿಗೆ ಅವತಾರದ ಪಾತ್ರ ಮಹತ್ವದ್ದು.

ಹೀಗೆ ಕವಿ ಅವತಾರವನ್ನು ಬಳಸಿಕೊಳ್ಳುವ ಮೂಲಕ ಕಾವ್ಯದ ಸೊಬಗನ್ನು ಮತ್ತು ಆಯಾಯಾ ಪಾತ್ರಗಳ ಘನತೆಯನ್ನು ಹೆಚ್ಚಿಸಿದ್ದಾನೆ. ಹಾಗೇನಾದರೂ ಕವಿ ಅವತಾರಗಳನ್ನು ಬಳಸಿಕೊಳ್ಳದೆ ಹೋಗಿದ್ದರೆ ಶರಣರು ಗೈದ ಎಷ್ಟೋ ಪವಾಡಗಳು ಅನರ್ಥಕ್ಕೆ ಕಾರಣವಾಗುತ್ತಿದ್ದವು.

## 6.14 ಭೋಗ - ಯೋಗಗಳ ಸಮನ್ವಯ ಜೀವನ ದೃಷ್ಟಿ

ಜೀವನವೆಂದರೆ ಕೇವಲ ಭೋಗ ಅಥವಾ ಯೋಗ ಅಲ್ಲ; ಇವೆರಡರ ಸಮನ್ವಯ. ಇದೇ ದೃಷ್ಟಿ ಹರಿಹರನದು. ಈ ದೃಷ್ಟಿಯನ್ನು ಇಟ್ಟುಕೊಂಡೇ ಪಾತ್ರ ನಿರೂಪಣೆ ಮಾಡಿದ್ದಾನೆ.

ಹರಿಹರನ ಕಥೆಗಳಲ್ಲಿ ಬರುವ ಹಲವಾರು ಶರಣರು ಭೋಗ ಜೀವಿಗಳೂ ಹೌದು ಯೋಗ ಜೀವಿಗಳೂ ಹೌದು. ಅಲ್ಲಮ ಒಬ್ಬ ಮಹಾಯೋಗಿ. ಆದರೆ ಆತ ಭೋಗದ ಬದುಕನ್ನು ನಿರಾಕರಿಸಿದವನಲ್ಲ. ಆತ ಯೌವನಕ್ಕೆ ಬರುತ್ತಿದ್ದಂತೆಯೇ ಕಾಮಲತೆಯೆಂಬ ಸುಂದರ ಕನ್ಯೆಯ ಮೋಹಕ್ಕೆ ಒಳಗಾಗುತ್ತಾನೆ. ಅವಳೊಡನೆ ಕೆಲಕಾಲ ಭೋಗದ ಬದುಕನ್ನು ಅನುಭವಿಸುತ್ತಾನೆ. ಆ ಬದುಕು ಪೂರ್ಣಗೊಂಡ ನಂತರವೇ ಅವನಿಗೆ ಗೊಹೇಶ್ವರನ ದರ್ಶನವಾಗುತ್ತದೆ. ಕೈಲಾಸದ ಗಣಪದವಿಯನ್ನು ಮತ್ತೆ ಪಡೆಯುತ್ತಾನೆ. ಅಲ್ಲಮನ ಹಾಗೆಯೇ ಬಸವಣ್ಣ ಕೂಡ ಒಬ್ಬ ಮಹಾಸಾಧಕ ಹಾಗೂ ಯೋಗಿ. ಅವನೂ ಭೋಗವನ್ನು ತಿರಸ್ಕರಿಸಿದವನಲ್ಲ. ಅವನು ಗಂಗಾದೇವಿ ಮತ್ತು ಮಾಯಿದೇವಿಯರನ್ನು ಮದುವೆಯಾಗುತ್ತಾನೆ. ಅವರೊಡನೆ ಸುಖಸಂಸಾರವನ್ನು ನಡೆಸಿ ಸಿದ್ಧರಸ ಎಂಬ ಮಗನನ್ನೂ ಪಡೆಯುತ್ತಾನೆ. ಭೋಗವನ್ನು ಅನುಭವಿಸುತ್ತಲೇ ಯೋಗ ಸಾಧನೆಯಲ್ಲಿ ತೊಡಗುತ್ತಾನೆ. ನೂತನರ ರಗಳೆಗಳಲ್ಲಿ ಬರುವ ಇನ್ನೊಬ್ಬ ಮಹಾಯೋಗಿ ರೇವಣಸಿದ್ಧ. ಲೋಕಕಲ್ಯಾಣವನ್ನು ಮೆರೆಯುವುದಕ್ಕೆಂದೇ ಭೂಮಿಯಲ್ಲಿ ಜನಿಸಿದವನು. ಹಲವು ಪವಾಡಗಳನ್ನು ಮೆರೆದು ಲೋಕಕಲ್ಯಾಣಕ್ಕಾಗಿ ಶ್ರಮಿಸಿದವನು. ತನ್ನ ಯೋಗ ಸಾಧನೆಯಿಂದ ಅವನು ಸಾಧಿಸಿದ ಪವಾಡಗಳು ಅಸಾಧಾರಣವಾದವು. ಅಂಥ ಅಸಾಧಾರಣ ಯೋಗಿಯೂ ಭೋಗವನ್ನು ತಿರಸ್ಕರಿಸಲಿಲ್ಲ. ಬಿಜ್ಜಳ ಮತ್ತು ಚೋಳರಾಜನ ಮಗಳನ್ನು ಮದುವೆಯಾಗುತ್ತಾನೆ. ಇವರ ಸಾಲಿಗೆ ಆದಯ್ಯನೆಂಬ ಶರಣನೂ ಸೇರುತ್ತಾನೆ. ಆದಯ್ಯನೂ ಒಬ್ಬ ಶರಣ, ಯೋಗಿ. ತನ್ನ ಯೋಗ ಶಕ್ತಿಯಿಂದ ಸೋಮನಾಥನನ್ನೇ ಬರಮಾಡಿಕೊಂಡವನು. ಏಕಾಂಗಿಯಾಗಿ ಜೈನರ ಸಂಹಾರ ಮಾಡಿದವನು. ಅಂಥವನೂ ಭೋಗದ ಬದುಕನ್ನು ತಿರಸ್ಕರಿಸುವುದಿಲ್ಲ. ಪದ್ಮಾವತಿಯೆಂಬ ಸುಂದರ ಕನ್ಯೆಯನ್ನು ಆತ ಮೋಹಿಸಿ ಮದುವೆಯಾಗುತ್ತಾನೆ. ಅವಳೊಂದಿಗೆ ಆನಂದದ ಬದುಕನ್ನು ಸಾಗಿಸುತ್ತಾನೆ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಪದ್ಮಾವತಿಯೇ ಅವನ ಸಾಧನೆಯ ಕೇಂದ್ರವೂ

ಾಗಿಪ್ಪಳು. ಯೋಗಕ್ಕಾಗಿ ಭೋಗದ ಬದುಕಿಗೆ ಅವರು ವಿಮುಖರಾಗುವುದಿಲ್ಲ. ಹೀಗೆ ಕವಿ, ಂದಕ್ಕೆ ಇನ್ನೊಂದರ ಅವಶ್ಯಕತೆಯನ್ನು ಎತ್ತಿಹಿಡಿದು ಯೋಗ ಮತ್ತು ಭೋಗಗಳೆರಡರ ಸಮನ್ವಯವನ್ನು ಸಾಧಿಸಿದ್ದಾನೆ.

ಒಟ್ಟಿನಲ್ಲಿ ಭಕ್ತಿಯ ಮಹತ್ವ ಸಾರುವುದು, ಶಿವನ ಶ್ರೇಷ್ಠತೆಯನ್ನು ಮೆರೆಯುವುದು, ಅನ್ಯಧರ್ಮಗಳನ್ನು ತಿರಸ್ಕರಿಸಿ ತನ್ನ ಧರ್ಮವನ್ನು ಎತ್ತಿಹಿಡಿಯುವುದು, ಸ್ತ್ರೀಯರನ್ನು ಗೌರವದಿಂದ ಕಾಣುವುದು, ಕೆಳವರ್ಗದ ಬಗೆಗಿರುವ ಕೀಳು ಮನೋಭಾವವನ್ನು ಹೋಗಲಾಡಿಸಿ ಅವರನ್ನು ಮುಖ್ಯವಾಹಿನಿಯಲ್ಲಿ ಸೇರುವಂತೆ ಮಾಡುವುದು-ಇವೇ ಮುಂತಾದ ಆಶಯಗಳನ್ನು ಇಟ್ಟುಕೊಂಡು ಹರಿಹರ ಕವಿ ನೂತನರ ರಗಳೆಗಳನ್ನು ಬರೆದಿದ್ದಾನೆ. ಹಾಗೆ ಬರೆಯುವಾಗ ಎಲ್ಲಿಯೂ ಕಥಾನಾಯಕನ ವ್ಯಕ್ತಿತ್ವಕ್ಕೆ ಧಕ್ಕೆ ಬರದ ಹಾಗೆ ಎಚ್ಚರಿಕೆ ವಹಿಸಿದ್ದಾನೆ. ಪ್ರತಿಯೊಂದು ಕಥೆಗೂ ಅದರದ್ದೇ ಆದ ಮೌಲ್ಯ ಮತ್ತು ಹೊಸತನ ಇದೆ.

* * * * *

## ಅಡಿಟಿಪ್ಪಣಿಗಳು

1. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 3
2. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 6
3. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 8
4. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 50
5. ಜಿ. ಎಸ್. ಶಿವರುದ್ರಪ್ಪ : ಅನುರಣನ : ಪುಟ 69
6. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 30
7. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 49
8. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 53
9. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 59-60
10. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 51
11. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 53-54
12. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 65
13. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 66
14. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 67
15. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 14

16. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 15
17. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 17
18. ಬಿ. ಸಿ. ಜವಳಿ : ಹರಿಹರ ಮಹಾ ಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ (ಗದ್ಯಾನುವಾದ - ಕಾವ್ಯ ವಿಮರ್ಶೆ) : ಪುಟ 7
19. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 19
20. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 42-43
21. ಬಿ. ಸಿ. ಜವಳಿ : ಹರಿಹರ ಮಹಾ ಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ (ಗದ್ಯಾನುವಾದ - ಕಾವ್ಯ ವಿಮರ್ಶೆ) : ಪುಟ 19
22. ಜಿ. ಎಸ್. ಶಿವರುದ್ರಪ್ಪ : ಅನುರಣನ : ಪುಟ 87
23. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 91
24. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 53
25. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 53
26. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಬಸವಣ್ಣನವರ ವಚನ ಸಂಪುಟ : ಪದ್ಯ 755 : ಪುಟ 195
27. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 79
28. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಬಸವಣ್ಣನವರ ವಚನ ಸಂಪುಟ : ಪದ್ಯ 708 : ಪುಟ 177
29. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 80
30. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಬಸವಣ್ಣನವರ ವಚನ ಸಂಪುಟ : ಪದ್ಯ 701 : ಪುಟ 175
31. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ಬಸವಣ್ಣನವರ ವಚನ ಸಂಪುಟ : ಪದ್ಯ 830 : ಪುಟ 213
32. ಟಿ. ಎಸ್. ವೆಂಕಣ್ಣಯ್ಯ : ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 59
33. ಕನ್ನಡ ಸಾಹಿತ್ಯ ಪರಿಷತ್ತು : ಹರಿಹರ ವಿಚಾರ ಸಂಕಿರಣ : ಪುಟ 146
34. ಜಿ. ಎಸ್. ಶಿವರುದ್ರಪ್ಪ : ಅನುರಣನ : ಪುಟ 101
35. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 3
36. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 4
37. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 5

38. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 5
39. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 5
40. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 6
41. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 18
42. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 10
43. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 10
44. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 14
45. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 1
46. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 5
47. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 6
48. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 7
49. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 11
50. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 12
51. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 46
52. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 48
53. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 31-32

54. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 32

55. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 36

56. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 46

57. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 48

58. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 39

59. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 47

60. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 19

61. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 21-22

62. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 143

63. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ: ಶಿವಶರಣೆಯರ ವಚನ ಸಂಪುಟ : ಪುಟ 77

64. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 41

65. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ: ಶಿವಶರಣೆಯರ ವಚನ ಸಂಪುಟ : ಪದ್ಯ 86 : ಪುಟ 31

66. ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 224

67. ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 240

68. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 110

69. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 117

70. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 117

71. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 118
72. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 121
73. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 112
74 ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 119
75. ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 119
76. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 111
77. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 211
78. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 213
79. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 215
80. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 217
81. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 218
82. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 90
83. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 87
84. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 87
85. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 88
86. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 243
87. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 245

88. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 248
89. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 253
90. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 254
91. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 254
92. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 257
93. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 263
94. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 231
95. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 234
96. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 234
97. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 235
98. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 343
99. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 344
100. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 347
101. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 353
102. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 311

103. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 322
104. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 323
105. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 325
106. ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 128
107. ಬಿ. ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪುಟ 129
108. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 321
109. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 322
110. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 495
111. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 44
112. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 218
113. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 311
114. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 394
115. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 394
116. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 311

# ಸಂಕೀರ್ಣ ರಗಳೆಗಳು

ಸಂಕೀರ್ಣ ರಗಳೆಗಳ ಸಾಲಿನಲ್ಲಿ ಸುಮಾರು ಹನ್ನೆರಡು ರಗಳೆಗಳು ಬರುತ್ತವೆ. ಇವು ಮೊದಲಿನ ಎಲ್ಲ ರಗಳೆಗಳಿಗೂ ಭಿನ್ನರೀತಿಯಲ್ಲಿವೆ. ಪುರಾತನ ಮತ್ತು ನೂತನರ ರಗಳೆಗಳಲ್ಲಿ ನಿರ್ದಿಷ್ಟವಾಗಿ ಒಬ್ಬ ವ್ಯಕ್ತಿಯ ಕಥೆಯನ್ನು ಹರಿಹರ ನಿರೂಪಿಸುತ್ತಾನೆ. ಆದರೆ ಈ ರಗಳೆಗಳಲ್ಲಿ ಆ ಬಗೆಯ ನಿರೂಪಣೆಯನ್ನು ಕಾಣಲು ಆಗುವುದಿಲ್ಲ. ಇವು ಒಂದೊಂದೂ ಒಂದೊಂದು ಬಗೆಯಲ್ಲಿವೆ. 'ಸಂಸಾರ ವ್ಯಾಮೋಹ ನಿರಸನ ರಗಳೆಯಲ್ಲಿ' ಮಾನವ ಬದುಕಿನ ದಿನಚರಿಯೇ ಇದೆ. ಪಂಪಾಕ್ಷೇತ್ರ ಹಾಗೂ ಹಂಪೆಯರಸನ ರಗಳೆಯಲ್ಲಿ ಪಂಪಾಕ್ಷೇತ್ರ ಹಾಗೂ ಹಂಪೆಯರಸನ ಸುಂದರ ವರ್ಣನೆಯಿದೆ. ಮಿಕ್ಕ ರಗಳೆಗಳಲ್ಲಿ ವೀರಶೈವರ ಆಚರಣೆಯಲ್ಲಿ ಮುಖ್ಯವಾದ ವಿಭೂತಿ, ರುದ್ರಾಕ್ಷಿ, ನಮ: ಶಿವಾಯ ಮುಂತಾದುವುಗಳ ವರ್ಣನೆ ಇದೆ. ವೈವಿಧ್ಯಮಯವಾದ ಈ ರಗಳೆಗಳಲ್ಲಿ ಬಹಳ ಮುಖ್ಯವೆನಿಸುವ ಕೆಲವನ್ನು ವಿಮರ್ಶಾತ್ಮಕವಾಗಿ ಗಮನಿಸುವ ಮೂಲಕ ಅವುಗಳ ಸಾಹಿತ್ಯಕ ಮಹತ್ವವನ್ನು ಗುರುತಿಸಬಹುದು.

ಸಂಕೀರ್ಣರಗಳೆಗಳನ್ನು ಪ್ರಾರ್ಥನೆಗೆ ಸಂಬಂಧಪಟ್ಟ ರಗಳೆಗಳು ಮತ್ತು ಕವಿಗೆ ನೇರವಾಗಿ ಸಂಬಂಧಿಸಿದ ರಗಳೆಗಳು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು.

## 7.1 ಪ್ರಾರ್ಥನೆಗೆ ಸಂಬಂಧಪಟ್ಟ ರಗಳೆಗಳು

ಈ ರಗಳೆಗಳ ಸಾಲಿನಲ್ಲಿ ಪಂಪಾಕ್ಷೇತ್ರದ ರಗಳೆ, ನಮ:ಶಿವಾಯ ರಗಳೆ, ಜಯ ರಗಳೆ, ಪಂಚಾಕ್ಷರಿ ರಗಳೆ, ವಿಭೂತಿ ರಗಳೆ, ರುದ್ರಾಕ್ಷಿ ರಗಳೆ, ಲಿಂಗಾರ್ಚನೆಯ ರಗಳೆಗಳು ಬರುತ್ತವೆ.

### 7.1.1 ಪಂಪಾಕ್ಷೇತ್ರದ ರಗಳೆ

ಪ್ರಸಿದ್ಧ ಪಂಪಾಕ್ಷೇತ್ರ ಹರಿಹರನ ಇಷ್ಟದೈವವಾದ ವಿರೂಪಾಕ್ಷನ ವಾಸಸ್ಥಾನ. ಆದ್ದರಿಂದಲೇ ಅವನಿಗೆ ಈ ಕ್ಷೇತ್ರದ ಮೇಲೆ ಅತಿ ವ್ಯಾಮೋಹ. ಆ ವ್ಯಾಮೋಹದಿಂದಲೇ ಅವನು ಪಂಪಾಪುರದ ವರ್ಣನೆಯನ್ನು ಕಣ್ಣಿಗೆ ಕಟ್ಟುವಂತೆ ಮಾಡಿದ್ದಾನೆ.

ಪದ್ಯದ ಪ್ರಾರಂಭದಲ್ಲಿ ಪಂಪಾಪುರದ ಭೌಗೋಳಿಕ ವರ್ಣನೆ ಮಾಡಿದ್ದಾನೆ. ಹರಿಹರ ಹೇಳುವ ಹಾಗೆ ಪಂಪಾಪುರವು ಸಮುದ್ರದಿಂದ ಕೂಡಿದ ಧರೆಯ ಮಧ್ಯದ ಮೇರುವಿನ ದಕ್ಷಿಣ ಭಾಗದಲ್ಲಿತ್ತು. ಅಲ್ಲಿ ಹರಿ, ಅಜ, ಶರಣರೆಲ್ಲ ನೆಲೆಸಿದ್ದರು. ಅದಕ್ಕೆ ನಾಲ್ಕು ಬಾಗಿಲುಗಳಿದ್ದವು. ಮೂಡಣದ ಬಾಗಿಲಿನಲ್ಲಿ ಕಿನ್ನರೇಶ್ವರ, ತೆಂಕಣದ ಬಾಗಿಲಿನಲ್ಲಿ ಜಂಬುಕೇಶ್ವರ, ಪಶ್ಚಿಮದ ಬಾಗಿಲಿನಲ್ಲಿ ಸೋಮನಾಥ, ಉತ್ತರದ ಬಾಗಿಲಿನಲ್ಲಿ ವಾಣಿ ಭದ್ರೇಶ್ವರರು ಇದ್ದರು. ಹನುಮೇಶ್ವರ, ರಂಭೇಶ್ವರ ಮುಂತಾದ ಲಿಂಗಗಳೂ; ಮನ್ಮಥ, ಅಗ್ನಿ ತೀರ್ಥಗಳೂ ಇದ್ದವು.

ಇವುಗಳ ಮಹಿಮೆಯಿಂದ ಸರಸಿಜಭವನು ಅಜಪದವಿಯನ್ನು, ಸುರರಾಜನು ಇಂದ್ರ ಪದವಿಯನ್ನು ಪಡೆದಿದ್ದಾರೆ.

ಪಂಪಾಕ್ಷೇತ್ರದ ಭೌಗೋಳಿಕ ವರ್ಣನೆಯನ್ನು ಮಾಡಿದ ನಂತರ ಕವಿ ಕ್ಷೇತ್ರದ ಮಹಿಮೆಯನ್ನು ತಿಳಿಸುತ್ತಾ ಅವನು ತಿಳಿಸುವಂತೆ ಈ ಕ್ಷೇತ್ರ, ಧರೆಗೆ ಆಭರಣವಿದ್ದಂತೆ. ಮೊರೆಹೊಕ್ಕವರನ್ನು ಕಾಪಾಡುತ್ತದೆ. ಬೇಡಿದವರಿಗೆ ಬೇಡಿದ್ದನ್ನು ನೀಡುತ್ತದೆ. ಭವದ ಭಯವನ್ನು ನಿವಾರಿಸುತ್ತದೆ. ಇದು ವಾರಣಾಸಿಗೂ ಮಿಗಿಲಾದದ್ದು. ಇರುವ ಶಿವಪುರಗಳಲ್ಲಿಯೇ ಶ್ರೇಷ್ಠವಾದದ್ದು. ಇಲ್ಲಿ 'ಕಾಪಾಲಿ ದಕ್ಷಾಧ್ವರ ಹರನೂ' 'ದುರಿತ ತಿಮಿರ ವ್ರಜ ದಿವಾಕರನೂ' 'ಶರಣ ನಿಕರ ಸ್ತೋತ್ರ ಪೂಜಿತನೂ' ಅಖಿಳಗುರುವೂ ಆದ ಪಂಪಾವಿರೂಪಾಕ್ಷ ನೆಲೆಸಿದ್ದಾನೆ. ಪರಮೇಶ್ವರನ 'ಸಜ್ಜೆ' ಎನಿಸಿರುವ ಇದು ಶಿವಭಕ್ತಿಯ ನವರಸದ ಸವಿಯನ್ನು ಕಂಡು ಧರೆಯ ಮೇಲಿತ್ತು.

ಹೀಗೆ ಹರಿಹರ ಪಂಪಾಕ್ಷೇತ್ರದ ವರ್ಣನೆ ಮಾಡಿದ್ದಾನೆ. ಇಲ್ಲಿ ಉತ್ಪ್ರೇಕ್ಷೆ ಎಂದು ಹೇಳಬಹುದಾದ ವರ್ಣನೆಗಳೇನೂ ಇಲ್ಲ. ಅವುಗಳೆಲ್ಲವೂ ಸಂದರ್ಭಕ್ಕೆ ತಕ್ಕಂತೆ ಉಚಿತವಾಗಿಯೇ ಇವೆ. ಆ ಎಲ್ಲ ವರ್ಣನೆಗಳು ಓದುಗನ ಬಯಕೆಯನ್ನು ಪೂರೈಸುತ್ತವೆ. ಸಹೃದಯನಿಗೆ ಪಂಪಾಕ್ಷೇತ್ರದ ಪರಿಚಯವನ್ನು ಮಾಡಿಕೊಡುತ್ತವೆ. ಈ ರಗಳೆಯನ್ನು ಓದುತ್ತಿದ್ದರೆ ಪಂಪಾಕ್ಷೇತ್ರವೇ ಕಣ್ಮುಂದೆ ಇರುವಂತೆ ಭಾಸವಾಗುತ್ತದೆ. ಅಲ್ಲಿನ ದೇವಾಲಯ, ತೀರ್ಥಕ್ಷೇತ್ರ, ಲಿಂಗ, ಗುರುಗಳು ಕಣ್ಣೆದುರು ನಿಲ್ಲುತ್ತವೆ. ಒಟ್ಟಿನಲ್ಲಿ ಹರಿಹರನ ಕಾಲದಲ್ಲಿ ಹಂಪೆಯ ಸ್ಥಿತಿ ಹೇಗಿತ್ತು ಎಂಬುದು ಈ ರಗಳೆಯಿಂದ ತಿಳಿಯುತ್ತದೆ.

### 7.1.2 ನಮಃಶಿವಾಯ ರಗಳೆ

ಈ ರಗಳೆ ಶಿವನ ಸ್ತೋತ್ರಕ್ಕಾಗಿ ಮೀಸಲಾಗಿದೆ. ಉತ್ಸಾಹ ಶೈಲಿಯಲ್ಲಿ ಸುಂದರವಾಗಿ ರಚನೆಗೊಂಡಿದೆ. ಸುಮಾರು ನೂರಕ್ಕೂ ಹೆಚ್ಚು ಸಾಲುಗಳನ್ನು ಒಳಗೊಂಡಿರುವ ಈ ರಗಳೆಯ ಪ್ರತಿ ಸಾಲುಗಳೂ ನಮ:ಶಿವಾಯ ಎಂದೇ ಮುಕ್ತಾಯವಾಗುತ್ತವೆ. ಈ ಎಲ್ಲ ಸಾಲುಗಳಲ್ಲಿಯೂ ಶಿವನ ವಿವಿಧ ವೇಷ, ಭಾವಭಂಗಿಗಳ ಕುರಿತಾದ ವರ್ಣನೆ ಮಾಡಲಾಗಿದೆ. ಕವಿ, ಶಿವನನ್ನು ಸೀಮೆಯಿಲ್ಲದಖಿಲ ಸುಧಾರ್ಣವ, ಹೇಮಗಿರಿ ನಿವಾಸ, ವ್ಯೋಮ ನದಿ ಜಟಾಂಶುಧರ ಎಂದು ಬಣ್ಣಿಸಿದ್ದಾನೆ.

### 7.1.3 ಜಯ ರಗಳೆ

ಶಿವಸ್ತೋತ್ರ ಪ್ರಧಾನವಾದ ಈ ರಗಳೆ ಮಂದಾನಿಲ ಛಂದಸ್ಸಿನಲ್ಲಿದೆ. ರಗಳೆಯ ಪ್ರತಿ ಸಾಲುಗಳಲ್ಲೂ 'ಜಯ' ಎಂಬ ಪದ ಮೇಲಿಂದ ಮೇಲೆ ಬರುತ್ತದೆ.

ಇಲ್ಲಿ ಕವಿ ಶಿವನ ಸುಂದರ ಸ್ವರೂಪವನ್ನು ಕಲಾತ್ಮಕವಾಗಿ ಕಟ್ಟಿಕೊಡಲು ಪ್ರಯತ್ನಿಸಿದ್ದಾನೆ. ಅವನು ಶಿವನನ್ನು ಪಂಪಾನಗರ ನಿವಾಸಿ, ಕೆಂಜೆಡೆಗಳ ಕಮನೀಯ ರೂಪಿ,

ಗಜಚರ್ಮಧರ, ಪಿನಾಕ ಪಾಣಿ, ಗಿರಿಜಾಲೋಲ ಹೃದಯಿ, ನಿರಹಂಕಾರಿ, ನಿತ್ಯನಿರಂಜನನೂ ನಿರ್ವಿಕಲ್ಪ ಸ್ವರೂಪಿ ಎಂದು ನಾನಾ ರೀತಿಯಲ್ಲಿ ಬಣ್ಣಿಸುತ್ತಾನೆ. ಒಂದು ಓತಪ್ರೋತವಾಗಿ ಬರುವ ಈ ವರ್ಣನೆಗಳು ಶಿವನ ಸತ್ಯ ಸ್ವರೂಪವನ್ನು ದರ್ಶಿಸುತ್ತವೆ.

## 7.1.4 ಪಂಚಾಕ್ಷರಿ ರಗಳೆ

ಇದು ಶ್ರೀಮದ್ ಪಂಚಾಕ್ಷರಿ ಮಂತ್ರದ ಘನ ಸಾಮರ್ಥ್ಯವನ್ನು ತಿಳಿಸುವ ಚಿಕ್ಕ ಪದ್ಯ. ಪಂಚಾಕ್ಷರಿಯ ಸ್ವರೂಪವನ್ನು ಕುರಿತಂತೆ ಕವಿ "ನೋಡೆ ಅಕಾರ ಉಕಾರ ಮಕಾರಂ ಕೂಡಲ್ ಬಿಂದು ಸಹಿತಮೋಂಕಾರಂ ತುದಿಯೊಳ್ ನಮ:ಶಿವಾಯ ಎನುತಿರ್ಪುದು"[1] ಎನ್ನುತ್ತಾನೆ. ಅಕಾರ ಉಕಾರ ಮಕಾರಗಳಿಂದ ಕೂಡಿದ ಓಂಕಾರದ ಜೊತೆಗೆ ನಮ:ಶಿವಾಯವೂ ಸೇರಿದರೆ ಅದನ್ನು 'ಪಂಚಾಕ್ಷರಿ' ಎನ್ನುವರು. ವೀರಶೈವ ಧರ್ಮದಲ್ಲಿ ಈ ಪಂಚಾಕ್ಷರಿಗೆ ವಿಶೇಷ ಮಹತ್ವ ಇದೆ. ಒಂದು ರೀತಿಯಲ್ಲಿ ಈ ಮಂತ್ರವೇ ವೀರಶೈವ ಧರ್ಮದ ಅಡಿಗಲ್ಲು. ಕವಿ ತಿಳಿಸುವಂತೆ ಅದರ ಮಹತ್ವ ಹೀಗಿದೆ;

ಪಂಚಾಕ್ಷರಿ ಮಂತ್ರ ಸಕಲ ವೇದ ಶಾಸ್ತ್ರ ಪುರಾಣಗಳಿಗೆ ಮಿಗಿಲಾದದ್ದು; ಅವುಗಳಿಗೆ ಮಾತಾಪಿತರಿದ್ದಂತೆ. ಶಿವನಿಗೆ ನಿವಾಸದಂತೆ, ಜಪದ ಮಾಲೆ, ಸುಖದಲೀಲೆ, ಕರ್ಣಾಭರಣ, ಸರ್ವ ಅವಯವವೂ ಆಗಿದೆ. ಅದು ಪರಮ ಜ್ಯೋತಿರ್ಲತೆಯೂ ಪರಮ ಪವಿತ್ರವೂ ಪರಮ ಜ್ಞಾನದ ಮೊನೆಯೂ ಪರತತ್ವದ ನೆಲೆವನೆಯೂ ಆಗಿದೆ. ಅಕ್ಷರ ಕುಲಬೀಜ, ಶಬ್ದ ಬ್ರಹ್ಮ, ಪ್ರಣವ ಸ್ವರೂಪದ ಚೂಡಾಮಣಿಯಾದ ಇದನ್ನು ಎಲ್ಲರೂ ಎಲ್ಲ ಕಾಲದಲ್ಲಿಯೂ ಎಲ್ಲಿದ್ದರಲ್ಲಿ ಒಲವಿನಿಂದ ಉಚ್ಚರಿಸಬೇಕು. ಆಗ ಮಾನವ ತನ್ನ ದುಷ್ಕರ್ಮಗಳಿಂದ ದೂರವಾಗಿ ಶಿವಸಾಯುಜ್ಯವನ್ನು ಪಡೆಯುತ್ತಾನೆ. ಅಲ್ಲದೆ ಬುದ್ಧಿಗೆ ಭೂಷಣವೂ ಭಕ್ತಿಯ ಭಾಗ್ಯದ ಬೆಳೆಯೂ ಶರಣರ ಚಿಂತಾಮಣಿಯೂ ಆದ ಈ ಮಂತ್ರವನ್ನು ಮರೆತು ಉಚ್ಚರಿಸಿದರೆ ಸುರಪದವಿಯೂ ಅರಿತು ಉಚ್ಚರಿಸಿದರೆ ಗಣಪದವಿಯೂ ಭಕ್ತನಿಗೆ ದೊರೆಯುವುವು.

## 7.1.5 ರುದ್ರಾಕ್ಷಿ ರಗಳೆ

ಇದು ಹರಿಹರನ ವಸ್ತುನಿಷ್ಠ ರಗಳೆಗಳ ಗುಂಪಿನಲ್ಲಿ ಒಂದು. ಇದರಲ್ಲಿ ರುದ್ರಾಕ್ಷಿಯ ಮಹಿಮೆಯನ್ನು ಕುರಿತು ಬರೆದಿದ್ದಾನೆ. ಮಧ್ಯೆ ಮಧ್ಯೆ ಶಿವನನ್ನು ವರ್ಣಿಸಿದ್ದಾನೆ.

ಕವಿ ಹೇಳುವ ಹಾಗೆ ರುದ್ರಾಕ್ಷಿಗೆ ಹಲವು ಮುಖಗಳಿವೆ. ಅವು ಏಕೋರುದ್ರ, ಅರ್ಧನಾರೀಶ್ವರ ಮುಂತಾದವು. ಇದನ್ನು ಶಶಿಜೂಟನು 'ಉರಶಿಖಾಮಣಿ'ಗೂ ಗಿರೀಶನು ಕಂಠಮಾಲೆಗೂ ಶೂಲಿಯು 'ಬಾಹುಬಳೆ'ಗೂ ಧರಿಸಿಕೊಂಡಿದ್ದಾರೆ. ದೇಹದ ಯಾವ ಭಾಗದಲ್ಲಿಯಾದರೂ ಇದನ್ನು ಧರಿಸಬಹುದು. ಸರ್ವದೇವಮಯನೊಪ್ಪುವ ಈ ರುದ್ರಾಕ್ಷಿಯನ್ನು ಹರಿಹರ –

ಹರನ ಕಂಗಳ ಕಾಂತಿಯುನ್ನತಂ ರುದ್ರಾಕ್ಷಿ

--------------------------------

ಬೆಳೆದಿಳಿದ ರುದ್ರನಾನಂದಾಶ್ರು ರುದ್ರಾಕ್ಷಿ[2]

ಎಂದು ಬಣ್ಣಿಸಿದ್ದಾನೆ. ಇದು 'ಸುಗತಿಯನುಗುಳ್ವ' ಪುಣ್ಯದ ಚಿನ್ನದ ಘಟ್ಟಿ ಇದ್ದಂತೆ ಅತ್ಯಮೂಲ್ಯವಾದದ್ದು.

ರುದ್ರಾಕ್ಷಿಯ ಮಹತ್ವವನ್ನು ತಿಳಿಸಲು ಬಹುಶ: ಇದಿಷ್ಟೇ ವರ್ಣನೆ ಸಾಕು. ಎನಿಸುತ್ತದೆ. ಆದರೆ ಆವೇಶಭರಿತನಾದ ಕವಿ ಇಷ್ಟಕ್ಕೆ ತೃಪ್ತನಾಗದೆ ಮತ್ತೆ ಮುಂದುವರಿದು ಕಾರಿಕಾಲಮ್ಮೆಯ ಜಪದ ಮಾಲೆ, ಶಿವನ ಸದ್ಭಕ್ತಿಯ ಚೂಡಾಮಣಿ, ನೆನೆದುದನ್ನು ನೀಡುವ ಚಿಂತಾಮಣಿ ಎಂದು ಹಲವು ಬಗೆಯಲ್ಲಿ ವರ್ಣಿಸಿದ್ದಾನೆ. ಹಾಗೆ ವರ್ಣಿಸಿ ವಿಭೂಷಣನು ತೊಡುವ ವಜ್ರಾಂಗಿಯಾದ ಇದನ್ನು ಜಪತಪ, ನೇಮ, ಶಿವಪೂಜೆ, ಶಿಕ್ಷೆ, ರಕ್ಷೆ ಮುಂತಾದ ಸರ್ವಕರ್ಮಗಳಲ್ಲಿಯೂ ಧರಿಸಬೇಕು. ಹಾಗೆ ಧರಿಸಿದರೆ ಶಿವಸಾಯುಜ್ಯ ದೊರೆಯುವುದು ಎನ್ನುತ್ತಾನೆ.

ಹೀಗೆ ರುದ್ರಾಕ್ಷಿಯ ವರ್ಣನೆ ನಿರರ್ಗಳವಾಗಿ ಸಾಗುತ್ತದೆ. ಅದನ್ನು ವರ್ಣಿಸಿದ ಹಾಗೆಲ್ಲ ಅವನ ಉತ್ಸಾಹ ಹಿಗ್ಗುತ್ತಲೇ ಹೋಗುತ್ತದೆ. ಭಕ್ತಿಯ ಆವೇಶದಲ್ಲಿ ನಡೆಯುವ ಈ ವರ್ಣನೆ ಮೇಲಿಂದ ಮೇಲೆ ನಿರಂತರವಾಗಿ ಹರಿದು ಬಂದರೂ ಎಲ್ಲಿಯೂ ಬೇಸರ ತರುವುದಿಲ್ಲ. ಎಲ್ಲವೂ ಔಚಿತ್ಯಪೂರ್ಣವಾಗಿಯೇ ಇವೆ. ಯಾವ ಪದವೂ ಪುನರುಕ್ತವಾಗದೆ ಹೊಸತು ಹೊಸತಾಗಿಯೇ ಕಾಣುತ್ತವೆ.

## 7.1.6 ವಿಭೂತಿ ರಗಳೆ

ವೀರಶೈವರಲ್ಲಿ ವಿಭೂತಿಗೆ ವಿಶೇಷ ಮಹತ್ವವಿದೆ. ಅಲ್ಲಿ ಶರಣನಾದವನು ಹಣೆಯ ಮೇಲೆ ವಿಭೂತಿಯನ್ನು ಕಡ್ಡಾಯವಾಗಿ ಧರಿಸಲೇಬೇಕು. ಆಗಮಾತ್ರವೇ ಅವನು ವೀರಶೈವ ಎನಿಸಿಕೊಳ್ಳುತ್ತಾನೆ. ಇದರ ಅಪಾರವಾದ ಮಹಿಮೆಯನ್ನು ಹರಿಹರ ವಿಭೂತಿ ರಗಳೆಯಲ್ಲಿ ಹಾಡಿದ್ದಾನೆ. ಶಿವನ ಪಾರಮ್ಯವನ್ನು ಹಾಡುತ್ತಲೇ ಕವಿ ವಿಭೂತಿಯ ಮಹಿಮೆಯನ್ನು ತಿಳಿಸುತ್ತಾನೆ.

ಹರಿಹರ ಹೇಳುವಂತೆ ವಿಭೂತಿಯು ಘನ ಪದವಿಯನ್ನು ನೀಡುವಂಥದ್ದು. 'ದುರಿತೌಘ'ದಿಂದ ನೊಂದವರನ್ನು ರಕ್ಷಿಸಿ ಸಮಸ್ತ ಜನರಿಗೂ 'ಮಂಡನತೆ'ಯನ್ನೂ ನೀಡುವಂಥದ್ದು. ಬಾಳನಯನದಿಂದ ಹುಟ್ಟಿ 'ಕೋಮಲಾಂಘ್ರಿಪ್ರಿಯ'ನ 'ಕಮಲಯುಗ್ಮ'ದಲ್ಲಿ ವಿರಾಜಿಸುತ್ತಿರುವ ಇದನ್ನು ಹಂಪೆಯ ವಿರೂಪಾಕ್ಷ ಒಲಿದು ಧರಿಸಿದ್ದಾನೆ.

'ಭಕ್ತಕುಲದ ಭಾಳ' ತಳದಲ್ಲಿ ಬೆಳೆಯುವ ತಿಲಕವಾದ ಇದು ಪ್ರಣವದಕ್ಷರ ಸ್ವರೂಪವೂ ಹೌದು. ಇದು ಶರಣಜನರ ನಿಜಭುಜದ ವಿಜಯಪಟ್ಟ, ಅಂತರಂಗದ ಮಲಿನವನ್ನು ತೊಳೆಯುವ ಸಲಿಲದಂತೆ.

ಇಂಥ ಮಹಿಮಾತಿಶಯ ವಿಭೂತಿಯನ್ನು ಭಕ್ತನು ಶಿರದಲ್ಲಿ ಇಟ್ಟರೆ ಸದಾಶಿವನೂ ಕೊರಳಲ್ಲಿ ಇಟ್ಟರೆ ಗರಳಕಂಠನೂ ಉರದೊಳಗಿಟ್ಟರೆ ಮಹೇಶ್ವರನೂ ಬಂದು ಅವನಲ್ಲಿ ನೆಲೆಸುತ್ತಾನೆ. ಇದು ಬಾಲಕರಿಗೆ, ಭಯಗೊಂಡವರಿಗೆ, ಭೂತ ಹಿಡಿದವರಿಗೆ, ಬಾಣಂತಿಯರಿಗೆ,

ರೋಗ ಹತ್ತಿದವರಿಗೆ ರಕ್ಷಣೆ ನೀಡುವಂಥದ್ದು; ನಿಷ್ಠಾವಂತ ಜನಕ್ಕೆ ಮಂಗಳಕರವೂ ದೇವ ರಾಜ ಬ್ರಹ್ಮ ಸಭೆಗಳಿಗೆ ಯೋಗ್ಯವೂ ಆಗಿದೆ.

## 7.1.7 ಲಿಂಗಾರ್ಚನೆಯ ರಗಳೆ

ಹರಿಹರ ತನ್ನ ಇಷ್ಟ ದೈವವಾದ ವಿರೂಪಾಕ್ಷನನ್ನು ಇಲ್ಲಿ ವಿವಿಧ ರೀತಿಯಿಂದ ಪ್ರಾರ್ಥಿಸಿಕೊಂಡಿದ್ದಾನೆ. ಅವನ ಪ್ರಾರ್ಥನೆಯಲ್ಲಿ ಭಕ್ತನ ಭಕ್ತ ಹೃದಯ, ಮುಗ್ಧಭಕ್ತಿ ಮತ್ತು ಶಿವಸಾಯುಜ್ಯವನ್ನು ಪಡೆಯುವ ತೀವ್ರ ಹಂಬಲದ ಹೃದಯಂಗಮ ಚಿತ್ರಣವಿದೆ.

ಕವಿ ಶಿವಸಾಯುಜ್ಯವನ್ನು ಪಡೆಯುವುದಕ್ಕಾಗಿ ಮಾಡುವ ಪ್ರಯತ್ನದಲ್ಲಿ ಮುಗ್ಧ ಭಕ್ತಿ ಎದ್ದು ತೋರುತ್ತದೆ. ಭಕ್ತನಾದ ಅವನು ಶಿವನ ಮಜ್ಜನಕ್ಕಾಗಿ ತುಂಗಭದ್ರ ನದಿಯಿಂದ ನೀರು ತರುತ್ತಾನೆ. ಮಘಮಘಿಸುವ ಚಂದನವನ್ನು ಮೈಗೆ ತೀಡಿ ಸುರಗಿ ಸುರಹೊನ್ನೆ ಮುಂತಾದ ಹೂಗಳಿಂದ ಮಾಡಿದ ಹೂಮಾಲೆಯನ್ನು ಶಿವನ ಮುಡಿಗೆ ಇಡುತ್ತಾನೆ. ಕಮನೀಯ 'ಗುಗ್ಗುಳ'ದ ಧೂಪವನ್ನೆತ್ತುತ್ತಾನೆ. ಆರೋಗಿಸಲು ದಿವ್ಯಾನ್ನ, ಅಮೃತಾನ್ನವನ್ನು ಇಟ್ಟು ಭಕ್ತಿಯಿಂದ ಕೈ ಮುಗಿಯುತ್ತಾನೆ. "ಚೆನ್ನಯ್ಯನಿಕ್ಕಿದಂಬಲಿಯಿದಿದಾರ್ಯೆಸಯ್ಯ ...... ಚೋಳಿಯಕ್ಕನ ಬಾಯ ತುತ್ತೆಂದು ಬಗೆಯಯ್ಯ."[3] ನಾನು ನಿನ್ನಣುಗ, ಒಕ್ಕಲಿಗ ಮುದ್ದಯ್ಯನ ಅಕ್ಕರೆಯ ಮಗ, ಇಳೆಯಾಂಡ ಗುಡಿಮಾರನ ವರಸುತ ಎಂದು ಬೇಡಿಕೊಳ್ಳುತ್ತಾನೆ. ಅರುವತ್ತಮೂವರು ಪುರಾತನರೆನಿಸಿದ ನಂಬಿಯಣ್ಣ, ತಿರುನೀಲಕಂಠ ಮುಂತಾದವರು ಹಾಗೂ ನೂತನರಾದ ಬಸವಣ್ಣ ಅಕ್ಕಮಹಾದೇವಿ, ದಾಸಿಮಯ್ಯ ಮುಂತಾದವರನ್ನು ಕುರಿತಂತೆ ಲಲಿತ, ಮಲಹರಿ, ದೇಶೀ ಮುಂತಾದ ರಾಗದಲ್ಲಿ ಹಾಡುತ್ತಾನೆ. ನೆಚ್ಚಿನ ವಿರೂಪಾಕ್ಷನಿಗೆ, ನಿನ್ನನ್ನಪ್ಪಿ ಸುಖ ಪಡೆಯುವುದನ್ನು ಕರುಣಿಸು ತಂದೆ ಎಂದು ಬೇಡುತ್ತಾನೆ.

ಕವಿಯ ದೃಷ್ಟಿಯಲ್ಲಿ ತಾನು ಒಲಿದ ಶಿವ 'ಕೋಟ್ಯಾರ್ಕತೇಜೋಮಯ'ನೂ ಗಂಗಾಮುಕುಟ ರಂಜಿತ ಸ್ವರೂಪನೂ ಆದವನು. ಕವಿ ಅವನಿಗೆ ತೊತ್ತು ಇದ್ದಂತೆ. ಅವನಿಗೆ ಶಿವನಲ್ಲದೆ ಬೇರೆ ಯಾರೂ ಬೇಕಿಲ್ಲ. ಆದಕ್ಕಾಗಿ ಅವನು ಶಿವನನ್ನು -

**ಅವ ಜಾತಿಯೊಳಗೆ ಪುಟ್ಟಿದೊಡೆಲೆ ದೇವ**
**ನೀವಲ್ಲದರಿಯದಂತಿರಿಃಸೆನ್ನನೆಲೆ ದೇವ**[4]

**ಆವ ತೆಱದಿದಾದಡಂ ಗುರು ವಿರೂಪಾಕ್ಷ**
**ದೇವ ನೀ ಕರುಣಿಪುದು ಹಂಪೆಯ ವಿರೂಪಾಕ್ಷ**[5]

**ಆಳಿನಪಮಾನವಾಳ್ದಂಗಯ್ಯ ಕಾಯಯ್ಯ**
**ಜಾಳಿಸದೆ ಪಾಪಾತ್ಮವಿಃನನಿನ್ನು ನೀಗಯ್ಯ**[6]

ಈ ರೀತಿ ನಿವೇದಿಸಿಕೊಳ್ಳುತ್ತಾನೆ. ಈ ನಿವೇದನೆಯಲ್ಲಿ ಹರಿಹರನ ಮುಗ್ಧತೆ ಹಾಗೂ

ಭಕ್ತಿಭಾವದ ತುಡಿತವನ್ನು ಸ್ಪಷ್ಟವಾಗಿ ಗುರುತಿಸಬಹುದು. ಆ ತುಡಿತದಲ್ಲಿ ಸ್ವಲ್ಪವೂ ಕಪಟವಿಲ್ಲ. ಅವನ ಭಕ್ತಿ ನಿರಪೇಕ್ಷ ಹಾಗೂ ನಿರಹಂಕಾರದಿಂದ ಕೂಡಿರುವಂತಹದ್ದು. ಈ ರಗಳೆಗಳನ್ನು ಓದುತ್ತಿದ್ದರೆ ನಿಜವಾದ ಭಕ್ತನ ದರ್ಶನ ಪಡೆದಂತಾಗುವುದು

## 7.2 ಕವಿಗೆ ನೇರವಾಗಿ ಸಂಬಂಧಿಸಿದ ರಗಳೆಗಳು

'ಸಂಸಾರ ವ್ಯಾಮೋಹ ನಿರಸನ ರಗಳೆ' ಮತ್ತು 'ಪುಷ್ಪ ರಗಳೆ' ಎಂಬ ಎರಡು ರಗಳೆಗಳನ್ನು ಮಾತ್ರ ಈ ಭಾಗದಲ್ಲಿ ಗುರುತಿಸುತ್ತೇವೆ.

### 7.2.1 ಸಂಸಾರವ್ಯಾಮೋಹ ನಿರಸನ ರಗಳೆ

ಸಕಲ ಜೀವ ರಾಶಿಗಳಲ್ಲಿ ಮನುಷ್ಯ ಜೀವಿಯೇ ಶ್ರೇಷ್ಠ ಎಂಬ ನಂಬಿಕೆ ಇದೆ. ಆದರೆ ವಾಸ್ತವದಲ್ಲಿ ಈ ನಂಬಿಕೆ ಎಷ್ಟರ ಮಟ್ಟಿಗೆ ಸತ್ಯ, ಅವನ ಬದುಕಿನ ಸಾರ್ಥಕತೆಯಾದರೂ ಏನು? ಎಂಬುದು ಮಾತ್ರ ಯಾರಿಗೂ ತಿಳಿದಿಲ್ಲ. ಅನಿಶ್ಚಿತವಾದ ಅವನ ಬದುಕು ದುರಂತ ಅಸಹ್ಯಗಳ ಆಗರ. ಹುಟ್ಟಿನಿಂದ ಸಾಯುವವರೆಗೆ ಅವನ ಹಿಂದೆ ದುರಂತಗಳ ಸರಮಾಲೆಯೇ ಇರುತ್ತದೆ. ಆದರೆ ಅಲ್ಪನಾದ ಮಾನವನಿಗೆ ಆ ಬಗೆಗಿನ ಲಕ್ಷ್ಯ ಸ್ವಲ್ಪವೂ ಇಲ್ಲ. ಅವನ ಲಕ್ಷ್ಯವೇನಿದ್ದರೂ ಮಿಂಚಿ ಮರೆಯಾಗುವ ಕ್ಷಣಿಕ ಆಸೆಗಳತ್ತ. ಅವುಗಳನ್ನೆ ನಂಬಿ ಅಂತಿಮವಾಗಿ ಅವುಗಳಿಂದಲೇ ಸಾಯುತ್ತಾನೆ. ಹೀಗೆ ಅಸ್ಥಿರವಾದ ಮಾನವ ಜೀವ ಎದುರಿಸುವ ಹಲವು ದುರಂತಗಳನ್ನು ಕವಿ ತನ್ನ 'ಪಿಂಡೋತ್ಪತ್ತಿ' ಅಥವಾ 'ಸಂಸಾರ ವ್ಯಾಮೋಹ ನಿರಸನ ರಗಳೆ' ಗಳಲ್ಲಿ ಚಿತ್ರಿಸುತ್ತಾನೆ.

ಈ ರಗಳೆಯನ್ನು ಮನುಷ್ಯನ ಹುಟ್ಟು ಮತ್ತು ಬಾಲ್ಯ, ಯೌವನ, ಮುಪ್ಪು ಮತ್ತು ಸಾವು ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು.

#### 7.2.1.1 ಹುಟ್ಟು ಮತ್ತು ಬಾಲ್ಯ

ಇಲ್ಲಿ, ಮನುಷ್ಯ ಹುಟ್ಟುವುದಕ್ಕೆ ಮೊದಲು ನಂತರ ಬಾಲ್ಯದಲ್ಲಿ ಅನುಭವಿಸುವ ಸಂಕಷ್ಟಗಳ ಚಿತ್ರಣವಿದೆ. ಹರಿಹರನ ಪ್ರಕಾರ ಮನುಷ್ಯ ಮಾನವನಾಗಿ ಜನ್ಮತಾಳುವುದಕ್ಕೆ ಮೊದಲೇ "ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ ಹುಲ್ಲಾಗಿ ಲತೆಯಾಗಿ ಗಿಡವಾಗಿ ಮರವಾಗಿ"[7] ಹೀಗೆ ನಾನಾ ಜನ್ಮಗಳನ್ನೆತ್ತುತ್ತಾನೆ. ಆನಂತರ ಕಾಕತಾಳೀಯ ಎಂಬಂತೆ 'ತಾಯಿ ತಂದೆಯ ಶುಕ್ಲ ಶೋಣಿತ' ಸಂಯೋಗವಾಗಿ ಅವಯವಗಳು ಬಲಿತು ಮನುಷ್ಯನಾಗಿ ಹುಟ್ಟುತ್ತಾನೆ. ತಾಯಿಯ ಹೊಟ್ಟೆಯಲ್ಲಿ ಪಿಂಡರೂಪದಲ್ಲಿರುವಾಗ ಅವನು ತಾಯಿ ಎತ್ತೆತ್ತ ಮಗ್ಗುಲಾಗುತ್ತಾಳೋ ಅತ್ತತ್ತ 'ಕೆಡೆ'ಯುತ್ತಾನೆ. 'ಉದರ ಗತಿಯ ಸೆಖೆ'ತಾಗಲು ಕುಂದುತ್ತಾನೆ. ಮಾಸು ಮುಸುಕಲು ಉಬ್ಬಸಪಡುತ್ತಾನೆ. ಕ್ರಿಮಿ ಕೀಟ ಕ್ಷುದ್ರ ಜಂತುಗಳ ಹಾಗೆ ಯಾವ್ಯಾವ ಹೇಸಿಕೆಯುಂಟೋ ಅದರೊಳಗೆಲ್ಲ ಒಂದು ತಲೆಯ ಹುಳುವಿನಂತೆ ಬೆಳೆಯುತ್ತಾನೆ. ಹಾಗೆ ಬೆಳೆಯುವಾಗ ಕಣ್ಣು ಬಲಿಯದಿದ್ದರೆ ಕುರುಡನಾಗುತ್ತ, ಕಾಲು ಬಲಿಯದಿದ್ದರೆ ಹೆಳವನಾಗುತ್ತ,

ಜೀವ ಬಲಿಯದಿದ್ದರೆ ಬಸುರಿಳಿಯುತ್ತ ಹಲವು ಕುರೂಪಗಳನ್ನು ಹೊತ್ತು ಹುಟ್ಟುತ್ತಾನೆ. ಹುಟ್ಟುವಾಗಲೂ (ತಾಯಿ ಹೊಟ್ಟೆಯಿಂದ ಧರೆಗೆ ಬರುವಾಗ) ಅವನಿಗೆ ಸಂಕಟ ತಪ್ಪಿದ್ದಲ್ಲ. ತಾಯಿಯ ಹೊಟ್ಟೆಯಲ್ಲಿನ ಪಿಂಡ ಸರಿಯಾಗಿ ಬೆಳವಣಿಗೆಯಾಗದಿದ್ದಲ್ಲಿ ಕತ್ತರಿಕಾರರ ಮೊರೆ ಹೋಗಬೇಕಾಗುತ್ತದೆ. ಕತ್ತರಿಕಾರರು ಸರ್ವಾಂಗವನ್ನೂ ಕತ್ತರಿಸುವಾಗ ಆಕೆ ನರಕದಲ್ಲಿ ಸಿಕ್ಕಿ ನರಳುತ್ತಾಳೆ. ಅದರ ಮಧ್ಯೆಯೇ ಅವಳ ಮುಂದಿನ ಮೂತ್ರನಾಳದ ಮೂಲಕ ಮಗುವು 'ಬುಡಿಲೆಂದು' ಬೀಳುತ್ತದೆ. ಸೂಲಗಿತ್ತಿಯರು ಹಿಡಿದು ನಿಂತ ಮೊರದ ಮೇಲೆ ಬಿದ್ದ ಮಾಸು ತುಂಬಿದ ಮಗುವನ್ನು ಬೆಚ್ಚನೆಯ ನೀರಿನಿಂದ ಸೂಲಗಿತ್ತಿಯರೇ ಶುದ್ಧಗೊಳಿಸಿ ಹೊಕ್ಕುಳ ಬಳ್ಳಿಯನ್ನು ಕತ್ತರಿಸುತ್ತಾರೆ.

ಹೀಗೆ ಮನುಷ್ಯ ತಾನು ಹುಟ್ಟುವಾಗಲೇ ಹಲವು ನರಕಗಳನ್ನು ಅನುಭವಿಸಬೇಕಾಗುತ್ತದೆ. ಅಂದಮಾತ್ರಕ್ಕೆ ಆತ ನರಕದಿಂದ ವಿಮುಕ್ತನಾದ ಎಂದು ಹೇಳಲಾಗುವುದಿಲ್ಲ. ಅದರ ನರಕಗಳು ಬೆಳೆಯುವಾಗಲೂ ಮುಂದುವರಿಯುತ್ತವೆ. ಬೆಳೆಯುವಾಗ —

> ಆರಾರದೇನಂ ಮಾಳ್ಪರಂತದಕ್ಕೊಳಗಾಗಿ
> ಬಾರದ ಭವಂ ಭರಿಸಲಂತದಕ್ಕೊಳಗಾಗಿ
> ಏಜೂದ ಹುಣ್ಣೊಡಲ ಮೊಲೆಯ ಕೀವಂ ಪೀರ್ದು
> ಮಾಜೂಗಿ ಮಾಯೆಯಿಚ್ಚೆಗೆ ಬೆಚ್ಚುತ್ತೊಳಸಾರ್ದು
> ತೊಟ್ಟಿಲೊಳ್ ಮಲ ಮೂತ್ರದೊಂದುಂಡೆಯಾಗುತಂ
> ಪಟ್ಟಿರ್ದು ಮೊಲೆಗೆ ನಾಲಿಗೆಗೀಳ್ದು ನೋವುತಂ
> ಅಂಬಳಿಕೆ ಉಚ್ಚಿಷ್ಟವಿಳಿಯೆ ನೆಜೆಜಾರಿಸುತೆ
> ಬೆಂಬಳಿಯೊಳಿಳಿವ ಮೂತ್ರವನಲ್ಲಿ ಜಾರಿಸುತೆ[8]

ಮಲ, ಹೀಗೆ ಮೂತ್ರ, ಹುಳುಗಳೆನ್ನದೆ ಎಲ್ಲವನ್ನು ತಿನ್ನುತ್ತಾ ಬೆಳೆಯುತ್ತಾನೆ. ಈ ಮಧ್ಯೆ ಬಾಲಗ್ರಹವಾದರೆ ವಿಕೃತಿಗೊಂಡು, ರೋಗ ತಗುಲಿವರೆ ಬೆದಬೆದನೆ ಬೆಂದು, ಘೋರ ನರಕ ಅನುಭವಿಸುತ್ತಾನೆ.

## 7.2.1.2 ಯೌವನ

ಮನುಷ್ಯ ಬಾಲ್ಯವನ್ನು ಕಳೆಯುತ್ತಿದ್ದಂತೆ ಯೌವನಕ್ಕೆ ಕಾಲಿಡುತ್ತಾನೆ. ತಂದೆ ತಾಯಿಯರಿಗೆ ಮದುವೆಯ ಚಿಂತೆ ಪ್ರಾರಂಭವಾಗುತ್ತದೆ. ಯಾವುದೋ ಒಂದು ದೈತ್ಯಳಂತಹ ಹೆಣ್ಣನ್ನು ತಂದು "ಹಾಳೂರ ಕೋಳಮಂ ಕೊರಳೊಳಿಕ್ಕುವ ತೆಱದಿ"[9] ಹೆಳವಂಗೆ ಸಂಕಲೆಯನಿಕ್ಕುವಂತೆ, ಪಶುವಿನ ಕೊರಳಿಗೆ ಪಾಶವನ್ನು ಬಿಗಿಯುವಂತೆ ಗಂಟು ಹಾಕುತ್ತಾರೆ. ಹರಿಹರ ಕೊಡುವ ವರ್ಣನೆಗಳು ಸಂಸಾರದ ಭೀಕರತೆಯನ್ನು ಸಮರ್ಥವಾಗಿ ಕಟ್ಟಿ ಕೊಡುತ್ತವೆ.

ಮನುಷ್ಯ ತನ್ನ ಹೇಸಿಗೆಗೆ ತಾನೇ ಒಂದು ನೆಲೆಮನೆ ಎಂಬುದನ್ನರಿಯದೆ ತನ್ನ ಯೌವನ ದಲ್ಲಿ ಲಲನೆಯರ ಸುಣ್ಣನೆಯ 'ಚೋಹಕ್ಕೆ' ಮನಸೋಲುತ್ತಾನೆ. ಕಿವಿಯ ಗುಗ್ಗೆ ಹುಳು ಸುರಿವ

'ವಿವರ'ದಂತೆ, ಕಣ್ಣು ಪೊಟ್ಟಣದಂತೆ, ಮುಖ ಹುಣ್ಣಿನಂತೆ, ನಾಸಿಕ ಸಿಂಬಳ ಸುರಿವ ದೊಡ್ಡ ನಾಳದಂತೆ, ಸಳಿತೋಳ್ಗಳು ಅಸ್ಥಿದಂಡದಂತೆ, 'ಬಟ್ಟಮೊಲೆ'ಗಳು ಮಾಂಸದ ಮುದ್ದೆಯಂತೆ, 'ಪೊರವಾರು' ಮಲಮೂತ್ರದ ಒರತೆಯಂತೆ ಎಂಬ ಪ್ರಜ್ಞೆಯಿಲ್ಲದೆ -

> ಪುಳಿತ ಪೆಣನಂ ಕಡಿದುತಿನುತಿರ್ಪ ನಾಯಂತೆ
> ಕಳಿತ ಮಾಂಸಕ್ಕೆಳಸಿ ತಿಂಬ ಬಳ್ಳುವಿನಂತೆ
> ಉಚ್ಚಿಷ್ಟದೊಳ್ಪಾಳುತಿಹ ಹಂದೆಯಂತೆ[10]

ಅವಳ ಮೋಹಕ್ಕೆ ಒಳಗಾಗುತ್ತಾನೆ. ಹೆಣ್ಣಿನ ಸುಖಕ್ಕಾಗಿ ಚೆನ್ನು, ಚರಿತ, ವಿಳಾಸ, ಪ್ರಾಣ, ಹೊನ್ನು ಎಲ್ಲವನ್ನೂ ಕಳೆಯುತ್ತಾನೆ. ಆದರೆ ಹೆಣ್ಣು ಮಾತ್ರ ನಿರ್ಲಿಪ್ತಳು ವ್ಯಕ್ತಿ ಬರಿದಾದ ಎಂದು ತಿಳಿಯುತ್ತಿದ್ದಂತೆಯೇ ಅಲ್ಲಿಂದ ಕಾಲ್ತೆಗೆಯುತ್ತಾಳೆ. ಸಂಪತ್ತು ಬರಿದಾದ ವ್ಯಕ್ತಿಯನ್ನು ಕಸ ಎಸೆಯುವಂತೆ ಎಸೆಯುತ್ತಾಳೆ. ಹಿಂದೆ ಸುತ್ತುವ ಅವನನ್ನು 'ನಡೆವೆಣನೆ ನುಡಿವೆಣನೆ ಬಾಳ್ವೆಣನೆ' ಹೋಗು, 'ಬಡಿಯದಿರ್ಬಾಲಮಂ, ಸುಡು ನಾಯೆ ಛೀ' ಎಂದು ನಾಯಿಯಂತೆ ಕಂಡು ಹಳೆಯ 'ಹರುಣಿ'ಯನ್ನು ಬೀಸಾಡುವಂತೆ ಬೀಸಾಡುತ್ತಾಳೆ. ಆದರೂ ಅವಳದೇ ಗುಂಗಿನಲ್ಲಿ ಬಿದ್ದು ತಂದೆ-ತಾಯಿ ಅಣ್ಣ-ತಮ್ಮ ಜೊತೆಗೆ ಇಡೀ ಬಂಧು ಬಳಗವನ್ನೇ ಕಳೆದುಕೊಂಡು ಏಕಾಂಗಿ ಮರುಳನಂತೆ ಅಲೆಯುವ ಸ್ಥಿತಿಗೆ ಬಂದು ತಲುಪುತ್ತಾನೆ.

ಹುಟ್ಟಿಸಿದ ಮಕ್ಕಳು ಜೀವ ಹಿಂಡತೊಡಗುತ್ತವೆ. ಅವುಗಳಿಗೆ ತಂದಿಕ್ಕಲೇ ಬೇಕು; ಆದರೆ ಶಕ್ತಿಯಿಲ್ಲ, ಸಾಲಕ್ಕೆ ಕೈ ಹಾಕುತ್ತಾನೆ, ಸಾಲ ಹೆಚ್ಚುತ್ತದೆ. ಬಡತನ, ದಾರಿದ್ರ್ಯ ಹೆಚ್ಚಿ ಉಪವಾಸವೇ ಗತಿಯಾಗುತ್ತದೆ. ಬೇಡುವುದು ಅನಿವಾರ್ಯವಾಗುತ್ತದೆ. ಕುಂತವರು, ನಿಂತವರು, ಬಂದವರು, ಬಲ್ಲವರನ್ನೆಲ್ಲ ಬೇಡುತ್ತಾನೆ. ಯಾರೂ ಲಕ್ಷಿಸುವುದಿಲ್ಲ. ಇಂಥ ದು:ಸ್ಥಿತಿಯಲ್ಲಿ ಎಂಟು ಗೇಣುದ್ದದ ಅವನ ದೇಹ ಕೇವಲ ಗೇಣುದ್ದಕ್ಕೆ ಬಂದು ನಿಲ್ಲುತ್ತದೆ. ದೈಹಿಕವಾಗಿ ಕೃಶನಾಗಿಹೋಗುತ್ತಾನೆ. ಮುಪ್ಪು ಕವಿಯುತ್ತದೆ.

### 7.2.1.3 ಮುಪ್ಪು ಮತ್ತು ಸಾವು

ವ್ಯಕ್ತಿಯು ಹುಟ್ಟು, ಬಾಲ್ಯ ಮತ್ತು ಯೌವನದ ಸಂದರ್ಭದಲ್ಲಿ ಎದುರಿಸುವ ನರಕಗಳಿಗಿಂತಲೂ ಮುಪ್ಪಿನ ಸಂದರ್ಭದಲ್ಲಿ ಎದುರಿಸುವ ನರಕ ಅತ್ಯಂತ ಭೀಕರವಾದದ್ದು. ಆ ಕಾಲ ಅವನಿಗೆ ಯಮಪುರದ ಸೋಪಾನವಿದ್ದಂತೆ, ಹೇಸಿಗೆಯ ಕೂಪದಂತೆ. ಆ ಸಂದರ್ಭದಲ್ಲಿ ಬೆನ್ನು ಬಾಗುತ್ತದೆ. ಹಲ್ಲು ಬೀಳುತ್ತವೆ. ತಲೆ ಬಳುಕುತ್ತದೆ. ಕಿವಿ ಕೇಳಿಸದಾಗುತ್ತದೆ. ಕೊನೆಗೆ-

> ತೋಳ ತೊವಲುಗಳೇಳ್ದು ನೀಳದಿಂ ಜೋಲುತಿರೆ
> ಜಾಳಿಸುತೆ ಕಾಲುಡುಗಿ ಕೋಲೂರಿ ನೇಲುತಿರೆ
> ಕೆಮ್ಮಿ ಗುಹೆಗಟ್ಟಿ ಘುಲ್ಲಿಸಿ ಕುಸುರಿ ಕುಕ್ಕರಿಸಿ
> ಕುಮ್ಮಿ ಕುಕ್ಕೆಯೊಳಳ್ದು ನೆರೆ ಮುದುಡಿ ಹೊಡಕರಿಸಿ[11]

ಈ ಸ್ಥಿತಿಗೆ ಬರುತ್ತಾನೆ. ಕಿವಿ, ಕಣ್ಣು, ಬಾಯಿ ಮತ್ತು ಮೂಗಿನಲ್ಲಿ ಲೋಳೆ ಸುರಿಯಲಾರಂಭಿಸಿ ನಿತ್ರಾಣನಾಗುತ್ತಾನೆ. ಕೂರಲಾಗದೆ ಏಳಲಾಗದೆ ಹೆಜ್ಜೆ ಹೆಜ್ಜೆಗೂ ಬೀಳುತ್ತಾ ಏಳುತ್ತಾ ಇರಲು ಬಂದವರೆಲ್ಲ ಹೇಸತೊಡಗುತ್ತಾರೆ. ಕೊನೆಗೆ ಹೇಸಿಗೆಯನ್ನು ಸಹಿಸಲಾರದೆ ಮಕ್ಕಳೇ ಧಿಕ್ಕರಿಸ ಲಾರಂಭಿಸುತ್ತಾರೆ. ಅವರು ಬಯ್ದರೂ ನಿಂದಿಸಿದರೂ, ಕಂಡೂ - ಕಾಣದಂತೆ ಇರಬೇಕಾಗುತ್ತದೆ.

ಮುಪ್ಪು ಮೀರಿ ಸಾವು ಹತ್ತಿರ ಬರುತ್ತಿದ್ದಂತೆಯೇ ಆ ನರಕದ ನಡುವೆಯೂ ಅವನಿಗೆ ಯಮನ ಭಯ ಕಾಡಲಾರಂಭಿಸುತ್ತದೆ. ದೇಹದ ಒಪ್ಪವಳಿಯುತ್ತ ಧರಣಿಗೆ ಬೀಳುವಾಗ ನಾಲಗೆ ಬೀಳುತ್ತದೆ. ಮೇಲುಸಿರು ನಿಂತು ನಿತ್ರಾಣವಾಗುತ್ತಿದ್ದಂತೆಯೇ ಅಕ್ಕಪಕ್ಕದವರು, ನೆಂಟರಿಷ್ಟರೆಲ್ಲಾ ಬಂದು ಸೇರುತ್ತಾರೆ. ತಮ್ಮ ತಮ್ಮಲ್ಲಿಯೇ " ಅಕ್ಕಟಾ ಈತಂಗೆ ಸಾವು ಬಂದುದು ನೋಡಾ 'ಅಕ್ಕಟಾ ಗುಣಿಮಾನಿ ಬುದ್ಧಿವಂತಂ ನೋಡಾ"[12] ಎಂದು ಮಾತನಾಡಿ ಕೊಳ್ಳತೊಡಗುತ್ತಾರೆ. ದೇಹ ಮೆಲ್ಲ ಮೆಲ್ಲನೆ ತಣ್ಣಗಾಗುತ್ತದೆ. ನಾಲಗೆ ಬಿದ್ದು ಬಾಯಲ್ಲಿ ಜೊಲ್ಲು ಸುರಿಯುತ್ತಿದ್ದಂತೆಯೇ ಯಮನ ಕಡೆಯವರು ಅನುವಾಗುತ್ತಾರೆ. ಸತಿ ಪುತ್ರರ ಗೋಳಾಟ ಪ್ರಾರಂಭವಾಗುತ್ತವೆ. ಆ ನಡುವೆಯೇ ಕೆಲವರು 'ಪೋದನಿಲ್ಲಿಲ್ಲ ಕಿರಿದುಸಿರಿನ್ನುಮಿರ್ದಪುದು' ಎಂದು ಕೆಲವರು 'ಎಲೆಲೇ ಸತ್ತಂಸತ್ತ'ನೆನ್ನುತ್ತಾರೆ ಮತ್ತೆ ಕೆಲವರು ಉತ್ಕ್ರಾಂತಿಯನ್ನೇ ಮಾಡಿ, ಅಲ್ಲಿ ಬರುವ ಭಾಗಕ್ಕಾಗಿ ಹೊಡೆದಾಡುತ್ತಿರುತ್ತಾರೆ. ಆ ಸಂದರ್ಭದಲ್ಲಿ ವ್ಯಕ್ತಿಯ ಕಣ್ಣು ತೇಲುತ್ತದೆ. ನಂಟರು, ನಲ್ಲರು, ಬಲ್ಲಿದರು, ಸತಿ ಪುತ್ರರು, ಎಲ್ಲರೂ ನೋಡ ನೋಡುತ್ತಿದ್ದಂತೆಯೇ ಯಮದೂತರು ಬಂದು ಎಳೆದೊಯ್ಯುತ್ತಾರೆ. ಯಾರೂ ಸಾವಿನಿಂದ ರಕ್ಷಿಸಲಾಗುವುದಿಲ್ಲ. ಬಳಿಕ ಮುಟ್ಟುವವರು ಮತ್ತು ನೋಡುವವರಿಲ್ಲದ ಶರೀರವನ್ನು ತೆಗೆದುಕೊಂಡುಹೋಗಿ ನಿಮಿಷಾರ್ಧದಲ್ಲಿ ಸುಟ್ಟುಹಾಕುತ್ತಾರೆ. ಅದು ಅಚಿರವಾಗುತ್ತದೆ.

ಕವಿಗೆ ಈ ಎಲ್ಲ ಸುಖ ದು:ಖ ಮತ್ತು ಕಷ್ಟಕೋಟಲೆಗಳ ಅರಿವಿದೆ. ಆದ್ದರಿಂದಲೇ ಆತ ಪಂಪಾಪುರದ ನಿಧಿ, ಪಂಪಾಪುರದ ಗತಿ, ಪಂಪಾಪುರದ ಸುಧೆ ಎನಿಸಿದ ವಿರೂಪಾಕ್ಷನನ್ನು "ಅನೇಕ ಸಂಸಾರವೇಕೆ ಕೇಳಲೆ ತಂದೆ 'ನೀನು ಎನಗೊಡ್ಡಿದ ಮಹೇಂದ್ರಜಾಲಂ ತಂದೆ ..... ಮುಂದುಗೆಟ್ಟೆಂ ಮೂರ್ಖನಾಗಿರ್ದೆನಿನ್ನೆಗಂ 'ಇಂದುಧರ ನಿಮ್ಮನರಿಯದೆ ಕೆಟ್ಟೆನಿನ್ನೆಗಂ"[13] ಎಂದು ಆತ್ಮಶೋಧನೆ ಮಾಡಿಕೊಳ್ಳುವ ಮೂಲಕ ಅವುಗಳಿಂದ ಮುಕ್ತಿದೊರಕಿಸುವೆಂತೆ ಬೇಡಿಕೊಳ್ಳುತ್ತಾನೆ.

ಒಟ್ಟಿನಲ್ಲಿ ಸಂಸಾರದ ನಶ್ವರತೆಯನ್ನು ಎತ್ತಿ ಹಿಡಿಯುವುದು ಹರಿಹರನ ಮುಖ್ಯ ಉದ್ದೇಶ. ಆ ಕಾರ್ಯವನ್ನು ಹರಿಹರ ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದಾನೆ. ಆಯಾಯ ಸಂದರ್ಭಕ್ಕೆ ತಕ್ಕಂತೆ ಅಂಥದ್ದೇ ಪದ ಮತ್ತು ವಾಕ್ಯಗಳನ್ನು ಅಳವಡಿಸಿದ್ದಾನೆ. ಈ ಪದ್ಯವನ್ನು ಓದಿದ ಬಳಿಕ ಸಾಂಸಾರಿಕ ಸುಖಕ್ಕಾಗಿ ಹಾತೊರೆಯುವ ಯಾರಿಗೇ ಆದರೂ ವೈರಾಗಿಗಳಾಗಿಯೇ ಬದುಕಿದರೆ ಚೆನ್ನ ಎಂದು ಅನಿಸದೇ ಇರದು.

## 7.3 ಪುಷ್ಪರಗಳೆ

ಭಗವಂತನ ಸೃಷ್ಟಿಯಲ್ಲಿ ಸುಂದರವೂ ಸುಮಧುರವೂ ಆದ ಹೂ, ನಾವು ನೋಡಲಿ ಬಿಡಲಿ, ಮುಡಿಯಲಿ ಮುಡಿಯದಿರಲಿ ತನ್ನಷ್ಟಕ್ಕೆ ತಾನು ಕಂಪು ಸೂಸುತ್ತದೆ. ಸೌಂದರ್ಯತುಂಬಿ ಅರಳುತ್ತದೆ. ಇಂತಹ ಸುಂದರವಾದ ಹೂ, ಹಲವು ಕವಿಗಳಿಗೆ ಸುಂದರವಾಗಿ ಕಂಡದ್ದು ವಿರಳ. ರಸಾನುಭೂತಿಯನ್ನು ಕೊಟ್ಟಿದ್ದು ಇನ್ನೂ ವಿರಳ. ಕವಿಗಳಿಗೆ ಸುಂದರವಾಗಿ ಕಂಡಿದ್ದು ಹೆಣ್ಣು ಮತ್ತು ಅವಳ ಅಂಗಾಂಗಗಳು. ಅವುಗಳ ವರ್ಣನೆಯಲ್ಲೇ ಅವರು ತಮ್ಮ ಬದುಕನ್ನು ಕೃತಾರ್ಥವಾಗಿಸಿಕೊಂಡರು. ಆದರೆ ಹರಿಹರ ಮಾತ್ರ ಹಿಂದಿನ ಕವಿಗಳ ಈ ಚಾಳಿಯಿಂದ ದೂರ ಉಳಿದಿದ್ದಾನೆ. ಯಾರಿಗೂ ಆಕರ್ಷಕವಾಗದ ಹೂವಿಗೆ ಅವನು ಮನಸೋತಿದ್ದಾನೆ. ಅವುಗಳ ಸುಂದರ ಲೋಕದಲ್ಲಿ ವಿಹರಿಸಿ ಮನಸೋತು ವರ್ಣಿಸಿದ್ದಾನೆ. ಅವನ ಮನದುಂಬಿದ ವರ್ಣನೆಯನ್ನು ಪ್ರಸ್ತುತ ಪುಷ್ಪರಗಳೆಯಲ್ಲಿ ಕಾಣಬಹುದು.

ಇಲ್ಲಿ ಒಟ್ಟು ನಾಲ್ಕು ಸನ್ನಿವೇಶಗಳು ಬರುತ್ತವೆ.

* ಹೂ ಕೀಳಲು ಹೋಗುವ ಸನ್ನಿವೇಶ
* ಹೂ ಕೀಳುವ ಸನ್ನಿವೇಶ
* ಹೂಗಳನ್ನು ತಂದು ಮಾಲೆ ಕಟ್ಟುವ ಸನ್ನಿವೇಶ
* ಹೂ ಮಾಲೆಯನ್ನು ಶಿವನಿಗೆ ಮುಡಿಸುವ ಸನ್ನಿವೇಶ

### 7.3.1 ಹೂ ಕೀಳಲು ಹೋಗುವ ಸನ್ನಿವೇಶ

ಸಾಮಾನ್ಯ ಭಕ್ತನೊಬ್ಬ ಪೂಜೆಯ ಹೂಗಾಗಿ ಶ್ರಮ ತೆಗೆದುಕೊಳ್ಳಲಾರ. ಅದಕ್ಕಾಗಿ ನಿದ್ದೆಗೆಡುವುದೂ ಇಲ್ಲ. ಎಷ್ಟು ಹೊತ್ತಿಗೆ ಎಚ್ಚರ ಆಗುತ್ತದೆಯೋ ಅಷ್ಟು ಹೊತ್ತಿಗೆ ಏಳುತ್ತಾನೆ. ಯಾವುದೋ ಒಂದು ಬುಟ್ಟಿಯನ್ನು ತೆಗೆದುಕೊಂಡು ಹೋಗಿ ಚಕಚಕನೆ ಹೂಗಳನ್ನು ಕಿತ್ತು ಬುಟ್ಟಿಗೆ ಹಾಕಿಕೊಂಡು ಬರುತ್ತಾನೆ. ಕೆಲವೊಮ್ಮೆ ಬುಟ್ಟಿಯನ್ನೂ ತೆಗೆದುಕೊಂಡು ಹೋಗುವುದಿಲ್ಲ. ಕಿತ್ತು, ಕೈಯಲ್ಲೇ ಹಿಡಿದುಕೊಂಡು ಬಂದು ಪೂಜೆಗೆ ಸಿದ್ಧನಾಗುತ್ತಾನೆ. ಅಲ್ಲಿಯವರೆಗೆ ಆತ ಮುಖವನ್ನು ಕೂಡ ತೊಳೆದಿರುವುದಿಲ್ಲ. ಆದರೆ 'ಪುಷ್ಪರಗಳೆಯಲ್ಲಿ ಬರುವ ಭಕ್ತನ ಪೂಜಾ ವಿಧಾನ ಇದಲ್ಲ. ಅವನದು ಅಂತರಂಗದ ಭಕ್ತಿ, ಎಲ್ಲ ಸಂದರ್ಭದಲ್ಲೂ ಆತನ ಪೂಜಾ ನಿಷ್ಠೆ ಮೆಚ್ಚುವಂಥದ್ದು.

ಈ ಭಕ್ತ ಪ್ರತಿದಿನ ಮುಂಜಾನೆಯೇ ಎದ್ದು ಮುಖ ತೊಳೆದು ವಿಭೂತಿ ಧರಿಸುತ್ತಾನೆ. ಆನಂತರ ಹೂಗಳನ್ನು ಕೀಳಲು ಬುಟ್ಟಿಯನ್ನು ತೆಗೆದುಕೊಂಡು ಹೂತೋಟದ ಕಡೆಗೆ ನಡೆಯುತ್ತಾನೆ. ಆ ಬುಟ್ಟಿ ಸಾಮಾನ್ಯ ಬುಟ್ಟಿಯಲ್ಲ; ಹೂವಿನ ಪರಿಮಳ ಸೋರದ ಹಾಗೆ ಹೆಣೆದಿರುವ ಬುಟ್ಟಿ. ಹೋಗುವಾಗ 'ಪರಿಮಳದ ಸುಗ್ಗಿ ಸೌರಭದ ಸಂದಣಿ' ಎನಿಸುವ, 'ಸುರುಚಿರಾಮೋದದ ರಸಾಂಬೋಧಿ' ಎನಿಸುವ ಆ ಹೂದೋಟವನ್ನು ದೂರದಿಂದಲೇ ಕಂಡು ಹರ್ಷಿತನಾಗುತ್ತಾನೆ. ಆ ಹರ್ಷದಲ್ಲಿ ಪುಟವೇಳುತ್ತ ಅಡ್ಡವಾಗಿ 'ತಿಗಟ'ವಾಗಿ, ನಟನ ಹಾಗೆ 'ಉಗ್ಗಡಿ'ಸಿ ಕುಣಿದು ಕುಪ್ಪಳಿಸುತ್ತಾನೆ. ಅಲ್ಲಿ ಬೆಲ್ಲವತ್ತ, ಕಕ್ಕೆ, ದೊಡ್ಡಪತ್ರೆ ಮುಂತಾದ

'ಪತ್ರಾಳಿ'ಗಳನ್ನು ಕಾಣುತ್ತಾನೆ. ಆ 'ಪತ್ರಾಳಿ'ಗಳಿಗೆ 'ಎರಗಿ' ನಮೋ ಎನ್ನುತ್ತಾನೆ, ಶರಣು ಎನ್ನುತ್ತಾನೆ. ಅವನಿಗೆ ಆ 'ಪತ್ರಾಳಿ'ಗಳು ಬರಿಯ 'ಪತ್ರಾಳಿ'ಗಳು ಎಂಬ ಕಲ್ಪನೆ ಇಲ್ಲ. ಅವನ ದೃಷ್ಟಿಯಲ್ಲಿ ಅವು ಶಿವನಿದ್ದಂತೆ! ಆದ್ದರಿಂದಲೇ ಅವನು -

...... ಹರಹರ ವಿರೂಪಾಕ್ಷ ನಿನಗೆನ್ನುತಂ ಕೊಡೆ
ಮನದಿಂದೆ ಕೈ ಕೊಳ್ಳ ಮುನ್ನವೀ ಗಂಧಮಂ
ನಿನಗೆ ಬಳಿಕೀವೆನುತ್ತಮ ಕುಸುಮ ವೃಂದಮಂ[14]

ಎನ್ನುತ್ತಾ ಪರಮಾನಂದದಿಂದ ಕೈಮುಗಿದು ಹೂತೋಟದ ಒಳಗೆ ಪ್ರವೇಶಿಸುತ್ತಾನೆ. ಬಗೆ ಬಗೆಯ ಹೂಗಳನ್ನು ಕಂಡು ಅವುಗಳ ಕಂಪಿಗೆ ರೋಮಾಂಚನಗೊಳ್ಳುತ್ತಾನೆ. ತೂಗಾಡುತ್ತಾ ಕೊನೆದಾಡುತ್ತಾ ಆ ಸಂತೋಷದಲ್ಲಿ 'ಆಹಾ!ವಿರೂಪಾಕ್ಷ! ಎಂದು ಮತ್ತೆ ಮತ್ತೆ 'ಉಗ್ಗಡಿ'ಸುತ್ತಾ, ಹಿಗ್ಗುತ್ತಾನೆ. ಭಕ್ತಿ ಪರಮಾವಧಿಯಲ್ಲಿ ಅವನಿಗೆ ಮಾತು ಸೋಲುತ್ತದೆ. 'ಎನಗಿಂತು ಕರುಣಿಸಿದನೆ ಸದಾಶಿವ' ಎಂದು ಮನದೊಳಗೆ ಹರ್ಷದಿಂದ ನಲಿಯುತ್ತಾನೆ.

ಈ ಭಾವ ಸಾಮಾನ್ಯ ಭಕ್ತರಿಗೆ ಎಲ್ಲಿ ಸಾಧ್ಯ! ಈ ಸ್ಥಾನದಲ್ಲಿ ಬೇರೆ ಯಾವುದೇ ಭಕ್ತ ಇದ್ದರೆ ಬಹುಶ: ಆಹಾಹಾ ಎನ್ನುತ್ತಾ, ತೀರಾ ಲೌಕಿಕದ ನೆಲೆಯಲ್ಲಿ ಕೆಟ್ಟದಾಗಿ ಓಡಿಹೋಗಿ, ತನ್ನ ಒರಟು ಕೈಗಳಿಂದ ಆ ಹೂಗಳನ್ನು ಕೀಳುತ್ತಿದ್ದನಲ್ಲದೆ ಮತ್ತೆ ಏನನ್ನೂ ಮಾಡಿತ್ತಿರಲಿಲ್ಲ. ಶಿವಮಂದಿರಕ್ಕೆ ಪ್ರವೇಶಿಸುವ ಹಾಗೆ ಭಕ್ತಿಯಿಂದ ಹೂತೋಟಕ್ಕೆ ಪ್ರವೇಶಿಸುವುದು ಅವನಿಗೆ ಸಾಧ್ಯವೇ ಇರುತ್ತಿರಲಿಲ್ಲ. ಹರಿಹರ ಚಿತ್ರಿಸುವ ಭಕ್ತನಲ್ಲಿ ಕಂಡುಬರುವ ಅವ್ಯಾಜ ಪ್ರೀತಿ! ಸರಳತೆ! ಸೌಮ್ಯವೇ ಎನ್ನುವ ಪ್ರೀತಿಯ ಧಾಟಿ! ಮಾಮೂಲಿ ಭಕ್ತನಿಗೆ ಬರುವುದು ಅಸಾಧ್ಯ.

## 7.3.2 ಹೂ ಕೀಳುವ ಸನ್ನಿವೇಶ

ಹೂತೋಟಕ್ಕೆ ಬರುವಾಗ ಹೇಗೋ, ಹಾಗೆಯೇ ಹೂಗಳನ್ನು ಕೀಳುವಾಗಲೂ ಭಕ್ತನ ಭಾವ ಒಂದೇ ತೆರನಾಗಿರುತ್ತದೆ. ಅವನ ಮನಸ್ಸು ಹೂವಿನಷ್ಟೇ ಮೃದುವಾದದ್ದು. ಅಷ್ಟೊಂದು ಹೂಗಳ ಮಧ್ಯೆ ಆತ ಸ್ವಲ್ಪವೂ ಆತುರಗೊಳ್ಳುವುದಿಲ್ಲ. ತೋಟದ ಪ್ರತಿಯೊಂದು ಹೂಗಳ ಹತ್ತಿರವು ನಡೆಯುತ್ತಾನೆ. ಅವನು —

ಅಳಿಯೆರಗದನಿಲನಲುಗದ ರವಿಕರಂಪುಗದ
ಬೆಳೆದು ನಳನಳಿಸಿ ಮಘಮಘಿಸುತೆ ಕವಲಿಚಿದು[15]

ಹೀಗೆ ಇರವಂತಿಗೆ ಹೂವಿನ ಹತ್ತಿರಕ್ಕೆ ಬಂದು 'ಪರಶಿವಂಗೋಲೈಪ ಪೂವ ನೀಡಾ' ಎಂದು ಬೇಡಿ ಹೂಗಳನ್ನು ಬಿಡಿಸಿಕೊಳ್ಳುತ್ತಾನೆ. ಸಂಪಿಗೆ ಬಳಿಗೆ ಬಂದು ನಿರ್ಮಲ ಮನಸ್ಸಿನಿಂದ—

ಏನವ್ವ ಸಂಪಿಗೆಯ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು
ಅಳಿಮನದ ಪರಿಯೆಂದು ಬಗೆಯದಿರ್ ನೀನೆನುತ್ತ[16]

ವಿನಮ್ರವಾಗಿ ಕೇಳಿಕೊಳ್ಳುತ್ತಾನೆ. ಅವನ ಸಂಬೋಧನೆ ತಾಯಿಯನ್ನು ಸಂಬೋಧಿಸುವ ಹಾಗೆ. ಇಂಥ "ಪ್ರೀತಿ, ಸ್ನೇಹ, ಆತ್ಮೀಯತೆ ಹಾಗೂ ಮುಗ್ಧ ವಿಸ್ಮಯಗಳೇ ಕಾವ್ಯದ ಸೆಲೆ, ಚೆಲ್ವಿನ ಸೆಲೆ. ಅವನು ಹೂ ತಿರಿಯಲು ಬಂದಿರುವುದು ಯಾವ ಅಳಿಯಾಸೆಯಿಂದಲೂ ಅಲ್ಲ, ಹೂವಾಡಿಗನಂತಾಗಲಿ ನಾಡಾಡಿಗನಂತಾಗಲಿ ಅಲ್ಲ"[17] ಅಲ್ಲಿ ಶಿವನ ಸಿರಿಮುಡಿಗೆ ಹೂಮುಡಿಸುವ ಉದ್ದೇಶವಿದೆ. ಅವನ "ಮಾತಿನಲ್ಲಿ ತಾನು ಶಿವನ ರಾಯಭಾರಿ ಎಂಬ ಧಿಮಾಕಿಲ್ಲ. ಅದಿದ್ದರೆ ಚೆಲುವೇ ಹಾಳಾಗುತ್ತಿತ್ತು. ಅದಕ್ಕೆ ಬದಲಾಗಿ ಅವನ ಮಾತಿನಲ್ಲಿ ವಿನಮ್ರ ಪ್ರೀತಿಯಿದೆ. ಅದು ಮಾತು ಮಾತಿನಲ್ಲೂ ನಡೆ ನಡೆಯಲ್ಲೂ ತುಳುಕುತ್ತ ಹೋಗುತ್ತದೆ."[18]

ಸಂಪಿಗೆಯ ನಂತರ, ಕುಂಕುಮದ ತಾರೆಗಳಂತಿರುವ ಸೇವಂತಿಗೆ ಇರುವಲ್ಲಿಗೆ ಬರುತ್ತಾನೆ. ಅಲ್ಲಿ ಸೇವಂತಿಗೆಯನ್ನು ಕುರಿತು -

> **ಎಲ್ಲೆಲೆ ಪರಿಮಳದ ಕಣ್ಣುಂಗತಿಯೆ ಬಾರವ್ವ**
> **ಕುಲಪತಿಯ ಜಡೆಗಳ್ಗೆ ಪೂಗಳಂ ತಾರವ್ವ**[19]

ಎಂದು ಒಲವಿನಿಂದ ಕೇಳಿಕೊಳ್ಳುತ್ತಾನೆ. ಆ ಸೇವಂತಿಗೆಗೆ ಶಿವನ ಸಿರಿಮುಡಿಗೆ ಸೇರಿ ಧನ್ಯಳಾಗು ಎಂದು ಕರೆಕೊಡುತ್ತಾನೆ. ಮುಂದೆ, ಕಂಪಿನ ನಿಧಿಯಾದ ಮಲ್ಲಿಗೆಯನ್ನು ನೋಡುತ್ತಾನೆ. "ಹಸುರಿಡಪೆ ಬೆಳುಪಿಡಿದ ನನೆಮೋಱಿ ಹೊರೆಯೇಱಿ"[20] ಇರುವ ಅವುಗಳನ್ನು ಬಿಡಿಸಿಕೊಂಡು ಅದಿರ್ಗಂತಿ ಇರುವಲ್ಲಿಗೆ ಬರುತ್ತಾನೆ. ಅವುಗಳನ್ನು ಬಿಡಿಸಿಕೊಂಡು ಜಾಜಿ ಇರುವಲ್ಲಿಗೆ ಬರುತ್ತಾನೆ ;

> **ಜಾತಿ ನೀನೇ ಸಕಲ ಪುಷ್ಪಜಾತಿಗೆ ಜಾತಿ**
> **ಭೂತೇಶ್ವರನ ಜಡೆಯ ಮುಡಿಗೆಱಗಿದಡೆ ಜಾತಿ**[21]

ಎಂದು ಹೇಳಿ ಅವುಗಳನ್ನು ತೆಗೆದುಕೊಳ್ಳುತ್ತಾನೆ. ಇಲ್ಲಿ ಜಾಜಿಯ ಹೂ ಶಿವನ ಮುಡಿಗೇರಿದಾಗ ಮಾತ್ರವೇ ಜಾತಿ, ಇಲ್ಲದಿದ್ದರೆ ಕೇವಲ ಜಾಜಿ ಎಂದು ಕವಿ ಕಲ್ಪಿಸಿರುವುದು ಅದ್ಭುತವಾಗಿದೆ.

ಜಾಜಿಯನ್ನು ಬಿಡಿಸಿಕೊಂಡ ನಂತರ ಆತ ಬರುವುದು ಕೇದಗೆ ಹೂವಿನ ಬಳಿ. ಕೇದಗೆ ಹೂ ಅತ್ಯಂತ ಸುಂದರ ಹಾಗೂ ಸೌರಭ ಸಾಂದ್ರವಾದದ್ದು, ಇತರ ಹೂಗಳಿಗಿಂತಲೂ ವಿಶಿಷ್ಟವಾದದ್ದು. ಅದರ ಪರಿಮಳವನ್ನು ಕವಿ -

> **ಆಹ ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ**
> **ಆಹ ಕೇತಕಿ ನಿನ್ನ ಪರಿಮಳದ ಪರಿಬೇಱೆ**
> **ಪರಿಮಳಂ ಸುಳಿಗೊಂಡು ಬೆಳೆದು ಕವಲಿಱಿಯಿತೋ**
> **ಉರವಣಿಸಿ ಬಳೆದ ಪರಿಮಳಕೆ ಗಱಿ ಮೂಡಿತೋ**[22]

ಎಂದು ಮನಸಾರೆ ಬಣ್ಣಿಸುತ್ತಾನೆ. ಇದೇ ಸಂದರ್ಭದಲ್ಲಿ ಕೇದಗೆಯನ್ನು ಕುರಿತಂತೆ -

**ಹೊಜಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ**
**ಹೆಜೆ ಸೂಡಿದನ ಗುಪ್ತಭಕ್ತನಂತಿಪ್ಪ ಪರಿ**[23]

ಎಂದು ವರ್ಣಿಸುತ್ತಾನೆ. ಈ ಒಂದು ಪ್ರತಿಮೆ ಆ ಹೂವಿನ ಸೌಂದರ್ಯವನ್ನು ಪಡಿಮೂಡಿಸುವುದರ ಜೊತೆಗೆ ಅದಕ್ಕೂ ಮಿಗಿಲಾದ ಗಂಭೀರ ಅನುಭವದ ಕಡೆ ನಮ್ಮನ್ನು ಒಯ್ಯುತ್ತದೆ. ಈ ಪ್ರತಿಮೆ ಗುಪ್ತಭಕ್ತರ ಬದುಕನ್ನು ಪ್ರತಿಮಿಸುತ್ತದೆ. ಗುಪ್ತಭಕ್ತರ ಬದುಕು ಕೇದಗೆಯಂತೆ ಒಳಗೆ ಮೃದುವಾಗಿರುತ್ತದೆ, ಕೋಮಲವಾಗಿರುತ್ತದೆ, ಸುವಾಸನಾಸ್ನಿಗ್ಧವಾಗಿರುತ್ತದೆ. ಆದರೆ ಹೊರಗೆ ವಿರೂಪದಿಂದ ಕೂಡಿರುತ್ತದೆ. ಹಾಗೆಯೇ ಇಲ್ಲಿ ಕೇದಗೆಯ ಹೂ ಒಳಗೆ ಸುವಾಸನಾಯುಕ್ತ ವಾಗಿದ್ದರೆ ಹೊರಗೆ ಮುಳ್ಳುಗಳಿಂದ ಕೂಡಿರುತ್ತದೆ. ಇದರ ಮೂಲಕ ಕವಿ ತಿರಸ್ಕೃತವಾದದ್ದೂ ಶಿವನಿಗೆ ಅರ್ಪಿತವಾಗಲು ಯೋಗ್ಯ ಎಂಬ ಸಂದೇಶ ನೀಡುತ್ತಾನೆ.

ಇಂಥ ಸುವಾಸನಾಯುಕ್ತ ಕೇದಗೆಯನ್ನು ಬಿಡಿಸಿಕೊಂಡ ನಂತರ ಭಕ್ತ ಪಡ್ಡಳಿ, ಕತ್ತುರಿ, ಹೇರೀಳೆ, ಮೊಲ್ಲೆ ಮುಂತಾದ ಹೂಗಳನ್ನು ಕಾಣುತ್ತಾನೆ. ಅವುಗಳೊಡನೆ ಮಾತನಾಡಿದರೆ ಅವುಗಳ ಮೌನವೇ ಉತ್ತರವಾಗುತ್ತದೆ. 'ಮೌನಂ ಸಂಪೂರ್ಣ ಸಮ್ಮತಿ' ಎಂದು ತಿಳಿದು ಅವುಗಳನ್ನೆಲ್ಲ ಬಿಡಿಸಿಕೊಳ್ಳುತ್ತಾನೆ. ಹಾಗಿದ್ದರೂ ಬ್ರಹ್ಮಾಂಡದಂತಿರುವ ಅವನ ಬುಟ್ಟಿ ತುಂಬಿರುವುದೇ ಇಲ್ಲ. ಆಗ ಕಮಲ, ಸುರಹೊನ್ನೆ, ಕಣಗಿಲೆಗಳನ್ನೆಲ್ಲ ಬಿಡಿಸಿ ಬುಟ್ಟಿಗೆ ಹಾಕಿಕೊಳ್ಳುತ್ತಾನೆ.

ಇಡೀ ಭಾಗದಲ್ಲಿ ಕವಿ, ಭಕ್ತನ ಅತ್ಯಂತ ಮುಗ್ಧ ಭಾವವನ್ನು ಮನಮುಟ್ಟುವಂತೆ ವರ್ಣಿಸುತ್ತಾನೆ. ಇಲ್ಲಿ ಕವಿಯ ಕಲ್ಪನಾ ದೃಷ್ಟಿಯೇ ಹೊಸದು. ಈ ಭಕ್ತನ ಕಣ್ಣಿಗೆ ಹೂ ಬರಿಯ ಹೂವಲ್ಲ, ಮನುಷ್ಯ ಪ್ರತಿರೂಪ. ಮನುಷ್ಯನನ್ನು ಹೇಗೆ ಸಂಬೋಧಿಸಬೇಕೋ ಹಾಗೆಯೇ ಪ್ರತೀ ಹೂಗಳನ್ನು ಸಂಬೋಧಿಸುತ್ತಾನೆ. ಅವನ ಸಂಬೋಧನೆ ಯಲ್ಲಿ ಪ್ರೀತಿಯಿದೆ, ಅಕ್ಕರೆಯಿದೆ, ಆತ್ಮೀಯತೆಯಿದೆ, ತಾಯಿಯೆಂಬ ಗೌರವವಿದೆ. ಪ್ರತಿ ಹೂವನ್ನೂ ಆತ 'ಏನವ್ವ', 'ಬಾರವ್ವ', 'ತಾರವ್ವ' ಎಂಬುದಾಗಿಯೇ ಮಾತನಾಡಿಸುತ್ತಾನೆ. ಓದುತ್ತಿದ್ದರೆ ನಿರ್ಮಲ ಮನದ, ಹಾಲುಮನಸ್ಸಿನ ಒಬ್ಬ ಭಕ್ತನೊಬ್ಬ ಕಣ್ಣೆದುರು ನಿಲ್ಲುತ್ತಾನೆ.

### 7.3.3 ಹೂಗಳನ್ನು ತಂದು ಮಾಲೆ ಕಟ್ಟುವ ಸನ್ನಿವೇಶ

ಎಲ್ಲ ಬಗೆಯ ಹೂಗಳನ್ನು ಬಿಡಿಸಿಕೊಂಡು ಬಂದ ಮೇಲೆ ಭಕ್ತ ನಡೆದುಕೊಳ್ಳುವ ರೀತಿ ಇನ್ನೂ ವಿಶಿಷ್ಟವಾದದ್ದು. ಸಾಮಾನ್ಯ ಭಕ್ತರಾಗಿದ್ದರೆ ಎಲ್ಲ ಹೂಗಳನ್ನೂ ತಂದು ಎಲ್ಲೋ ಒಂದು ಕಡೆ ಸುರಿದು, ಮಾಲೆಯನ್ನು ಕಟ್ಟುತ್ತಿದ್ದರು. ಆ ಕ್ರಿಯೆಯಲ್ಲಿ ಅವರಿಗೆ ಯಾವ ಎಚ್ಚರಿಕೆಯಾಗಲಿ, ತಾದಾತ್ಮ್ಯವಾಗಲಿ ಇರುತ್ತಿರಲಿಲ್ಲ. ಆದರೆ ಅದೇ ಕ್ರಿಯೆಯನ್ನು ಈ ರಗಳೆಯಲ್ಲಿ ಬರುವ ಭಕ್ತ ನಿರ್ವಹಿಸುವ ಕ್ರಿಯೆ ಅನ್ಯಾದೃಶವಾದುದು. ಈ ಸಂದರ್ಭದ ಪ್ರತಿ ಕ್ಷಣದಲ್ಲೂ ಅವನಲ್ಲಿ ತಾದಾತ್ಮ್ಯವನ್ನು ಕಾಣುತ್ತೇವೆ.

ಹೂಗಳನ್ನು ಬಿಡಿಸಿದ ಮೇಲೆ ಭಕ್ತ ಅವುಗಳನ್ನು ತೆಗೆದುಕೊಂಡು ಇಷ್ಟ ಬಂದ ಕಡೆ

ಹೋಗುವುದಿಲ್ಲ. ಹಾಗೆಯೇ ಇಷ್ಟ ಬಂದದ್ದರ ಮೇಲೆ ಸುರಿಯುವುದೂ ಇಲ್ಲ. ಹೂಗಳ ಬಗ್ಗೆ ಅಪಾರ ಗೌರವವಿರುವ ಆತ ಅವುಗಳನ್ನೆಲ್ಲ ತೆಗೆದುಕೊಂಡು ಎಳೆಯ ಮಾವಿನ ಮರದಡಿಗೆ ಬರುತ್ತಾನೆ. ಮಾವಿನ ಮರದ ಕೆಳಗಿನ ನಿರ್ಮಲ ಸ್ಥಳದಲ್ಲಿರುವ ಹೊಳೆಯುವ ಚಂದ್ರಕಾಂತದ ಶಿಲಾತಲದಲ್ಲಿ, ಕಮಲ ಪತ್ರ ಹಾಗೂ ಬಾಳೆಯ ಎಲೆಗಳನ್ನು ಮೊದಲು ಹಾಸಿ, ಅದರ ಮೇಲೆ ಹೂಗಳನ್ನು ಮೆಲ್ಲನೆ ಸುರಿಯುತ್ತಾನೆ. ಇಲ್ಲಿ ಮೆಲ್ಲನೆ ಎಂದು ಬಳಸುವ ಪದದ ಒತ್ತನ್ನು ಗಮನಿಸಬೇಕು. ಈ ಪದದ ಹಿಂದೆ ಹೂಗಳನ್ನು ಜೋರಾಗಿ ಸುರಿದರೆ ಅವು ಎಲ್ಲಿ ನೊಂದುಕೊಳ್ಳುವವೋ ಎಂಬ ದೃಷ್ಟಿಯಿಂದ ಭಕ್ತ ಹಾಗೆ ಸುರಿಯುತ್ತಾನೆ ಎಂಬ ಭಾವ ಸ್ಪಷ್ಟವಾಗಿ ತಿಳಿಯುತ್ತದೆ. ಹೂಗಳನ್ನು ಹಾಗೆ ಸುರಿದ ನಂತರದ ಕ್ರಿಯೆ ಇನ್ನೂ ದಿವ್ಯವಾಗಿದೆ. ಹೂವನ್ನು ಕಟ್ಟುವಾಗ ಯಾರಾದರೂ ಕೈಯಲ್ಲಿ ಮುಟ್ಟಲೇ ಬೇಕು. ಆದರೆ ಅವುಗಳನ್ನು ಕೈಯಲ್ಲಿ ಮುಟ್ಟಿದರೆ ಮಲಿನವಾಗುತ್ತವೆ ಎಂಬ ಭಾವ ಭಕ್ತನದು. ಆದ್ದರಿಂದ ಅವನು ಆ ಹೂಗಳನ್ನು ಕೈಯಲ್ಲಿ ಮುಟ್ಟದೆ ಮನಸ್ಸಿನಲ್ಲಿ ಮುಟ್ಟುತ್ತಾನೆ. "ಒಂದೊಂದು ಹೂವನ್ನು ಪ್ರೀತಿಯ ಹಸ್ತದಿಂದೆತ್ತಿ ಎದೆ ಮುಟ್ಟಿ ಕಟ್ಟುತ್ತಾನೆ. ಕೈಮರೆತೇನಾದರೂ ಕೆಳಕ್ಕೆ ಬಿದ್ದರೆ ಅವನ ಪ್ರಾಣ ಆ ಹೂವಿನ ಜೊತೆಯಲ್ಲೆ ಕೆಡೆದು ಸಾಯುತ್ತದೆ. ಸತ್ತು ಮತ್ತೆ ಹುಟ್ಟುತ್ತದೆ. ಹೂವಿನ ಪತನ, ಅವನ ಭಾವ ಪತನ. ಹೀಗೆ ಕಟ್ಟುವಾಗ ಅವುಗಳನ್ನು ಅತಿಮೋಹದಿಂದ ದಿಟ್ಟಿಸಿ ನೋಡುವುದರಿಂದ ಎಲ್ಲಿ ಅವು ಬಾಡುತ್ತವೆಯೋ ಎಂದು ಕಣ್ಮುಚ್ಚಿಕೊಳ್ಳುತ್ತಾನೆ. ಕಣ್ಣಾರೆ ನೋಡದಂತೆ, ಮನಸಾರೆ ಭಾವಿಸದಂತೆ ಹೂಗಳನ್ನು ಕಟ್ಟುವುದಾದರೂ ಎಂತು? ನೋಡಲೇ ಬೇಕು ಕಣ್ಮುಚ್ಚಿ ಫಲವಿಲ್ಲ, ಆದ್ದರಿಂದ ನೋಟವನ್ನೇ ಪವಿತ್ರೀಕರಿಸುತ್ತಾನೆ"[24] ಹೀಗೆ 'ಕೈ ಮುಟ್ಟಿ ಮುಟ್ಟದೆ ಮನ ಮುಟ್ಟಿ' ಹೂಮಾಲೆಯನ್ನು ಕಟ್ಟುತ್ತಾನೆ. ಹಾಗೆ ಕಟ್ಟುವಾಗ ಹೂವಿನ ಪರಿಮಳಕ್ಕೆ ದುಂಬಿಗಳ ಸಮೂಹ ಬಂದೆರಗುತ್ತದೆ.

'ಪರಿಮಳದ ಪಥವಿಡಿದು ಝೇಂಕರಿಸಿ' ಬರುತ್ತಿರುವ ದುಂಬಿಗಳನ್ನು ಕಂಡ ಭಕ್ತ ಅವುಗಳಿಗೆ; ಹಂಪೆಯರಸನ ಕುಮಾರ ಸಿತಗನಿಗೆ ಆಡಂಬರಗಳು ಇಷ್ಟವಿಲ್ಲ, ಯಾರಡಿಗೂ ಅವನು ಎರಗುವುದಿಲ್ಲ. ನಿಮಗೀ ಅಳಿಯಾಸೆಬೇಡ, ನಿಮಗೆ ಸೋಲುವವರು ಯಾರೂ ಇಲ್ಲ. ಆದ್ದರಿಂದ ಹೇಗೆ ಬಂದಿರೋ ಹಾಗೆಯೇ ಹಿಂತಿರುಗಿ ಎಂದು ಕೇಳಿಕೊಳ್ಳುತ್ತಾನೆ. ಆಗಲೂ ಅವು ಹಿಂತಿರುಗುವುದಿಲ್ಲ. ಆಗ ಸಂಪಿಗೆ ಹೂವೊಂದನ್ನು ಅವುಗಳೆಡೆಗೆ ಎಸೆಯುತ್ತಾನೆ. ಕೂಡಲೇ ದುಂಬಿ ಸಮೂಹವೆಲ್ಲ ಬಂದ ದಾರಿಯಲ್ಲಿಯೇ ಹಿಂತಿರುಗುತ್ತವೆ.

ದುಂಬಿಗಳೆಲ್ಲ ಹೋದ ನಂತರ ತಾನು ಕಟ್ಟಿದ ಹೊಸ ಹೂ ಮಾಲೆಯನ್ನು ತೆಗೆದುಕೊಂಡು, ಮೆಲ್ಲ ಮೆಲ್ಲನೆ ಶಿವನ ಅರಮನೆ ಕಡೆಗೆ ಸಾಗಿಬರುತ್ತಾನೆ. ಶಿವನನ್ನು ಹೂವುಗಳಿಂದ ಅಲಂಕರಿಸಿ ಪೂಜಾವೈಭವದಲ್ಲಿ ತೊಡಗುತ್ತಾನೆ.

ಹೂವಿನ ಬಗೆಗೆ ಕವಿಗೆ ಇರುವ ಆತ್ಮೀಯ ಭಾವ ಇಡೀ ಭಾಗದಲ್ಲಿ ಆಕರ್ಷಕವಾಗಿ ಮೂಡಿ ಬಂದಿದೆ. ನಡುನಡುವೆ ಬರುವ ಕೆಲವು ಸನ್ನಿವೇಶಗಳು ಭಕ್ತನ ಮನಸ್ಸಿನಲ್ಲಾಗುವ ಭಾವನೆಗಳನ್ನು ಸುಂದರವಾಗಿ ಕಟ್ಟಿಕೊಡುತ್ತವೆ.

### 7.3.4 ಹೂಮಾಲೆಯನ್ನು ಶಿವನಿಗೆ ಅರ್ಪಿಸುವ ಸನ್ನಿವೇಶ

ಇಲ್ಲಿಯವರೆಗೆ ಮೂರು ಸನ್ನಿವೇಶಗಳನ್ನು ಗಮನಿಸಿದ್ದೇವೆ. ಈ ಮ ಸನ್ನಿವೇಶಗಳಲ್ಲಿ ಯಾವ ಭಾವಗಳನ್ನು ಕಂಡೆವೋ ಅದಕ್ಕೂ ಮಿಗಿಲಾದ ಭಾವ ಸಂಚಾ ಈ ಭಾಗದಲ್ಲಿ ಕಾಣುತ್ತೇವೆ. ಇಲ್ಲಿ ಭಕ್ತನು ಶಿವನನ್ನು ನಾನಾ ರೀತಿಯಲ್ಲಿ ಅಲಂಕರಿಸಿ, ನಿ ಮಾಡಿಕೊಳ್ಳುವ ಬಗೆಯನ್ನು ಕವಿ ಸೊಗಸಾಗಿ ವರ್ಣಿಸಿದ್ದಾನೆ.

ಹೂ ಮಾಲೆಯನ್ನು ಹಿಡಿದ ಭಕ್ತ ಅದನ್ನು ಶಿವನಿಗೆ ಅರ್ಪಿಸಲು ಶಿವಾಲಯ ಬರುತ್ತಾನೆ. ದೇವಾಲಯದ ಬಾಗಿಲಲ್ಲಿ ನಿಂತು -

> ಏನೆನ್ನ ಶಿವನೆ ಉಪ್ಪವಡಿಸಿದಿರೇ ಎಂದು
> ಏನೆನ್ನ ತಳುವಿರ್ದನೆಂದಿರ್ದಿರೇ ಎಂದು
> ಅಳಿಗಳೆರಗದ ಗಂಧವಹನಲುಗದಲರ್ಗಳಂ
> ಎಳಸಿ ತಂದೆಂ ತಂದೆ ದೇವ ಪೊಸ ಪೂಗಳಂ [25]

ಎಂದು ಬಿನ್ನೈಸಿ ಶಿವನ ಹತ್ತಿರ ಬರುತ್ತಾನೆ. ಸೇವಂತಿಗೆ ಹೂವಿನ ಪನ್ನೀರಿನಿಂದ ಮುಖ ಮಜ್ಜನ ಮಾಡಿಸುತ್ತಾನೆ; ಪರಾಗದ ವಿಭೂತಿಯಿಂದ ತಿಲಕವಿಕ್ಕುತ್ತಾನೆ.

ದೇವನ ಸಿರಿಮುಡಿಯನ್ನು ಸಡಿಲಿಸಿ ನಯದಿಂದ ಬಿಡಿಸಿ ಕೆಂಜೆಡೆಗಳನ್ನು ಅಲಂಕರಿಸ ಹೊಸ 'ಪಡ್ವಳಿ'ಯ ಪರಿಮಳದಿಂದ 'ಕತ್ತುರಿ'ಯಿಕ್ಕಿ ಇರವಂತಿಯನ್ನು ಮುಡಿಗೆ 'ಸೂಡು ಮಲ್ಲಿಗೆಯ ಸುಗಂಧವೇ ಚಂದನ, ಮೊಲ್ಲೆಯ ಹೂಗಳೆ 'ನಾಗಕುಂಡಲ', ಜಾಜಿಯ ಸ ಮೃಗಮದ, ಮರುಗವೆ ಗಜಚರ್ಮ, ಸಂಪಿಗೆಗಳೆ ಹೂದೊಗಲು, ಸುರಹೊ ಉರಗಕಂಕಣ, ಕಂಪಿನ ಮಡಿವಾಳವನ್ನೆ ಚಾಮರವನ್ನಾಗಿ ಮಾಡಿ ಶಿವಪೂಜಾ ನಿರತನಾಗು ಶಿವಪೂಜೆಯಾನಂದದಲ್ಲಿ 'ಗದ್ಗದವುಣ್ಮೆ', 'ವೀ ವೀ ವಿರೂರೂಪಾಪಾಕ್ಷಕ್ಷ' ಎನ್ನುತ್ತಾ ನಲಿದು, ಮುದ್ದಿಸಿ, ಪುಳಕಗೊಂಡು ಭಕ್ತಿ ಪರವಶನಾಗುತ್ತಾನೆ. ದಿವ್ಯಾನಂದದ ಸ್ಥಿತಿ ಅವನ ಸರ್ವಾಂಗವೂ ಶಿವಮಯವಾಗುತ್ತದೆ. ಸರ್ವಶಕ್ತನಾದ ಶಿವನನ್ನು -

> ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ
> ------------------------------------
> ಎನಗೆ ಸರ್ವಂ ನೀನೆ ಎನಗೆ ಗರ್ವಂ ನೀನೆ
> ಎನಗೆ ಮಾತೆಯು ನೀನೆ ಎನಗೆ ಪಿತನುಂ ನೀನೆ
> ------------------------------------
> ರಕ್ಷಿಸು ವಿರೂಪಾಕ್ಷ ವೀಕ್ಷಿಸು ವಿರೂಪಾಕ್ಷ
> ಕರುಣಿಸು ವಿರೂಪಾಕ್ಷ ಪರಿಕಿಸು ವಿರೂಪಾಕ್ಷ [26]

ಎಂದು, ಅರ್ಚಿಸುವ ಭಾಗ್ಯವನ್ನು ಕರುಣಿಸುವಂತೆ ನಿವೇದಿಸಿಕೊಳ್ಳುತ್ತಾನೆ. ಅವನದು ಅಂತ ಶುದ್ಧವಾದ ನಿವೇದನೆ. ಸ್ವಲ್ಪವೂ ಕಪಟವಿಲ್ಲ, ಅಹಂಕಾರವಿಲ್ಲ. ಅವನಲ್ಲಿ ತ

ಅರ್ಪಿಸಿಕೊಳ್ಳುವ ಅರ್ಪಣಾ ಭಾವವಿದೆ.

ಮುಂಜಾನೆ ಎದ್ದು ಹೋಗಿ ಹೂ ಕಿತ್ತು ತಂದು ಶಿವನಿಗೆ ಮುಡಿಸುವುದು ಭಕ್ತರಾದವರಲ್ಲಿ ಕಾಣುವ ಸಾಮಾನ್ಯ ಸ್ವಭಾವ. ಇದರಲ್ಲಿ ಅಂಥ ಮಹತ್ವವಾದದ್ದು ಏನಿದೆ? ಆ ಪ್ರಶ್ನೆ ಸಾಮಾನ್ಯವಾಗಿ ಎಲ್ಲರಿಗೂ ಅನಿಸಬಹುದಾದದ್ದೆ. ಆದರೆ ಈ ಸಂದರ್ಭದಲ್ಲಿ ಭಕ್ತನಲ್ಲಿ ಅರ್ಥಾತ್ ಹರಿಹರನಲ್ಲಿ ಉಂಟಾಗುವ ಭಾವಗಳನ್ನು ಅದೇ ನೆಲೆಯಲ್ಲಿ ತಿಳಿದುಕೊಂಡಾಗ ಯಾರಿಗೂ ಈ ರೀತಿ ಅನಿಸಲಾರದು. ಯಾರೇ ಆಗಲಿ ಈ ಭಾವನೆಗಳಿಗೆ ತಲೆದೂಗದೆ ಇರುವುದಿಲ್ಲ. ಅಂಥ ಭಾವವನ್ನು ಹರಿಹರ ಈ ರಗಳೆಯಲ್ಲಿ ತುಂಬಿದ್ದಾನೆ. ಆ ದೃಷ್ಟಿಯಿಂದ ಇದೊಂದು ಅಪೂರ್ವ ಕೃತಿಯಾಗಿದೆ.

ಇಲ್ಲಿಯವರೆಗೆ ಸಂಕೀರ್ಣ ರಗಳೆಗಳಲ್ಲಿ ಬರುವ ಕೆಲವೊಂದು ರಗಳೆಗಳನ್ನು ಅಧ್ಯಯನ ಮಾಡಿದ್ದೇವೆ. ಪ್ರತಿ ರಗಳೆಯ ಸಂದರ್ಭದಲ್ಲೂ ಆತ ಹೇಗೆ ಭಕ್ತಿಯ ಭಾವವನ್ನೂ ವ್ಯಕ್ತಪಡಿಸುತ್ತಾನೆ, ಶಿವನ ಮಹತ್ವನ್ನು ಎತ್ತಿಹಿಡಿಯುತ್ತಾನೆ, ವೀರಶೈವರು ನಂಬಿರುವ ವಿಭೂತಿ, ರುದ್ರಾಕ್ಷಿಗಳ ಮಹತ್ವವನ್ನು ಹೇಗೆ ನಿರೂಪಿಸುತ್ತಾನೆ ಎಂಬುದನ್ನು ತಿಳಿದುಕೊಂಡಿದ್ದೇವೆ. ಇದೆಲ್ಲಕ್ಕಿಂತಲೂ ಮುಖ್ಯವಾಗಿ ಈ ರಗಳೆಗಳಲ್ಲಿ ಕಂಡುಬರುವ ಪ್ರಧಾನ ಗುಣ ಎಂದರೆ ಅವುಗಳೊಳಗಿನ ಭಾವಗೀತಾಂಶ. ಪ್ರತಿಯೊಂದು ರಗಳೆಯೂ ಒಂದೊಂದು ಭಾವಗೀತೆಯಿದ್ದಂತೆ. ಒಂದೊಂದರಲ್ಲೂ ಹರಿಹರ ಕವಿಯ ಭಾವ ತುಂಬಿ ಹರಿದಿದೆ. ಅದರಲ್ಲೂ ಸಂಸಾರ ವ್ಯಾಮೋಹ ನಿರಸನ ರಗಳೆ ಮತ್ತು ಪುಷ್ಪ ರಗಳೆ ಹರಿಹರನ ಭಾವ ಸಮುದ್ರವೇ ಆಗಿ ಸಹೃದಯರನ್ನು ತನ್ನೊಳಗೆ ಸೆಳೆದುಕೊಳ್ಳುತ್ತವೆ.

* * * * *

**ಅಡಿಟಿಪ್ಪಣಿಗಳು**

1. ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಪುಟ 46.
2. ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಪುಟ 38
3. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 344
4. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 349
5. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 349
6. ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಪುಟ 31
7. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 261
8. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ

ರಗಳೆಗಳು : ಪುಟ 362

9. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 362
10. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 265
11. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 267
12. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 268
13. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 270
14. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 330
15. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 330
16. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 331
17. ಸುಜನಾ : ಹೃದಯ ಸಂವಾದ : ಪುಟ 68
18. ಸುಜನಾ : ಹೃದಯ ಸಂವಾದ : ಪುಟ 68
19. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ - 331
20. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ - 331
21. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 332
22. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 332
23. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 332
24. ಸುಜನಾ : ಹೃದಯ ಸಂವಾದ : ಪುಟ 75
25. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿಯ ಮಹಿಮಾ ರಗಳೆಗಳು : ಪುಟ - 334
26. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವಭಕ್ತಿಯ ಮಹಿಮಾ ರಗಳೆಗಳು : ಪುಟ - 338

**8.**

# ಹರಿಹರನ ಪಾತ್ರದರ್ಶನ

ಹರಿಹರನ ಕಥೆಗಳ ಪಾತ್ರಗಳನ್ನು ಕುರಿತಂತೆ ಅಧ್ಯಯನ ಮಾಡುವುದಕ್ಕೆ ಮೊದಲು ಭಕ್ತಿಯ ಪ್ರಾಚೀನತೆ, ಆಂದೋಲನ ಮತ್ತು ಆಂದೋಲನಕ್ಕೆ ಕಾರಣವಾದ ಅಂಶಗಳ ಬಗ್ಗೆ ತಿಳಿದುಕೊಳ್ಳುವುದು ಸೂಕ್ತ. ಏಕೆಂದರೆ ಅವನ ಕಥೆಗಳು ನಿರ್ಮಾಣವಾಗಿರುವುದೇ ಭಕ್ತಿಯ ತಳಹದಿಯ ಮೇಲೆ.

## 8.1 ಭಕ್ತಿಯ ಪ್ರಾಚೀನತೆ

'ಭಕ್ತಿ' ಮಾನವ ಭಗವಂತನಿಗಾಗಿ ತನ್ನನ್ನೇ, ತನ್ನತನವನ್ನೇ ಮುಡಿಪಾಗಿಡುವ ಒಂದು ಮಾನಸಿಕ ಪ್ರಕ್ರಿಯೆ ಮತ್ತು ಸರ್ವಶಕ್ತನಾದ ಭಗವಂತನನ್ನು ಒಲಿಸಿಕೊಳ್ಳಲು ಇರುವ ಅತ್ಯಂತ ಯಶಸ್ವಿ ಮಾರ್ಗ. ಇದು ಅನಿರ್ವಚನೀಯವಾದುದು; ಮಾತಿಗೆ ಮೀರಿದುದು; ಇಂದ್ರಿಯಾತೀತವಾದುದು ಹಾಗೂ ಅನುಭವವೇದ್ಯ ಮಾತ್ರವಾದದ್ದು.

ಕೇವಲ ಅನುಭವವೇದ್ಯವಾದ ಭಕ್ತಿ ಹೆಚ್ಚು ಪ್ರಚಲಿತಕ್ಕೆ ಬಂದಿದ್ದು ಹನ್ನೆರಡನೆ ಶತಮಾನದಲ್ಲಿ. ಆದರೆ ಅದಕ್ಕೂ ಪ್ರಾಚೀನವಾದದ್ದು ಎಂಬುದಕ್ಕೆ ಹಲವು ಆಧಾರಗಳಿವೆ. ಸಿಂಧೂ ಕಣಿವೆಯ ನಾಗರಿಕತೆಯಲ್ಲೇ, ಅಂದರೆ ಸುಮಾರು 3000 ವರ್ಷಗಳಷ್ಟು ಹಿಂದೆಯೇ ಭಕ್ತಿ ಪ್ರಚಲಿತದಲ್ಲಿತ್ತು ಎಂಬುದಾಗಿ ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸರ್ ಜಾನ್ ಮಾರ್ಷಲ್‌ರವರು "ನಮಗೆ ಮೊಹೆಂಜೊದಾರೊವಿನಲ್ಲಿ ಸಿಕ್ಕಿರುವ ಪ್ರತಿಯೊಂದು ವಸ್ತುವೂ ಅಲ್ಲಿ ಶಿವ ಶಕ್ತಿಗಳ, ನಾಗಗಳ, ವನದೇವತೆಗಳ, ಮರಗಳ, ಕಲ್ಲುಗಳ, ಶಿಶ್ನಗಳ ಆರಾಧನೆ ಮತ್ತು ಯೋಗಾಭ್ಯಾಸಗಳು ಪ್ರಚಲಿತವಾಗಿತ್ತೆಂದು ತಿಳಿಸುತ್ತಾರೆ. ಅಂತೆಯೇ ಅಲ್ಲಿ ಕಂಡುಬಂದ ದೊಡ್ಡ ದೊಡ್ಡ ಕಟ್ಟಡಗಳನ್ನು ಕುರಿತು, ಅವು ದೇವಸ್ಥಾನಗಳಾಗಿದ್ದಿರಬೇಕೆಂದು ಅಭಿಪ್ರಾಯಪಡುತ್ತಾರೆ."[1]

ವೇದಗಳ ಕಾಲ ಕ್ರಿ.ಪೂ. 1200. ಈ ಕಾಲದಲ್ಲಿ ಕೂಡ ಭಕ್ತಿ ಪ್ರಚಲಿತದಲ್ಲಿತ್ತು. ಅಗ್ನಿ, ಇಂದ್ರ, ರುದ್ರ, ವರುಣ ಮುಂತಾದ ದೇವತೆಗಳನ್ನು ಜನ ಪೂಜಿಸುತ್ತಿದ್ದರು. ಈ ದೇವತೆಗಳನ್ನು ಕುರಿತಂತೆ ಸಿಕ್ಕಿರುವ ಪ್ರಾರ್ಥನೆಗಳೇ ಇದನ್ನು ಸಮರ್ಥಿಸುತ್ತವೆ. ಈ ಜನ "ಪ್ರಕೃತಿಯ ಎಲ್ಲಾ ಕಾರ್ಯಗಳಿಗೂ ಒಂದೇ ಒಂದು ಕಾರಣೀಭೂತವಾದ ಶಕ್ತಿಯಿದೆ ಎಂದು ನಂಬಿದ್ದರು. ಅವರ ಈ ಕಲ್ಪನೆ ಭಕ್ತಿಭಾವದ ಸಹಜ ಗುಣಕ್ಕೆ ಪ್ರತೀಕವಾಗಿದೆ."[2].

ಉಪನಿಷತ್ತುಗಳಲ್ಲೂ ಭಕ್ತಿಯ ಇರುವಿಕೆಯ ಸುಳಿವು ದೊರೆಯುತ್ತದೆ. ಇಲ್ಲಿ ಭಕ್ತಿ ಪ್ರಾರ್ಥನೆಯ ಸ್ವರೂಪವನ್ನು ಪಡೆದಿರುವುದು ಗೊತ್ತಾಗುತ್ತದೆ.

ವೇದ ಉಪನಿಷತ್ತುಗಳಿಗಿಂತ ಭಗವದ್ಗೀತೆಯಲ್ಲಿ ಭಕ್ತಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಈ ವಿಚಾರವನ್ನು ಕುರಿತು ಬಸವರಾಜ ಕಲ್ಗುಡಿಯವರು "ಭಕ್ತಿಯ ಲಕ್ಷಣಗಳು ನಮಗೆ ಮೊದಲ

ಬಾರಿಗೆ ತೋರಿಬರುವುದು ಭಗವದ್ಗೀತೆಯಲ್ಲಿ"[3] ಎಂದಿದ್ದಾರೆ.

ಕ್ರಿ. ಪೂ. 500 ರಲ್ಲಿ ಪ್ರಾರಂಭವಾದ ಜೈನ ಮತ್ತು ಬೌದ್ಧಧರ್ಮಗಳೂ ಭಕ್ತಿಯ ಬೆಳವಣಿಗೆಯಲ್ಲಿ ಹೆಸರಿಸಬೇಕಾದವುಗಳಾಗಿವೆ. ಜೈನರು ವೇದಗಳ ಅಧಿಕಾರವಾಣಿಯನ್ನು ತಿರಸ್ಕರಿಸಿಗರು. ಮಾನವನ ಪುನರ್ಜನ್ಮ ಮತ್ತು ಕಷ್ಟಕೋಟಲೆಗೆ ಅವನ ಜನ್ಮ ಜನ್ಮಾಂತರಗಳ ಕರ್ಮಗಳೇ ಕಾರಣವಾಗಿದ್ದು, ಇವುಗಳಿಂದ ಮುಕ್ತಿ ಪಡೆಯುವುದೇ 'ನಿರ್ವಾಣ' ಅಥವಾ 'ಮೋಕ್ಷ' ಎಂದು ಬೋಧಿಸಿದರು. ನಿರ್ವಾಣ ಹೊಂದಲು ಸಮ್ಯಕ್ ಜ್ಞಾನ, ಸಮ್ಯಕ್ ಚರಿತ, ಸಮ್ಯಕ್ ದರ್ಶನ ಎಂಬ ರತ್ನತ್ರಯಗಳನ್ನೂ ಸತ್ಯ, ಅಹಿಂಸೆ, ಅಸ್ತೇಯ, ಅಪರಿಗ್ರಹ ಮತ್ತು ಬ್ರಹ್ಮಚರ್ಯ ಎಂಬ ಅಣುವ್ರತಗಳನ್ನೂ ಬೋಧಿಸಿದರು.

ಜೈನಧರ್ಮದ ಹಾಗೆ ಬೌದ್ಧಧರ್ಮವೂ ವೇದಗಳ ಅಧಿಕಾರಯುತ ವಾಣಿಯನ್ನು ಖಂಡಿಸಿತು. ಬೌದ್ಧಧರ್ಮ ಸ್ಥಾಪಕನಾದ ಬುದ್ಧ, ಮಾನವನ ಎಲ್ಲಾ ದುಃಖಗಳಿಗೆ ಹಾಗೂ ಸಂಕಷ್ಟಗಳ ಸರಮಾಲೆಗೆ ಆಸೆಯೇ ಮೂಲವಾಗಿದ್ದು ಇದರಿಂದ ಮುಕ್ತನಾದಲ್ಲಿ ಮಾತ್ರ ಅವನಿಗೆ ಮೋಕ್ಷ ಸಾಧ್ಯ ಎಂದು ಹೇಳಿದನು. ಅದಕ್ಕಾಗಿ ನಾಲ್ಕು ಆರ್ಯಭವ್ಯ ಸತ್ಯಗಳು ಮತ್ತು ಎಂಟು ಅಷ್ಟಾಂಗ ಮಾರ್ಗಗಳನ್ನು ತಿಳಿಸಿ, ಇವುಗಳಿಂದ ಮಾನವ ಪರಿಶುದ್ಧನಾದಾಗ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂದು ಹೇಳಿದನು. ಈ ಧರ್ಮಗಳ ಆನಂತರದ ಕಾಲದಲ್ಲಿ ಭಕ್ತಿ ಹೆಚ್ಚು ಪ್ರಚಾರವನ್ನು ಕಂಡಿತು. ಅನೇಕರು ಭಕ್ತಿ ಚಳವಳಿಯಲ್ಲಿ ಧುಮುಕಿದರು.

## 8.2 ಭಕ್ತಿ ಆಂದೋಲನ

ಭಕ್ತಿ ಆಂದೋಲನ ಮೊದಲು ಪ್ರಾರಂಭವಾಗಿದ್ದು ದಕ್ಷಿಣ ಭಾರತದಲ್ಲಿ. ತಮಿಳುನಾಡಿನ ಶೈವ ಸಂತರಾದ ನಾಯನ್ಮಾರರು ಮತ್ತು ವೈಷ್ಣವ ಸಂತರಾದ ಆಳ್ವಾರರು ಭಕ್ತಿಪಂಥವನ್ನು ಕಟ್ಟಿ ಜನಪ್ರಿಯಗೊಳಿಸಿದರು. ಆನಂತರ ಸುಮಾರು ಹನ್ನೆರಡು ಮತ್ತು ಹದಿಮೂರನೆ ಶತಮಾನದ ಅವಧಿಯಲ್ಲಿ ರಾಮಾನುಜಾಚಾರ್ಯರು, ಬಸವೇಶ್ವರರು ಹಾಗೂ ಮಧ್ವಾಚಾರ್ಯರು ಈ ಚಳವಳಿಯನ್ನು ಪ್ರಭಾವಯುತ ಹಾಗೂ ಜನಪ್ರಿಯವಾದ ಚಳವಳಿಯನ್ನಾಗಿ ರೂಪಿಸಿದರು.

ಇಲ್ಲಿ, ಭಕ್ತಿಯನ್ನು ಹರಿಹರನ ರಗಳೆಗಳ ಪಾತ್ರದರ್ಶನದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾಗಿರುವುದರಿಂದ, ರಾಮಾನುಜಾಚಾರ್ಯರು ಮತ್ತು ಬಸವಣ್ಣನವರ ಭಕ್ತಿ ಚಳವಳಿಯನ್ನು ಮುಖ್ಯವಾಗಿ ಗಮನಿಸಿದೆ.

ಭಕ್ತಿ ಪಂಥವನ್ನು ಮೊದಲಿಗೆ ಕಟ್ಟಿದವರು ಶ್ರೀ ರಾಮಾನುಜರು. ಇವರು ಹನ್ನೆರಡನೆ ಶತಮಾನದಲ್ಲಿ ತಮಿಳುನಾಡು ಮತ್ತು ಕರ್ನಾಟಕದಲ್ಲಿ ಜೀವಿಸಿದ್ದರು. ಶಂಕರಾಚಾರ್ಯರು ಪ್ರತಿಪಾದಿಸಿದ ಅದ್ವೈತ ಸಿದ್ಧಾಂತವನ್ನು ವಿರೋಧಿಸಿ, ತಮ್ಮದೇ ಆದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದರು. "ದೇವರು ಸತ್ಯ, ಸಗುಣ, ನಿರ್ಗುಣನಲ್ಲ, ಎಲ್ಲ ಉದಾತ್ತ ಗುಣಗಳನ್ನುಳ್ಳ ಸ್ವಪ್ರಜ್ಞ, ಶಾಶ್ವತ, ಉದಾತ್ತ ಹಾಗೂ ಆನಂದಮಯನಾದವನು. ಈ ಪ್ರಪಂಚದ ಕರ್ತೃವೂ ಸರ್ವಜೀವಗಳ ಆಧಾರನೂ ನಿಯಂತ್ರಕನೂ ಅವನೇ. ಅವನು ಸರ್ವಾಂತರ್ಯಾಮಿ,

ಆವನ ಸ್ವರೂಪ ಪ್ರತೀ ವಸ್ತುವಿನ ಪ್ರತೀ ಕಣದಲ್ಲೂ ಪ್ರತೀ ವ್ಯಕ್ತಿಯ ಆತ್ಮದಲ್ಲೂ ಲೀನವಾಗುತ್ತದೆ"[4] ಎಂದು ಸಾರಿದರು. ಭಕ್ತಿ ಮಾರ್ಗವನ್ನು ಅನುಸರಿಸಲು ಯಾವ ಕುಲ ಗೋತ್ರವೂ ಅಡ್ಡಿ ಬರುವಂತಹುದಲ್ಲ. ಇದಕ್ಕೆ ಬೇಕಾಗಿರುವುದು ಆತ್ಮಶುಚಿ,ಏಕಾಗ್ರತೆ ಹಾಗೂ ದೈವದಲ್ಲಿ ಪ್ರೀತಿ. ಆ ಮೂಲಕ ರಾಮಾನುಜರು "ಶೂದ್ರ ಮತ್ತು ಅಂತ್ಯಜರಿಗೂ ಭಕ್ತಿಯ ರಸ ನೀಡಿ, ಅವರಿಗೂ ಮೋಕ್ಷದ ಅರಿವಿನ ದಾರಿ ತೋರಿದರು. ರಾಮಾನುಜರು ತಾವೇ ಮುಂದೆ ನಿಂತು ಅನೇಕ ದೇವಾಲಯಗಳಲ್ಲಿ ಶೂದ್ರ ಹಾಗೂ ಹರಿಜನರಿಗೆ ಪ್ರವೇಶಾವಕಾಶ ಕಲ್ಪಿಸಿ, ಭಗವಂತನ ಭಕ್ತರೆಲ್ಲ ಹಿರಿಯರು ಎಂಬುದಾಗಿ ಸಾರಿದರು."[5]

ರಾಮಾನುಜಾಚಾರ್ಯರ ನಂತರ ಭಕ್ತಿ ಆಂದೋಲನದ ಪ್ರಮುಖರು ಬಸವಣ್ಣನವರು. ಇವರ ಮಾರ್ಗ ವಿನೂತನವಾದದ್ದು, ಸಾಮಾಜಿಕ ಕಳಕಳಿಯಿಂದ ಕೂಡಿದ್ದು ಅತ್ಯಂತ ಕ್ರಾಂತಿಕಾರಕವಾದಂಥದ್ದು. ಬಸವಣ್ಣನವರು ಸಮಾಜದಲ್ಲಿ ಮನೆ ಮಾಡಿಕೊಂಡಿದ್ದ ಮೌಢ್ಯಗಳನ್ನು ತೊಡೆದುಹಾಕಲು ಶ್ರಮಿಸಿದರು. ಜಾತಿ, ಮತ, ಧರ್ಮಗಳ ಅಂಧಾನುಕರಣೆಯ ಅನಿಷ್ಟಗಳ ವಿರುದ್ಧ ಕ್ರಾಂತಿಯನ್ನೇ ಆರಂಭಿಸಿದರು. ಅಂತರ್ಜಾತಿ ವಿವಾಹಗಳನ್ನು ಆಚರಣೆಗೆ ತಂದರು. ಹರಿಜನರ ಬಗೆಗೆ ಅಪಾರ ಪ್ರೀತಿ ತೋರಿದರು. ಅವರನ್ನು ಸಮಾಜದಿಂದ ಹೊರಗಿಟ್ಟು ನಿಕೃಷ್ಟವಾಗಿ ಕಾಣುವುದನ್ನು ಖಂಡಿಸಿದರು. ಒಮ್ಮೆ ನಾಗಿದೇವನೆಂಬ ಅಸ್ಪೃಶ್ಯನ ಮನೆಯಲ್ಲಿ ನಡೆದ ಪೂಜೆಗೆ ಹೋಗಿ ಪ್ರಸಾದ ಸ್ವೀಕರಿಸಿ ಬಂದರು. ಅಂತ್ಯಜರೆಂದು ದೂರೀಕರಿಸಲ್ಪಟ್ಟ ಅವರಿಗೂ ಶಿವದೀಕ್ಷೆ ನೀಡಿ, ಅವರಲ್ಲಿ ಹೊಸ ಧಾರ್ಮಿಕ ಚೇತನವನ್ನುಂಟು ಮಾಡಿದರು. 'ದಯವೇ ಧರ್ಮದ ಮೂಲವಯ್ಯಾ' ಎಂದು ಸಾರಿದರು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಪ್ರಾಣಿಬಲಿಯನ್ನು ತಡೆಗಟ್ಟಲು, ಸ್ತ್ರೀ ಬಗೆಗೆ ಇರುವ ಕೆಟ್ಟ ಭಾವನೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಸ್ತ್ರೀಯರ ಬಗೆಗೆ ಗೌರವ ಭಾವನೆಯನ್ನು ಬೆಳೆಸಿ, ಪುರುಷರಿಗಿರುವ ಸಮಾನತೆಯನ್ನು ಅವರಿಗೂ ಕಲ್ಪಿಸಿದರು. ಇವರ ನಂತರದಲ್ಲಿ ಮಧ್ವಾಚಾರ್ಯ, ರಮಾನಂದ, ಕಬೀರ, ಚೈತನ್ಯ, ನಾನಕ ಮತ್ತು ಮೀರಾಬಾಯಿ ಭಕ್ತಿ ಚಳವಳಿಯಲ್ಲಿ ಮುಖ್ಯಪಾತ್ರ ವಹಿಸುತ್ತಾರೆ.

## 8.3 ಭಕ್ತಿ ಚಳವಳಿಯ ಕಾರಣಗಳು

ಭಕ್ತಿ ಚಳವಳಿಗೆ ಕಾರಣವಾದ ಅಂಶಗಳನ್ನು ಧಾರ್ಮಿಕ, ಸಾಮಾಜಿಕ ಮತ್ತು ಮುಸ್ಲಿಮರ ಪ್ರವೇಶ ಎಂದು ವಿಂಗಡಿಸಬಹುದು.

### 8.3.1 ಧಾರ್ಮಿಕ ಕಾರಣಗಳು

ಪ್ರಾಚೀನಯುಗ ಧಾರ್ಮಿಕ ಕಂದಾಚಾರಗಳಿಂದ ಕೂಡಿತ್ತು. ಅಂಧಾನುಕರಣೆ ಹಾಗೂ ಮೂಢ ನಂಬಿಕೆಗಳಿಗೆ ಬಲಿಯಾಗಿದ್ದ ಜನಸಮುದಾಯ ಕಣ್ಣಿದ್ದೂ ಕುರುಡರಂತಾಗಿದ್ದಿತು.

"ವೈದಿಕ ಧರ್ಮವು ತನ್ನ ಮೂಲದ ಸರಳತೆ ಮತ್ತು ಪರಿಶುದ್ಧತೆಗಳನ್ನು ಕಳೆದುಕೊಂಡು ಅರ್ಥವಿಲ್ಲದ ವ್ಯರ್ಥ ಸಂಸ್ಕಾರಗಳ, ಆಚಾರ ವಿಧಿಗಳ ಮತ್ತು ಸಂಪ್ರದಾಯಗಳ ಧರ್ಮವಾಗಿ ಮಾರ್ಪಟ್ಟಿತ್ತು. ಸಂಸ್ಕಾರ ಮತ್ತು ಆಚಾರವಿಧಿಗಳು ಬೃಹತ್ತಾಗಿ ಬೆಳೆದು ಅವು ವೆಚ್ಚಕಾರಕವೂ ಸಾಮಾನ್ಯ ಮನುಷ್ಯನಿಗೆ ಎಟುಕಲಾರದಂತಹವೂ ಆಗಿದ್ದವು. ಇದರಿಂದಾಗಿ, ಜನರು ಈ ಸಂಸ್ಕಾರ ಮತ್ತು ಆಚಾರಗಳ ಭಾರದಿಂದ ಕೃಶವಾಗಿಹೋಗಿದ್ದರು."[6] ಕಾಲಕ್ರಮೇಣ ವೈದಿಕ ಧರ್ಮದಲ್ಲಿ ಹಲವಾರು ಮೂಢನಂಬಿಕೆಗಳು ಮನೆಮಾಡಿಕೊಂಡಿದ್ದವು. "ಇದರಿಂದ ಧರ್ಮ ವಿರೂಪಗೊಂಡು ಮಾನವನಿಗೆ ದಾರಿದೀವಿಗೆಯಾಗುವುದರ ಬದಲು ಅಜ್ಞಾನದ ಅಂಧಕಾರಕ್ಕೆ ಒಯ್ಯುವ ಸಾಧನವಾಗಿ ಮಾರ್ಪಟ್ಟಿದ್ದಿತು. ಮಾಯಮಂತ್ರಗಳಿಂದ ಮಾನವ ತೊಂದರೆಗಳನ್ನು ತೊಡೆದುಹಾಕಬಹುದು, ದೇವರನ್ನು ಒಲಿಸಿಕೊಳ್ಳಬಹುದು ಎಂಬ ಭಾವನೆ ಬೆಳೆದು, ಧರ್ಮದ ನಿಜವಾದ ಅರ್ಥ"[7] ಮಾಯವಾಯಿತು. ಈ ಮಂತ್ರಗಳು ಸಾಮಾನ್ಯ ಮನುಷ್ಯನಿಗೆ ಅರ್ಥವಾಗಲಿಲ್ಲವಾಗಿ ಅವನು ಸರಳ ಮಾರ್ಗವನ್ನು ಅಪೇಕ್ಷಿಸಿದನು. "ವೈದಿಕ ಧರ್ಮವು ಕಾಲಕ್ರಮದಲ್ಲಿ ಯಜ್ಞಯಾಗಾದಿ ಮತ್ತು ಸಂಸ್ಕಾರಗಳಿಗೆ ಹೆಚ್ಚು ಮಹತ್ವ ಕೊಟ್ಟಿತು. ಇದನ್ನು ಬ್ರಾಹ್ಮಣ ಪುರೋಹಿತರು ಸ್ವಹಿತ ಸಾಧನೆಗೆ ಬಳಸಿಕೊಂಡರು. ಜನರನ್ನು ಶೋಷಿಸಲು ತೊಡಗಿದರು. ಯಜ್ಞಯಾಗಾದಿಗಳಿಲ್ಲದೆ ಮೋಕ್ಷ ಅಸಾಧ್ಯ ಎಂಬ ನಂಬಿಕೆಯನ್ನು ಹುಟ್ಟುಹಾಕಿದರು. ಇದರಿಂದಾಗಿ ಧರ್ಮ ಮತ್ತು ಮೋಕ್ಷಗಳು ಸಾಮಾನ್ಯ ಜನರಿಂದ ದೂರ ಸರಿದವು."[8] ದೇವರು, ಆತ್ಮ, ಪ್ರಕೃತಿ, ಸೃಷ್ಟಿ, ಸಾವು, ಮೋಕ್ಷ ಇತ್ಯಾದಿ ವಿಷಯಗಳ ಬಗೆಗೆ ನಿರ್ದಿಷ್ಟತೆ ಇರಲಿಲ್ಲ. ಒಂದು ವಾದಕ್ಕೂ ಇನ್ನೊಂದು ವಾದಕ್ಕೂ, ಒಬ್ಬ ಬೋಧಕನಿಗೂ ಇನ್ನೊಬ್ಬ ಬೋಧಕನಿಗೂ ತಾಳಮೇಳವಿರಲಿಲ್ಲ. ಇದರಿಂದ ಅನಿಶ್ಚಿತ ಅಸಂಬದ್ಧ ವಾತಾವರಣ ಏರ್ಪಟ್ಟಿದ್ದಿತು."[9] ವೈದಿಕ ಧರ್ಮವು ಬೋಧಿಸಿದ ಕರ್ಮ, ಜ್ಞಾನ ಮತ್ತು ತಪಸ್ಸಿನ ಸಿದ್ಧಾಂತಗಳಲ್ಲಿ ಒಡಂಬಡಿಕೆ ಇರಲಿಲ್ಲ. ಕೆಲವರು ಕರ್ಮ ಹಾಗೂ ತಪಸ್ಸಿನ ಮಾರ್ಗಗಳಿಗೆ ಒತ್ತು ಕೊಟ್ಟರೆ ಇನ್ನು ಕೆಲವರು ಜ್ಞಾನ ಮಾರ್ಗಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರು. ಪುರೋಹಿತ ಸಮುದಾಯದ ದಬ್ಬಾಳಿಕೆ ಹೆಚ್ಚಾಗಿತ್ತು. ಅವರ ಮಧ್ಯಸ್ತಿಕೆಯಿಲ್ಲದೆ ಮೋಕ್ಷಕ್ಕೆ ಮಾರ್ಗವೇ ಇರಲಿಲ್ಲ.

### 8.3.2 ಸಾಮಾಜಿಕ ಕಾರಣಗಳು

ಪ್ರಾಚೀನಯುಗದಲ್ಲಿ ವರ್ಣ, ಜಾತಿ ಹಾಗೂ ಸ್ತ್ರೀ ಪುರುಷ ಅಸಮಾನತೆಗಳು ಭೀಕರವಾಗಿದ್ದವು. ಪ್ರಾರಂಭದಲ್ಲಿ ಜೀವನ ಸರ್ವಸ್ವವನ್ನೂ ನಿಯಂತ್ರಿಸುವ ಶಕ್ತಿ ಪಡೆದಿದ್ದ ಧರ್ಮ ಕ್ರಮೇಣ ವೇದ ಉಪನಿಷತ್ತು ಮುಂತಾದವುಗಳನ್ನು ದಾಟಿ ಹೊರಬಂದ ಮೇಲೆ, ಮೀರಲಾಗದ ಸಾಂಪ್ರದಾಯಿಕ ನಿಯಮಗಳಿಂದ ಬಂಧಿತವಾಯಿತು. ವರ್ಣವ್ಯವಸ್ಥೆ ಹೆಚ್ಚು ಮಾನ್ಯತೆಯನ್ನು ಪಡೆಯಿತು. ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ ಎಂಬ ನಾಲ್ಕು ವರ್ಣಗಳು ಹುಟ್ಟಿಕೊಂಡವು. ಸಾಂಪ್ರದಾಯಿಕವಾಗಿ ದೇವರು ಈ ನಾಲ್ಕು ವರ್ಣಗಳನ್ನು ಸೃಷ್ಟಿಸಿದನು

ಎಂಬ ನಂಬಿಕೆಯಿದೆ. ಇದರಂತೆ ಬ್ರಾಹ್ಮಣರು ದೇವರ ಶಿರೋಭಾಗದಿಂದ, ಕ್ಷತ್ರಿಯರು ಭುಜಗಳಿಂದ, ವೈಶ್ಯರು ಹೊಟ್ಟೆಯಿಂದ, ಶೂದ್ರರು ಪಾದದಿಂದ ಜನಿಸುತ್ತಾರೆ ಎಂದು ಹೇಳಲಾಯಿತು. ಕಾಲ ಕ್ರಮೇಣ ಈ ವರ್ಣವ್ಯವಸ್ಥೆ ವಿಸ್ತೃತಗೊಂಡು ಜಾತಿಗಳು ಹುಟ್ಟಿಕೊಂಡವು. ನಾಲ್ಕು ವರ್ಣಗಳ ಜೊತೆಗೆ ಪಂಚಮ ವರ್ಣವೆನಿಸಿದ ಅಸ್ಪೃಶ್ಯತೆಯ ಉದಯವಾಯಿತು. ಶೂದ್ರರ ಮತ್ತು ಅಸ್ಪೃಶ್ಯರ ಶೋಷಣೆ ಆರಂಭವಾಯಿತು. ಸಾಮಾಜಿಕ ಮೇಲು ಕೀಳು ಮತ್ತು ಆರ್ಥಿಕ ಏರುಪೇರುಗಳು ಧಾರ್ಮಿಕ ಅಂಗೀಕಾರ ಪಡೆದವು. ಧರ್ಮ ಶಾಸ್ತ್ರಗಳು ಆಯಾಯ ವರ್ಣಗಳ ಕರ್ತವ್ಯಗಳನ್ನು ಖಚಿತಗೊಳಿಸಿದವು. ಮೇಲು ವರ್ಣಗಳಲ್ಲಿ ಈ ಕರ್ತವ್ಯಗಳು ಅಲ್ಪ ಸ್ವಲ್ಪ ವ್ಯತ್ಯಾಸ ಹೊಂದಿದರೂ, ಕೆಳ ವರ್ಣಗಳಂತೂ ಅವುಗಳನ್ನು ಮೀರಿ ನಡೆಯುವಂತಿರಲಿಲ್ಲ. ಶೂದ್ರ ಹುಟ್ಟಿನಿಂದಲೆ ವಿದ್ಯಾಭ್ಯಾಸದಿಂದ ವಂಚಿತನಾಗುತ್ತಿದ್ದ. ಅಸ್ಪೃಶ್ಯರಂತೂ ವಿದ್ಯೆಯನ್ನು ಕನಸಿನಲ್ಲಿಯೂ ಬಯಸುವಂತಿರಲಿಲ್ಲ. ಅವರು ಮಾರಾಟದ ವಸ್ತುಗಳಾಗಿದ್ದರೇ ವಿನಃ ಮನುಷ್ಯರಾಗಿರಲಿಲ್ಲ. (ಹೀಗೆ ಮಾರಾಟ ಮಾಡಿದ ಹಲವು ಉದಾಹರಣೆ ಗಳು ಪ್ರಾಚೀನ ಶಾಸನಗಳಲ್ಲಿ ಸಿಕ್ಕಿವೆ. ಉದಾ : ಬೌರಿಂಗ್ ಪೇಟೆಯ ಮರಗಲ್ಲು ಗ್ರಾಮದ ಶಾಸನ, ಕುಣಿಗಲ್ಲು ತಾಲ್ಲೂಕಿನ ಕೊತ್ತಗೆರೆ ಹೋಬಳಿ ಅಶ್ವತ್ಥ ಕಟ್ಟೆ ಬಳಿಯಿರುವ ಶಾಸನ : ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ ಪುಟ 29). ಅವರ ಬದುಕು ಹೀನವಾಗಿತ್ತು. ಹೊಲೆಯರು ಸವರ್ಣೀಯ ಕೇರಿಗಳೊಳಕ್ಕೆ ಬರುವಂತಿರಲಿಲ್ಲ. ಅವರನ್ನು ನೋಡಿದ ಮಾತ್ರಕ್ಕೆ ಸವರ್ಣೀಯರು ಮೈಲಿಗೆ ಆಗುತ್ತಿದ್ದರು. ಅವರು ಊರೊಳಕ್ಕೆ ಬರಬೇಕಾದರೆ ತಾವು ಬರುತ್ತಿರುವುದರ ಸೂಚನೆಯಾಗಿ ಸದ್ದು ಮಾಡಬೇಕಾಗಿತ್ತು. ಅವರ ಆಹಾರ ಸತ್ತ ಪ್ರಾಣಿಗಳ ಮಾಂಸ ಮತ್ತು ಹೆಂಡ. ಕುಡಿಯುವ ನೀರಿಗಾಗಿ ಅವರಿಗೇ ಪ್ರತ್ಯೇಕ ಬಾವಿಗಳ ವ್ಯವಸ್ಥೆ ಮಾಡಲಾಗಿತ್ತು. ಅವರಿಗೆ ಯಾವುದೇ ಭೂಮಿಯ ಒಡೆತನ ಇರಲಿಲ್ಲ. ವ್ಯವಸಾಯವು ಅವರಿಗೆ ನಿಷಿದ್ಧವಾಗಿತ್ತು. ಅವರ ಕೆಲಸವೇನಿದ್ದರೂ ಊರಿನ ಕಸ ತೆಗೆಯುವುದು ಮಾತ್ರವಾಗಿತ್ತು. ಒಟ್ಟಾರೆ ಅವರ ಬದುಕು ಪ್ರಾಣಿಗಿಂತಲೂ ಕಡೆಯಾಗಿತ್ತು.

ಪ್ರಾಚೀನ ಸಮಾಜದಲ್ಲಿ ಅಸ್ಪೃಶ್ಯರ ಬದುಕನ್ನು ಕುರಿತಂತೆ ಚಿದಾನಂದ ಮೂರ್ತಿಯವರ 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಎಂಬ ಗ್ರಂಥ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತದೆ. ಅಲ್ಲಿ ಚಿದಾನಂದ ಮೂರ್ತಿಯವರು ಉಲ್ಲೇಖಿಸುವ, ವಿದೇಶೀ ಪ್ರಜೆಯೊಬ್ಬನ "ವಿಶ್ವದ ಇತಿಹಾಸದಲ್ಲಿ ಯಾವುದೇ ಕಾಲದ ಯಾವುದೇ ದೇಶದ ಜನ, ಒಂದು ದೊಡ್ಡ ಗುಂಪನ್ನು ಮುಟ್ಟಲೂ ಯೋಗ್ಯರಲ್ಲವೆಂದು ಊರಿನಿಂದ ಹೊರಗೆ ಇಟ್ಟ ಉದಾಹರಣೆ ಭಾರತವನ್ನು ಬಿಟ್ಟರೆ ಮತ್ತೊಂದು ಇಲ್ಲ"[10] ಎಂಬ ಹೇಳಿಕೆ ಅಸ್ಪೃಶ್ಯರ ಬದುಕಿನ ಭೀಕರತೆಯನ್ನು ತಿಳಿಸಿಕೊಡುತ್ತದೆ.

### 8.3.3 ಮುಸ್ಲಿಮರ ಪ್ರವೇಶ

ಹಿಂದೂ ಧರ್ಮದೊಳಗಿನ ನ್ಯೂನತೆಯಿಂದಾಗಿ, ಜೈನ ಮತ್ತು ಬೌದ್ಧ ಧರ್ಮಗಳು ಹುಟ್ಟಿಕೊಂಡವು. ಆದರೆ ಆ ಧರ್ಮಗಳೂ ತನ್ನ ಕಠಿಣತೆಯಿಂದಾಗಿ ಜನಾನುಸರಣೆಗೆ ಬಾರದೆ ಹೋದವು. ಈ ಎರಡೂ ಧರ್ಮಗಳನ್ನು ಜನ ತಿರಸ್ಕರಿಸಿದರು. ಅದೇ ವೇಳೆಗೆ ಮುಸ್ಲಿಮರು

ಪ್ರವೇಶ ಮಾಡಿದರು. ತಮ್ಮ ದಮನಕಾರಿ ಪ್ರವೃತ್ತಿಯಿಂದಾಗಿ ಎರಡೂ ಧರ್ಮಗಳನ್ನು ನಾಶ ಮಾಡಿದರು. ಮೊದಲೇ ಅಂಧ ಧಾರ್ಮಿಕ ಆಚರಣೆಯಿಂದ ತತ್ತರಿಸಿಹೋಗಿದ್ದ ಜನರಿಗೆ ತಮ್ಮ ಹೊಸ ಧರ್ಮವನ್ನು ಪರಿಚಯಿಸಿದರು. ಜನರಿಗೆ ಅತಿ ಸುಲಭವೆನಿಸಿದ ಏಕದೇವೋಪಾಸನೆ ಯನ್ನು ಬೋಧಿಸಿದರು. ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿದರು. ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ ಮೊದಲಾದ ಭೇದಗಳನ್ನು ತೊರೆದರು. ಹಾಗಾಗಿ ಮುಸ್ಲಿಮರ ಇಸ್ಲಾಂ ಧರ್ಮವು ಹೆಚ್ಚು ಜನಪ್ರಿಯ ವಾಯಿತು. ಮತಾಂತರಗೊಳ್ಳಲು ಮುಸ್ಲಿಮರು ಹೆಚ್ಚು ಅವಕಾಶ ನೀಡಿದರು. ಕೆಲವರನ್ನು ಬಲವಂತವಾಗಿ ಮತಾಂತರಿಸಿದರು. ಮತ್ತೆ ಕೆಲವರು ಸ್ವಇಚ್ಛೆಯಿಂದಲೇ ಇಸ್ಲಾಂ ಧರ್ಮವನ್ನು ಅನುಸರಿಸಿದರು. ಕ್ರಿ. ಶ. 6, 7ನೆ ಶತಮಾನದ ಹೊತ್ತಿಗೆಲ್ಲ ಹಿಂದೂ-ಮುಸ್ಲಿಂ ಭಾವೈಕ್ಯತೆ ಏರ್ಪಟ್ಟಿತು. ಎರಡೂ ಧರ್ಮಗಳ ಜನರಲ್ಲಿ ವಿಶ್ವಾಸ ಮೂಡಿತು. ಮತಾಂತರದ ಪ್ರಮಾಣ ಹೆಚ್ಚಾಗತೊಡಗಿತು. ಹೀಗೆ ಮುಸ್ಲಿಂ ಧರ್ಮದ ಜನಪ್ರಿಯತೆ ಹಾಗೂ ಉದಾರ ತತ್ವಗಳು ಹಿಂದೂಗಳಿಗೆ ಸವಾಲಾಗಿ ಪರಿಣಮಿಸಿದವು. ತಮ್ಮ ಧರ್ಮದ ಉಳಿವಿಗಾಗಿ ಹಿಂದೂಗಳು ಪರಿಶ್ರಮಿಸಬೇಕಾಯಿತು. ಅದಕ್ಕಾಗಿ ಭಕ್ತಿಮಾರ್ಗವನ್ನು ಅನುಸರಿಸಿದರು.

## 8.4 ಹರಿಹರನ ಭಕ್ತಿಪ್ರವೃತ್ತಿ

ಹರಿಹರ ಭಕ್ತಾಗ್ರೇಸರನಾದ ಕವಿ. ಅವನು ಭಕ್ತಿಯಲ್ಲಿ ತೊಡಗಿದನೆಂದರೆ ಲೋಕವನ್ನೇ ಮರೆಯುವಂಥವನು. ಅವನ ಭಕ್ತಿಗೂ ಪ್ರಾಚೀನರ ಭಕ್ತಿಗೂ ಅಜಗಜಾಂತರ ವ್ಯತ್ಯಾಸವಿದೆ. ಅವನ ಭಕ್ತಿ ಪ್ರಾಚೀನರ ಭಕ್ತಿಯಂತೆ ಕ್ಲಿಷ್ಟವಾದದ್ದೂ ಜಾತಿ ಮತ ಧರ್ಮಗಳನ್ನು ಆಧರಿಸಿದ್ದೂ ಆಡಂಬರವಾದದ್ದೂ ಅಲ್ಲ. ಹರಿಹರನ ಭಕ್ತಿ ಅತ್ಯಂತ ಸರಳವಾಗಿದ್ದು ಸಾಮಾನ್ಯರೂ ಅನುಸರಿಸಲು ಯೋಗ್ಯವಾಗಿರುವಂಥದ್ದು. ಜಾತಿ ಮತ ಧರ್ಮಗಳಿಂದ ದೂರವಿದ್ದು ಸರ್ವ ಸಮಾನತೆಯುಳ್ಳದ್ದು ಹಾಗೂ ವೀರಶೈವ ತತ್ವಾಚರಣೆಯುಳ್ಳದ್ದೂ ಆಗಿದೆ.

ಹರಿಹರನ ಭಕ್ತಿ ಅತೀ ಸರಳವಾದದ್ದು. ಅಲ್ಲಿ ಯಾವ ವಿಧಿವಿಧಾನಗಳೂ ಇಲ್ಲ. ಭಕ್ತಿ ಹೀಗೇ ಇರಬೇಕು, ಇಂಥದ್ದೇ ಸ್ಥಳ ಆಗಿರಬೇಕು, ಇದೇ ದೇವರನ್ನು ಪೂಜಿಸಬೇಕು ಎಂಬ ಕಟ್ಟುನಿಟ್ಟುಗಳಿಲ್ಲ. ಇಲ್ಲಿ ಮುಖ್ಯವಾದದ್ದು ಭಕ್ತನ ಅಂತರಂಗ. ಅಂತೆಯೇ ಭಕ್ತರ ಪೂಜೆ ಅನೇಕ ವಿಧವಾಗಿರುತ್ತದೆ. ಕೋಳೂರ ಕೊಡಗೂಸಿನ ಪೂಜೆ ಒಂದು ತೆರನಾಗಿದ್ದರೆ, ಕಾರಿಕಾಲಮ್ಮೆಯ ಪೂಜೆ ಇನ್ನೊಂದು ತೆರನಾಗಿರುತ್ತದೆ. ಬಸವಣ್ಣನ ಪೂಜೆ ಒಂದು ತೆರನಾಗಿದ್ದರೆ, ನಂಬಿಯಣ್ಣನ ಪೂಜೆ ಇನ್ನೊಂದು ತೆರನಾಗಿರುತ್ತದೆ. ಭಕ್ತ ಇಳೆಯಾಂಡ ಗುಡಿಮಾರ ತನ್ನ ತನು, ಮನ, ಧನಗಳನ್ನೇ ಶಿವನಿಗೆ ಅರ್ಪಿಸಿದರೆ ತೆಲುಗು ಜೊಮ್ಮಯ್ಯ ಮತ್ತು ಕಣ್ಣಪ್ಪನಂತಹವರು ಮಾಂಸವನ್ನೇ ಶಿವನಿಗೆ ಅರ್ಪಿಸುತ್ತಾರೆ. ಯಾವ ಭಕ್ತ ಕೂಡ ತನ್ನ ಪೂಜೆಗೆ ಇದೇ ಸ್ಥಳ ಆಗಿರಬೇಕು ಎಂದುಕೊಂಡಿಲ್ಲ. ಮಾದಾರ ಚೆನ್ನಯ್ಯ ಕುದುರೆಗೆ ಹುಲ್ಲು ತರಲು ಹೋದಾಗ ಅಲ್ಲೇ ಭಕ್ತಿನಿರತನಾಗುತ್ತಾನೆ. ಇಳೆಯಾಂಡಗುಡಿಮಾರ ಒಕ್ಕಲುತನವನ್ನೇ ಶಿವಾರ್ಪಿತವೆಂದುಕೊಳ್ಳುತ್ತಾನೆ. ಅತಿಭಕ್ತ ಮೀನು ಹಿಡಿಯುತ್ತಲೇ ಭಕ್ತಿನಿರತನಾಗುತ್ತಾನೆ. ಕಾರಿಕಾಲಮ್ಮೆ ಗಂಡನ ಮನೆಯಲ್ಲೇ ಭಕ್ತಿನಿರತಳಾಗುತ್ತಾಳೆ. ಹೇರೂರ

ಹೆಂಗೂಸು ಕಾಡಿನ ನಡುವೆಯೇ ಶಿವನನ್ನು ಕಾಣುತ್ತಾಳೆ. ಹೀಗೆ ಸ್ಥಾವರ ಪೂಜೆ, ಇಷ್ಟಲಿಂಗಪೂಜೆ ಎರಡೂ ಹರಿಹರನ ಭಕ್ತರ ಅನುಸರಣೆಯಲ್ಲಿವೆ. ಇವರ ಭಕ್ತಿಯಲ್ಲಿ ಯಾವ ಆಡಂಬರವೂ ಇಲ್ಲ. ಸಾಮಾನ್ಯರಿಂದ ಶ್ರೀಮಂತರವರೆಗೆ ಎಲ್ಲರಿಗೂ ಭಕ್ತನಾಗುವ ಸುಯೋಗವಿದೆ.

ಬಸವಣ್ಣ, ನಂಬಿಯಣ್ಣ, ಕರಿಕಾಲಚೋಳ, ಪೆರ್ಮಾಡಿರಾಯರಂಥ ಕೆಲವರನ್ನು ಬಿಟ್ಟರೆ ಉಳಿದವರೆಲ್ಲ ಸಾಮಾನ್ಯರೇ ಆಗಿದ್ದಾರೆ. ಈ ಭಕ್ತರೆಲ್ಲ ಸಾಮಾನ್ಯರಾಗಿರುವುದರ ಜೊತೆಗೆ ಬೇರೆ ಬೇರೆ ಜಾತಿ, ಧರ್ಮ ಮತ್ತು ಊರುಗಳಿಂದ ಬಂದವರಾಗಿದ್ದಾರೆ. ಇವರಲ್ಲಿ ಬಸವಣ್ಣ ಸಾಮವೇದಿಗಳಂಥ ಬ್ರಾಹ್ಮಣ ವರ್ಗದವರು, ಶ್ವಪಚಯ್ಯ ಮಾದಾರಚೆನ್ನಯ್ಯರಂಥ ಅಸ್ಪೃಶ್ಯರು, ಗುಂಡಯ್ಯನಂಥ ಕುಂಬಾರರು, ಪದ್ಮಾವತಿ ಮತ್ತು ಪಾರಿಷಪಂಡಿತರಂಥ ಜೈನರು, ಇಳೆಯಾಂಡಗುಡಿಮಾರನಂಥ ಒಕ್ಕಲಿಗರು ಸೇರಿದ್ದಾರೆ. ಹಾಗೆಯೇ ವಿವಿಧ ವೃತ್ತಿಯಿಂದ ಬಂದ ಭಕ್ತರಾದ ಅರಿವಾಳ್ತಂಡ, ತಿರುಕುರುಂಪೆತೊಂಡ, ಆನಾಯನಾರರಂಥ ಭಕ್ತರೂ ಇದ್ದಾರೆ. ಎಲ್ಲ ಭಕ್ತರೂ ಸಮಾನ ಮನಸ್ಥಿತಿಯುಳ್ಳವರು. ಸ್ತ್ರೀ-ಪುರುಷ ಎಂಬ ಭಿನ್ನ ಭಾವ ಅವರಲ್ಲಿ ಕಂಡು ಬರುವುದಿಲ್ಲ. ಪುರುಷರಿಗೆ ಎಷ್ಟು ಗೌರವವಿದೆಯೋ ಅಷ್ಟೇ ಗೌರವ ಸ್ತ್ರೀಯರಿಗೂ ಇದೆ. ಈ ಎಲ್ಲವುಗಳ ಜೊತೆಗೆ ಹರಿಹರನ ಭಕ್ತಿಯಲ್ಲಿ ಮಹತ್ವವಾಗಿ ಕಂಡುಬರುವುದು ವೀರಶೈವ ತತ್ತ್ವಾಚರಣೆ.

"ವೀರಶೈವ ಶರಣರಲ್ಲಿ ಕಾಣುವ ಭಕ್ತಿ ಅಂತರಂಗ-ಬಹಿರಂಗಗಳಲ್ಲಿ ಸಮಾನವಾದುದು. ಭಕ್ತನ ಬಹಿರಂಗ ಕ್ರಿಯೆ ಅಂತರಂಗದ ಚಿತ್ತವೃತ್ತಿಯಲ್ಲಿ ಬೆರಸಿ ಬೇರಿಲ್ಲದಾಗಬೇಕೆಂಬ ಸಾವಯವ ತತ್ತ್ವ"[12] ರಗಳೆಗಳಲ್ಲಿ ವ್ಯಕ್ತವಾಗುತ್ತದೆ. ಉದಾಹರಣೆಗೆ :

> ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
> ಅಮರ್ದಶಂಕರನೆಂಬ ನೇಗಿಲನಿರಿಸಿ[12] (ಇ.ಗು.ರ)
> ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
> ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ[13] (ತಿ.ನೀ.ರ)

ಇಳೆಯಾಂಡ ಗುಡಿಮಾರ ಮತ್ತು ತಿರುಕುರುಂಪೆತೊಂಡರ ರಗಳೆಗಳಲ್ಲಿ ಬರುವ ಈ ಚಿತ್ರಗಳನ್ನು ನೋಡಬಹುದು.

ಸೃಷ್ಟಿಯಲ್ಲೇ ಶಿವನ ದೃಷ್ಟಿಯನ್ನು ಕಾಣುವಂಥದ್ದು ವೀರಶೈವ ಧರ್ಮದ ಇನ್ನೊಂದು ತತ್ತ್ವ. ಈ ದೃಷ್ಟಿ ಮಾದಾರ ಚೆನ್ನಯ್ಯನ ಅನುಭೂತಿಯಲ್ಲಿ ಹೊರಹೊಮ್ಮಿದೆ. ಚೆನ್ನಯ್ಯ ಬೆಳಗಿನ ಜಾವದಲ್ಲಿ ಕಾನನಕ್ಕೆ ಹುಲ್ಲುಕೊಯ್ಯಲು ಹೋಗುವಾಗ, ಪ್ರಕೃತಿಯ ಒಂದೊಂದು ವಸ್ತುವಿನಲ್ಲಿ ಮತ್ತು ಅವರ ಚೆಲುವಿನಲ್ಲಿ ಶಿವಸೌಂದರ್ಯ ಕಂಗೊಳಿಸುತ್ತದೆ. ಆಗ ಚೆನ್ನಯ್ಯ ಆ ಸೌಂದರ್ಯವನ್ನು ಶಿವನಿಗೇ ಅರ್ಪಿಸುತ್ತಾನೆ. ಷಟ್‌ಸ್ಥಲ ತತ್ತ್ವದ ಪ್ರಕಾರ ಇದು ಲಿಂಗಾಂಗ ಸಾಮರಸ್ಯದ ಒಂದು ಮಹೋನ್ನತ ಘಟ್ಟ.

ಹಾಗೆಯೇ ವೀರಶೈವ ಧರ್ಮದಲ್ಲಿ ಬರುವ ಅಂತರಂಗದ ಅನುಭಾವ, ಉಪಾಸನಾ

ಮಾರ್ಗ, ಸಮರ್ಪಣ ಭಾವ, ದೀಕ್ಷಾಸಂಸ್ಕಾರ, ಗುರುಲಿಂಗ ಜಂಗಮಾರಾಧನೆ, ಮರ್ತ್ಯಲೋಕ-ಶಿವಲೋಕ -ಇವು ಕಂಡುಬರುತ್ತವೆ. ರಗಳೆಯಲ್ಲಿ ಇವುಗಳ ಇರುವಿಕೆಯನ್ನು ಗುರುತಿಸಬಹುದು.

**ಅಂತರಂಗದ ಅನುಭಾವ :** "ಮಾಡುವ ಭಕ್ತಂಗೆ ಮನವೆ ಸಾಕ್ಷಿ ಎನ್ನುತ್ತದೆ ಶರಣ ಧರ್ಮ. ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲಾಗುತ್ತದೆ. ಲೋಕ ಮೆಚ್ಚಲೆಂದು ಕೀರ್ತಿ ವಾರ್ತೆಗೆ ಮಾಡುವ ಭಕ್ತಿ ಭಕ್ತನನ್ನು ಹಗುರಾಗಿಸುತ್ತದೆ"[14] ಭಕ್ತಿಯೆಂದರೆ ಸಂತೆಯಲ್ಲಿ ಸಿಗುವ ಸರಕಲ್ಲ. ಅದು ಅಂತರಂಗದ ಅನುಭಾವ. ಈ ಅಂತರಂಗದ ಅನುಭಾವ ಹರಿಹರನ ಭಕ್ತರನೇಕರಲ್ಲಿ ಕಂಡು ಬರುತ್ತದೆ.

> ಆಳಿಗೊಳಗಾಯಿತೆನ್ನಯ ಭಕ್ತಿ ಧರೆಗೆಂದು
> ಹಜಿಲೆಯೊಳ್ತಂದಿಕ್ಕಿತೆನ್ನ ಡಂಬಿನ ಭಕ್ತಿ
> ----------------------------
> ಅಚ್ಚಿಗಂಗೊಳಿಸಿ ತಡ ಪಡಿಸಿತೆನ್ನಯ ಭಕ್ತಿ[15]

ಎಂಬುದು ತಿರುನೀಲಕಂಠನ ಭಕ್ತಿಯ ಅವಸ್ಥೆಯಾಗಿದೆ. ಇಲ್ಲಿ ತಿರುನೀಲಕಂಠನ ಅಂತರಂಗದ ನಿರೀಕ್ಷಣೆ ಹಾಗೂ ಹೃದಯದ ಅನುತಾಪ ವ್ಯಕ್ತವಾಗುತ್ತದೆ. ಮಾದಾರ ಚೆನ್ನಯ್ಯನ ರಗಳೆಯಲ್ಲೂ ಇಂಥ ಅಂತರಂಗದ ಭಕ್ತಿ ಗೋಚರವಾಗುತ್ತದೆ.

**ಉಪಾಸನಾ ಮಾರ್ಗ :** ಭಕ್ತನಾದವನು ವೇದಾಗಮ ಪುರಾಣಗಳನ್ನೆಲ್ಲ ಬಲ್ಲವನಾಗಿರಲಿ ಅಥವಾ ನಿರಕ್ಷರಕುಕ್ಷಿಯಾಗಿರಲಿ ಅವನ ಭಕ್ತಿಯಲ್ಲಿ ಉಪಾಸನೆಯ ಮಾರ್ಗವಿದ್ದು ನೈಜವೂ ನಿರಾಡಂಬರವೂ ಆಗಿರಬೇಕು. ಅಂಥ ಭಕ್ತಿ ಮಾತ್ರ ಶಿವನ ಮೆಚ್ಚುಗೆಗೆ ಪಾತ್ರವಾಗುತ್ತದೆ. ಕಣ್ಣಪ್ಪ, ಕಾರಿಕಾಲಮ್ಮೆ, ಬಸವಣ್ಣ ಮುಂತಾದ ಭಕ್ತರೆಲ್ಲ ಇದೇ ಮಾರ್ಗದವರಾಗಿದ್ದಾರೆ.

**ಸಮರ್ಪಣ ಭಾವ :** ಭಕ್ತ ಎಂಥ ಮಹಿಮನೇ ಆಗಿರಲಿ ಅವನಲ್ಲಿ ಸರ್ವಸಮರ್ಪಣ ಭಾವ ಇರಬೇಕು. ಈ ಸರ್ವಸಮರ್ಪಣತೆ ಇಲ್ಲದ ಭಕ್ತಿ ಶಿವನಿಗೆ ಮೆಚ್ಚುಗೆಯಾಗದು. ಇದು ಹರಿಹರನ ರಗಳೆಯಲ್ಲಿ ಬರುವ ಎಲ್ಲ ಭಕ್ತರಲ್ಲೂ ಕಂಡುಬರುತ್ತದೆ. ಸರ್ವಸಮರ್ಪಣೆಯಿಲ್ಲದಿದ್ದರೆ ಶಿವನೊಲಿಯುವುದಿಲ್ಲ ಎಂಬುದಕ್ಕೆ ಓಹಿಲಯ್ಯ ಉತ್ತಮ ಉದಾಹರಣೆ. ಈತ ಆರಂಭದಲ್ಲಿ ತಾನು ಮಾಡಬೇಕಾದ ಭಕ್ತಿಗೆ ಬೇರೊಬ್ಬರ ಸಹಾಯ ಪಡೆದುಕೊಂಡಿರುತ್ತಾನೆ. ಹಾಗಾಗಿ ಆತನಿಗೆ ಶಿವನೊಲಿಯುವುದಿಲ್ಲ. ಆದರೆ ಎರಡನೆ ಬಾರಿ ತಾನೇ ಗುಗ್ಗುಳ ಸೇವೆಯಲ್ಲಿ ನಿರತನಾಗುತ್ತಾನೆ. ಆಗ ಶಿವ ಕರುಣಿಸುತ್ತಾನೆ.

**ದೀಕ್ಷಾಸಂಸ್ಕಾರ :** ದೀಕ್ಷೆ ವೀರಶೈವ ಧರ್ಮದ ಒಂದು ಅಂಗ. ಹಾಗಾಗಿ ಆ ಧರ್ಮದ ಶರಣರೆಲ್ಲ ದೀಕ್ಷಿತರೇ ಆಗಿದ್ದಾರೆ. ಉದಾ :

> ಇಳುಹಿದಂತಾಯ್ತು ಶಿವಲಿಂಗಂ ನಿರೀಕ್ಷಣದೆ
> ನೋಟದಿಂದಂಗದು ಲಿಕಿದಂ ಲಿಂಗವುಂ[16]

ಪ್ರಭುದೇವರ ರಗಳೆಯಲ್ಲಿ ಬರುವ ಈ ಮಾತು ಪ್ರಭುದೇವರಿಗೆ ಲಿಂಗದೀಕ್ಷೆಯಾದುದನ್ನು ತಿಳಿಸುತ್ತದೆ. ಬಸವರಾಜದೇವರ ರಗಳೆಯಲ್ಲಿ ಬಸವಣ್ಣನಿಗೆ ಲಿಂಗದೀಕ್ಷೆಯಾದುದನ್ನು "ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು ಸಂಗಮೇಶ್ವರ ಲಿಂಗಮಂ ಭೋಂಕನೆ ಬಿಜಯಂಗೆಯ್ಸಿ"[17] ಎಂಬ ಮಾತು ತಿಳಿಸುತ್ತದೆ. ಹಾವಿನಹಾಳ ಕಲ್ಲಯ್ಯನಿಗೆ ರುದ್ರಮುನಿ ಲಿಂಗದೀಕ್ಷೆ ಮಾಡುವ ಪ್ರಸಂಗವನ್ನು ಹರಿಹರ ಶಾಸ್ತ್ರೋಕ್ತವಾಗಿ ವರ್ಣಿಸುತ್ತಾನೆ.
**ಗುರು-ಲಿಂಗ-ಜಂಗಮಾರಾಧನೆ :** ಗುರು-ಲಿಂಗ-ಜಂಗಮ; ಇವು ಭಿನ್ನಭಿನ್ನವಲ್ಲ. ಈ ಮೂರನ್ನೂ ವೀರಶೈವ ಧರ್ಮ ಸಮನ್ವಯ ಭಾವದಿಂದ ಕಂಡಿದೆ. ಇದನ್ನು ಕೆಂಭಾವಿ ಭೋಗಣ್ಣನ ರಗಳೆಯಲ್ಲಿ ಬರುವ -

ಜಂಗಮವು ಲಿಂಗಕ್ಕೆ ಲಿಂಗವಾಜಂಗಮಕೆ
ಲಿಂಗ ಜಂಗಮವೆಂಬವವಿಭೇದವೀ ಜಗಕೆ[18]

ಈ ವಾಕ್ಯಗಳಲ್ಲಿ ಗುರುತಿಸಬಹುದು. ಬಸವರಾಜದೇವರ ರಗಳೆಯಲ್ಲಿ ಕೂಡ ಈ ಭಾವವನ್ನು ಕಾಣಬಹುದು. ಅಲ್ಲಿ ಬಸವರಾಜನು ವೀರಶೈವ ಆಚರಣೆಗಳಲ್ಲಿ ನಿಸ್ಸೀಮ ಎಂಬುದನ್ನು ಹರಿಹರ ಬಿತ್ತರಿಸಿದ ರೀತಿ ಅನುಪಮವಾಗಿದೆ. ರಗಳೆಯಲ್ಲಿ ಬರುವ "ಶರಣಂ ಸಂಗನೆಂದಲ್ಲದೆ ಕಾಣೆ, ಜಂಗಮ ಪ್ರಾಣಿಯಾಗಿಪ್ಪೆ, ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ಲಿಂಗದಲ್ಲಿ ಕಠಿಣಮಂ ಕೇಳೆ, ಜಂಗಮದಲ್ಲಿ ಜಾತಿಯನರಸೆ, ಪ್ರಸಾದದಲ್ಲಿ ಅಪವಿತ್ರತೆಯನರಿಯೆ"[19] ಎಂಬ ವಿಚಾರ ವೀರಶೈವ ಧರ್ಮದ ಸಾಧಕನ ಆಚಾರ-ವಿಚಾರಗಳ ಕೈಪಿಡಿಯಂತೆ ಇವೆ.
**ಮರ್ತ್ಯಲೋಕ - ಶಿವಲೋಕ :** ನೂತನ ಶರಣರು ಅಂಗವೇ ಲಿಂಗ, ಲಿಂಗವೇ ಪ್ರಾಣವೆಂದು ಭಾವಿಸಿದ್ದರು. ಹಾಗಾಗಿ ಅವರು ಬಾಹ್ಯ ತೀರ್ಥಕ್ಷೇತ್ರಗಳ ಪರ್ಯಟನೆಯನ್ನು ನಿರಾಕರಿಸಿದರು. ಅವರ ದೃಷ್ಟಿಯಲ್ಲಿ ಶರಣನಿದ್ದ ಸ್ಥಳವೇ ಕೈಲಾಸ. ಶಂಕರ ದಾಸಿಮಯ್ಯ ವಾರಣಾಸಿಗೆ ಹೋಗಬೇಕೆಂದು ಬಯಸಿ, ಹೋಗುವಾಗ ತನ್ನ ಇಷ್ಟದೈವವಾದ ಜೆಡೆಯ ಶಂಕರನಲ್ಲಿಗೆ ಬರುತ್ತಾನೆ. ಅಲ್ಲಿಗೆ ಬಂದಮೇಲೆ ಅಲ್ಲಿಯೇ ಲಿಂಗಧ್ಯಾನದಲ್ಲಿ ಕಳೆಯುತ್ತಾನೆ. ಆಗಿನ ಅವನ ಇಷ್ಟದೈವದ ನಿಷ್ಠೆ, ಅನ್ಯದೈವ ಮತ್ತು ಅನ್ಯ ಸ್ಥಳಗಳನ್ನು ಕಡೆಗಣಿಸಿಬಿಡುತ್ತದೆ. ಇದೇ ದೃಷ್ಟಿ ಬಸವರಾಜದೇವರ ರಗಳೆಯಲ್ಲೂ ವ್ಯಕ್ತವಾಗುತ್ತದೆ. ಅಲ್ಲಿ ಬಸವರಾಜ ತನ್ನನ್ನು ಕೈಲಾಸಕ್ಕೆ ಕೊಂಡೊಯ್ಯಲು ಪುಷ್ಪಕವು ಬಂದಿರಲು -

ಶರಣರೊಕ್ಕುದಜಿ ಸವಿ ಕೈಲಾಸದೊಳಗುಂಟೆ
ಶರಣಸಂಗದ ಸುಖಂ ಕೈಲಾಸದೊಳಗುಂಟೆ[20]

ಎಂದು ನುಡಿಯುತ್ತಾನೆ.

"ಹರಿಹರನು ಪುರಾತನ-ನೂತನ ರಗಳೆಗಳಲ್ಲಿ ಕಂಡರಿಸಿದ ಭಕ್ತಿಪಥ ಏಕಮುಖ

ವಾದುದಲ್ಲವೆಂಬುದಕ್ಕೆ ಇಲ್ಲಿನ ಸಮಾಲೋಚನೆ ನಿದರ್ಶನವಾಗಿದೆ. ಕಾಲ, ಪರಿಸರಗಳಲ್ಲಿ ಜೀವನ ವಿಕಾಸಗೊಳ್ಳುತ್ತದೆ. ಮೊದ ಮೊದಲು ಭಾವುಕತೆಯಿಂದ ಕೂಡಿಮದು ಕೊನೆಗೆ ವಿವೇಕ-ಸಂಯಮಗಳ ಬೆಳಕಿನಲ್ಲಿ ಪ್ರಜ್ವಲಿಸುತ್ತದೆ. ಆದರೂ ಭಕ್ತನ ಬಾಳು ಶ್ರದ್ಧೆಯನ್ನು ಬಿಟ್ಟು ನಿಲ್ಲುವುದಿಲ್ಲ. ಆದರೆ ಆ ಶ್ರದ್ಧೆಯೊಂದೇ ಅವರ ಪರಮಗಂತವ್ಯವಲ್ಲ. ಆ ಶ್ರದ್ಧೆ ಯಾವುದೆಂಬುದನ್ನರಿಯುವ ಮನಸ್ಸು ಬೇಕು. ಅದನ್ನಾಚರಿಸುವ ಕ್ರಿಯೆಯಲ್ಲಿ ಜ್ಞಾನ ಬೇಕು. ಈ ಜ್ಞಾನ-ಕ್ರಿಯಾಸಮನ್ವಿತವಾದುದೇ ಪರಿಪೂರ್ಣ ಭಕ್ತಿ. ಹರಿಹರನ ರಗಳೆಗಳಲ್ಲಿ ಇವೆರಡರ ಅನುಸಂದಾನವಿದೆ. ಇದೇ ಹರಿಹರನ ಭಕ್ತಿ ವೈಶಿಷ್ಟ್ಯ"[21].

## 8.5 ಪಾತ್ರಗಳಲ್ಲಿ ಭೂಮಿ ಮತ್ತು ಬಾನು

ಹರಿಹರನ ಕಥೆಗಳು ಕೇವಲ ಭೂಮಿಗೆ ಸಂಬಂಧಪಟ್ಟ ಕಥೆಗಳಾಗಲಿ ಇಲ್ಲವೆ ಬಾನಿಗೆ ಸಂಬಂಧ ಪಟ್ಟ ಕಥೆಗಳಾಗಲಿ ಅಲ್ಲ. ಅಲ್ಲಿ ಭೂಮಿ ಮತ್ತು ಬಾನು ಎರಡರ ಚಿತ್ರಣವೂ ಇದೆ. ಅವನ ಪ್ರಕಾರ ಭೂಮಿ ಎಷ್ಟು ಮುಖ್ಯವೋ ಬಾನೂ ಕೂಡ ಅಷ್ಟೇ ಮುಖ್ಯ. ಭೂಮಿಯಿಲ್ಲದೆ ಬಾನು ಇಲ್ಲ, ಬಾನು ಇಲ್ಲದೆ ಭೂಮಿಯಿಲ್ಲ. ಒಂದರ ಸಾಧನೆಗೆ ಇನ್ನೊಂದರ ಸಹಾಯ ಬೇಕೇಬೇಕು. ಹಾಗಾಗಿ ಕವಿ ಸೃಷ್ಟಿಸುವ ಪಾತ್ರಗಳೂ ಕೇವಲ, ಭೂಮಿಯನ್ನಾಗಲಿ, ಅಥವಾ ಬಾನನ್ನಾಗಲಿ ಪ್ರತಿನಿಧಿಸದೆ ಎರಡರ ಮಹತ್ತನ್ನೂ ತಿಳಿಸುವ ಕೆಲಸ ಮಾಡುತ್ತವೆ.

ಹರಿಹರನ ದೃಷ್ಟಿಯಲ್ಲಿ ಶಿವನ ಸಾನ್ನಿಧ್ಯ ಸೇರುವುದೇ ಭಕ್ತನ ಅಂತಿಮ ಗುರಿ. ಅದು ಭಕ್ತನ ಪರಮೋಚ್ಚ ಪದವಿ. ಆ ಪದವಿಯನ್ನು ಪಡೆದಾಗಲೇ ಭಕ್ತನ ಜೀವನ ಸಾರ್ಥಕಗೊಳ್ಳುವುದು. ಹಾಗಾಗಿ ಹರಿಹರನ ಕಥೆಗಳಲ್ಲಿ ಬರುವ ಪ್ರತಿಯೊಂದು ಪಾತ್ರಗಳೂ ಈ ಪದವಿಯನ್ನು ತನ್ನದಾಗಿಸಿಕೊಳ್ಳಲು ನಿರಂತರ ಹೋರಾಟ ನಡೆಸುತ್ತವೆ. ಆದರೆ ಈ ಪದವಿ ಎಲ್ಲರಿಗೂ ಎಲ್ಲ ಕಾಲಕ್ಕೂ ಸುಲಭದಲ್ಲಿ ದಕ್ಕುವ ಪದವಿಯಲ್ಲ. ಅದಕ್ಕೆ ಸಾಧನೆ ಮುಖ್ಯ. ಆ ಸಾಧನೆ ಮರ್ತ್ಯದಲ್ಲೇ ಅಂದರೆ ಭೂಮಿಯಲ್ಲೇ ನಡೆಯಬೇಕು.

ಹರಿಹರ ಚಿತ್ರಿಸುವ ಎಲ್ಲ ಪಾತ್ರಗಳೂ ಮರ್ತ್ಯದಲ್ಲಿ ಸಾಧನೆ ಮಾಡೇ ಕೈಲಾಸ ಪದವಿಯನ್ನು ಪಡೆದುಕೊಂಡಂಥವು. ತಿರುನೀಲಕಂಠ, ಮಾದಾರ ಚೆನ್ನಯ್ಯ, ಕಾರಿಕಾಲಮ್ಮ, ಮಹಾದೇವಿಯಕ್ಕ, ಬಸವಣ್ಣ, ಅಲ್ಲಮ, ನಂಬಿಯಣ್ಣ- ಹೀಗೆ ಕೆಲವು ಮುಖ್ಯ ರಗಳೆಗಳ ಮೂಲಕ ಈ ಸಂರಚನೆಯನ್ನು ಗುರುತಿಸಬಹುದು. ಇಲ್ಲಿ ತಿರುನೀಲಕಂಠ, ಮಾದಾರ ಚೆನ್ನಯ್ಯ, ಕಾರಿಕಾಲಮ್ಮ ಕಥೆಯ ಕಥಾನಾಯಕರು ಸಂಪೂರ್ಣವಾಗಿ ಮರ್ತ್ಯದಲ್ಲೇ ಹುಟ್ಟಿ ಮರ್ತ್ಯದಲ್ಲೇ ಸಾಧನೆಗೈದು ಅಮರ್ತ್ಯದ ಪದವಿಯನ್ನು ಪಡೆದುಕೊಂಡವರು. ತಿರುನೀಲಕಂಠ 'ಮುಟ್ಟಿದರೆ ಶಿವನಾಣೆ' ಎಂಬ ವ್ರತವನ್ನು, ಕಠಿಣ ಸನ್ನಿವೇಶಗಳು ಎದುರಾದರೂ ಜಗ್ಗದೆ ಪಾಲಿಸಿ ಶಿವಕೃಪೆಗೆ ಪಾತ್ರನಾಗುತ್ತಾನೆ. ಮಾದಾರ ಚೆನ್ನಯ್ಯ ಕುದುರೆಗೆ ಹುಲ್ಲು ಹಾಕುವ ಕಾಯಕವನ್ನೇ ನಿಷ್ಠೆಯಿಂದ ಮಾಡಿ, ಶಿವನಿಂದ ಪರೀಕ್ಷೆಗೆ ಒಳಗಾಗಿ ಅಮರ್ತ್ಯದ ಪದವಿ ಪಡೆಯುತ್ತಾನೆ. ಕಾರಿಕಾಲಮ್ಮ ಬಾಹ್ಯರೂಪವನ್ನೇ ಕಿತ್ತೆಸೆದು ತಲೆಕೆಳಗಾಗಿ ನಡೆದು ಶಿವನ ಒಲುಮೆ ಗಳಿಸುತ್ತಾಳೆ.

ಬಸವಣ್ಣ, ಮಹಾದೇವಿಯಕ್ಕ, ಅಲ್ಲಮ ಮತ್ತು ನಂಬಿಯಣ್ಣ ಕೈಲಾಸ ಪದವಿ ಪಡೆದ

ರೀತಿಯೇ ಬೇರೆ. ಇವರೆಲ್ಲರೂ ಮೊದಲು ಕೈಲಾಸದಲ್ಲಿಯೇ ಇದ್ದು ಶಿವನ ಕೃಪೆಗೆ ಒಳಗಾಗಿದ್ದವರು. ಆದರೆ ಮರ್ತ್ಯದ ಸಾಧನೆ ಇವರಿಗೆ ಇರಲಿಲ್ಲ. ಅದಕ್ಕಾಗಿ ಇವರು ಮತ್ತೆ ಭೂಮಿಗೆ ಬರುತ್ತಾರೆ. ಅಲ್ಲಿ ನಿರಂತರ ಸಾಧನೆಯಲ್ಲಿ ತೊಡಗುತ್ತಾರೆ. ಬಸವಣ್ಣ ಮೊದಲು ಕೈಲಾಸದಲ್ಲೇ ಇದ್ದು ಅಲ್ಲಿ ಮಾಡಿದ ತಪ್ಪಿಗಾಗಿ ಭೂಮಿಗೆ ಬರುತ್ತಾನೆ. ಇಲ್ಲಿ ಬಿಜ್ಜಳನ ಭಂಡಾರಿಯಾಗಿ ಕಾರ್ಯ ನಿರ್ವಹಿಸುತ್ತಾನೆ. ಗಂಗಾಂಬಿಕೆ ಮತ್ತು ಮಾದಲಾಂಬಿಕೆಯರನ್ನು ಮದುವೆಯಾಗಿ, ಹಲವು ಪವಾಡಗಳನ್ನು ಮೆರೆಯುತ್ತಾನೆ. ಮಹಾದೇವಿಯಕ್ಕ ಕೂಡ ಕೈಲಾಸದಲ್ಲಿ ಸಣ್ಣದೊಂದು ತಪ್ಪು ಮಾಡಿ ಅದರ ಪರಿಹಾರಕ್ಕಾಗಿ ಭೂಮಿಗೆ ಬಂದವಳು. ಭೂಮಿಗೆ ಬಂದು ಭವಿಯಾದ ಕೌಶಿಕನ ಹೆಂಡತಿಯಾಗಿ, ವಿಷಮ ಸಂಸಾರ ಸುಖವನ್ನು ಅನುಭವಿಸಿ, ಶಿವನಿಗಾಗಿ ಶ್ರೀಗಿರಿಯನ್ನೆಲ್ಲ ಸುತ್ತಿ ಮತ್ತೆ ಕೈಲಾಸಕ್ಕೆ ನಡೆದವಳು. ಅಲ್ಲಮ ಪ್ರಭು ಕೂಡ ಕೈಲಾಸದಲ್ಲೇ ನೆಲೆಸಿದ್ದು ಅಲ್ಲಿ ಮಾಡಿದ ತಪ್ಪಿನಿಂದಾಗಿ ಭೂಮಿಗೆ ಬಂದ ಶರಣ ಮತ್ತು ಯೋಗಿ. ಭೂಮಿಯಲ್ಲಿ ಕಾಮಲತೆಯೆಂಬ ಸುಂದರ ತರುಣಿಯನ್ನು ಮೋಹಿಸಿ, ವಿರಹ ಯಾತನೆಗೆ ಸಿಕ್ಕಿ ನರಳಿ, ಅಂತಿಮವಾಗಿ ಕೈಲಾಸ ಪದವಿಯನ್ನು ಪಡೆಯುತ್ತಾನೆ. ನಂಬಿಯಣ್ಣನ ಗತಿಯೂ ಇದೇ ಆಗಿದೆ. ಆತ ಕೈಲಾಸದಲ್ಲಿ ಮಾಡಿದ ತಪ್ಪಿನಿಂದಾಗಿ ಭೂಮಿಗೆ ಬರುತ್ತಾನೆ. ಭೂಮಿಯಲ್ಲಿ ಹಲವು ಪವಾಡಗಳನ್ನು ಮೆರೆಯುತ್ತಾನೆ. ಸಂಕಿಲಿನಾಚಿ ಮತ್ತು ಪರವೆನಾಚಿ ಎಂಬ ತರುಣಿಯರೊಡನೆ ಕೆಲಕಾಲ ಇದ್ದು ಆನಂತರ ಕೈಲಾಸಕ್ಕೆ ತೆರಳುತ್ತಾನೆ.

ಹೀಗೆ ಭಕ್ತನಿಗೆ ಕೈಲಾಸವೇ ಮುಖ್ಯವಾದರೂ ಆತ ಭೂಮಿಯನ್ನು ಕಡೆಗಣಿಸುವಂತಿಲ್ಲ. ಭೂಮಿ ಒಂದು ಸಾಧನೆಯ ರಂಗ. ಆ ರಂಗದಲ್ಲಿ ಸಾಧನೆಗೈದಾಗ ಮಾತ್ರವೇ ಅವನಿಗೆ ಕೈಲಾಸ ಪದವಿ ಸಾಧ್ಯ. ಭಕ್ತನ ಸಾಕ್ಷಾತ್ಕಾರಕ್ಕೆ ಭೂಮಿ ಮತ್ತು ಬಾನು ಎರಡೂ ಸಮನಾದವುಗಳೇ. ಅವುಗಳಲ್ಲಿ ಯಾವುದೂ ಮೇಲಲ್ಲ; ಯಾವುದೂ ಕೀಳಲ್ಲ.

## 8.6 ಬದುಕಿನ ದ್ವಂದ್ವಗಳನ್ನು ಪಾತ್ರಮುಖೇನ ಚಿತ್ರಿಸಿರುವ ರೀತಿ

ಹರಿಹರನ ಕಥೆಗಳು ಕೇವಲ, ಭೂಮಿ ಅಥವಾ ಆಕಾಶದ ಕಥೆಯನ್ನು ಹೇಳುವಂಥವುಗಳಾಗಿದ್ದರೆ, ಬಹುಶಃ ಅವುಗಳಿಗೆ ಇಷ್ಟೊಂದು ಪ್ರಾಮುಖ್ಯತೆ ಇರುತ್ತಿರಲಿಲ್ಲ. ಹಾಗಾಗಿದ್ದರೆ ಅವು ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯ ಕಥೆಗಳಾಗಿ ಉಳಿದುಕೊಳ್ಳುತ್ತಿದ್ದವು. ಆದರೆ ಅವುಗಳಿಗೂ ಒಂದು ಮಹತ್ವದ ಸ್ಥಾನ ಇದೆ. ಕಾರಣ, ಅವು ತನ್ನೊಳಗೇ ಮಾನವ ಸಂಬಂಧಗಳನ್ನು ಕುರಿತು ಹೇಳುತ್ತವೆ. ಮಾನವನ ಬದುಕಿನ ದ್ವಂದ್ವಗಳನ್ನು ಅರಿವಾಗದೋಪಾದಿಯಲ್ಲಿ ಚರ್ಚಿಸುತ್ತವೆ.

ಸಂಕೀರ್ಣ ರಗಳೆಗಳಲ್ಲಿ ಕೆಲವನ್ನು ಬಿಟ್ಟರೆ ನೂತನರ ಮತ್ತು ಪುರಾತನರ ಎಲ್ಲ ರಗಳೆಗಳಲ್ಲೂ ಇಂಥ ಚರ್ಚೆಗಳು ಇದ್ದೇ ಇವೆ. ಪ್ರಭುದೇವರ ರಗಳೆಯ ನಾಯಕ ಅಲ್ಲಮ ಪ್ರಭು. ಇವನು ಒಬ್ಬ ಸಾಧಾರಣ ಮನುಷ್ಯ, ಮದ್ದಳೆ ಬಾರಿಸುವವನು. ಮದ್ದಳೆ ಬಾರಿಸುವುದನ್ನು ಬಿಟ್ಟರೆ ಬೇರೆ ಏನನ್ನೂ ಅರಿಯದ ಸುಂದರ ಯುವಕ. ಒಮ್ಮೆ ಶಿವಾಲಯದಲ್ಲಿ ಮದ್ದಳೆ ಬಾರಿಸುವ ಸಂದರ್ಭದಲ್ಲಿ ಅಲ್ಲಿಗೆ ಕಾಮಲತೆಯೆಂಬ ಸುಂದರ ತರುಣಿ ಬರುತ್ತಾಳೆ. ಇಬ್ಬರ ನಡುವೆ ಪ್ರೇಮಾಂಕುರವಾಗುತ್ತದೆ. ಇಬ್ಬರೂ ಸಂಗಡಿಗರ ಸಹಾಯದಿಂದ ಒಂದೆಡೆ

ಸೇರುತ್ತಾರೆ. ಅವರಲ್ಲಿ ಆಗತಾನೇ ಹುಟ್ಟಿ, ಮೊಗ್ಗಾಗಿದ್ದ ಪ್ರೇಮ ಹೂವಾಗಿ ಅರಳಬೇಕೆನ್ನು ವಷ್ಟರಲ್ಲಿ, ಕಾಮಲತೆ ಜ್ವರ ಪೀಡಿತಳಾಗಿ ಸಾಯುತ್ತಾಳೆ. ಬಯಸಿದ್ದು ಕೈಗೂಡುತ್ತಿದ್ದಂತೆಯೇ ದೂರವಾಗಿ ಹೋದದ್ದು ಅಲ್ಲಮನ ಬದುಕಿನಲ್ಲಿ ನಡೆದ ದೊಡ್ಡ ದುರಂತ.

ಮಹಾದೇವಿಯಕ್ಕನ ರಗಳೆಯಲ್ಲಂತೂ ಬದುಕಿನ ದ್ವಂದ್ವಗಳನ್ನು ಕವಿ ಮನಮುಟ್ಟುವಂತೆ ಚಿತ್ರಿಸುತ್ತಾನೆ. ಮಹಾದೇವಿಯಕ್ಕನಿಗೋ ಇಹದ ಬಯಕೆಯೇ ಇಲ್ಲ. ಚೆನ್ನಮಲ್ಲಿಕಾರ್ಜುನ ನನ್ನೇ ಧ್ಯಾನಿಸುತ್ತಾ ಅವನಿಗಾಗಿ ಕಾದಿದ್ದಾಳೆ. ಆದರೆ ಅವಳಿಗೆ ಒದಗಿ ಬಂದ ಪರಿಸ್ಥಿತಿಯೇ ಬೇರೆ. ಭವಿಯಾದ ಕೌಶಿಕನೊಡನೆ ಮನಸ್ಸಿಲ್ಲದ ಮನಸ್ಸಿನಲ್ಲಿ ಮದುವೆಯಾಗಬೇಕಾಗುತ್ತದೆ. ಕೌಶಿಕನಿಗೋ ಮಹಾದೇವಿಯಕ್ಕನ ಸೌಂದರ್ಯವನ್ನು ಸಹಜವಾಗಿಯೇ ಅನುಭವಿಸುವ ಆಸೆ. ಮಹಾದೇವಿಯಕ್ಕನನ್ನು ಒತ್ತಾಯಪೂರ್ವಕವಾಗಿ ಮದುವೆಯಾಗಿರುವ ಪ್ರಜ್ಞೆ ಅವನಿಗೆ ಇರುವುದರಿಂದ, ಅವಳ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ಸಾಕಷ್ಟು ಪ್ರಯತ್ನಿಸಿದ್ದಾನೆ. ಅವಳು ಹೇಳಿದಂತೆಯೇ ಬದುಕನ್ನು ಬದಲಿಸಿಕೊಳ್ಳುತ್ತಿದ್ದಾನೆ. ಆದರೂ ಮಹಾದೇವಿಯಕ್ಕ ಕೌಶಿಕನೊಡನೆ ಸಂಸಾರಕ್ಕೆ ಒಪ್ಪುವುದೇ ಇಲ್ಲ. ಇದು ಅತಿರೇಕಕ್ಕೆ ಹೋಗಿ ಒಮ್ಮೆ ಕೌಶಿಕ ಅವಳನ್ನು ಬಲಾತ್ಕರಿಸಲೂ ಮುಂದಾಗುತ್ತಾನೆ. ವಿಷಮತೆಯಲ್ಲಿಯೇ ಹಲವು ಕಾಲ ಅವರು ಬದುಕಬೇಕಾಗುತ್ತದೆ. ಅಂತಿಮವಾಗಿ ಅಕ್ಕ ಕೌಶಿಕನನ್ನು ತೊರೆದು ಶ್ರೀಗಿರಿಯತ್ತ ನಡೆದಾಗ, ಅಲ್ಲಿಗೂ ಬಂದು ಕೌಶಿಕನು ಅಕ್ಕನ ಸಂಗಕ್ಕಾಗಿ ಬೇಡುವುದು, ಭವಿಯ ಬದುಕಿನ ಭೀಕರತೆಯನ್ನು ತೋರುತ್ತದೆ.

'ಮಹಾದೇವಿಯಕ್ಕನ ತಂದೆ ತಾಯಿಯರ ಸಂಕಟ ಕೂಡ ಕಥೆಯಲ್ಲಿ ಚೆನ್ನಾಗಿ ನಿರೂಪಣೆಗೊಂಡಿದೆ. ಅವರು ಒಂದೆಡೆ ಮಗಳ ಇಷ್ಟವನ್ನು ಪೂರೈಸಬೇಕು, ಇನ್ನೊಂದೆಡೆ ರಾಜನ ಆಜ್ಞೆಯನ್ನೂ ಪಾಲಿಸಬೇಕು. ರಾಜನ ಕಡೆಯಿಂದಲೋ ಮತ್ತೆ ಮತ್ತೆ ಒತ್ತಡಗಳು ಬರುತ್ತಲೇ ಇವೆ. ಇತ್ತ ಮಗಳು ಹಠ ಹಿಡಿದು ಕುಳಿತಿದ್ದಾಳೆ. ಕೊನೆಗೆ ಮಗಳ ಇಷ್ಟಕ್ಕೆ ವಿರುದ್ಧವಾಗಿ ನಡೆಯುವ ಮನಸ್ಸಿಲ್ಲದಿದ್ದರೂ ಕೌಶಿಕನೊಡನೆ ಮದುವೆಯಾಗಲು ಕೇಳಿ ಕೊಳ್ಳುತ್ತಾರೆ. ತಂದೆ ತಾಯಿಯರು ಆ ಸಂದರ್ಭದಲ್ಲಿ ಅವರಿಗೆ ಹೀಗೆ ಹೇಳುವುದಲ್ಲದೆ ಬೇರೆ ಮಾರ್ಗವೇ ಇಲ್ಲ. ಏಕೆಂದರೆ ರಾಜನನ್ನು ಎದುರು ಹಾಕಿಕೊಂಡು ಬದುಕುವುದು ಅಸಾಧ್ಯ ಎಂದು ಅವರಿಗೆ ತಿಳಿದಿದೆ. ಒಂದೆಡೆ ಕೌಶಿಕನ ಆಸೆ, ಇನ್ನೊಂದೆಡೆ ಮಹಾದೇವಿಯಕ್ಕನ ನಿರಾಸಕ್ತಿ, ಮತ್ತೊಂದೆಡೆ ಮಹಾದೇವಿಯಕ್ಕನ ತಂದೆ ತಾಯಿಯರ ಸಂಕಟ; ಎಲ್ಲವೂ ಮಾನವ ಬದುಕಿನ ದ್ವಂದ್ವಗಳ ಚಿತ್ರಗಳೇ ಆಗಿವೆ.

ಮಲುಹಣ-ಮಲುಹಣೆಯರ ರಗಳೆಯಿಂದಲೂ ಉದಾಹರಣೆ ಕೊಡಬಹುದು. ಇಲ್ಲಿ ಮಲುಹಣ- ಮಲುಹಣೆಯರು ಬಿಟ್ಟು ಇರಲಾರದಂಥ ಪ್ರೇಮಿಗಳು. ಮಲುಹಣೆಗಾಗಿ ಮಲುಹಣ, ಜೀವನ ಪರ್ಯಂತ ತಿಂದು ಮಿಕ್ಕುವ ಹಾಗೆ ತನ್ನ ತಂದೆ ತನಗಾಗಿ ಇಟ್ಟಿದ್ದ ಹೊನ್ನನ್ನು ಕಳೆದುಕೊಂಡಿದ್ದಾನೆ. ಮಲುಹಣೆಯೂ ಮಲುಹಣನನ್ನು ಬಿಟ್ಟು ಇರಲಾರಳು. ತನ್ನೆಲ್ಲವನ್ನು ಮಲುಹಣನಿಗೆ ಒಪ್ಪಿಸಿದ್ದಾಳೆ. ಆದರೆ ಕೊನೆಯವರೆಗೂ ಅವರಿಗೆ ಹಾಗೆಯೇ ಇರುವಂಥ ಸುಖ ಮಾತ್ರ ಇಲ್ಲ. ವೇಶ್ಯೆ ಪದ್ಮಾವತಿಗೆ ಮಗಳ ಸುಖ, ನೆಮ್ಮದಿಗಳು ಬೇಕಿಲ್ಲ. ಅವಳಿಗೆ

ಬೇಕಾಗಿರುವುದು ಹಣ ಮಾತ್ರ. ಹಣಕ್ಕಾಗಿ ಮಲುಹಣೆಯನ್ನು ಏನು ಬೇಕಾದರೂ ಮಾಡಲು ಅವಳು ಸಿದ್ಧ. ಹಣ ತೀರುತ್ತಿದ್ದಂತೆಯೇ ಅವಳು ಮಲುಹಣನನ್ನು ತೊರೆಯುವಂತೆ ಮಗಳಿಗೆ ಸೂಚಿಸುತ್ತಾಳೆ. ಆದರೆ ಮಲುಹಣೆಯ ಮನಸ್ಸು ಒಪ್ಪುತ್ತಿಲ್ಲ. ಮತ್ತೆ ಮತ್ತೆ ಮಲುಹಣನನ್ನು ಬಯಸುತ್ತಾಳೆ. ಒಮ್ಮೆ ಮಲುಹಣನೊಡನೆ ಮಿಲನದಲ್ಲಿ ತೊಡಗಿರಲು, ರಕ್ಕಸಿಯಂತೆ ಎರಗಿದ ಪದ್ಮಾವತಿ ಅವರಿಬ್ಬರನ್ನೂ ಬೇರ್ಪಡಿಸುತ್ತಾಳೆ. ಬೇರ್ಪಟ್ಟ ಮಲುಹಣ-ಮಲುಹಣೆಯರು ಪುನರ್‌ಮಿಲನಕ್ಕಾಗಿ ಅನೇಕ ಕಾಲ ಪರಿತಪಿಸುತ್ತಾರೆ. ವೇಶ್ಯೆ ಪದ್ಮಾವತಿಯ ಬಂಧನದಲ್ಲಿ ಮಲುಹಣೆ ಜೀವನ ಸಾಗಿಸುತ್ತಿದ್ದರೆ, ಪ್ರಿಯಕರ ಮಲುಹಣ ಚಳಿ-ಮಳೆ, ಹಗಲು-ರಾತ್ರಿಗಳೆನ್ನದೆ ಅವಳ ಮನೆಯ ಸುತ್ತಲೇ ಕಾಲ ನೂಕುತ್ತಾನೆ. ಹೀಗೆ ಕವಿ ಮಲುಹಣ-ಮಲುಹಣೆಯರ ಬದುಕನ್ನು ಹೇಳುವ ಮೂಲಕ ಮಾನವ ಬದುಕಿನ ದ್ವಂದ್ವವನ್ನು ಚಿತ್ರಿಸುತ್ತಾನೆ.

ವೈಜಕವ್ವೆ, ಹೇರೂರ ಹೆಂಗೂಸು, ತಿರುನೀಲಕಂಠ, ನಂಬಿಯಣ್ಣ, ಬಸವಣ್ಣ ಮುಂತಾದ ಇನ್ನೂ ಹಲವು ರಗಳೆಗಳಲ್ಲಿ ಹರಿಹರ ಮಾನವ ಬದುಕಿನ ಹಲವು ಬಗೆಯ ದ್ವಂದ್ವಗಳನ್ನು ಚಿತ್ರಿಸಿದ್ದಾನೆ.

## 8.7 ಚರಿತ್ರೆಗಿಂತ ಚಾರಿತ್ರ್ಯಕ್ಕೆ ಕೊಡುವ ಒತ್ತು

ಹರಿಹರ ತನ್ನ ಕಥೆಗಳಲ್ಲಿ ಭಕ್ತನ ಚಾರಿತ್ರಿಕವಾದ ಹಲವು ವಿಚಾರಗಳನ್ನು ದಾಖಲಿಸುತ್ತಾನೆ. ಭಕ್ತನ ಊರು, ದೇಶ, ವೃತ್ತಿ, ತಂದೆ ತಾಯಿ ಹಾಗೂ ಭಕ್ತನ ಜೀವನದ ಕೆಲವೊಂದು ಪ್ರಮುಖ ಘಟನೆಗಳನ್ನು ಸಾಮಾನ್ಯವಾಗಿ ತರುತ್ತಾನೆ. ಆದರೆ ಚಾರಿತ್ರಿಕ ವಿವರಗಳಿಗೆ ಆತ ಹೆಚ್ಚು ಮಹತ್ವವನ್ನು ನೀಡುವುದಿಲ್ಲ. ಆತ ಮಹತ್ವವನ್ನು ನೀಡುವುದು ಭಕ್ತನ ಚಾರಿತ್ರ್ಯಕ್ಕೆ. ಚರಿತ್ರೆ ಇದ್ದರೆ ಅದು ಕಥೆಯ ಓಟಕ್ಕೆ ಅನುಕೂಲವಾಗುವಷ್ಟಕ್ಕೆ ಮಾತ್ರ ಇರುತ್ತದೆ. ಆದರೆ ಚಾರಿತ್ರ್ಯವು ಇಡೀ ಕಥೆಯ ಸ್ಥಾಯೀಭಾವವಾಗಿರುತ್ತದೆ. ಪ್ರತಿಯೊಂದು ಸಂದರ್ಭದಲ್ಲೂ ಕವಿ ಭಕ್ತನ ಚಾರಿತ್ರ್ಯವನ್ನು ಎತ್ತಿಹಿಡಿಯುತ್ತಾನೆ.

'ಬಸವರಾಜದೇವರ ರಗಳೆ'ಯನ್ನು ಚಾರಿತ್ರಿಕವಾಗಿ ನೋಡಿದ್ದರೆ ಬಹುಶಃ ಅದೊಂದು ಚಾರಿತ್ರಿಕ ಮಹಾಕಾವ್ಯವೇ ಆಗಬಹುದಿತ್ತು. ಆದರೆ ಕವಿ ಅಲ್ಲಿ ಒತ್ತು ಕೊಟ್ಟಿರುವುದು ಬಸವಣ್ಣನ ಚಾರಿತ್ರ್ಯಕ್ಕೆ. ಕಾವ್ಯದುದ್ದಕ್ಕೂ ಅವನ ಚಾರಿತ್ರ್ಯವನ್ನು ಹಲವು ರೀತಿಯಲ್ಲಿ ಬಣ್ಣಿಸಿದ್ದಾನೆ. ಕವಿ ಸೃಷ್ಟಿಸಿರುವ ಕೆಲವೊಂದು ಸನ್ನಿವೇಶಗಳ ಮೂಲಕ ಬಸವಣ್ಣನ ಚಾರಿತ್ರ್ಯವನ್ನು ನೋಡೋಣ.

ಬಸವಣ್ಣ ಬ್ರಾಹ್ಮಣ ಕುಲದವನು. ಅವನು ಬ್ರಾಹ್ಮಣ ಕುಲದವನಾದರೂ ಆ ಕುಲದ ನಂಬಿಕೆಗಳನ್ನಾಗಲಿ, ಆಚರಣೆಗಳನ್ನಾಗಲಿ ಒಪ್ಪಿಕೊಂಡವನಲ್ಲ. ತಾನು ಚಿಕ್ಕವನಿದ್ದಾಗಲೇ ಜನಿವಾರವನ್ನು ಕಿತ್ತು ಎಸೆಯುತ್ತಾನೆ. ಮುಂಜಿಯನ್ನು ತಿರಸ್ಕರಿಸುತ್ತಾನೆ. ಅವನದು ಕ್ರಾಂತಿಕಾರಕ ಗುಣ. ಬಸವಣ್ಣ ಎಷ್ಟು ಕ್ರಾಂತಿಕಾರಕ ಮನೋಭಾವದವನೋ ಅಷ್ಟೇ ಭಕ್ತನೂ ಹೌದು. ಅವನು ಕಪ್ಪಡಿ ಸಂಗಮೇಶ್ವರನ ಮಹಾಭಕ್ತ. ಒಮ್ಮೆ ಸಂಗಮೇಶ್ವರನ ದೇವಾಲಯಕ್ಕೆ ಹೋಗುತ್ತಿದ್ದಂತೆಯೇ ಧೊಪ್ಪನೆ ಬಿದ್ದು "ದೇವ ದೇವ, ಅನಾಥನಾಥ, ಅನಿಮಿತ್ತ ಬಂಧುವೆ,

ತಾಯ್ತಂದೆ, ಬಂಧುಬಳಗವೆ, ಕುಲವೆ, ಬಲವೆ, ಛಲವೆ, ತವರೆ, ಕಣ್ಣೆ, ಪುಣ್ಯವೆ, ಪ್ರಾಣವೆ, ಕಾವುದು ಕಾವುದು"[22] ಎಂದು ಪರಿಪರಿಯಿಂದ ವಿನಂತಿಸಿಕೊಳ್ಳುತ್ತಾನೆ. ಇಲ್ಲಿ ಆತನ ವಿನಮ್ರ ವ್ಯಕ್ತಿತ್ವವನ್ನು ಕವಿ ಸೆರೆಹಿಡಿದಿದ್ದಾನೆ. ಮೂರನೆ ಸ್ಥಲದಲ್ಲಿ ಬರುವ ಶಿವಪೂಜಾ ರೀತಿಯಂತೂ ಬಸವಣ್ಣನ ಭಕ್ತಿ ಹೃದಯವನ್ನೇ ತೆರೆದಿಡುತ್ತದೆ. ಒಂಭತ್ತನೆ ಸ್ಥಲದಲ್ಲಿ ಕವಿ ಒಂದು ಸನ್ನಿವೇಶವನ್ನು ಸೃಷ್ಟಿಸುತ್ತಾನೆ. ಅದು, ಕಳ್ಳರು ಗೋವುಗಳನ್ನು ಕದ್ದುಕೊಂಡು ಹೋದುದು. ಇಲ್ಲಿ ಬಸವಣ್ಣ ಗೋವುಗಳನ್ನು ಕದ್ದುಹೋದ ಸುದ್ದಿಯನ್ನು ಕೇಳಿ ವಿಚಲಿತನಾಗಬೇಕಿತ್ತು. ಆದರೆ ಆತ ವಿಚಲಿತನಾಗುವುದೇ ಇಲ್ಲ. ಆ ವಿಚಾರವನ್ನು ಮನಸ್ಸಿಗೇ ಹಾಕಿಕೊಳ್ಳದೆ -

> ಮರುಳು ಗೋವಳಾ ಭಕ್ತರೇಂ ಕಳ್ಳರೇ
>
> ---------------------------------
>
> ಸಂಗನೇ ಕೊಂಬವಂ ಸಂಗನೇ ಕೊಡುವವಂ
>
> ಸಂಗನೇ ಉಂಬುವವಂ ಸಂಗನೇ ಉಡುವವಂ[23]

ಎಂದು ಹೇಳುತ್ತಾನೆ. ಇಲ್ಲಿ ಆತನ ಸರ್ವಸಮರ್ಪಣ ಭಾವ ಚೆನ್ನಾಗಿ ಚಿತ್ರಣಗೊಂಡಿದೆ.

ಇನ್ನೊಂದು ಸನ್ನಿವೇಶದಲ್ಲಿ ಬಸವಣ್ಣನ ಪ್ರಾಣ ಶರಣರೊಡನೆ ಹೊರಟುಹೋಗುತ್ತದೆ. ಆ ಸಂದರ್ಭದಲ್ಲಿ ಬಸವ-

> ಶರಣತತಿ ಹೋಹುದೇ ಎನ್ನ ಹರಣವ ಹೋಗು
>
> ಶರಣಬರವೇ ಎನ್ನ ಹರಣದ ಬರವಿನಾಗು[24]

ಎಂದು ನುಡಿಯುತ್ತಾನೆ. ಇದರಿಂದ ಆತನ ನಿಜವಾದ ನಿಷ್ಠೆ, ಶರಣರ ಬಗೆಗಿನ ಪ್ರೇಮ ಭಾವ ವ್ಯಕ್ತವಾಗುತ್ತದೆ.

ಹೀಗೆಯೇ ಇನ್ನೂ ಕೆಲವು ಸನ್ನಿವೇಶಗಳು ಸಿಗುತ್ತವೆ. ಉದಾಹರಣೆಗೆ: ಬದನೆಕಾಯಿ ಲಿಂಗವಾದ ಸನ್ನಿವೇಶ, ಸಂಯೋಳಿನಾಗಿದೇವನೆಂಬ ಅಸ್ಪೃಶ್ಯನ ಮನೆಗೆ ಹೋಗಿ ಪ್ರಸಾದವನ್ನು ಸ್ವೀಕರಿಸಿದ ಸನ್ನಿವೇಶ, ಪತ್ನಿಯ ಓಲೆಯನ್ನು ಅಪಹರಿಸಲು ಬರುವ ಸನ್ನಿವೇಶ - ಇವು ಬಸವಣ್ಣನ ಮಾನವೀಯ ಹೃದಯ. ಅಹಿಂಸೆ, ಸರ್ವಸಮರ್ಪಣ ಭಾವವನ್ನು ಚಿತ್ರಿಸುತ್ತವೆ.

ಬಸವಣ್ಣನ ಧನ್ಯ ಚಾರಿತ್ರ್ಯವನ್ನು ತಿಳಿಸುವ ಇನ್ನೊಂದು ಸನ್ನಿವೇಶವೆಂದರೆ; ಶಿವ ಆತನನ್ನು ಕೈಲಾಸಕ್ಕೆ ಕರೆದೊಯ್ಯಲು ಬಂದಾಗ ಬಸವಣ್ಣನಾಡುವ ನುಡಿಗಳು. ಈ ಸಂದರ್ಭದಲ್ಲಿ ಅವನು-

> ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ
>
> ಶರಣಸಂಗದ ಸುಖಂ ಕೈಲಾಸದೊಳಗುಂಟೆ[25]

ಎನ್ನುತ್ತಾನೆ. ಅವನ ಪಾಲಿಗೆ ಶರಣರು ಬದುಕಿರುವ ಭೂಮಿಯೇ ಸ್ವರ್ಗವಿದ್ದಂತೆ.

'ಮಹಾದೇವಿಯಕ್ಕನ ರಗಳೆ'ಯಲ್ಲಿ ಕೂಡ ಕವಿ ಮಹಾದೇವಿಯಕ್ಕನ ಚರಿತ್ರೆಗಿಂತ

ಚಾರಿತ್ರ್ಯಕ್ಕೆ ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ಮಹಾದೇವಿಯಕ್ಕ ಲೌಕಿಕ ಬದುಕನ್ನು ಬಿಟ್ಟವಳು. ಆದರೆ ಪರಿಸ್ಥಿತಿ ಅವಳನ್ನು ಲೌಕಿಕದೆಡೆಗೆ ನೂಕುತ್ತದೆ. ಆಗ ಮಹಾದೇವಿಯಕ್ಕ ಲೌಕಿಕದಲ್ಲಿ ಇದ್ದೂ ಇಲ್ಲದ ಹಾಗೆ ನಡೆದುಕೊಳ್ಳುವ ರೀತಿಯನ್ನು ಚಿತ್ರಿಸಿದ್ದಾನೆ. ಒಮ್ಮೆ ಕೌಶಿಕ ಮತ್ತು ಮಹಾದೇವಿಯಕ್ಕ ಆಲಿಂಗನದಲ್ಲಿರುವಾಗ, ದೂರದಿಂದ ಶರಣರು ಬಂದಿರುವ ಸುದ್ದಿ ಮಹಾದೇವಿಯಕ್ಕನಿಗೆ ತಿಳಿಯುತ್ತದೆ. ಅದು ತಿಳಿಯುತ್ತಿದ್ದಂತೆ ಮಹಾದೇವಿಯಕ್ಕ ಯಾವ ಸ್ಥಿತಿಯಲ್ಲಿದ್ದಳೋ ಅದೇ ಸ್ಥಿತಿಯಲ್ಲಿ ಶರಣರನ್ನು ನೋಡಲು ಬರುತ್ತಾಳೆ. ಶರಣರು ನಾಚಿ ಬಟ್ಟೆ ಧರಿಸಲು ಹೇಳುತ್ತಾರೆ. ಆಗ ಮಹಾದೇವಿಯಕ್ಕ ಬಟ್ಟೆ ತೆಗೆದುಕೊಳ್ಳಲು ಕೌಶಿಕನಿದ್ದಲ್ಲಿಗೆ ಬರುತ್ತಾಳೆ. ಆ ಸಂದರ್ಭದಲ್ಲಿ ಕೌಶಿಕ "ತೆಗೆ ತೆಗೆ ನಿನಗೇನತ್ಯಂತ ಭಕ್ತೆಗೆ ಮೀಱಿದ ವಿರಕ್ತೆಗೆ ಸೀರೆ ಪಣೆಂದು ಕಯ್ಯ ದುಕೂಲಮಂ"[26] ಸೆಳೆಯುತ್ತಾನೆ. ಹಾಗೆ ಸೆಳೆಯುತ್ತಿದ್ದಂತೆಯೇ ಮಹಾದೇವಿಯಕ್ಕ ಕೇಶಾಂಬರೆಯಾಗಿ ಚೆನ್ನಮಲ್ಲಿಕಾರ್ಜುನನನ್ನು ಅರಸಿ ಹೊರಡುತ್ತಾಳೆ. ಕೊನೆಗೂ ತನ್ನ ಚಾರಿತ್ರ್ಯ ಏನಿದೆಯೋ ಅದನ್ನು ಕಾಪಾಡಿಕೊಳ್ಳುತ್ತಾಳೆ, ಅಲೌಕಿಕಳಾಗಿ ಉಳಿಯುತ್ತಾಳೆ.

ಅಲ್ಲಮ ಚಾರಿತ್ರಿಕ ವ್ಯಕ್ತಿಯೇ ಆಗಿದ್ದಾನೆ. ಆದರೆ ಕವಿ ಅಲ್ಲಮನ ಚಾರಿತ್ರಿಕ ಘಟನೆಗಳ ಕಡೆ ಹೆಚ್ಚು ಒತ್ತು ಕೊಡುವುದಿಲ್ಲ. ಅಲ್ಲಮನ ಅಲೌಕಿಕ ಚಾರಿತ್ರ್ಯವನ್ನು ಎತ್ತಿ ಹಿಡಿಯುವುದಕ್ಕೋಸ್ಕರ ಕಾಮಲತೆಯೊಡನೆ ಪ್ರೇಮಾಂಕುರವಾಗಿಸಿ, ಅವಳು ಜ್ವರಪೀಡಿತಳಾಗಿ ಸಾಯುವಂತೆ ಮಾಡುತ್ತಾನೆ. ದಿಕ್ಕೆಟ್ಟು ಹೋದ ಅಲ್ಲಮ ಸಾವನ್ನು ಹುಡುಕಿ ದೇವಾಲಯದೊಳಗೆ ಹೋದಾಗ ಅಲ್ಲಿ ಗೊಹೇಶ್ವರನ ದರ್ಶನವಾಗುವಂತೆ ಮಾಡುತ್ತಾನೆ. ಆ ಮೂಲಕ ಅಲ್ಲಮನ ದಿವ್ಯ ಚಾರಿತ್ರ್ಯವನ್ನು ಎತ್ತಿಹಿಡಿಯುತ್ತಾನೆ.

ಹೀಗೆ ಕವಿ ತನ್ನ ಎಲ್ಲ ಕಥೆಗಳಲ್ಲೂ ಆಯಾಯ ಕಥಾನಾಯಕನ ಚಾರಿತ್ರ್ಯವನ್ನು ಕಟ್ಟಿಕೊಡಲು ಪ್ರಯತ್ನಿಸಿ ಸಫಲನಾಗಿದ್ದಾನೆ.

## 8.8 ಪಾತ್ರ ಮತ್ತು ಶೃಂಗಾರ

"ಶೃಂಗಾರ ರಸವನ್ನು ಕವಿ ಹರಿಹರ ದೇವನು ಗಿರಿಜಾಕಲ್ಯಾಣದಲ್ಲಿ ಧಾರಾಳವಾಗಿ ಬಳಸಿಕೊಂಡಿರುವನು. ಅಲ್ಲಿ ಅದರ ಉಪಯುಕ್ತತೆಗೆ ಅವನಿಗೆ ತಕ್ಕ ಸಂದರ್ಭವೂ ಒದಗಿ ಬಂದಿತು. ಆದರೆ ಶಿವಶರಣರ ಚರಿತ್ರೆಗಳಲ್ಲಿ ಶೃಂಗಾರ ರಸಕ್ಕೆ ಪೋಷಕವಾಗುವ ಸನ್ನಿವೇಶಗಳು ತೀರ ವಿರಳ. ತೀರ ವಿರಳವಾದರೂ ಅಂತಹ ಸನ್ನಿವೇಶಗಳು ಬಂದ ಕಡೆಯಲ್ಲಿ, ಹರಿಹರದೇವ ಶೃಂಗಾರ ರಸವನ್ನು ಬಳಸಿಕೊಳ್ಳದೆ ಬಿಟ್ಟಿರುವುದಿಲ್ಲ."[27] "ಹರಿಹರ ಕವಿಯ ಪುರಾತನರ ರಗಳೆಗಳಲ್ಲಿ ಒಂದಾದ ನಂಬಿಯಣ್ಣನ ಕಥೆಯಲ್ಲಿ ನಿರೂಪಿಸಿರುವ ಶೃಂಗಾರ ರಸದ ಸೌಂದರ್ಯಕ್ಕೆ ಮನಸೋತು, ಕವಿಯ ಮೇಲೆ ಮೋಹಗೊಂಡು ಆಂಧ್ರ ಪ್ರದೇಶದ ಗಣಿಕೆಯೊಬ್ಬಳು ಪಂಪಾಕ್ಷೇತ್ರಕ್ಕೆ ಬಂದು ಆತನನ್ನು ಕಂಡಳೆಂದು ಸಿದ್ಧನಂಜೇಶನು ಉಲ್ಲೇಖಿಸಿರುವನು. ಈ ಉಲ್ಲೇಖದ ಮೇಲಿಂದ ಹರಿಹರ ಕವಿಯು ಶೃಂಗಾರ ರಸದ ನಿರೂಪಣೆಯಲ್ಲಿ ನಿಷ್ಣಾತನೆಂದೂ, ಆತನ ಶೈಲಿ ಅದಕ್ಕೆ ಚೆನ್ನಾಗಿ ಒಪ್ಪುವುದೆಂದೂ ತಿಳಿಯುತ್ತದೆ."[28] ಕವಿ ಚಿತ್ರಿಸುತ್ತಿರುವ ಪಾತ್ರಗಳು ಎಷ್ಟೇ ಗಂಭೀರವಾದವುಗಳಾಗಿರಲಿ ಅಥವಾ

ಇಲ್ಲದಿರಲಿ ಆ ಪಾತ್ರಗಳಿಗೆ ಒಗ್ಗುವಷ್ಟು ಮಾತ್ರ ಶೃಂಗಾರದ ಚಿತ್ರಣ ಇರುತ್ತದೆ. ಇದರಿಂದ ಆ ಪಾತ್ರಗಳೂ ಹೊಸತನವನ್ನು ಪಡೆದುಕೊಳ್ಳುತ್ತವೆ.

ನೂತನ ಮತ್ತು ಪುರಾತನರ ರಗಳೆಗಳಲ್ಲಿ ಬರುವ ಆದಯ್ಯನ ರಗಳೆ, ಪ್ರಭುದೇವರ ರಗಳೆ, ಮಲುಹಣನ ರಗಳೆಗಳಲ್ಲಿ ಶೃಂಗಾರದ ಚಿತ್ರಗಳು ಸೊಗಸಾಗಿ ಬರುತ್ತವೆ. ಆದಯ್ಯನ ರಗಳೆಯಲ್ಲಿ ಕವಿ, ಆದಯ್ಯ ಪದ್ಮಾವತಿಯರ ಶೃಂಗಾರವನ್ನು "ಸಕಳೇಂದ್ರಿಯಂಗಳೊಳಗು ಗೊಟ್ಟು ಲಜ್ಜಾರಸಂ ಬೆಂಗೊಟ್ಟಭಿಮಾನದ ಕೋಂಟೆಕೋಳುವೋಗಿ ಧೈರ್ಯದ ಕದಂದೆರೆದು ಕಲ್ಲವಿಲ್ಲಿಯಾಗಿ ಸುಖಂ ಸೂಜೆವೋಗಿ ಮನಂ ಪಿಡಿಪಟ್ಟು ಮುಟ್ಟಿದ ಸುಖಮಂ ಸೋಮನಾಥ ಸ್ಮರಣೆಯಿಂ ಸವಿವುತಿರ್ಪ ಸುಖ ಸಮಯದೊಳ್ಮುನಿಸಿಲ್ಲದ ಕಲಹಂ ಕೋಪವಿಲ್ಲದ ಖ್ಯಾತಿ ಭಂಗವಿಲ್ಲದ ಸೋಲಂ ಭಾರವಿಲ್ಲದ ಬಳಲಿಕೆ ನಿದ್ರೆಯಿಲ್ಲದ ನಿಡುಸುಯಿ ತಣಿವಿಲ್ಲದ ತೃಪ್ತಿ ಅಗಲ್ಕೆಯಿಲ್ಲದ ವಿರಹವಾತುರಿಸಿ ....... ಸುಯ್ಯಲರೆಂಬ ಗಂಧವಹಂ ಸುಳಿಯೆ ಗಾಢಾಲಿಂಗನದ ಲತೆವನೆಯೊಳಗೆ ಸಮಸುಖ ಸಾರ್ವಭೌಮರಾಗಿ ತಮ್ಮೊಳ್ತಮ್ಮನಲ್ಲದೆ ಮತ್ತೊಂದಱಿಯದೆ ತಮ್ಮಿರ್ವರುಂ ಒಂದಾದಂತೆರಡನಱಿಯದೆ ಪಲವು ದೆವಸಮಿರ್ದೊಂದು ದೆವಸಂ" ಎಂದು ವರ್ಣಿಸಿದ್ದಾನೆ. ಇಲ್ಲಿ ಕವಿ ಶೃಂಗಾರ ರಸವನ್ನು ಘಟ್ಟಿ ಇಳಿಸಿದ್ದಾನೆ. ಎರಡೂ ಪಾತ್ರಗಳು ಆ ವರ್ಣನೆಗೆ ತಕ್ಕಂತೆ ಇವೆ. ಸ್ವಲ್ಪವೂ ಅಶ್ಲೀಲ ಸುಳಿಯದ ಹಾಗೆ ಕವಿ ಅವರ ಮಿಲನವನ್ನು ಬಣ್ಣಿಸಿರುವ ರೀತಿ, ಎಂಥ ಸೊಗಸು !

ಪ್ರಭುದೇವರ ರಗಳೆಯಲ್ಲೂ ಕವಿ ಶೃಂಗಾರದ ವರ್ಣನೆಯನ್ನು ಇಷ್ಟೇ ಸೊಗಸಾಗಿ ತರುತ್ತಾನೆ. ಅಲ್ಲಿ ಎರಡೂ ಪಾತ್ರಗಳು ತಮ್ಮ ತನು, ಮನ, ಧನಗಳನ್ನು ಪರಸ್ಪರ ಅರ್ಪಿಸಿಕೊಂಡ ಅಸಾಧಾರಣ ಚಿತ್ರವಿದೆ.

> ಆಲಿಂಗನದೊಳಿರ್ವರೊರ್ವರಾಗುತ್ತಮಿರೆ
> ಸೋಲದ ಸೊಗಸು ಮನಮನೋಲಾಡಿಸುತ್ತಮಿರೆ
> ಕಣ್ಣಳರೆ ಮುಗಿವುತಿರೆ ಕರತಳಂ ನಡುಗುತಿರೆ
> ನುಣ್ಗುರುಳ್ಗಲಿವುತಿರೆ ನುಡಿ ಮರುಳ್ಗೊಳುತಮಿರೆ
> ಕದಪು ಬೆಮರುತ್ತಮಿರೆ ಮೆಯ್ಮುಕ್ಕುತಂತಮರೆ[30]

ಹೀಗೆ, ಕವಿ ಆ ಕ್ಷಣದಲ್ಲಿ ಪಾತ್ರಗಳಲ್ಲಾಗುವ ಮನೋ ವ್ಯತ್ಯಾಸ ಹಾಗೂ ದೇಹ ವ್ಯತ್ಯಾಸಗಳನ್ನು ಭಾವತುಂಬಿ ವರ್ಣಿಸಿದ್ದಾನೆ. ಅಲ್ಲಿ ಲೌಕಿಕದ ಅಸಹ್ಯಗಳಿಗೆ ಅವಕಾಶವೇ ಇಲ್ಲ.

ಈ ಎರಡು ರಗಳೆಗಳಲ್ಲಿ ಶೃಂಗಾರ ಹೇಗೆ ವಿಜೃಂಭಿಸುತ್ತದೆಯೋ ಅಷ್ಟೇ ವಿಜೃಂಭಣೆ, ಮಲುಹಣ-ಮಲುಹಣೆಯರ ರಗಳೆಯಲ್ಲಿದೆ. ಈ ರಗಳೆಯಲ್ಲಿ ಕವಿ ಮಲುಹಣ-ಮಲುಹಣೆಯರ ಶೃಂಗಾರಕ್ಕೆ ವಿಶೇಷ ಒತ್ತುಕೊಟ್ಟಿದ್ದಾನೆ. ಪದ್ಯಕ್ಕಿಂತಲೂ ಗದ್ಯವು ಶೃಂಗಾರಕ್ಕೆ ಅನುಕೂಲವೆಂದು ತಿಳಿದುದರಿಂದ, ಅವರ ಶೃಂಗಾರವನ್ನು ಗದ್ಯದಲ್ಲಿಯೇ ತಂದಿದ್ದಾನೆ. ಮಲುಹಣ- ಮಲುಹಣೆಯರ ಪ್ರಥಮ ನೋಟದಿಂದಲೇ ಕವಿ ಶೃಂಗಾರ ರಸವನ್ನು ಹಂಚುತ್ತಾನೆ. ಅವರಿಬ್ಬರೂ ಸೇರಿ ಅನುಭವಿಸಿದ ಆನಂದವನ್ನು ಅಷ್ಟೆ ಸೊಗಸಾಗಿ ಬಣ್ಣಿಸಿದ್ದಾನೆ.

"ಸಮರತಿಯೊಳಿದ್ದು ಹೋಗಿ ಸಮಸುಖದ ಸೊಕ್ಕು ಮಿಕ್ಕೇಱಿ ನಲಿವು ತಲೆಗೆತ್ತಿ ನಡುಮುಱಿದು ಸೆಳೆಯಲನುವಾಗಿಪ್ಪಲ್ಲಿಂ ಮುನ್ನಮ್ಮುಯ್ಯ ರೋಮಾಂಚದ ಬಾಸುಳೆಗಳುವ ಸುಕುಮಾರಾಂಗಿಗೆ ನೆರೆವ ಸುಖ ಸಮಯದೊಳು ಕರಣವೆಲ್ಲಂ ನೋಟ, ನೋಟವೆಲ್ಲಂ ನುಡಿ, ನುಡಿಯೆಲ್ಲಂ ವಿರಹ, ವಿರಹವೆಲ್ಲಂ ದೈನ್ಯ, ದೈನ್ಯವೆಲ್ಲಂ ಸಾತ್ವಿಕ, ಸಾತ್ವಿಕವೆಲ್ಲಂ ರಸ, ರಸವೆಲ್ಲಂ ಮೈ, ಮೈಯೆಲ್ಲಂ ಕೂಟ, ಕೂಟವೆಲ್ಲಂ ಮನ, ಮನವೆಲ್ಲಂ ಮೆಚ್ಚು, ಮೆಚ್ಚೆಲ್ಲಂ ಸೋಲ, ಸೋಲವೆಲ್ಲಂ ಸುಖಸಮಯವಾಗಿ ದಿನಂಗಳು ನಿಮಿಷಂಗಳಾಗಿ....."[31] ಎಂಬ ಈ ವರ್ಣನೆಯಲ್ಲಿ ಇಬ್ಬರ ಪರಮಾನುರಾಗವನ್ನು ಕವಿ ತುಂಬಿ ಇಟ್ಟಿದ್ದಾನೆ.

ಶೃಂಗಾರವನ್ನು ತರುವ ಸಂದರ್ಭದಲ್ಲಿ ಕವಿಯ ಔಚಿತ್ಯಪ್ರಜ್ಞೆ ಮೆಚ್ಚುವಂಥದ್ದು. ಎಲ್ಲಾ ಸಂದರ್ಭದಲ್ಲೂ ಆತ ಎಚ್ಚರಿಕೆ ವಹಿಸಿದ್ದಾನೆ. ಹಾಗಾಗಿ ಅಲ್ಲಮನ ಕಥೆಯಲ್ಲಿ ಬರುವ ಶೃಂಗಾರದ ವರ್ಣನೆ ಆದಯ್ಯ ಮತ್ತು ಮಲುಹಣನ ರಗಳೆಯಲ್ಲಿ ಬರುವುದಕ್ಕಿಂತ ಭಿನ್ನವಾಗಿದೆ. ಅಲ್ಲಮನ ಎತ್ತರಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಅಲ್ಲಿ ಚಿತ್ರಿಸಿದ್ದರೆ, ಇಲ್ಲಿ ಆದಯ್ಯ ಮತ್ತು ಮಲುಹಣರಿಗೆ ಎಷ್ಟು ಹೊಂದಬೇಕೋ ಅಷ್ಟನ್ನು ಚಿತ್ರಿಸಿದ್ದಾನೆ. ಇಂತಹ ಔಚಿತ್ಯಪ್ರಜ್ಞೆ ಕವಿಗೆ ಇಲ್ಲದಿದ್ದಲ್ಲಿ, ಮಹಾದೇವಿಯಕ್ಕನ ರಗಳೆಯಲ್ಲೂ ಶೃಂಗಾರವನ್ನು ತರಲು ಹೆಚ್ಚು ಅವಕಾಶವಿತ್ತು. ಅಲ್ಲಿಯೂ ಶೃಂಗಾರದ ತುಣುಕು ಇದೆ. ಆದರೆ ಕವಿ "ಮತ್ತೊಂದು ದಿವಸಂ ಕೌಶಿಕನುಂ ತಾನುಂ ಕಾಮಾನುರಾಗರಸದೊಳಾಳ್ದು ಸುರತಾಂತ ಸಮಯಶ್ರಾಂತಿಭರಜನಿತ ಸುಖಸ್ವೇದಮಯ ಶರೀರರಾಗಿರಲಲ್ಲಿಗೆ"[32] ಎಂದು ಒಂದೇ ಸಾಲಿನಲ್ಲಿ ವರ್ಣಿಸಿಬಿಡುತ್ತಾನೆ. ಇಲ್ಲಿ ಆಯಾ ಪಾತ್ರಕ್ಕೆ ಒಪ್ಪುವ ಹಾಗೆ ಶೃಂಗಾರವನ್ನು ತರುವುದನ್ನು ಕಾಣುತ್ತೇವೆ.

ಪುರಾತನರ ರಗಳೆಗಳಲ್ಲಿ ಶೃಂಗಾರದ ಸನ್ನಿವೇಶಗಳು ಬಹಳ ಕಡಿಮೆ. ಇದ್ದುದರಲ್ಲಿ ಚೆನ್ನಾಗಿ ನಿರೂಪಣೆಗೊಂಡಿರುವುದು ನಂಬಿಯಣ್ಣನ ರಗಳೆಯಲ್ಲೇ. ನಂಬಿಯಣ್ಣನ ರಗಳೆ ಶೃಂಗಾರಕ್ಕೆ ಹೇಳಿ ಮಾಡಿಸಿದಂತಿದೆ. ಅಲ್ಲಿ ಶೃಂಗಾರವನ್ನು ಕವಿ ಎರಡು ಕಡೆ ತರುತ್ತಾನೆ. ಒಂದು ಸನ್ನಿವೇಶ ಪರವೆಯ ಜೊತೆಗೆ, ಇನ್ನೊಂದು ಸನ್ನಿವೇಶ ಸಂಕಲೆಯ ಜೊತೆಗೆ. ಎರಡೂ ಸನ್ನಿವೇಶಗಳಲ್ಲಿ ಶೃಂಗಾರದ ವರ್ಣನೆ ಸೊಗಸಾಗಿದೆ. ಮೊದಲನೆ ಸನ್ನಿವೇಶದಲ್ಲಿ:

"ಸೂಳು ಗೆಲ್ಲಂ ಸೂಳು ಸೋಲಂ ಸೂಳು ಮೂದಲೆಗಳು ಮನದೊಳು ಮುಂದು ವರಿಯುತ್ತಿರಲು ಮುಟ್ಟಿದ ಸುಖಂ ಮನದೆಚ್ಚಱುಮನಳಿಯಲಾಲಿಕಲ್ಲಿಂತಾಂತಕ್ಕೆ ಕರಗುವುದೇ ಗೆಲ್ಲವೆಂಬತಿರ್ವರುಂ ತನಿಗರಗಿ ಮಳಲಪುತ್ತಳಿಗಳ ಮೇಲೆ ಮಳೆಕೊಂಡಂತೆ ಶಶಿಕಾಂತದ ಪ್ರತುಮೆ ಚಂದ್ರನನಪ್ಪಿದಂತೆ ಸುರತ ಸರೋನಿಧಿಯೊಳು ತೇಂಕಾಡುವ ದಂಪತಿ ತೆರೆಗಳಂತಿರುಳ್ ಪಗಲನಱಿಯದೆ ಫಲ ಕೆಲವು ದಿನಂಗಳು ನಿಮಿಷಂಗಳಾಗಿ ತೋಱೆ"[33] ಎಂದು ವರ್ಣಿಸುತ್ತಾನೆ. ಅದೇ ಇನ್ನೊಂದು ಸನ್ನಿವೇಶದಲ್ಲಿ ಸಂಕಲೆ ನಂಬಿಯಣ್ಣರ ಅನುರಾಗದಾಟವನ್ನು "ಯೌವನಮಂ ತೀವಿದ ಸುಖಮೋನಿಯ ಅಪರಿಮಿತ ಮುಗ್ಧೆಯ ಮೀಸಲಮನಂ ತನ್ನತ್ತ ಸೆಳೆದು ಮೇಲುವರಿದ ಸುಖಕ್ಕೆ. ಮನಮುನಿತ್ತು ಬರತೆಗೆದು ಸಕಲಾವಯವಂಗಳು ತಮ್ಮೊಳು ತಮ್ಮನಾಲಿಂಗಿಸೆ ಸೋಂಕುಸೋಂಕಿನೊಳು ಮಯ್ ಮಯ್ಯೊಳು ಮನಂ ಮನದೊಳದ್ದು ಸೊಬಗು

ಸುಮಾನ್ಯನವಾಗೆ ನಿಡುಸುಯ್ದು ಮಲಂಗಿ ಸರ್ವಾಂಗ ಸಚಿಲ್ಲ ಸುಭವಮು......"[34] ಎಂದು ವರ್ಣಿಸುತ್ತಾನೆ. ಎರಡು ಸಂದರ್ಭಗಳಲ್ಲೂ ಕವಿ ಶೃಂಗಾರವನ್ನು ಆಯಾಯಾ ಪಾತ್ರಗಳಿಗೆ ಒಪ್ಪುವ ಹಾಗೆ ಚಿತ್ರಿಸಿದ್ದಾನೆ. ಆದರೂ ನೂತನರ ರಗಳೆಗಳಲ್ಲಿ ಬರುವ ಶೃಂಗಾರಕ್ಕೆ ಈ ಶೃಂಗಾರ ಮಿಗಿಲೆನಿಸುವುದಿಲ್ಲ.

ಎಲ್ಲ ಸನ್ನಿವೇಶಗಳಲ್ಲೂ ಪಾತ್ರಗಳು ಆಯಾಯಾ ಕ್ರಿಯೆಗೆ ಪಕ್ಕಾಗಿವೆ. ಅಲ್ಲಿ ಹಿಂಸೆಯಾಗಲಿ, ಬಲಾತ್ಕಾರವಾಗಲಿ ಇಲ್ಲ. ಎಲ್ಲವೂ ಪರಸ್ಪರ ಒಪ್ಪಿಗೆಯಿಂದಲೇ ನಡೆಯುತ್ತವೆ. ವಯಸ್ಸಿನ ಅಂತರ ಕೂಡ ಸಮಾನವಾಗಿಯೇ ಇದೆ.

## 8.9 ಪಾತ್ರ ಮತ್ತು ಇತಿಹಾಸ

ಹರಿಹರ ಕಾವ್ಯವನ್ನು ರಚಿಸಿದ್ದು ಶುದ್ಧ ಐತಿಹಾಸಿಕ ದೃಷ್ಟಿಯಿಂದಲ್ಲ. ಹಾಗಾಗಿ ಅವನ ಕಾವ್ಯದಲ್ಲಿ ಅದೆಷ್ಟೋ ಐತಿಹಾಸಿಕ ವಿಚಾರಗಳು ಕಾಣವಾಗಿವೆ. ಅಂದಮಾತ್ರಕ್ಕೆ ಅವನು ಇತಿಹಾಸವನ್ನು ಮರೆತು ಕಾವ್ಯವನ್ನು ರಚಿಸಿದ್ದಾನೆ ಎಂದು ತೀರ್ಮಾನಿಸಲಾಗದು. ಏಕೆಂದರೆ ಇತಿಹಾಸದ ಅನೇಕ ವಿಚಾರಗಳನ್ನು ಕಾವ್ಯದಲ್ಲಿ ತಂದಿದ್ದಾನೆ. ಒಂದು ವೇಳೆ ಅವನಿಗೆ "ಐತಿಹಾಸಿಕ ಪ್ರಜ್ಞೆ ಇಲ್ಲದೇ ಹೋಗಿದ್ದರೆ, ಅವನು ಐತಿಹಾಸಿಕ ವ್ಯಕ್ತಿಗಳಾದ ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ಕೇಶಿರಾಜ, ರೇವಣಸಿದ್ಧ ಮೊದಲಾದವರನ್ನು ಕುರಿತು ಕಾವ್ಯ ರಚಿಸುತ್ತಿರಲಿಲ್ಲ. ಒಂದು ವೇಳೆ ಅವನು ಕೈ ಬಿಟ್ಟಿದ್ದರೆ, ಅವರ ಕುರಿತಾದ ಚರಿತಾಂಶಗಳು ಇಷ್ಟು ಉಳಿಯುತ್ತಿರಲಿಲ್ಲ"[35]. ಇರುವಷ್ಟನ್ನು ಕಂಡು ಹೇಳುವುದಾದರೆ ಕವಿ ಪಾತ್ರಗಳ ಐತಿಹಾಸಿಕ ವಿಚಾರಗಳನ್ನು ತನಗೆ ಗೊತ್ತಿದ್ದಷ್ಟನ್ನು ಅಗತ್ಯವಿದ್ದ ಕಡೆ ಮಾತ್ರ ತನ್ನ ಕಾವ್ಯದಲ್ಲಿ ತಂದಿದ್ದಾನೆ.

ಬಾಗೇವಾಡಿಯಲ್ಲಿ ನೆಲೆಸಿದ್ದ ಮಾದಿರಾಜ ಮತ್ತು ಮಾದಲಾಂಬೆ ಎಂಬ ಕಮ್ಮೆಕುಲದ ದಂಪತಿಗಳ ಮಗನಾಗಿ ಬಸವಣ್ಣನವರು ಹುಟ್ಟಿದರು. ಚಿಕ್ಕವನಿರುವಾಗಲೇ ತಂದೆ ತಾಯಿಯರನ್ನು ಕಳೆದುಕೊಂಡು ಮುತ್ತಜ್ಜಿಯ ಬಳಿ ಜೀವನ ಸಾಗಿಸಿದರು. ಬಾಲ್ಯದಲ್ಲಿದ್ದಾಗಲೇ ಕರ್ಮಲತೆಯಂತಿದ್ದ ಜನಿವಾರವನ್ನು ಕಿತ್ತು ಬಾಗೇವಾಡಿಯಿಂದ ತೆರಳಿದರು. ಅನಂತರ ಕಪ್ಪಡಿ ಸಂಗಮವನ್ನು ಸೇರಿ ಈಶಾನ್ಯಗುರುಗಳನ್ನು ಕಂಡರು. ಆಮೇಲೆ ಮಂಗಳವಾಡಕ್ಕೆ ಬಂದು ಅಲ್ಲಿ ಬಿಜ್ಜಳರಾಜನ ಅರಮನೆಯಲ್ಲಿ ಭಂಡಾರಿಯಾಗಿ ಸೇವಕಗೊಂಡರು. ಅಲ್ಲಿ ಸಿದ್ಧದಂಡಾಧಿಪನ ತಪ್ಪು ಲೆಕ್ಕವನ್ನು ಸರಿಪಡಿಸಿದರು. ಸಿದ್ಧದಂಡಾಧಿಪನ ಮಗಳನ್ನು ವಿವಾಹವಾದರು. ಭಂಡಾರಿಯಾಗಿ ಬಸವಣ್ಣನವರು ಬಂದ ಮೇಲೆ ರಾಜ್ಯ ಸುಭಿಕ್ಷವಾಯಿತು. ದಾನ ಧರ್ಮಗಳು ಹೆಚ್ಚಾದವು. ಬಸವಣ್ಣನವರ ಈ ಸಾಧನೆಯನ್ನು ಬಿಜ್ಜಳನ ಆಸ್ಥಾನದಲ್ಲಿದ್ದ ನಾರಾಯಣ ಭಟ್ಟ, ಮಂಚಣ್ಣ ಕ್ರಮಿತ, ಕೊಚಿಗ, ಪೋಚಿಪದ್ದಿ ಎಂಬ ವೇದಜಡರು ಕಂಡು ಸಹಿಸದಾದರು. ಬಸವಣ್ಣನ ವಿರುದ್ಧ ಬಿಜ್ಜಳನಿಗೆ ಚಾಡಿ ಹೇಳಿದರು. ಅದರಂತೆ ಬಿಜ್ಜಳ ಬಸವಣ್ಣನನ್ನು ಕರೆದು ವಿಚಾರಿಸಿದನು. ಬಿಜ್ಜಳನ ಪರೀಕ್ಷೆಯಲ್ಲಿ ಬಸವಣ್ಣನವರು

ವಿಜಯಿಗಳಾದರು. ಸಂಬೋಳಿನಾಗಿದೇವನೆಂಬ ಹೊಲೆಯನ ಮನೆಗೆ ಹೋಗಿ ಅವನು ನೀಡಿದ ಪ್ರಸಾದವನ್ನು ಸ್ವೀಕರಿಸಿದರು. ಕಿನ್ನರಿ ಬೊಮ್ಮಯ್ಯನನ್ನು ಕರೆದುಕೊಂಡು ಬಂದು ಉಳ್ಳಿಯ ಸಂತರ್ಪಣೆಯನ್ನು ಮಾಡಿದರು. ಇಂತಹ ಹಲವಾರು ವಿಚಾರಗಳು ಬಸವರಾಜದೇವರ ರಗಳೆಯಲ್ಲಿ ದೊರೆಯುತ್ತವೆ. ಇವೆಲ್ಲವೂ ಐತಿಹಾಸಿಕ ವಿಚಾರಗಳೇ ಆಗಿವೆ.

'ಮಹಾದೇವಿಯಕ್ಕನ ರಗಳೆಯಲ್ಲಿ' ಮಹಾದೇವಿಯಕ್ಕ ಉಡುತಡಿ ಎಂಬ ಶಿವಪುರದಲ್ಲಿ ಹುಟ್ಟಿದ್ದು, ಲಾವಣ್ಯವತಿಯಾಗಿ ಬೆಳೆದು ಆ ಪುರದ ಅರಸ ಕೌಶಿಕನ ಕಣ್ಣಿಗೆ ಬಿದ್ದು ಅವನು ಮಹಾದೇವಿಯಕ್ಕನನ್ನು ಮೋಹಿಸಿದ್ದು, ಮಹಾದೇವಿಯಕ್ಕ ಕೌಶಿಕನನ್ನು ತಿರಸ್ಕರಿಸಲು ಕೌಶಿಕ ಮಂತ್ರಿಗಳನ್ನು ಕಳಿಸಿ ವಿಚಾರಿಸಿದ್ದು, ಆದಾಗ್ಯೂ ಮಹಾದೇವಿಯಕ್ಕ ಒಪ್ಪದಿದ್ದಾಗ ಮಂತ್ರಿಗಳು ಬೆದರಿಸಿದ್ದು, ಮಹಾದೇವಿಯಕ್ಕನ ತಂದೆ ತಾಯಿಯರು ಬಂದು ಕೌಶಿಕನನ್ನು ಮದುವೆ ಯಾಗುವಂತೆ ಕೇಳಿಕೊಂಡದ್ದು, ಅನಂತರ ತಂದೆತಾಯಿಯರ ಬಲಾತ್ಕಾರದಿಂದ ಮದುವೆ ಯಾದದ್ದು, ಕೆಲ ಸಮಯದಲ್ಲಿಯೇ ಕೌಶಿಕ ಮೂರು ಷರತ್ತುಗಳನ್ನು ಮೀರಲು ಕೌಶಿಕನನ್ನು ತೊರೆದು ಶ್ರೀಗಿರಿಯ ಕಡೆಗೆ ಕೇಶಾಂಬರೆಯಾಗಿ ನಡೆದದ್ದು - ಇಷ್ಟೂ ಚಾರಿತ್ರಿಕ ವಿಚಾರಗಳು ದೊರೆಯುತ್ತವೆ.

'ಪ್ರಭುದೇವರ ರಗಳೆ'ಯಲ್ಲಿ ಪ್ರಭುದೇವ ಬಳ್ಳಿಗಾವೆಯೆಂಬ ಪುರದಲ್ಲಿ ನಾಗವಾಸಾಧಿಪತಿಯ ಸತಿಯ ಬಸುರಲ್ಲಿ ಹುಟ್ಟಿದ್ದು, ವಂಶವಿದ್ಯೆಯಾದ ಮದ್ದಳೆಯ ಕಲೆಯಲ್ಲಿ ಪರಿಣತನಾಗಿದ್ದು, ಗೊಹೇಶ್ವರ ದೇವಾಲಯದಲ್ಲಿ ಮದ್ದಳೆ ಬಾರಿಸುವಾಗ ಕಾಮಲತೆ ಎಂಬ (ಧನದತ್ತನ ಮಗಳು) ಸುಂದರ ತರುಣಿಗೆ ಮೋಹಗೊಂಡದ್ದು, ಕಾಮಲತೆಯನ್ನು ವರಿಸಿದ ಕೆಲವೇ ದಿನಗಳಲ್ಲಿ ಕಾಮಲತೆ ಜ್ವರಪೀಡಿತಳಾಗಿ ಸತ್ತಿದ್ದು, ಮಣ್ಣಿನೊಳಗೆ ಹೂತುಹೋಗಿದ್ದ ದೇವಾಲಯವನ್ನು ಆ ಊರಿನ ಅರಸ ಪರಿಜನರಿಂದ ಅಗೆಯಿಸಿ ಹೊರಕಾಣುವಂತೆ ಮಾಡಿದ ಹಲವು ಐತಿಹಾಸಿಕ ವಿಚಾರಗಳು ಲಭ್ಯವಾಗುತ್ತವೆ.

ಹಾಗೆಯೇ, ಪುರಾತನ ಶರಣರು ಚೇರ, ಚೋಳ, ಪಾಂಡ್ಯ ದೊರೆಗಳ ಕಾಲದಲ್ಲಿಯೂ; ನೂತನ ಶರಣರು ಕಲ್ಯಾಣದ ಜಯಸಿಂಹ, ಆರನೆಯ ವಿಕ್ರಮಾದಿತ್ಯ, ವೀರನರಸಿಂಹ ಬಲ್ಲಾಳ, ಬಿಜ್ಜಳ ಮುಂತಾದ ಅರಸರ ಕಾಲದಲ್ಲಿಯೂ ಜೀವಿಸಿದ್ದರೆಂಬ ಐತಿಹಾಸಿಕ ವಿಚಾರಗಳು ಹರಿಹರನ ರಗಳೆಗಳಿಂದ ದೊರೆಯುತ್ತವೆ. ಜೊತೆಗೆ ಪೆರ್ಮಾಡಿರಾಯನಾದ ಆರನೆಯ ವಿಕ್ರಮಾದಿತ್ಯನ ಪ್ರಧಾನಿಯಾಗಿ ಕೊಂಡುಗುಳಿ ಕೇಶಿರಾಜ ಇದ್ದಿದ್ದು, ಕೇಶಿರಾಜನ ಸಮಕಾಲೀನ ನಾಗಿ ತೆಲುಗು ಜೊಮ್ಮಯ್ಯ ಇದ್ದಿದ್ದು, ಕಲ್ಯಾಣದ ಜಯಸಿಂಹ ಜಗದೇಕಮಲ್ಲನು ಶಂಕರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯಗಳ ಸಮಕಾಲೀನನಾಗಿದ್ದುದರ ವಿಚಾರಗಳೂ ದೊರೆಯುತ್ತವೆ.

## 8.10 ಪಾತ್ರ ಮತ್ತು ಅಧ್ಯಾತ್ಮ

ಹರಿಹರನ ಕಾವ್ಯದಲ್ಲಿನ ಪಾತ್ರಗಳಲ್ಲಿ ಕಂಡುಬರುವ ವಿಶೇಷ ಅಂಶಗಳಲ್ಲಿ ಅಧ್ಯಾತ್ಮವೂ

ಒಂದು. ಅಧ್ಯಾತ್ಮ ವಿಚಾರ ಕವಿಯ ಪ್ರತಿಯೊಂದು ರಗಳೆಯಲ್ಲಿಯೂ ಕಂಡುಬರದೇ ಇದ್ದರೂ ಕೆಲವೊಂದು ರಗಳೆಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಅಧ್ಯಾತ್ಮವನ್ನು ಅನುಭಾವ ಎಂದೂ ಕರೆಯಲಾಗುತ್ತದೆ. ಸಾಮಾನ್ಯರಾದವರಿಗೆಲ್ಲಾ ಅಧ್ಯಾತ್ಮವು ಎಟುಕುವಂಥದ್ದಲ್ಲ. ಅದಕ್ಕೆ ನಿರಂತರವಾದ ಸಾಧನೆ ಇರಬೇಕು. ಅದೂ ಬರಿಯ ಸಾಧನೆಯಲ್ಲ;ಅಂತರಂಗದ ಸಾಧನೆಯಾಗಿರಬೇಕು." ಅಧ್ಯಾತ್ಮದ ಅಂತರಂಗಾನುಭವಗಳಲ್ಲಿ ವೈಯಕ್ತಿಕವಾಗಿ ತಮ್ಮನ್ನು ತೊಡಗಿಸಿಕೊಳ್ಳುವ ನಿಷ್ಠೆ"[36] ಇರಬೇಕು. ಹಾಗಾದಲ್ಲಿ ಮಾತ್ರ ಅಧ್ಯಾತ್ಮ ಸಿದ್ಧಿಸುತ್ತದೆ. ಇಂಥ ಒಂದು ಗುಣ ಹರಿಹರನಿಗೆ ಇದ್ದುದ್ದರಿಂದಲೇ ಅವನು ತನ್ನ ರಗಳೆಗಳಲ್ಲಿ ಅಧ್ಯಾತ್ಮವನ್ನು ಬಳಸಿಕೊಳ್ಳಲು ಸಾಧ್ಯವಾಗಿದೆ. ಅವನು ಕಾವ್ಯದಲ್ಲಿ ಅಧ್ಯಾತ್ಮಿಕತೆಯನ್ನು ಹೇಗೆ ತರುತ್ತಾನೆ ಎಂಬುದಕ್ಕೆ ಕುಂಬರಗುಂಡಯ್ಯನ ರಗಳೆ, ಇಳೆಯಾಂಡ ಗುಡಿಮಾರನ ರಗಳೆ, ತಿರುಕುರುಂಪೆತೊಂಡನ ರಗಳೆಗಳನ್ನು ಉದಾಹರಿಸಬಹುದು.

ಕುಂಬರಗುಂಡಯ್ಯನ ರಗಳೆಯಲ್ಲಿ ಹರಿಹರ ತರುವ ಆಧ್ಯಾತ್ಮಿಕ ಚಿತ್ರಣ ಅಪೂರ್ವವಾದದ್ದು. ಇಲ್ಲಿ ಕವಿ ಕುಂಬರಗುಂಡಯ್ಯನ ಹೊರಗಿನ ಕಾಯಕದ ಚಿತ್ರಣವನ್ನು ಕೊಡುತ್ತಲೇ, ಗುಂಡಯ್ಯನ ಒಳಗಿನ ಘಟಕಾಯಕದ ಚಿತ್ತವೇದ್ಯ ಚಿತ್ರಣವನ್ನು ಮೂಡಿಸುವಲ್ಲಿ ಸಫಲನಾಗಿದ್ದಾನೆ.

ಗುಂಡಯ್ಯ ಘಟವನ್ನು ಬಾರಿಸಲು ತೊಡಗಿದನೆಂದರೆ ಇಡೀ ಲೋಕವನ್ನೇ ಮರೆಯುತ್ತಾನೆ. ಚಕ್ರದ ಆಧಾರವೇ ತನ್ನ ಆಧಾರವಾಗುತ್ತದೆ. 'ವೇಧೆ' ಚಕ್ರದ ಮೊಳೆಯಾಗುತ್ತದೆ. ಷಟ್‌ಚಕ್ರವೇ ಚಕ್ರವಾಗುತ್ತದೆ. ಸೊಗಯಿಸುವ ನಾಭಿ 'ನಾಭಿ'ಯಾಗುತ್ತದೆ. ಕನಸಿನ ಕಾಯವೇ ಮೃತ್ತಿಕೆಯಾಗುತ್ತದೆ. ನೆನಪು 'ಚಟೆದಾರ'ವಾಗುತ್ತದೆ. ನಿಷ್ಠೆಯು ಹಿಡಿಯುವ ಕೋಲಾಗಿರುತ್ತದೆ. ಮುಟ್ಟಿ ತಿರುಗಿಸುವುದೇ ಜೀವನವಾಗಿರುತ್ತದೆ. ಹೀಗೆ ಅವನ ಇಡೀ ಪ್ರಜ್ಞೆ ಶಿವನ ಕಡೆಗೆ ಇರುತ್ತದೆ. ಅವನ ಈ ನಿಷ್ಠೆಗೆ ಶಿವನೂ ಅವನೊಡನೆ ಕುಣಿಯತೊಡಗುತ್ತಾನೆ.

ಇಳೆಯಾಂಡ ಗುಡಿಮಾರನ ಆಧ್ಯಾತ್ಮಿಕ ಸಾಧನೆಯನ್ನೂ ಕವಿ ಇಷ್ಟೇ ಕಲಾತ್ಮಕವಾಗಿ ಕಟ್ಟಿಕೊಡುತ್ತಾನೆ. ಇಳೆಯಾಂಡ ಗುಡಿಮಾರ ಒಬ್ಬ ಸಾಮಾನ್ಯ ರೈತನಾಗಿದ್ದು ಅಧ್ಯಾತ್ಮ ಶಕ್ತಿ ಪಡೆದಿದ್ದ. ತನ್ನ ಉದ್ಯೋಗವನ್ನೇ ಅಧ್ಯಾತ್ಮದ ಹಾದಿಯನ್ನಾಗಿ ಮಾಡಿಕೊಂಡು ಅದೇ ಹಾದಿಯಲ್ಲಿ ನಡೆಯುತ್ತಾನೆ. ಆತನ ಸಮಚಿತ್ತವೇ ಉಳುವ ಭೂಮಿಯಾಗಿತ್ತು. ಶಂಕರನ ನೆನಪು ಉಳುವ ನೇಗಿಲಾಗಿತ್ತು. 'ಅರಿಷಟ್ಕ'ಗಳು ನೇಗಿಲಿಗೆ ಕಟ್ಟುವ ಎತ್ತುಗಳಾಗಿದ್ದವು. ಅತ್ತಿತ್ತ ಹರಿದಾಡುವ ಮನಸ್ಸೇ ಹಿಡಿಯುವ ಹಗ್ಗವಾಗಿತ್ತು. ಗರ್ವ ಅಹಂಕಾರಗಳೇ 'ಅಚ್ಚು'ವಾಗಿತ್ತು. 'ಸರ್ವೇಶನಿಷ್ಠೆ'ಯೆಂಬುದು ಬೀಜವಾಗಿತ್ತು. ಹರನ ಪರಮಾನಂದವೇ ಮಳೆಯಾಗಿರಲು ಇಳೆಯಾಂಡ ಗುಡಿಮಾರ ಶಿವನ ಸದ್ಭಕ್ತಿ ಸಸಿಗಳನ್ನು ಬಿತ್ತಿ ಬೆಳೆಯುತ್ತಿದ್ದ. 'ಕ್ಷುತ್ಪಿಪಾಸಾದಿ' ಕಳೆಗಳನ್ನು ಕಿತ್ತು ತೆಗೆಯುತ್ತಿದ್ದ.

ಇಂಥದ್ದೇ ಒಂದು ಆಧ್ಯಾತ್ಮಿಕ ಚಿತ್ರಣವನ್ನು 'ತಿರುಕುರುಂಪೆತೊಂಡನ ರಗಳೆ'ಯಲ್ಲೂ ಕಾಣಬಹುದು. ಭಕ್ತನಾದ ತಿರುಕುರುಂಪೆತೊಂಡನ ಕಾಯಕ ಬಟ್ಟೆ ಒಗೆಯುವುದು. ಆದರೆ ಅವನು ತನ್ನ ಕಾಯಕವನ್ನೇ ಅಧ್ಯಾತ್ಮಕ್ಕೆ ಹಾದಿಯನ್ನಾಗಿ ಮಾಡಿಕೊಂಡಿದ್ದ. ಬಟ್ಟೆ ಒಗೆಯುವ

ಕಾಯಕವನ್ನೇ ಮಾಡುತ್ತಿದ್ದರೂ ಅದು ಅವನ ಅಧ್ಯಾತ್ಮ ಸಾಧನೆಯ ಕುರುಹಾಗಿತ್ತು. ಅವನು ಒಗೆಯಲು ತೆಗೆದುಕೊಂಡು ಹೋಗುತ್ತಿದ್ದ ಬಟ್ಟೆ ಪಾಪವೆಂಬ ಮಲಿನದ್ದು. ಆ ಬಟ್ಟೆಯನ್ನು ಕಟ್ಟಿ, ಕೋಪ ಎಂಬ ಕತ್ತೆಯ ಮೇಲೆ ಹೇರುತ್ತಿದ್ದ. ಭಕ್ತಿರಸದ ಹೊಳೆಯ ತಡಿಯಲ್ಲಿ, ಧೈರ್ಯವೆಂಬ ಕಲ್ಲಿನ ಬಳಿ ಬಂದು, ತಾಪತ್ರಯಗಳಿಂದ ಚೆನ್ನಾಗಿ ಕುದಿಸಿ, ಪಾಪ ಕಳೆಯುವಂತೆ ಒಗೆಯುತ್ತಿದ್ದ. ಆಮೇಲೆ ಏಕನಿಷ್ಠೆಯಿಂದ ಆ ಬಟ್ಟೆಯನ್ನು ಹಿಂಡಿ ಏಕೋಭಾವವೆಂಬ ಬಿಸಿಲಿನಲ್ಲಿ ಒಣಗಿಸುತ್ತಿದ್ದ. ಇಲ್ಲಿ ತಿರುಕುರುಂಪೆತೊಂಡ ಬಟ್ಟೆಗಳನ್ನು ಒಗೆಯುವುದು ಹೊರಗಿನ ಕ್ರಿಯೆಯಾದರೆ, ಪ್ರಜ್ಞಾವಿಕಾಸವು ಒಳಗಿನ ಕ್ರಿಯೆಯಾಗಿದೆ.

ಹೀಗೆ, ಹರಿಹರ ತನ್ನ ಕಾವ್ಯದಲ್ಲಿ ಆಧ್ಯಾತ್ಮಿಕ ಚಿತ್ರಣವನ್ನು ತರುತ್ತಾನೆ. ಪ್ರತಿ ಚಿತ್ರಣದಲ್ಲೂ ಭಕ್ತನ ಹೊರಗಿನ ಕ್ರಿಯೆಯನ್ನೇ ಆಧ್ಯಾತ್ಮಿಕ ಕ್ರಿಯೆಯ ಸಂಕೇತವಾಗಿ ಚಿತ್ರಿಸುತ್ತಾನೆ. ಒಟ್ಟಿನಲ್ಲಿ "ಅಧ್ಯಾತ್ಮಿಯಾದವನು ಲೋಕದಲ್ಲಿಯೇ ಬದುಕಬೇಕು. ಬದುಕಿನಿಂದ ಮೇಲೇರಲೇಬೇಕು. 'ಶಿವಮರುಳ್' ಆಗಿ ಲೋಕವನ್ನು ಉಪೇಕ್ಷಿಸುವಂತಿಲ್ಲ. ಲೋಕದಲ್ಲಿದ್ದು 'ಚಿತ್ತದಾತುರತೆ'ಯಿಂದ ಬಳಲಲೂಬಾರದು,ಇಂದ್ರಿಯ ಪ್ರಲೋಭನೆಗೆ ಒಳಗಾಗಲೂಬಾರದು."[37] ಅಂತೆಯೇ ಈ ಮೂರೂ ಜನ ಶರಣರ ಬದುಕು ಇರುವುದನ್ನು ಕಾಣುತ್ತೇವೆ.

## 8.11 ಪಾತ್ರ ಮತ್ತು ಪವಾಡ

ಹರಿಹರನ ಕಥೆಗಳಲ್ಲಿ ಎದ್ದು ಕಾಣುವ ಅಂಶಗಳಲ್ಲಿ ಪವಾಡವೂ ಒಂದು. ಅಲ್ಲಿ ಪಾತ್ರಗಳಿಗೂ ಪವಾಡಗಳಿಗೂ ನಿಕಟ ಸಂಬಂಧವಿದೆ. ಅವು ಪಾತ್ರಗಳ ಯಶಸ್ಸಿನಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ಎಷ್ಟೋ ಪಾತ್ರಗಳಿಗೆ ಈ ಪವಾಡಗಳೇ ಜೀವವೂ ಆಗಿವೆ. ಇಂಥ ಪವಾಡಗಳನ್ನು ಬಳಸಿಕೊಳ್ಳುವ ಮೂಲಕ ಪಾತ್ರಗಳು, ತಾವು ಏನನ್ನು ಹೇಳಬೇಕೋ ಅದನ್ನು ಮನಮುಟ್ಟುವ ಹಾಗೆ ಹೇಳುವಲ್ಲಿ ಯಶಸ್ವಿಯಾಗುತ್ತವೆ. ಲೋಕದ ಜನರನ್ನು ನಂಬಿಸುತ್ತವೆ. ಅನ್ಯ ಧರ್ಮಗಳಿಗಿಂತ ತಮ್ಮ ಧರ್ಮ ಹೇಗೆ ಶ್ರೇಷ್ಠ ಎಂಬುದನ್ನು ಸಾಬೀತುಪಡಿಸುತ್ತವೆ. ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದು ತಮ್ಮ ಸ್ಫಟಿಕ ಸದೃಶ ಹೃದಯವನ್ನು ಎತ್ತಿಹಿಡಿಯುತ್ತವೆ. ಇಲ್ಲದಿದ್ದಲ್ಲಿ ಪಾತ್ರಗಳ ಯಶಸ್ಸು ಸಾಧ್ಯವಾಗುತ್ತಿರಲಿಲ್ಲ.

'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನು, ಸಂಬೋಳಿನಾಗಿದೇವ ಎಂಬ ಅಸ್ಪೃಶ್ಯನೊಬ್ಬನ ಕಾಲಿನಿಂದ ಹಾಲನ್ನು ಕರೆಯಿಸುವ ಪವಾಡವೊಂದು ಬರುತ್ತದೆ. ಇಲ್ಲಿ ಬಸವಣ್ಣ, ಅಸ್ಪೃಶ್ಯರು ಕೂಡ ನಮ್ಮಂತೆಯೇ ಮನುಷ್ಯರು; ಅವರನ್ನು ದೂರವಿಟ್ಟು ನೋಡುವುದು ಸಾಧುವಲ್ಲ ಎಂದು ಹೇಳಬೇಕಿದೆ. ಅದಕ್ಕಾಗಿ ಈ ಪವಾಡವನ್ನು ಆತ ಬಳಸಿಕೊಳ್ಳುತ್ತಾನೆ. ಯಾವಾಗ ಅಸ್ಪೃಶ್ಯನ ಕಾಲಿನಿಂದ ಹಾಲು ಬಂತೋ ಆವಾಗ ಬಿಜ್ಜಳ ಮತ್ತು ಇತರ ಮೇಲ್ವರ್ಗದ ಜನ, ಅಸ್ಪೃಶ್ಯರೂ ಮನುಷ್ಯರೆಂದು ಒಪ್ಪಿಕೊಳ್ಳಬೇಕಾಗುತ್ತದೆ.

'ಬಾಹೂರ ಬೊಮ್ಮಯ್ಯನ ರಗಳೆ'ಯಲ್ಲಿ, ಜೋಳದ ರಾಶಿಯಿಂದ 'ಓಂ' ಎಂದು ಹೇಳಿಸಿದ ಪವಾಡವೊಂದು ಬರುತ್ತದೆ. ಇದು ಲೋಕದ ಜನರನ್ನು ನಂಬಿಸುವುದಕ್ಕಾಗಿ ತಂದ ಪವಾಡ.

ಇಲ್ಲಿ ಬೊಮ್ಮಯ್ಯನು ಜೋಳದ ರಾಶಿಯನ್ನು ಶಂಕರಗಂಡ ಎಂದು ಕರೆಯುತ್ತಾನೆ. ಬೊಮ್ಮಯ್ಯ ಜೋಳದ ರಾಶಿಯನ್ನು ಹೀಗೆ ಕರೆದದ್ದನ್ನು ಕಂಡು ಪರಸಮಯಿಗಳು ಜೋಳದ ಹೆಸರು ಶಂಕರಗಂಡ ಎಂದು ಯಾವಾಗ ಆಯಿತು ಎಂದು ಕುಹಕಿಯಾಡುತ್ತಾರೆ. ಆಗ ಬೊಮ್ಮಯ್ಯ ಅವರನ್ನು ನಂಬಿಸುವುದಕ್ಕಾಗಿ ಜೋಳದ ರಾಶಿಯನ್ನು ಓಂ ಎನ್ನಿಸುತ್ತಾನೆ. ಆತನೇ ಇನ್ನೊಂದು ಪವಾಡದಲ್ಲಿ ಕಲ್ಲಿನ ಬಸವನಿಗೆ ಕಬ್ಬು ತಿನ್ನಿಸಿ ಪರಸಮಯಿಗಳನ್ನು ಸೋಲಿಸುತ್ತಾನೆ.

ಏಕಾಂತರಾಮಯ್ಯನ ರಗಳೆಯಲ್ಲಿ ಒಂದು ಪವಾಡ ಬರುತ್ತದೆ. ಇಲ್ಲಿ ಭಕ್ತ ಏಕಾಂತರಾಮಯ್ಯ ತನ್ನ ತಲೆಯನ್ನೇ ಕತ್ತರಿಸಿ ಒಂದು ವಾರದ ನಂತರ ಮತ್ತೆ ಜೀವ ಪಡೆಯುತ್ತಾನೆ. ಇದು ಜೈನ ಧರ್ಮಕ್ಕಿಂತಲೂ ತನ್ನ ಧರ್ಮ ಶ್ರೇಷ್ಠ ಎಂಬುದನ್ನು ಸಾಬೀತುಪಡಿಸಲು ಮಾಡಿದ ಪವಾಡವಾಗಿದೆ. ಜೈನರು ಏಕಾಂತರಾಮಯ್ಯನಿಗೆ, ತಲೆಯನ್ನು ಕತ್ತರಿಸಿಕೊಂಡು ವಾರದ ನಂತರ ಮತ್ತೆ ಜೀವ ಪಡೆಯುವ ಮೂಲಕ ಶಿವನ ಶಕ್ತಿಯನ್ನು ತೋರಬೇಕೆಂದು ಸವಾಲು ಹಾಕುತ್ತಾರೆ. ಆಗ ಏಕಾಂತರಾಮಯ್ಯ ಬ್ರಹ್ಮೇಶ್ವರ ದೇವಾಲಯದಲ್ಲಿ ತನ್ನ ತಲೆಯನ್ನು ಕತ್ತರಿಸಿಟ್ಟು, ವಾರದ ನಂತರ ಮತ್ತೆ ಆ ತಲೆಯನ್ನು ಮುಂಡಕ್ಕೆ ಜೋಡಿಸಿಕೊಂಡು ಜೀವ ಪಡೆಯುತ್ತಾನೆ. ಆ ಮೂಲಕ ಜೈನ ಧರ್ಮಕ್ಕಿಂತಲೂ ತನ್ನ ಧರ್ಮವೇ ಶ್ರೇಷ್ಠ ಎಂಬುದನ್ನು ಸಾಬೀತುಪಡಿಸುತ್ತಾನೆ. ಇಂಥ ಇನ್ನೂ ಹಲವು ಪವಾಡಗಳು ಹರಿಹರನ ಬೇರೆ ಬೇರೆ ಕಥೆಗಳಲ್ಲಿ ಬರುತ್ತವೆ. ಶಂಕರದಾಸಿಮಯ್ಯನ ರಗಳೆಯಲ್ಲಿ ಶಂಕರದಾಸಿಮಯ್ಯನು ತನ್ನ ಹಣೆಗಣ್ಣಿನಿಂದ ನರಸಿಂಹ ವಿಗ್ರಹವನ್ನು ಸುಟ್ಟು ಉರುಹಿದ್ದು, ಮೈಲಾರದೇವನ ಮಹಿಮೆಯನ್ನು ತಗ್ಗಿಸಿದ ಪವಾಡಗಳೂ ಇದೇ ಉದ್ದೇಶದಿಂದ ಬಂದಿವೆ. ಕೋವೂರ ಬೊಮ್ಮಯ್ಯನು ಹೇರಾಲದ ಮರವನ್ನು ಸುಟ್ಟು ಭಸ್ಮ ಮಾಡಿ ಮತ್ತೆ ಚಿಗುರುವಂತೆ ಮಾಡಿದ ಪವಾಡದಲ್ಲೂ ಹರಿಹರನಿಗೆ ತನ್ನ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ಉದ್ದೇಶವಿದೆ.

ಶರಣರ ಸ್ಫಟಿಕಸದೃಶ ಹೃದಯವನ್ನು ಎತ್ತಿಹಿಡಿಯುವುದಕ್ಕಾಗಿಯೇ ಅನೇಕ ಪವಾಡಗಳು ಸೃಷ್ಟಿಯಾಗಿವೆ. ಒಮ್ಮೆ ಭಂಡಾರಿಯಾದ ಬಸವಣ್ಣನ ಮೇಲೆ ರಾಜ್ಯದ ಬೊಕ್ಕಸದಲ್ಲಿದ್ದ ಹಣವನ್ನು ದುರುಪಯೋಗಪಡಿಸಿಕೊಂಡ ಅಪವಾದ ಬರುತ್ತದೆ. ಆವಾಗ, ಬಿಜ್ಜಳ ಮತ್ತು ಅವನ ಆಸ್ಥಾನಿಕರ ಸಮ್ಮುಖದಲ್ಲಿ ರಾಜ್ಯಾದಾಯದ ಲೆಕ್ಕಪತ್ರವನ್ನಿಡುತ್ತಾನೆ. ಅಲ್ಲಿ ರಾಜ್ಯದ ಆದಾಯ ಕೋಟಿ ಕೋಟಿಗಳಷ್ಟು ಅಧಿಕವಾಗಿರುವುದು ಬಿಜ್ಜಳನಿಗೆ ತಿಳಿಯುತ್ತದೆ. ಬಿಜ್ಜಳ ಬಸವಣ್ಣನಲ್ಲಿ ಕ್ಷಮೆ ಯಾಚಿಸುತ್ತಾನೆ. ಆ ಮೂಲಕ ಬಸವ ತನ್ನ ಸ್ಫಟಿಕ ಸದೃಶ ಹೃದಯವನ್ನು ಎತ್ತಿಹಿಡಿಯುತ್ತಾನೆ.

ಆಧ್ಯಾತ್ಮಿಕ ಎತ್ತರವನ್ನು ಪ್ರಕಟಿಸಬೇಕಾದಂಥ ಸಂದರ್ಭದಲ್ಲೂ ಅನೇಕ ಪವಾಡಗಳು ಬರುತ್ತವೆ. ಉದಾ : 'ಬಸವರಾಜದೇವರ ರಗಳೆ'ಯಲ್ಲಿ ಶರಣರೊಡನೆ ಬಸವನ ಜೀವ ನಡೆಯುವ ಪವಾಡ; 'ರೇವಣಸಿದ್ಧನ ರಗಳೆ'ಯಲ್ಲಿ ಚೋಳರಾಜನ ಮಗಳ ಬಸುರಿಳಿಸುವ ಪವಾಡ; 'ಕೋವೂರ ಬೊಮ್ಮಯ್ಯನ ರಗಳೆ'ಯಲ್ಲಿ ಸತ್ತ ಕುಮಾರನನ್ನು 'ಏಳಯ್ಯ ಏಳ್ಕುಮಾರ' ಎಂದು ಏಳಿಸುವ ಪವಾಡ; 'ಕೆಂಭಾವಿ ಭೋಗಣ್ಣನ ರಗಳೆ'ಯಲ್ಲಿ ಬರುವ, ಲಿಂಗಗಳು

ಭೋಗಣ್ಣನ ಹಿಂದೆ ಹೋಗುವ ಪವಾಡ: 'ಕಾರಿಕಾಲಮ್ಮೆಯ ರಗಳೆ'ಯಲ್ಲಿ ಕಾರಿಕಾಲಮ್ಮೆ ಶರಣಾಗಿಟ್ಟ ಪೃಥ್ವಿಯ ಮೇಲೆ ತಲೆ ಇಟ್ಟು ತಲೆಕೆಳಗಾಗಿ ನಡೆಯುವ ಪವಾಡ: 'ಸಂಬಿಯಣ್ಣನ ರಗಳೆ'ಯಲ್ಲಿ ಬಾಲಕ ಸಂಬಿಯಣ್ಣನನ್ನು ಕಂಡು ಮದ್ದಾನೆಯು ಹೆದರಿ ಓಡಿದ ಪವಾಡ - ಹೀಗೆ ವೈವಿಧ್ಯಮಯವಾದ ಪವಾಡಗಳು ಬರುತ್ತವೆ. ಇವು ಆ ಪಾತ್ರಗಳ ಆಧ್ಯಾತ್ಮಿಕ ಶಕ್ತಿಯನ್ನು ಉಜ್ವಲವಾಗಿ ಬೆಳಗುತ್ತವೆ.

## 8.12 ಪಾತ್ರ ಮತ್ತು ಧರ್ಮ

ಕಾವ್ಯದ ಉದ್ದೇಶವೇ ಧರ್ಮದ ಉದ್ದೇಶವೂ ಆದಾಗ, ಸಾಹಿತ್ಯ ಎನ್ನುವುದು ಧರ್ಮಪ್ರಸಾರದ ಮಾಧ್ಯಮವಾಯಿತು. ಜೈನ, ವೀರಶೈವ, ವೈಷ್ಣವ ಈ ಮೂರೂ ಪಂಥದ ಕವಿಗಳು ಈ ಉದ್ದೇಶದಿಂದ ತಮ್ಮ ಕೃತಿಗಳನ್ನು ಬರೆದಿದ್ದಾರೆ. ಯಾವ ಕವಿಯೂ ತಾನು ಒಪ್ಪಿಕೊಂಡ ಧರ್ಮವನ್ನು ತನ್ನ ಕೃತಿಯಲ್ಲಿ ಉಲ್ಲೇಖಿಸದೆ ಬಿಟ್ಟಿಲ್ಲ. ಹಾಗೆಯೇ ಆಯಾ ಧರ್ಮಗಳ ಪರವಾದ ಧೋರಣೆಯಿಂದ ಹೊರತಾಗಿರಲು ಸಾಧ್ಯವಾಗಿಲ್ಲ. ಆಯಾ ಕವಿಗಳು ಅಂದಂದಿನ ಧರ್ಮಗಳಿಗೆ ಬದ್ಧರಾಗಿದ್ದಾರೆ. ಅಂತೆಯೇ ಹರಿಹರನೂ ತಾನು ಒಪ್ಪಿಕೊಂಡ ಧರ್ಮಕ್ಕೆ ಬದ್ಧವಾಗಿ ಕಾವ್ಯರಚಿಸಿದ್ದಾನೆ. ಕಾವ್ಯದ ಉದ್ದಕ್ಕೂ ಆ ಧರ್ಮದ ಮಹತ್ವವನ್ನು ಎತ್ತಿಹಿಡಿಯುವ ಕಾರ್ಯ ನಿರ್ವಹಿಸಿದ್ದಾನೆ. ಅನ್ಯ ಧರ್ಮಗಳನ್ನು ಖಂಡಿಸಿ ತನ್ನ ಧರ್ಮವನ್ನು ಎತ್ತಿಹಿಡಿಯುವ ಕೆಲಸ ಮಾಡಿದ್ದಾನೆ. ಆ ಕ್ರಿಯೆಗೆ ಅವನು ಸೃಷ್ಟಿಸಿರುವ ಪಾತ್ರಗಳು ಒಪ್ಪುವಂತಿವೆ. ಅವು ತಮ್ಮ ಅಂತರಂಗದ ಸಾಧನೆಯಿಂದ ವೀರಾವೇಶದಿಂದ ಹೋರಾಡಿ ಧರ್ಮರಕ್ಷಣೆ ಮಾಡುತ್ತವೆ.

'ಮಾಱುಡಿಗೆಯ ನಾಚಿತಂದೆ' ಒಬ್ಬ ಮಹಾಶಿವಭಕ್ತ. ಒಮ್ಮೆ ಶಿವನು ಅವನ ಕನಸಿನಲ್ಲಿ ಬಂದು, ಎನ್ನಣುಗ ನಾಚಯ್ಯ ನನ್ನ ಭಕ್ತನೊಬ್ಬನನ್ನು ಮಾರುಡಿಗೆಯ ಜೈನರು ನಡೆಬಡಿದರು; 'ಭಕ್ತಕಾಯ ಮಮ ಕಾಯ' ಎಂಬ ಬಿರುದು ನನಗಿಲ್ಲವೆ? ಆದ್ದರಿಂದ ಭಕ್ತನಿಗೆ ಬಿದ್ದ ಪೆಟ್ಟು ನನಗೆ ಬಿದ್ದಂತೆಯೆ ಸರಿ; ಮೈಮೇಲೆ ಎದ್ದಿರುವ ಬಾಸುಳಗಳನ್ನು ನೋಡು ಎಂದು ಮೈಮೇಲಿನ ಬಾಸುಳಗಳನ್ನು ತೋರಿಸುತ್ತಾನೆ. ಆ ಸುದ್ದಿ ಮುಟ್ಟುತ್ತಿದ್ದಂತೆಯೇ ಭಕ್ತ ಮಾರುಡಿಗೆಯ ನಾಚಿತಂದೆ ವೀರಶರಣರನ್ನು ಮೇಳೈಸಿಕೊಂಡು ಜೈನರ ಮೇಲೆ ಎರಗುತ್ತಾನೆ.

> ......ಕೆಲಬರಂ ತಳ್ತಿಱಿದು ಕೆಲಬರಂ
> ಅಬ್ಬರಿಸಿ ಕೆಲಬರಂ ಬಿಡೆನೋಡಿ ಕೆಲಬರಂ
> ಬೊಬ್ಬಿಟ್ಟು ಕೆಲಬರಂ ಪಿಡಿದೊರಸಿ ಕೆಲಬರಂ
> ನಡೆನಡೆದು ತಱಿತಱಿದು ಬಿದಿವೆಳೆದು ಮಿದೆಯೊಟ್ಟಿ
> ಕಡುಮುಳಿದು ಸೆಳೆದೊಕ್ಕಲಿಕ್ಕಿ ನೆಱೆ ಹುಡಿಗುಟ್ಟಿ
> ಸವಣಪಡೆಯೆಲ್ಲವಂ ನಿವಳಿವಟ್ಟಂ ಮಾಡಿ [38]

ಹೀಗೆ ಇಡೀ ಜೈನ ಕುಲವನ್ನು ನಾಶಮಾಡುತ್ತಾನೆ. ಮಾರುಡಿಗೆಯಲ್ಲಿರುವ ಜೈನ ಬಸದಿಗಳನ್ನೆಲ್ಲ ಒಡೆದು ಪುಡಿಗುಟ್ಟಿ, ಅಲ್ಲಲ್ಲಿ ಲಿಂಗ ಪ್ರತಿಷ್ಠೆ ಮಾಡುತ್ತಾನೆ.

ಜೈನರನ್ನು ಸದೆಬಡಿಯುವ ಸನ್ನಿವೇಶ 'ಆದಯ್ಯನ ರಗಳೆ'ಯಲ್ಲೂ ಬರುತ್ತದೆ. ಆದಯ್ಯ ಶಿವಭಕ್ತರಿಗಾಗಿ ಊಟ ತಯಾರಿಸಿರುತ್ತಾನೆ. ಆ ಊಟವನ್ನು ಪದ್ಮಾವತಿಯ ತಂದೆ ಪಾರಿಷಪಂಡಿತ ಆದಯ್ಯನನ್ನು ಕೇಳದೇ ತೆಗೆದುಕೊಂಡು ಹೋಗುತ್ತಾನೆ. ಇದರಿಂದ ಆದಯ್ಯ ದಿನವೊಂದು ಉಪವಾಸ ಹೂಡುತ್ತಾನೆ. ಆ ಸಂದರ್ಭದಲ್ಲಿ ಪಾರಿಷಪಂಡಿತ "ಇಂತಪ್ಪ ಛಲಿಯೆಂತಾದಡಂ ತಾನರ್ಚಿಪ ಸೋಮನಾಥನಂ ಸುರಹೊನ್ನೆಯ ಬಸದಿಗೆ ತಂದಲ್ಲದುಂಬ"[39] ಎಂದು ಅಣಕವಾಡುತ್ತಾನೆ. ಆಗ ಸಿಡಿದೆದ್ದ ಆದಯ್ಯ ಇಪ್ಪತ್ತೆಂಟು ದಿನದಲ್ಲಿ ಸೋಮನಾಥನನ್ನು ತರುವ ಪ್ರತಿಜ್ಞೆ ಮಾಡುತ್ತಾನೆ. ಅದರಂತೆ ಇಪ್ಪತ್ತೆಂಟು ದಿನದಲ್ಲಿ ಸೋಮನಾಥನನ್ನು ಪ್ರತಿಷ್ಠಾಪಿಸುತ್ತಾನೆ. ಪ್ರತಿಷ್ಠಾಪನೆಯಾಗುತ್ತಿದ್ದಂತೆಯೇ ಜೈನರಿಗೂ ಆದಯ್ಯನಿಗೂ ಕದನವೇರ್ಪಡುತ್ತದೆ. ಅಲ್ಲಿ -

ಕೆಡೆ ಕೆಡೆ ಕೆಟ್ಟು ಶಿವದ್ರೋಹಿಗಳಿರ
ಫಡ ಫಡ ಪಟ್ಟ ಪಸಿಯ ಪಾತಕರಿರ
ಎನುತಿರಲೊಂದು ಸಹಸ್ರಂ ಸತ್ತುದು
ಮುನಿದಿರಲಿಚ್ಛಾ ಶಿರ -------------
ಪಾತಕರಂ ಕೊಲುತಿರೆ ಕಡು ಭರದಿಂ[40]

ಈ ರೀತಿಯಲ್ಲಿ ಆದಯ್ಯ ಛಲದಿಂದ ಹೋರಾಡಿ ಜೈನ ಕುಲವನ್ನು ನಾಶಮಾಡುತ್ತಾನೆ.

'ಶಂಕರ ದಾಸಿಮಯ್ಯನ ರಗಳೆ'ಯಲ್ಲೂ ಶೈವ ಧರ್ಮವನ್ನು ಎತ್ತಿಹಿಡಿಯುವ ಸನ್ನಿವೇಶ ಬರುತ್ತದೆ. ಅಲ್ಲಿ ಶಂಕರ ದಾಸಿಮಯ್ಯನು ಅರಸ ಜಯಸಿಂಹರಾಯನ ಮಾತಿಗೆ ಕ್ರೋಧಗೊಂಡು, ತನ್ನ ಹಣೆಗಣ್ಣಿನಿಂದ ನರಸಿಂಹ ಪ್ರತಿಮೆಯನ್ನು ಸುಟ್ಟು ಉರುಹುತ್ತಾನೆ. ಶಂಕರದಾಸಿಮಯ್ಯನ ಮಹಿಮೆಗೆ ಜಯಸಿಂಹರಾಯ ಮತ್ತು ಇತರ ವೈಷ್ಣವರು ತಲೆಬಾಗುತ್ತಾರೆ. ಈ ಘಟನೆ ಶಿವನ ಗೆಲುವಿನ ಸಂಕೇತವಾಗಿದೆ. ಇಂಥದ್ದೇ ಇನ್ನೊಂದು ಸನ್ನಿವೇಶ 'ರೇವಣ ಸಿದ್ಧೇಶ್ವರನ ರಗಳೆ'ಯಲ್ಲಿ ಬರುತ್ತದೆ. ಅಲ್ಲಿ ರೇವಣಸಿದ್ಧೇಶ್ವರ ಚೋಳ ಅರಸನ ಮಾತಿನಂತೆ ವಿಷ್ಣು ಪ್ರತಿಮೆಯನ್ನು ಮಾತನಾಡಿಸಿ ಶಿವನ ಮಹಿಮೆಯನ್ನು ಪ್ರದರ್ಶಿಸುತ್ತಾನೆ.

'ತೆಲುಗು ಜೊಮ್ಮಯ್ಯನ ರಗಳೆ'ಯಲ್ಲಿಯೂ ಶಿವ ಮಹಿಮೆಯನ್ನು ಸಾರುವ ಒಂದು ಪ್ರಸಂಗವಿದೆ. ಒಮ್ಮೆ ಅರಸ ಪೆರ್ಮಾಡಿರಾಯ ವಿಷ್ಣು ಪೂಜೆಯಲ್ಲಿ ನಿರತನಾಗಿರುವಾಗ, ಹೊರಗೆ ಇದ್ದ ಪುರಾಣ ಭಟ್ಟ, ವೈಷ್ಣವ ಪುರಾಣವನ್ನು ಓದುತ್ತಾ ಪಂಚಮುಖ ನಿಂದೆಯನ್ನು ಮಾಡುತ್ತಿರುತ್ತಾನೆ. ಜೊಮ್ಮಯ್ಯ ಪುರಾಣ ಭಟ್ಟನ ಪಂಚಮುಖ ನಿಂದೆಯನ್ನು ಕೇಳುತ್ತಿದ್ದಂತೆಯೇ ಅವನನ್ನು ಇರಿದು ಕೊಲ್ಲುತ್ತಾನೆ. ಇದು ಅರಸ ಪೆರ್ಮಾಡಿರಾಯನಿಗೆ ತಿಳಿಯಲು ಅವನು ಜೊಮ್ಮಣ್ಣನನ್ನು ಕರೆಯಿಸಿ, ಪುರಾಣ ಭಟ್ಟನು ಹುಸಿ ನುಡಿದಿದ್ದಾನೆ ಎಂಬುದಕ್ಕೆ ಪ್ರತ್ಯಕ್ಷ ಪ್ರಮಾಣವನ್ನು ತೋರುವಂತೆ ಕೇಳುತ್ತಾನೆ. ಆಗ ಜೊಮ್ಮಯ್ಯ ಪುರಾಣ ಭಟ್ಟ ಹುಸಿ ನುಡಿದಿದ್ದೇ ಆದರೆ ಅವನ ಹೆಣ ಹುಳುವಿನ ರಾಶಿಯಾಗಿರುತ್ತದೆ, ಇಲ್ಲದಿದ್ದರೆ

ನನ್ನನ್ನೇ ಶಿಕ್ಷಿಸುವುದು' ಎಂದು ಹೇಳಿ ಹೆಣದ ಹತ್ತಿರ ಬಂದು "ದ್ರೋಹಕನ ಹೆಣನಂ ಕಾಣಲಾಗದೆಂಬಂತೆ ಛೋಂಕನೆ ಪಟ್ಟೆಡದಿಂ ಮುಚ್ಚಿ ಮುಂಕಣಿಸಿ"[41] ತೆಗೆಯುತ್ತಾನೆ. ಹಾಗೆ ತೆಗೆಯುತ್ತಿದ್ದಂತೆಯೇ ಪುರಾಣ ಭಟ್ಟನ ದೇಹ ಹುಳುವಿನ ರಾಶಿಯಾಗಿ ಹುಳುಗಳು ಮಿಲಮಿಲನೆ ಒದ್ದಾಡುತ್ತಿರುತ್ತವೆ. ಆಗ ಪೆರ್ಮಾಡಿರಾಯ ಜೊಮ್ಮಣ್ಣನ ಬಳಿ ಬಂದು ಕ್ಷಮೆ ಯಾಚಿಸುತ್ತಾನೆ.

ಇಲ್ಲಿಯವರೆಗೆ ಚರ್ಚೆ ಮಾಡಿರುವ ರಗಳೆಗಳಲ್ಲಿ ಸಂಘರ್ಷದ ಮೂಲಕ ಪಾತ್ರಗಳು ಧರ್ಮ ಪ್ರತಿಪಾದನೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಆದರೆ ಮತ್ತೆ ಕೆಲವು ರಗಳೆಗಳಲ್ಲಿ ಯಾವ ಸಂಘರ್ಷವೂ ಇಲ್ಲದೆ ಪಾತ್ರಗಳು ತಮ್ಮ ಧರ್ಮದ ಶ್ರೇಷ್ಠತೆಯನ್ನು ಪ್ರತಿಪಾದಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಧರ್ಮ ಪ್ರತಿಪಾದನೆ ಪಾತ್ರಗಳ ಮಧ್ಯೆ ಅಥವಾ ಒಟ್ಟು ರಚನೆಯಲ್ಲಿ ಸೇರಿಕೊಂಡಿರುತ್ತದೆ.

'ಬಸವರಾಜದೇವರ ರಗಳೆ'ಯ ಕೊನೆಯಲ್ಲಿ ಬಸವಣ್ಣನವರನ್ನು ಕೈಲಾಸಕ್ಕೆ ಕರೆದೊಯ್ಯಲು ಪುಷ್ಪಕ ವಿಮಾನ ಬಂದಿಳಿಯುತ್ತದೆ. ಆಗ ಸಂಗನು ಜಂಗಮಾಕಾರದಿಂದ ಬಂದು -

> ನಡೆಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ
> ಪೊಡವಿಯೊಳಗಿರವು ಸಾಲ್ಗುದು ಬಾ ಮಗನೆ ನಿನಗೆ
> ಎನೆಕೇಳ್ದು ನಸುನಗುತೆ ನುಡಿದನಾ ಸಂಗಂಗೆ
> ಮನಸಿಜಹರಂಗೆ ಗಿರೀಶಂಗೆ ಗಿರಿಜೇಶಂಗೆ
> ಶರಣರೊಕ್ಕುದಜ ಸವಿ ಕೈಲಾಸದೊಳಗುಂಟೆ
> ಶರಣ ಸಂಗದ ಸುಖಂ ಕೈಲಾಸದೊಳಗುಂಟೆ[42]

ಎಂದು ಹೇಳುತ್ತಾನೆ. ಇಲ್ಲಿ ಹರಿಹರ ಬಸವನ ಪಾತ್ರದ ಮೂಲಕ ವೀರಶೈವ ಧರ್ಮದ ಭಕ್ತರ ತಾತ್ವಿಕ ನಿಲುವನ್ನು ಗುರುತಿಸುತ್ತಾನೆ.

ವೀರಶೈವ ಶರಣರಲ್ಲಿ ಇಷ್ಟಲಿಂಗಪೂಜೆಗೆ ಮಹತ್ವವಿದೆ. ಈ ಮಹತ್ವ ಹರಿಹರನ 'ಪ್ರಭುದೇವರ ರಗಳೆ' 'ಕೊಂಡುಗುಳಿ ಕೇಶಿರಾಜನ ರಗಳೆ'ಯಲ್ಲಿ ವ್ಯಕ್ತವಾಗಿದೆ. 'ಅಂಗೈಯೊಳಗಮೃತಫಳಂ ಪಡೆದನಲ್ಲಮಂ' ಎಂದು ಹೇಳುವ ಮೂಲಕ ಕವಿ, ಪ್ರಭುದೇವರ ರಗಳೆಯಲ್ಲಿ ಇಷ್ಟಲಿಂಗ ಪೂಜೆಯ ಪ್ರಸ್ತಾಪ ಮಾಡುತ್ತಾನೆ. ಕೊಂಡಗುಳಿ ಕೇಶಿರಾಜ ನಿತ್ಯವೂ ಸೋಮನಾಥನನ್ನು ಪೂಜಿಸುತ್ತಾನೆ. "ಒಮ್ಮೆ ಆ ಶರಣನ ಲಿಂಗ ಹೊಳೆಯಲ್ಲಿ ಬಿದ್ದಾಗ ಪ್ರಾಣತ್ಯಾಗ ಮಾಡಲು ನಿಶ್ಚಯಿಸುವನು. ಶಿವನಾಮುಗಳಲ್ಲಿ ಭಕ್ತನು ಲಿಂಗವಿರಹಿತನಾಗಿ ಇರಕೂಡದೆಂದು ಹೇಳಿದೆ. ಇದು ವೀರಶೈವ ಮಾಹೇಶ್ವರ ನಿಷ್ಠೆಗಳಲ್ಲಿ ಒಂದು. ಕೇಶಿರಾಜನಿಗೆ ಇಷ್ಟಲಿಂಗ ದೊರಕಿದಾಗ 'ಶರಣಸತಿ ಲಿಂಗಪತಿಯು ನಿಬ್ಬಣದ ಸಂಭ್ರಮವಾಯಿತೆಂದು' ಕವಿ ಹರಿಹರದೇವ ಹೇಳುತ್ತಾನೆ."[43] ವೀರಶೈವ ಶರಣರಲ್ಲಿ ಗುರು- ಲಿಂಗ-ಜಂಗಮ-ಪಾದೋದಕ ಮತ್ತು ಪ್ರಸಾದಗಳಿಗೆ ಹೆಚ್ಚು ಮಹತ್ವವಿದೆ. ಅವರಲ್ಲೂ ಲಿಂಗ-ಜಂಗಮಗಳು ಒಂದೆಂಬುದು

ವೀರಶೈವ ತತ್ತ್ವ. ಈ ತತ್ತ್ವ ಕಂಭಾಪಿ ಭೋಗಣ್ಣನ ರಗಳೆ ಮತ್ತು ಬಸವರಾಜದೇವರ ರಗಳೆಯಲ್ಲಿ ಪ್ರಕಟವಾಗಿದೆ. (ನೋಡಿ : ಪುಟ 205)

ಇವುಗಳ ಜೊತೆಗೆ ಗುರುಕಾರುಣ್ಯ ಪಡೆದು ಇಷ್ಟಲಿಂಗಧಾರಿಗಳಾಗಿ ಲಿಂಗಾಂಗ ಸಾಮರಸ್ಯವನ್ನು ಪಡೆದ ವೀರಶೈವ ಶರಣರ ಚಿತ್ರಗಳೂ ಕಥೆಗಳಲ್ಲಿ ಕಂಡುಬರುತ್ತವೆ.

ಹೀಗೆ ಹರಿಹರ ಕವಿಯ ಕಥೆಗಳ ಪಾತ್ರಗಳು ಕಥೆಗಳಲ್ಲಿ, ಕೆಲವೊಮ್ಮೆ ನೇರವಾಗಿ ಧರ್ಮದ ಮಹತ್ವವನ್ನು ಪ್ರತಿಪಾದಿಸಿದರೆ, ಮತ್ತೆ ಕೆಲವೊಮ್ಮೆ ಪರೋಕ್ಷವಾಗಿ ಧರ್ಮದ ಪ್ರತಿಪಾದನೆ ಮಾಡುವುದನ್ನು ಕಾಣುತ್ತೇವೆ.

## 8.13 ಸ್ತ್ರೀ ಪಾತ್ರಗಳ ವೈಶಿಷ್ಟ್ಯ

ಕನ್ನಡ ಸಾಹಿತ್ಯದಲ್ಲಿ ಹರಿಹರನ ಹೆಸರು ಚಿರಸ್ಥಾಯಿಯಾಗಿ ಉಳಿಯಲು ಕಾರಣವಾದ ಅಂಶಗಳಲ್ಲಿ, ಸ್ತ್ರೀ ವರ್ಗದ ಬಗ್ಗೆ ಅವನು ತಾಳಿದ ಅತ್ಯಂತ ಗೌರವ ಭಾವನೆಯೂ ಒಂದು. ಆತ ತನ್ನ ಕಾವ್ಯದಲ್ಲಿ ಸ್ತ್ರೀಯರಿಗೆ ವಿಶೇಷ ಮನ್ನಣೆ ನೀಡಿದ್ದಾನೆ. ಹಲವು ಬಗೆಯ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿ ಪರಂಪರಾಗತವಾಗಿ ಬೆಳೆದುಕೊಂಡು ಬಂದಿದ್ದ, ಸ್ತ್ರೀಯರ ಮೇಲಿನ ಅಪವಾದಗಳ ಬಗೆಗೆ ಅರಿವು ಮೂಡಿಸಿ ಕಳಂಕವನ್ನು ತೊಡೆಯುವ ಪ್ರಯತ್ನ ಮಾಡಿದ್ದಾನೆ. ಆ ದಿಸೆಯಲ್ಲಿ ತನ್ನ ಕಾವ್ಯದಲ್ಲಿ ವೈಶಿಷ್ಟ್ಯಪೂರ್ಣವಾದ ಹಲವು ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ್ದಾನೆ.

ಅಧ್ಯಯನದ ಅನುಕೂಲಕ್ಕಾಗಿ ಹರಿಹರನ ಸ್ತ್ರೀ ಪಾತ್ರಗಳನ್ನು ಕುಮಾರಿಯರು, ವಿರಾಗಿಣಿಯರು, ಗೃಹಿಣಿಯರು, ಪ್ರಣಯಿನಿಯರು, ಮಾತೆಯರು ಮತ್ತು ವಿಧವೆಯರು ಎಂದು ವಿಂಗಡಿಸಬಹುದು.

## 8.13.1 ಕುಮಾರಿಯರು

**ಕೋಳೂರ ಕೊಡಗೂಸು :** ಹರಿಹರ ಚಿತ್ರಿಸಿರುವ ಅತ್ಯಂತ ಚಿಕ್ಕ ವಯಸ್ಸಿನ ಕುಮಾರಿ ಎಂದರೆ ಕೋಳೂರ ಕೊಡಗೂಸು. ಇವಳದು ಅತ್ಯಂತ ಮುಗ್ಧ ಭಕ್ತಿ. ಶಿವ ಸ್ವರೂಪವನ್ನೇ ತಿಳಿಯದವಳು. ತನ್ನ ತಾಯಿ ಹಾಲನ್ನೆರೆಯುವುದನ್ನು ಕಂಡು ಶಿವನೇ ಹಾಲನ್ನು ಕುಡಿಯುತ್ತಾನೆ ಎಂದು ನಂಬಿದವಳು. ಒಮ್ಮೆ ಹಾಲನ್ನೆರೆಯುವ ಅವಕಾಶ ಅವಳಿಗೆ ಸಿಕ್ಕಲು ಶಿವನಿಗೆ ಹಾಲು ಕುಡಿಯುವಂತೆ ಕೇಳಿಕೊಳ್ಳುತ್ತಾಳೆ. ಶಿವ ಹಾಲು ಕುಡಿಯದೇ ಇದ್ದಾಗ ತನ್ನ ತೊದಲು ನುಡಿಗಳಿಂದ, ಲಲ್ಲೆ ಮಾತುಗಳಿಂದ ಶಿವನನ್ನು ಮುದ್ದಿಸುತ್ತಾಳೆ. ಆಗ ಶಿವ ಕೊಡಗೂಸಿನ ಮುಗ್ಧ ಭಕ್ತಿಗೆ ಒಲಿದು ಹಾಲು ಕುಡಿಯುತ್ತಾನೆ.

**ನಿಂಬಿಯಕ್ಕ :** ನಿಂಬಿಯಕ್ಕ ಹುಟ್ಟುತ್ತಿದ್ದಂತೆಯೇ ಬಡತನ ಆವರಿಸುತ್ತದೆ. ತಾಯಿ ಸಾಯುತ್ತಾಳೆ. ವಯಸ್ಸಾದ ತಂದೆಯನ್ನು ಸಾಕುವ ಜವಾಬ್ದಾರಿಯನ್ನು ಹೊರುತ್ತಾಳೆ. ಬದುಕಿಗಾಗಿ ಇದ್ದೂರನ್ನೂ ಬಿಟ್ಟು, ಪರವೂರಿಗೆ ನಡೆಯುತ್ತಾಳೆ, ಕೂಲಿ ಮಾಡುತ್ತಾಳೆ. ಯೌವನ ಪ್ರಾಪ್ತವಾಗಲು 'ಕಂತುವಂ ವರ್ಣಿಸದೆ ಸುಖದೊಳಿರಿಸಲೆ ತಂದೆ' ಎಂದು ಪ್ರಾರ್ಥಿಸುತ್ತಾಳೆ. ತಂದೆಯೂ ಸತ್ತಾಗ ಅಂಜದೆ ಸ್ವಾವಲಂಬಿಯಾಗಿ ದುಡಿದು ಬದುಕುತ್ತಾಳೆ.

**ಚೋಳಿಯಕ್ಕ :** ಕೋಳೂರ ಕೊಡಗೂಸಿನಂತೆ ಚೋಳಿಯಕ್ಕ ಕೂಡ ಚಿಕ್ಕಂದಿನಲ್ಲಿಯೇ ಶಿವಾರಾಧನೆಯಲ್ಲಿ ತೊಡಗಿದವಳು. ಪ್ರತಿನಿತ್ಯ ದಾಸೋಹವನ್ನು ನಡೆಸುತ್ತಿದ್ದ ಅವಳು ಶಿವನಿಗೆ ಅರ್ಪಿಸದೇ ಯಾವುದನ್ನೂ ಸ್ವೀಕರಿಸುತ್ತಿರಲಿಲ್ಲ.

## 8.13.2 ವಿರಾಗಿಣಿಯರು

**ಕಾರಿಕಾಲಮ್ಮ :** ಕಾರಿಕಾಲಮ್ಮ ಜೈನನ ಹೆಂಡತಿ. ಮಹಾ ಶಿವಭಕ್ತೆ. ಅವಳ ಭಕ್ತಿ ಯಾರಿಗೂ ಅರಿಯದಂತಿತ್ತು. ಒಮ್ಮೆ ಶಿವನ ಪರೀಕ್ಷೆಯಿಂದಾಗಿ ಅವಳ ಗುಪ್ತಭಕ್ತಿ ಗಂಡನಿಗೆ ತಿಳಿಯುತ್ತದೆ. ಆಗ ತನ್ನ ಪತ್ನಿಯ ಮಹಿಮೆಯನ್ನು ಅರಿತ ಜೈನ ಅವಳಿಂದ ದೀಕ್ಷೆಯನ್ನು ಪಡೆಯುತ್ತಾನೆ. ಪತಿಗೆ ಶಿವದೀಕ್ಷೆ ನೀಡಿ ಹೊರಡುವಾಗ, ಅವಳ ಸೌಂದರ್ಯಕ್ಕೆ ಮರುಳಾಗಿ ಹಲವರು ಹಿಂದೆ ಬರುತ್ತಾರೆ. ಆಗ ಬಾಹ್ಯ ಶರೀರವನ್ನು ಕಳಚಿ ಸೂಕ್ಷ್ಮ ಶರೀರಿಯಾಗುತ್ತಾಳೆ. ಕೈಲಾಸಕ್ಕೆ ನಡೆಯುವಾಗ ಶಿವಶರಣರು ತುಳಿದ ದಾರಿಯನ್ನು ತುಳಿಯಬಾರದೆಂದು ತಿಳಿದು ತಲೆಯಲ್ಲಿ ನಡೆಯುತ್ತಾಳೆ. ಹೀಗೆ ಅವಳು ಕಾಮನನ್ನು ದಹಿಸಿದ ವಿರಾಗಿಣಿಯಾಗಿದ್ದಾಳೆ. ಮದುವೆಯಾದರೂ ಅವಳು ವಿರಕ್ತೆಯೇ ಆಗಿದ್ದಾಳೆ.

**ಹೇರೂರ ಹೆಂಗೂಸು :** ಹೇರೂರ ಹೆಂಗೂಸು ಶಿವಭಕ್ತಿ ನಿರತಳಾದವಳು. ಯೌವನಕ್ಕೆ ಕಾಲಿಟ್ಟಂತೆ ಮನಸ್ಸಿಲ್ಲದಿದ್ದರೂ ತನ್ನ ಸೋದರತ್ತೆಯ ಮಗನೊಂದಿಗೆ ಮದುವೆಯಾಗಬೇಕಾಗುತ್ತದೆ. ಇನ್ನಾವ ಕಾರಣಕ್ಕೂ ನಾನು ಈ ಬಂಧನದಿಂದ ತಪ್ಪಿಸಿಕೊಳ್ಳಲಾರೆ ಎಂದು ಗೊತ್ತಾದಾಗ ತಾನು ಗಂಡಾಗುವಂತೆ ಶಿವನನ್ನು ಪ್ರಾರ್ಥಿಸುತ್ತಾಳೆ. ಅಂತೆಯೇ ಅವಳು ಗಂಡನ ಮನೆಗೆ ಹೋಗುವಾಗ ದಾರಿಯ ಮಧ್ಯದಲ್ಲಿ ಊಟಕ್ಕಾಗಿ ಇಳಿದು ಶಿವಾಲಯಕ್ಕೆ ಹೋಗುತ್ತಾಳೆ. ಅಲ್ಲಿ ಶಿವನನ್ನು ಪ್ರಾರ್ಥಿಸಿ ಗಂಡು ರೂಪವನ್ನು ಪಡೆದು ವೈರಾಗ್ಯ ತಾಳುತ್ತಾಳೆ. ಏನನ್ನು ಬಯಸಿದಳೋ ಅದನ್ನು ಪಡೆಯುತ್ತಾಳೆ. ಇಡೀ ಕಥೆಯ ತುಂಬ ಅವಳ ಮೌನ ರೋಧನ, ನಿಸ್ಸಹಾಯಕ ಸ್ಥಿತಿ ಹಾಗೂ ಗುಪ್ತ ಭಕ್ತಿಯನ್ನು ಕವಿ ಸುಂದರವಾಗಿ ಚಿತ್ರಿಸಿದ್ದಾನೆ.

**ಮಹಾದೇವಿಯಕ್ಕ :** ಮಹಾದೇವಿಯಕ್ಕನ ಪಾತ್ರ ಹಲವು ಬಗೆಯ ವೈಶಿಷ್ಟ್ಯಗಳಿಂದ ಕೂಡಿದೆ. ಮಹಾದೇವಿಯಕ್ಕ ಕೈಲಾಸದಿಂದ ಭೂಮಿಗೆ ಬಂದ ಅಪ್ರತಿಮ ಸುಂದರಿ. ಭವಿಯ ಸಹವಾಸವನ್ನು ಒಲ್ಲದವಳು. ಆದರೆ ಭವಿಯ ಮೋಹಕ್ಕೆ ಒಳಗಾಗಿಬಿಡುತ್ತಾಳೆ. ಮಹಾದೇವಿಯನ್ನು ಮೋಹಿಸಿದ ಅರಸ ಕೌಶಿಕ, ಅವಳ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ಬಗೆಬಗೆಯ ಪ್ರಯತ್ನ ಮಾಡುತ್ತಾನೆ. ಕೊನೆಗೂ ಆಕೆ ಒಪ್ಪುವುದಿಲ್ಲ. ಆಗ ಬಲಾತ್ಕಾರದಿಂದ ಪಡೆಯಲು ಸಿದ್ಧನಾಗುತ್ತಾನೆ. ಕೊನೆಗೆ ಮೂರು ಷರತ್ತನ್ನು ವಿಧಿಸಿ ಅಕ್ಕ ಕೌಶಿಕನನ್ನು ಮದುವೆಯಾಗುತ್ತಾಳೆ. ಆದರೆ ಆ ಮೂರೂ ಷರತ್ತನ್ನು ಕಾಮಾತುರನಾದ ಕೌಶಿಕ ಪರಿಪಾಲಿಸಲಾಗದೇ ಹೋಗುತ್ತಾನೆ. ಆಗ ಅಕ್ಕ ಕೇಶಾಂಬರೆಯಾಗಿ ಕೌಶಿಕನ ಅರಮನೆಯನ್ನು ತೊರೆಯುತ್ತಾಳೆ. ಶ್ರೀ ಗಿರಿಯ ಕಡೆಗೆ ನಡೆದು ತಾನು ಒಲಿದ ಚೆನ್ನಮಲ್ಲಿಕಾರ್ಜುನನಿಗಾಗಿ ಅರಸುತ್ತಾಳೆ. ಅಕ್ಕ ಕೌಶಿಕನೊಂದಿಗೆ ಮದುವೆಯಾದರೂ ಇದ್ದೂ ಇಲ್ಲದ ಹಾಗೆ ಅವನೊಂದಿಗೆ ಇರುತ್ತಾಳೆ. ತನ್ನ ನಿಷ್ಠೆಯನ್ನು ಮೆರೆಯುತ್ತಾಳೆ.

## 8.13.3 ಗೃಹಿಣಿಯರು

ಗೃಹಿಣಿಯರ ಸಾಲಿನಲ್ಲಿ ಪಾಂಡ್ಯ ಮಹಾದೇವಿ, ಪತಿಹಿತವೆ, ಗಂಗಾಂಬೆ, ಮಾಯಿದೇವಿ, ಮುತ್ತೈದೆ ಮುಂತಾದವರು ಬರುತ್ತಾರೆ. ಇವರೆಲ್ಲ ತಮ್ಮ ಗಂಡಂದಿರ ಬದುಕಿನ ಆಗುಹೋಗುಗಳ ಜೊತೆ, ತಮ್ಮ ಬದುಕನ್ನು ಅತ್ಯಂತ ಪ್ರೀತಿಯಿಂದ ಹಂಚಿಕೊಂಡು ಬದುಕುವುದನ್ನು ಕಾಣುತ್ತೇವೆ.

**ಪಾಂಡ್ಯ ಮಹಾದೇವಿ :** ಇವಳು ಪಾಂಡ್ಯ ನೃಪನ ಹೆಂಡತಿ. ತನ್ನ ಅನುಪಮ ಶಿವಭಕ್ತಿಯಿಂದಾಗಿ ಇವಳು ಜೈನನಾದ ತನ್ನ ಗಂಡನನ್ನು ಶಿವಧರ್ಮಕ್ಕೆ ಜಾಣ್ಮೆಯಿಂದ ಪರಿವರ್ತಿಸುತ್ತಾಳೆ. ಇಲ್ಲಿ ಪಾಂಡ್ಯ ಮಹಾದೇವಿಯ ಜಾಣ್ಮೆ, ದಾನಗುಣ, ಶಿವಭಕ್ತಿ ಹಾಗೂ ಪತಿಭಕ್ತಿಯನ್ನು ಕವಿ ಸುಂದರವಾಗಿ ಚಿತ್ರಿಸಿದ್ದಾನೆ.

**ಪತಿಹಿತವೆ :** ಇವಳು ಮಹಾಭಕ್ತ ಇಹಃಪ್ಪಗೆಯಾಂಡನ ಪತ್ನಿ. ಇಹಃಪ್ಪಗೆಯಾಂಡನಿಗೆ ಹಲವು ಅರಸಿಯರಿದ್ದರೂ ಅವನ್ನು ಲೆಕ್ಕಿಸದೆ ಗಂಡನೊಡನೆ ಆತ್ಮೀಯವಾಗಿಯೇ ಇದ್ದವಳು. ಗಂಡನ ಆಗುಹೋಗುಗಳ ಜೊತೆ ತನ್ನ ಬದುಕನ್ನು ಹಂಚಿಕೊಂಡವಳು. ಒಮ್ಮೆ ವಿಟವೇಷದಲ್ಲಿ ಬಂದ ಶಿವನು ಪತಿಹಿತವೆಯನ್ನು ಬಯಸಲು, ಇಹಃಪ್ಪಗೆಯಾಂಡ ಪತಿಹಿತವೆಯನ್ನು ಅವನೊಂದಿಗೆ ಕಳುಹಿಸಿಕೊಡುತ್ತಾನೆ. ಆಗಲೂ ಸಹ ಪತಿಹಿತವೆ ಗಂಡನ ಆಜ್ಞೆಯನ್ನು ಮರು ಮಾತನಾಡದೆ ಪಾಲಿಸುತ್ತಾಳೆ. ಮದುವೆಯಾದ ಮೇಲೆ ಗಂಡನಿಗಿಂತ ಬಂಧುಗಳನ್ನು ಹೆಚ್ಚಾಗಿ ಕಾಣಲಿಲ್ಲ. ಶಿವಭಕ್ತಿ ಮತ್ತು ಪತಿಭಕ್ತಿಯ ಮುಂದೆ ವಂಶದ ಕೇಡು, ಲೋಕಾಪವಾದ, ಕುಲಾಚಾರ ..... ಇವುಗಳನ್ನು ಪರಿಗಣಿಸದೆ ಬಾಳುತ್ತಾಳೆ.

**ಗಂಗಾದೇವಿ ಮತ್ತು ಮಾಯಿದೇವಿಯರು :** ಇವರಿಬ್ಬರೂ ಮಹಾಭಕ್ತ ಬಸವಣ್ಣನವರ ನೆಚ್ಚಿನ ಪತ್ನಿಯರು, ಎರಡು ಕಣ್ಣುಗಳಂತೆ ಇದ್ದವರು. ಬಸವಣ್ಣನ ಎಲ್ಲ ಕಾರ್ಯಗಳ ಜೊತೆ ತಮ್ಮ ಬದುಕನ್ನು ಹಂಚಿಕೊಂಡವರು. ಒಮ್ಮೆ ಶಿವ ವಿಟವೇಷದಲ್ಲಿ ಬಂದು ಮಾಯಿದೇವಿಯನ್ನು ಬಯಸಿದಾಗ ಬಸವಣ್ಣ, ಅವಳನ್ನು ಸಂತೋಷದಿಂದ ಅರ್ಪಿಸುತ್ತಾನೆ. ಆಗ ಮಾಯಿದೇವಿ ಅಷ್ಟೇ ಸಂತೋಷದಿಂದ ವಿಟವೇಷದ ಜಂಗಮನ ಹಿಂದೆ ನಡೆಯುತ್ತಾಳೆ. ಇದು ಅವಳ ಪತಿಭಕ್ತಿಯ ಕುರುಹು. ಗಂಗಾದೇವಿ, ಮಾಯಿದೇವಿಯರು ಸವತಿಯರಾಗಿದ್ದರೂ ಅವರು ಎಂದೂ ಸವತಿಯರಂತೆ ಬದುಕದೇ ಇದ್ದುದು ಅವರ ಬದುಕಿನ ಹೆಮ್ಮೆಗೆ ಸಾಕ್ಷಿ.

**ಮುತ್ತೈದೆ :** ಇವಳು ಶಿವಭಕ್ತ ತಿರುನೀಲಕಂಠನ ಹೆಂಡತಿ. ಹೆಸರಿಗೆ ತಕ್ಕಂತೆ ಅವಳ ವ್ಯಕ್ತಿತ್ವ ಕೂಡ. ಯಾವುದೋ ಕಾರಣಕ್ಕೆ ಗಂಡ ಹೆಂಡತಿಯರ ನಡುವೆ ವಿರಸ ಪ್ರಾರಂಭವಾಗುತ್ತದೆ. ತನ್ನ ಗಂಡ ವೇಶ್ಯೆಯ ಮನೆಗೆ ಹೋಗಿ ಬಂದಿದ್ದಾನೆಂದು ಒಳಗೊಳಗೇ ಅವಳು ವ್ಯಥೆ ಪಡುತ್ತಾಳೆ. ಅವಳ ಮಾತು ಮಿತ, ಆದರೆ ಹಿತ. ಇಡೀ ಕಾವ್ಯದುದ್ದಕ್ಕೂ 'ಮುಟ್ಟಿದರೆ ಶಿವನಾಣೆ' ಎಂಬೊಂದೇ ಮಾತು ಅವಳಾಡಿದ್ದು. ಮಾತಾಡದಿದ್ದರೂ ಅವಳ ವ್ಯಕ್ತಿತ್ವ ಕಾವ್ಯದಲ್ಲಿ ತುಂಬಿಕೊಂಡಿದೆ. ಅವಳು ಕೋಮಲೆ, ಸೂಕ್ಷ್ಮ ಪ್ರಕೃತಿಯವಳು, ಭಾವಪರವಶಳು, ಗಂಡನ ಗುಣ-ಸ್ವಭಾವ ಅರಿತವಳು, ಎಲ್ಲ ರೀತಿಯಿಂದಲೂ ಗಂಡನ ತತ್ವಕ್ಕೆ ಅನುಕೂಲಳಾಗಿ ಬಾಳಿದವಳು.

**ಹಿರಿಯ ಲಕ್ಕಾದೇವಿ - ಚಿಕ್ಕ ಲಕ್ಕಾದೇವಿ :** ಈ ಇಬ್ಬರ ಪಾತ್ರ ಅತ್ಯಂತ ಚಿಕ್ಕದು. ಕಾವ್ಯದ ಯಾವುದೋ ಒಂದು ಮೂಲೆಯಲ್ಲಿ ಸೇರಿಕೊಂಡಿದೆ. ಆದರೆ ಅಷ್ಟರಲ್ಲೇ ಕವಿ ಹಿರಿದಾದ ಗುಣವನ್ನು ಸೆರೆಹಿಡಿದಿದ್ದಾನೆ. ಇವೆರಡೂ ಪಾತ್ರಗಳು ಭಿನ್ನ ಸ್ವರೂಪವುಳ್ಳವು. ಒಮ್ಮೆ ರೇವಣಸಿದ್ಧ ಭಿಕ್ಷೆಗೆ ಬಂದಿರಲು, ಕಠೋರ ವ್ಯಕ್ತಿತ್ವದ ಚಿಕ್ಕಲಕ್ಕಾದೇವಿ ಕಠಾರಿಯನ್ನು ಪಾತ್ರೆಯಲ್ಲಿಡುತ್ತಾಳೆ. ಇದರಿಂದಾಗಿ ಕೋಪಗೊಂಡ ರೇವಣಸಿದ್ಧ, ಆ ಕಠಾರಿ ಘೋರಕನ್ನನ ಹೊಟ್ಟೆಯಲ್ಲಿ ಬರುವಂತೆ ಮಾಡುತ್ತಾನೆ. ಚಿಕ್ಕಲಕ್ಕಾದೇವಿಯ ತಪ್ಪನ್ನು ಅರಿತ ಹಿರಿಯಲಕ್ಕಾದೇವಿ ತಕ್ಷಣವೇ ಮಹಾಲಕ್ಷ್ಮಿಯನ್ನು ಪ್ರಾರ್ಥಿಸಿ ಗಂಡನನ್ನು ಉಳಿಸುತ್ತಾಳೆ. ಒಬ್ಬಳಲ್ಲಿ ವಿನಯ-ಜಾಣ್ಮೆಗಳು ಕಂಡುಬಂದರೆ, ಇನ್ನೊಬ್ಬಳಲ್ಲಿ ಉದ್ಧಟತನ-ಕ್ರೌರ್ಯಗಳು ಕಂಡುಬರುತ್ತವೆ.

**ಇಳೆಯಾಂಡಗುಡಿಮಾರನ ಪತ್ನಿ :** ಇಳೆಯಾಂಡಗುಡಿಮಾರನ ಪತ್ನಿಯ ಹೆಸರು ಕಾವ್ಯದಲ್ಲಿ ಕಂಡುಬರುವುದಿಲ್ಲ, ಆದರೂ ಅವಳ ವ್ಯಕ್ತಿತ್ವವನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಅಗರ್ಭ ಶ್ರೀಮಂತನಾಗಿದ್ದ ಇಳೆಯಾಂಡಗುಡಿಮಾರ, ಇರುವುದೆಲ್ಲವನ್ನೂ ದಾನ ಮಾಡಿ ತಾನೇ ಬೇಡುವ ಸ್ಥಿತಿಗೆ ಬಂದಿದ್ದರೂ ಅವಳು ಗಂಡನ ನಿಷ್ಠೆಗೆ ಅಡ್ಡಿ ಮಾಡಿದವಳಲ್ಲ. ಗಂಡ ತನ್ನ ತಾಳಿಯನ್ನೇ ಬಿಚ್ಚಿ ದಾನ ಮಾಡಲು ಹೊರಟಾಗಲೂ ಅವನನ್ನು ಪ್ರಶ್ನಿಸುವುದಿಲ್ಲ. ಬದಲಾಗಿ ಗಂಡ ಇಟ್ಟ ಹೆಜ್ಜೆಯನ್ನೇ ಅನುಸರಿಸಿ ಸಹಕರಿಸುತ್ತಾಳೆ. ಮಧ್ಯರಾತ್ರಿಯಲ್ಲಿ ಬಂದ ಶಿವನಿಗೆ ಊಟ ಬಡಿಸಲು ಊಟವಿಲ್ಲದಿದ್ದಾಗ, ಆಗತಾನೇ ಬಿತ್ತಿರುವ 'ಮೊಳೆಬಿತ್ತ'ನ್ನು ತರುವಂತೆ ಗಂಡನಿಗೆ ತಿಳಿಸುತ್ತಾಳೆ. ಕಗ್ಗತ್ತಲ ರಾತ್ರಿಯಲ್ಲಿಯೇ ಊಟ ತಯಾರಿಸಿ ಶಿವನಿಗೆ ಉಣಬಡಿಸುತ್ತಾಳೆ. ಮಗ ಸತ್ತಿದ್ದರೂ ಕೂಡ ಲೆಕ್ಕಿಸದೆ ಶಿವನಿಗೆ ಊಟ ಬಡಿಸಲು ಮುಂದಾಗುತ್ತಾಳೆ. ಗಂಡನನ್ನು ಅರ್ಥ ಮಾಡಿಕೊಂಡು ಬದುಕುವ ಅವಳ ಗುಣ ಹಿರಿದಾದದ್ದು.

**ಮಂಗಳಾಸನೆ ದುಗ್ಗಳವ್ವೆ :** ದುಗ್ಗಳೆ ಜೇಡರ ದಾಸಿಮಯ್ಯನ ಪತ್ನಿ. ಉತ್ತಮ ಶಿವಾಚಾರೆ. ಒಮ್ಮೆ ಶಂಕರದಾಸಿಮಯ್ಯ ಜೇಡರ ದಾಸಿಮಯ್ಯನ ಗರ್ವಭಂಗ ಮಾಡಲು ಬರುತ್ತಾನೆ. ಆಗ ಜೇಡರ ದಾಸಿಮಯ್ಯ ಶಂಕರ ದಾಸಿಮಯ್ಯನ ಪ್ರಸಾದಕ್ಕೆ ಬೇಕಾದ 'ಹೇರು' ಧಾನ್ಯವನ್ನು ಕೊಡಲು ಹೋಗುತ್ತಾನೆ. ಕೂಡಲೇ ಶಂಕರ ದಾಸಿಮಯ್ಯನ ಶಕ್ತಿಯನ್ನು ಅರ್ಥಮಾಡಿಕೊಂಡ ದುಗ್ಗಳೆ, ಶಂಕರದಾಸಿಮಯ್ಯನಲ್ಲಿಗೆ ಬಂದು ತನ್ನ ಪತಿಯ ತಪ್ಪನ್ನು ಮನ್ನಿಸುವಂತೆ ಕೇಳಿಕೊಳ್ಳುತ್ತಾಳೆ. ಆಗ ಹೋದ ತಪನಿಧಿಯು ದೊರಕುತ್ತದೆ. ಹೀಗೆ ಪತಿಯ ತಪ್ಪನ್ನು ತಿದ್ದಿದ ದುಗ್ಗಳವ್ವೆ ಜಾಣೆಯಾಗಿ ಕಾವ್ಯದಲ್ಲಿ ಕಾಣಿಸಿಕೊಂಡಿದ್ದಾಳೆ.

**ಶಿವದಾಸಿಯರು :** ಇವಳು ಶಂಕರದಾಸಿಮಯ್ಯನ ಪತ್ನಿ. ದಾಸಿಮಯ್ಯನ ವ್ಯಕ್ತಿತ್ವಕ್ಕೆ ತಕ್ಕಂತೆ ನಡೆದುಕೊಂಡವಳು. ದಾಸಿಮಯ್ಯ ಶಿವಭಕ್ತಿ ಪ್ರಸಾರಕ್ಕೆ ಹೋದೆಡೆಗಳಲ್ಲೆಲ್ಲಾ ಹೋಗಿ, ಅವನ ಕಾರ್ಯಕ್ಕೆ ಪ್ರೋತ್ಸಾಹ ನೀಡುತ್ತಾಳೆ. ವಿರಾಗಿಯಾಗಿ ಹೋಗಲು ಸಹಕರಿಸುತ್ತಾಳೆ.

**ಪರವಳಿಗೆಯ ವೈಜಕವ್ವೆ :** ಕವಿ ಆರಂಭದಲ್ಲಿಯೇ ಇವಳನ್ನು ವಿವೇಕನಿಧಿ ಎಂದು ಕರೆದಿದ್ದಾನೆ. ಮನಸ್ಸಿಲ್ಲದಿದ್ದರೂ ಅವಳ ಮದುವೆ ಜೈನನೊಡನೆ ನಡೆದುಹೋಗಿದೆ. ಜೈನನಿಗೋ ಇವಳ ಶಿವಭಕ್ತಿ ಹಾಗೂ ದಾನಗುಣವನ್ನು ಸಹಿಸುವ ಸ್ಥಿತಿಯಲ್ಲಿಲ್ಲ. ಮನಸೋ ಇಚ್ಛೆ ಬಡಿಯು

ಪ್ರಾರಂಭಿಸುತ್ತಾನೆ. ಆದರೂ ವೈಜಕವ್ವೆ ಪತಿಯ ವಿರುದ್ಧ ಮಾತನಾಡಬಯಸುವುದಿಲ್ಲ. ಒಮ್ಮೆ ಅವಳ ಪತಿಗೆ ವೈಜಕವ್ವೆಯ ಮಹಿಮೆ ತಿಳಿಯುತ್ತದೆ. ಆಗ ಪತಿ ಸತಿಗೆ ನಮಿಸುತ್ತಾನೆ. ವೈಜಕವ್ವೆ ಅವನಿಗೆ ಶಿವದೀಕ್ಷೆ ನೀಡಿ ಉದ್ಧರಿಸುತ್ತಾಳೆ.

## 8.13.4 ಪ್ರಣಯಿನಿಯರು

**ಮಲುಹಣೆ :** ಇವಳು ವೇಶ್ಯೆಯಾದ ಪದ್ಮಾವತಿಯ ಮಗಳು. ಕುಲದಿಂದ ವೇಶ್ಯೆ ಯಾದರೂ ನಡತೆಯಿಂದ ಉತ್ತಮ ಗೃಹಿಣಿಯಂತೆ ಇದ್ದಾಳೆ. ಒಮ್ಮೆ ಮಲುಹಣನೆಂಬ ಸುಂದರಾಂಗನ ಮೋಹಕ್ಕೆ ಒಳಗಾಗುತ್ತಾಳೆ. ತನ್ನ ಪ್ರಿಯಕರನಿಗೆ ತನು ಮನವನ್ನೆಲ್ಲ ಅರ್ಪಿಸುತ್ತಾಳೆ. ಬಹಳ ಕಾಲ ಅವರ ಪ್ರೀತಿಯ ಬದುಕು ಸಾಗುತ್ತದೆ. ಹೀಗಿರುವಲ್ಲಿ ಮಲುಹಣನ ಹಣವೆಲ್ಲ ತೀರುತ್ತಾ ಬರುತ್ತದೆ. ಹಣವಿಲ್ಲದ ಮಲುಹಣ ಮಲುಹಣೆಯ ತಾಯಿಗೆ ಇಷ್ಟವಾಗುವುದಿಲ್ಲ. ಹಾಗಾಗಿ ಮಲುಹಣನನ್ನು ಬಿಟ್ಟುಬಿಡುವಂತೆ ಮಗಳಿಗೆ ಸೂಚಿಸುತ್ತಾಳೆ. ಆದರೆ ಮಲುಹಣೆ ಮಲುಹಣನಿಂದ ದೂರವಾಗಲು ಇಷ್ಟಪಡುವುದಿಲ್ಲ. ಆದರೆ ಪದ್ಮಾವತಿ ಇಷ್ಟಕ್ಕೆ ಬಿಡುವುದಿಲ್ಲ. ಬಲವಂತವಾಗಿ ಅವರಿಬ್ಬರನ್ನೂ ಬೇರ್ಪಡಿಸುತ್ತಾಳೆ. ಇಬ್ಬರೂ ವಿರಹದಲ್ಲಿ ಬಾಳುತ್ತಾರೆ. ಮಲುಹಣೆ ಹಲವು ಅನಿವಾರ್ಯಗಳ ನಡುವೆ ಸಿಕ್ಕಿ ಜೀವನ ಸಾಗಿಸುತ್ತಾಳೆ. ಎಷ್ಟೇ ಇಷ್ಟವಿದ್ದರೂ ಮಲುಹಣನನ್ನು ಸಮೀಪಿಸುವುದು ಸಾಧ್ಯವಾಗದಾಗುತ್ತದೆ. ತನ್ನ ಮನೆಯ ಸುತ್ತ ಸುತ್ತುವ ಮಲುಹಣನನ್ನು ಕಂಡು ಮರುಗುತ್ತಾಳೆ. ಆದರೆ ಮಲುಹಣನಿಗೆ ಏನನ್ನೂ ಹೇಳುವಂತಿಲ್ಲ. ಒಮ್ಮೆ ಅನಿರೀಕ್ಷಿತವಾಗಿ ಮಲುಹಣನನ್ನು ಕಂಡಾಗ, ತನ್ನ ಮೇಲಿಕ್ಕುವ ಈ ಚಿತ್ತದಾತುರತೆಯನ್ನು ಪನ್ನಗಾಭರಣನಲ್ಲಿ ಇಡುವಂತೆ ಕೇಳಿಕೊಳ್ಳುತ್ತಾಳೆ. ಮಲುಹಣ ಹಾಗೇ ಮಾಡಿ ಮತ್ತೆ ಮಲುಹಣೆಯನ್ನು ಸಮೀಪಿಸುತ್ತಾನೆ. ಇಲ್ಲಿ ಮಲುಹಣೆಯ ಗುಣ ಮೆಚ್ಚುವಂಥದ್ದು. ಅವಳು ವೇಶ್ಯೆಯ ಮಗಳಾಗಿದ್ದೂ ತನ್ನತನವನ್ನು ಕಾಪಾಡಿಕೊಂಡು ಮಲುಹಣನ ಬದುಕಿನ ದಿಕ್ಕನ್ನೇ ಬದಲಿಸಿದವಳು.

**ಕಾಮಲತೆ :** ಕಾಮಲತೆ ಧನದತ್ತನೆಂಬವನ ಮಗಳು. ಆಕಸ್ಮಿಕವಾಗಿ ಅಲ್ಲಮನ ಅನುರಾಗಕ್ಕೆ ಒಳಗಾಗುತ್ತಾಳೆ. ಅಲ್ಲಮ ಒಬ್ಬ ಮದ್ದಳೆ ಬಾರಿಸುವವನು. ಇಲ್ಲಿ ಕುಲ, ಜಾತಿಯ ಅರಿವಿಲ್ಲದೆ ಇಬ್ಬರೂ ಪ್ರೇಮಿಸಿದ್ದಾರೆ. ಆದರೆ ಪ್ರಾಯದ ಸವಿ ತೀರುವ ಮುನ್ನವೇ ಕಾಮಲತೆ ಜ್ವರದಿಂದ ದೇವಲೋಕಕ್ಕೆ ನಡೆಯುತ್ತಾಳೆ. ಅಲ್ಲಮನನ್ನು ದುಃಖಸಾಗರದಲ್ಲಿ ಮುಳುಗಿಸುತ್ತಾಳೆ. ಇಲ್ಲಿ ಕಾಮಲತೆಯ ಪಾತ್ರ ಅತಿ ಚಿಕ್ಕದಾಗಿದ್ದರೂ ಅಲ್ಲಮನ ಜೀವನಕ್ಕೆ ಮೆರಗು ನೀಡಿದ್ದಾಳೆ.

**ಪದ್ಮಾವತಿ :** ಆದಯ್ಯನ ಪ್ರಿಯತಮೆ ಹಾಗೂ ಪ್ರೀತಿಯ ಪತ್ನಿಯಾದ ಪದ್ಮಾವತಿ ಜೈನಧರ್ಮದವಳು. ತನ್ನ ಜಾತಿ ಕುಲ ಮತಗಳನ್ನು ನೋಡದೆ ಆದಯ್ಯನನ್ನು ಪ್ರೀತಿಸಿ ಮದುವೆಯಾಗುತ್ತಾಳೆ. ತಾನೇ ಪ್ರೀತಿಸಿ ಆರಿಸಿಕೊಂಡ ಆದಯ್ಯನನ್ನು "ಯಾವಾಗಲೂ ನೆರಳಿನಂತೆ ಹಿಂಬಾಲಿಸುತ್ತಾಳೆ. ಗಂಡನ ಸುಖವೇ ತನ್ನ ಸುಖ; ದುಃಖವೇ ತನ್ನ ದುಃಖ ಎಂದು ತಿಳಿದವಳು. ಗಂಡನ ಧರ್ಮವೇ ತನಗೆ ಮಾನ್ಯವೆಂದವಳು. ಆದಯ್ಯನು ಸೋಮನಾಥನನ್ನು

ತರುವವರೆಗೆ ಅನಶನ ವ್ರತ ಕೈಗೊಂಡು ಪತಿವ್ರತೆಯಾಗಿ ಕಾಲ ಕಳೆಯುತ್ತಾಳೆ. ಗಂಡ ಬರುವವರೆಗೆ ತನ್ನ ಸುಖವೆಲ್ಲವನ್ನೂ ಬದಿಗೊತ್ತಿದ್ದಳು. ಒಂದೇ ಮನದಿಂದ ಗಂಡನ ಆಗಮನದ ನಿರೀಕ್ಷಣೆಯಲ್ಲಿಯೇ ಕಾಲ ಕಳೆಯುತ್ತಾಳೆ. ಶಿವಭಕ್ತಿಯ ಪ್ರಸಾರಕ್ಕೆ ಆದಯ್ಯನಿಗೆ ಅವಳ ಬೆಂಬಲವೇ ಚೈತನ್ಯವಾಗಿತ್ತು."[44]

**ಪರವೆನಾಚಿ ಮತ್ತು ಸಂಕಿಲಿನಾಚಿ :** ಪರವೆನಾಚಿ ನಂಬಿಯಣ್ಣನ ಪ್ರಿಯತಮೆ. ವೇಶ್ಯಾ ಕುಲದವಳು. ಆಕಸ್ಮಿಕವಾಗಿ ಇವಳಿಗೂ ನಂಬಿಯಣ್ಣನಿಗೂ ಪ್ರೇಮಾಂಕುರವಾಗುತ್ತದೆ. ಪರವೆನಾಚಿ ನಂಬಿಯಣ್ಣನನ್ನು ಮನಸಾರೆ ಮೆಚ್ಚಿದ್ದಾಳೆ. ನಂಬಿಯಣ್ಣ ತನ್ನೆದುರಲ್ಲೇ ಇರಬೇಕೆಂದು ಬಯಸುತ್ತಾಳೆ. ಅವಳು ತನ್ನ ಇನಿಯ ಸಂಕಿಲೆಯೊಡನೆ ಕೂಡಿದ್ದನ್ನು ಸಹಿಸದೆ ಹೋಗುತ್ತಾಳೆ. ಅಂತೆಯೇ ನಂಬಿಯಣ್ಣ ಸಂಕಿಲೆಯನ್ನು ಬಿಟ್ಟು ಬಂದಾಗ ಅವನನ್ನು ಮೂದಲಿಸುತ್ತಾಳೆ. ಅವನು ಕೊಟ್ಟ ಒಡವೆಗಳನ್ನು ಬಿಸಾಡುತ್ತಾಳೆ. ಪತಿಯ ಮೇಲೆ ಇರಬೇಕಾದ ಪ್ರೇಮ, ಕಳಕಳಿ ಎಲ್ಲವೂ ಪರವೆಯಲ್ಲಿ ವ್ಯಕ್ತವಾಗುತ್ತವೆ.

ಸಂಕಿಲಿನಾಚಿ ನಂಬಿಯಣ್ಣನ ಇನ್ನೊಬ್ಬ ಪ್ರಿಯತಮೆ. ಕುಲದಿಂದ ಕೀಳು ; ಅಲ್ಲದೆ ಅವಳು ಬಾಲ್ಯ ವಿಧವೆ. ಸತ್ತ ಗಂಡನ ನೆನಪಿನಲ್ಲಿಯೇ ಕಾಲ ಕಳೆದ ಪತಿವ್ರತೆ. ಅತ್ಯಂತ ಸುಂದರಿ. ನಂಬಿಯಣ್ಣ ಕೆಲಕಾಲ ಇವಳ ಬಳಿ ಇದ್ದು ಮತ್ತೆ ಪರವೆನಾಚಿಯ ಕಡೆ ಹೊರಡುತ್ತಾನೆ. ಆಗ ಅವಳು ನಂಬಿಯಣ್ಣನನ್ನು ತನ್ನ ಪ್ರೇಮಪಾಶದಲ್ಲಿ ಬಂಧಿಸಿಕೊಳ್ಳಲು ಸಾಕಷ್ಟು ಪ್ರಯತ್ನಿಸುತ್ತಾಳೆ. ಆದರೆ ವಿಫಲಳಾಗುತ್ತಾಳೆ. ನಿರಾಶಳಾಗಿ ಬದುಕು ಸಾಗಿಸುತ್ತಾಳೆ.

## 8.13. ಮಾತೆಯರು ಮತ್ತು ವಿಧವೆಯರು

**ಮಾದಾಂಬೆ :** ಮಾದಾಂಬೆ, ಬಸವಣ್ಣನ ತಾಯಿ. ಅವಳು ಅಪ್ರತಿಮ ಗುಣವಂತೆ, ಅಭಿಮಾನಿ, ಅತಿಜ್ಞಾನಿ, ಪತಿಭಕ್ತೆ ಎಂಬುದು ಹರಿಹರನ ಕಾವ್ಯದಿಂದ ತಿಳಿಯುತ್ತದೆ. ಅಷ್ಟು ಬಿಟ್ಟರೆ ಇವಳ ಬಗೆಗೆ ಕವಿ ಹೆಚ್ಚೇನೂ ಹೇಳುವುದಿಲ್ಲ.

**ಯಸ್ಯಜ್ಞಾನದೇವಿ :** ಇವಳು ನಂಬಿಯಣ್ಣನ ತಾಯಿ. ತನ್ನ ಮಗ ಅಪೂರ್ವವಾದವನೆಂದು ಗೊತ್ತಿದ್ದರೂ ನರಸಿಂಗ ಮೊನೆಯರ ಆಸೆಯನ್ನು ಪೂರೈಸುವುದಕ್ಕಾಗಿ ಹಣವನ್ನು ಅಪೇಕ್ಷಿಸದೆ, ಮಗನ ಸುಖ-ಸಮೃದ್ಧಿಯನ್ನು ಬಯಸಿ, ಯಾವ ಕಟ್ಟಳೆಯೂ ಇಲ್ಲದೆ ನರಸಿಂಗ ಮೊನೆಯರಿಗೆ ತ್ಯಾಗ ಮಾಡುತ್ತಾಳೆ.

**ಪದ್ಮಾವತಿ :** ಇವಳು ಮಲುಹಣೆಯ ತಾಯಿ. ಹಣಕ್ಕಾಗಿ ಏನು ಮಾಡಲೂ ಹೇಸದವಳು, ಮೇಲಾಗಿ ವೇಶ್ಯೆ. ಹಣಕ್ಕಾಗಿ ತನ್ನ ಮಗಳನ್ನು ಮಲುಹಣನೊಡನೆ ಇರಿಸುತ್ತಾಳೆ. ಹಣ ತೀರುತ್ತಿದ್ದಂತೆಯೇ ಅವನಿಂದ ಬೇರ್ಪಡಿಸುತ್ತಾಳೆ. ಮಲುಹಣೆಯ ಮಾತಿನಲ್ಲೇ ಹೇಳುವುದಾದರೆ ಅವಳು 'ಮಾನಸಗರಗಸ'.

**ಬಿಜ್ಜ ಮಹಾದೇವಿ :** ಇವಳ ಇನ್ನೊಂದು ಹೆಸರು ಅಮ್ಮವ್ವೆ. ಇವಳು ಚಿಕ್ಕಂದಿನಲ್ಲಿಯೇ ಮದುವೆಯಾಗಿ ಗಂಡನನ್ನು ಕಳೆದುಕೊಳ್ಳುತ್ತಾಳೆ. ಗಂಡ ಸತ್ತರೂ ಅವಳು ಬದುಕಲು ಅಂಜುವುದಿಲ್ಲ. ಕವಿರ ಕಾಯಕ ಮಾಡಿ ಜೀವನ ಸಾಗಿಸುತ್ತಾಳೆ. ಒಮ್ಮೆ ಅವಳು ಬೆರಣಿ ಆಯಲು

ಕಾಡಿಗೆ ಹೋದಾಗ, ಅಲ್ಲಿ ಶಿವ ಶಿಶುರೂಪದಲ್ಲಿ ಅವಳಿಗೆ ದೊರೆಯುತ್ತಾನೆ. ಆ ಮಗುವನ್ನು ತಂದು ಬಿಜ್ಜಮಹಾದೇವಿ ಮಮತೆಯಿಂದ ಸಾಕುತ್ತಾಳೆ. ಹೀಗಿರಲು ಕೂಸಿಗೆ ಒಮ್ಮೆಂದೊಮ್ಮೆ ಸೆಟೆ ಬೇನೆ ಬಂದಂತಾಗುತ್ತದೆ. ಆಗ ಬಿಜ್ಜಮಹಾದೇವಿ 'ಹೆತ್ತಾಕೆ ಎತ್ತಿ ಸಲಹದೆ ಹೋದಳು!; ಹೆತ್ತರಿಂ ಸಾಕಿದಂಗತಿನೋವಕಟ!' ಎಂದು ದುಃಖಿಸುತ್ತಾ ಶಿರಚ್ಛೇದನೆಗೆ ಮುಂದಾಗುತ್ತಾಳೆ. ಕೂಸಿನ ಆರೋಗ್ಯಕ್ಕಾಗಿ ಪ್ರಾಣವನ್ನೇ ಕೊಡಲು ಸಿದ್ಧಳಾದ ಮಹಾತಾಯಿ ಅವಳು. ಅವಳ ವಾತ್ಸಲ್ಯ ಬಹಳ ಕಾಲ ನಿಲ್ಲುವಂಥದ್ದು.

ಹೀಗೆ ಹರಿಹರ ಕಾವ್ಯದಲ್ಲಿ ಸ್ತ್ರೀ ಪಾತ್ರಗಳನ್ನು ನಿರ್ಮಿಸುತ್ತಾನೆ. ಪ್ರತಿ ಪಾತ್ರಗಳಲ್ಲೂ ಅವನು ಸ್ತ್ರೀಯ ಬಗೆಗೆ ಇಟ್ಟಿರುವ ಗೌರವ ವ್ಯಕ್ತವಾಗುತ್ತದೆ. ಅವನು ಸ್ತ್ರೀಯನ್ನು ಮಾಯೆ, ರಕ್ಕಸಿ, ಕೇವಲ ಭೋಗವಸ್ತು, ಕುಟಿಲೆ, ವಂಚಕಿ, ಅಬಲೆ - ಇತ್ಯಾದಿಯಾಗಿ ಭಾವಿಸುವುದಿಲ್ಲ. ಅವರನ್ನು ದೇವಿ, ಅರಸಿ ಎಂದೇ ಸಂಬೋಧಿಸುತ್ತಾನೆ. ಅವನ ಕಾವ್ಯದಲ್ಲಿ ಬರುವ ಅನೇಕ ಸ್ತ್ರೀಯರೂ ಕೋಮಲೆ, ದಿಟ್ಟೆ, ಮುಗ್ಧೆ, ಜಾಣೆ ಹಾಗೂ ಸುಸಂಸ್ಕೃತರಾಗಿ ಶೋಭಿಸುತ್ತಾರೆ. ಅವರು ಸ್ವಪ್ರಯತ್ನದಿಂದ ಪುರುಷರಿಗೂ ಧರ್ಮದೀಕ್ಷೆ - ಧರ್ಮೋಪದೇಶ ಮಾಡುವ ಸಾಮರ್ಥ್ಯ ಉಳ್ಳವರಾಗಿದ್ದು ಪುರುಷರಿಗೆ ಸರಿಸಮಾನವಾಗಿ ನಿಲ್ಲಬಲ್ಲವರು.

## 8.14 ಪಾತ್ರಗಳ ಸೃಷ್ಟಿಯಲ್ಲಿ ಹರಿಹರನ ಜೀವನದೃಷ್ಟಿ

"ಹರಿಹರ ಭಕ್ತಕವಿ. ಶಿವನನ್ನು ಅರ್ಚಿಸುವುದು, ಅರ್ಚನೆಯ ಆನಂದದಲ್ಲಿ ವ್ಯಕ್ತಿತ್ವವನ್ನು ಕರಗಿಸುವುದು, ಶಿವಕೃಪೆಯನ್ನು ಸಂಪಾದಿಸುವುದು ಬದುಕಿನ ಗುರಿ ಎಂದು ನಂಬಿದ್ದವನು. ಈ ಒಂದು ನಂಬಿಕೆಯೆ ಅವನ ವ್ಯಕ್ತಿತ್ವದ ತಳಹದಿಯಾದ್ದರಿಂದ, ತನ್ನನ್ನು ಬಹಿರಂಗವಾಗಿ ನಿಯಂತ್ರಿಸುವ ಎಲ್ಲ ರೀತಿಯ ಪ್ರಭುಶಕ್ತಿಯನ್ನು ನಿರಾಕರಿಸಿ ಸ್ವತಂತ್ರವಾಗಿ ನಿಂತವನು!', ಅಷ್ಟೇ ಅಲ್ಲ, ಅಂಥ ಪ್ರಭುಶಕ್ತಿಯ ಆಶ್ರಯದಿಂದ ದೊರೆಯಬಹುದಾದ ಸುಖ, ಸಂಪತ್ತು, ಕೀರ್ತಿ, ಗೌರವ ಇತ್ಯಾದಿ ಆಮಿಷಗಳನ್ನು ಅತ್ಯಂತ ನಿಕೃಷ್ಟವಾಗಿ ಕಂಡು, ತನ್ನ ವ್ಯಕ್ತಿತ್ವವನ್ನು ಆ ಪರಾತ್ಪರನಾದ ಶಿವನ ಸೇವೆಗೆ ಸಮರ್ಪಿಸಿಕೊಂಡವನು"[45]. " ಪರಮ ವೈರಾಗ್ಯವನ್ನೇ ತಾತ್ವಿಕವಾಗಿ ಎತ್ತಿ ಹಿಡಿದು, ಈ ಲೋಕದ ಭೋಗ, ಐಶ್ವರ್ಯ ಇತ್ಯಾದಿಗಳು ಅಲ್ಪವೆಂಬ ಅರಿವನ್ನು ಬೆಳೆಯಿಸಿಕೊಂಡರೂ, ಆ ಕಾರಣಕ್ಕಾಗಿ ಇಹದ ಬದುಕು ತುಚ್ಛವೆಂದಾಗಲೀ, ಸಂಪೂರ್ಣ ನಿರಾಕರಣೆಗಷ್ಟೆ ಅರ್ಹವಾದದ್ದೆಂದಾಗಲೀ ರಭಸದಿಂದ ಹೇಳುವ ಸ್ವಭಾವದವನಲ್ಲ. ಈ ಬದುಕು ಒಂದು ಸಾಧನಾರಂಗ. ಶಿವಾರ್ಚನೆಗೆ ಒಂದು ವೇದಿಕೆ, ಶಿವಕೃಪೆಯ ಸಂಪಾದನೆಗೆ ಒಂದು ಮಾರ್ಗ"[46] ಎಂಬ ದೃಷ್ಟಿ ಅವನದಾಗಿತ್ತು. ಈ ಜೀವನದೃಷ್ಟಿಯೇ ಹರಿಹರನ ಕಾವ್ಯದಲ್ಲಿ ಪಾತ್ರಗಳ ಮೂಲಕ ಪ್ರತಿಬಿಂಬಿತವಾಗಿದೆ.

ಹರಿಹರನ ರಗಳೆಗಳಲ್ಲಿ ಕಂಡುಬರುವ ಎಲ್ಲ ಪಾತ್ರಗಳೂ ಶಿವನ ಸಾನ್ನಿಧ್ಯವನ್ನು ಬಯಸುವ ಪಾತ್ರಗಳೇ ಆಗಿವೆ. ಅದಕ್ಕಾಗಿ ಆ ಎಲ್ಲಾ ಪಾತ್ರಗಳು ಬಗೆಬಗೆಯಾಗಿ ಶಿವನನ್ನು ಅರ್ಚಿಸುತ್ತವೆ. ಅವರ ಅರ್ಚನೆ ಸಾಮಾನ್ಯ ಅರ್ಚನೆಯಲ್ಲ! ಅಂತರಂಗ ತುಂಬಿದ ಅರ್ಚನೆ. ಹಾಗೆ ಅರ್ಚಿಸುವ ಮೂಲಕವೇ ಆ ಪಾತ್ರಗಳು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತವೆ.

ಮಹಾದೇವಿಯಕ್ಕ ತಾನು ಒಪ್ಪಿದ ಮಲ್ಲಿನಾಥನನ್ನು -

> ದೇವ ನಿನ್ನ ಹೃದಯಕಮಲದೊಳಗೆ ಪ್ರಜ್ವಲಿಪ್ಪ ಬೆಳಗೆ
> ದೇವ ನಿನ್ನ ಮನದ ಮನೆಯೊಳೊಪ್ಪುತಿರ್ಪ ಬೆಳಗಿನೊಳಗೇ
> ಗುರುವೆ ಬಾರಾ ಮನವೆ ಬಾರಾ ಪರವೆ ಬಾರಾ ದೇವ ದೇವಾ
> ------------------------------------------------
> ಪೂಜೆಯೊಳಗೆ ಮಚ್ಚಿ ಬೆಚ್ಚ ಮನವನೆಂತುತೆಗೆವೆನಯ್ಯಾ
> ಪೂಜೆಯೊಳಗೆ ನಟ್ಟದಿಟ್ಟಿಗಳನೆ ಅದೆಂತು ತೆಗೆವೆನಯ್ಯಾ[47]

ಎಂದು ಪೂಜೆಯಲ್ಲಿ ನಿರತಳಾಗುತ್ತಾಳೆ. ಹರಿಹರನ ನೂತನ ರಗಳೆಗಳಲ್ಲಿ ಬರುವ ಎಲ್ಲ ಕಥೆಗಳಲ್ಲೂ, ಪೂಜೆಯ ವರ್ಣನೆ ಇದೇ ರೀತಿಯಲ್ಲಿ ಮುಂದುವರಿಯುತ್ತದೆ. ಇಲ್ಲಿ ಕವಿ ಇಷ್ಟಲಿಂಗಪೂಜೆಯನ್ನು ಬಣ್ಣಿಸಿದ್ದಾನೆ. ಆದರೆ ಇದೇ ಪೂಜೆ ಪುರಾತನರ ರಗಳೆಗಳಲ್ಲಿ ಭಿನ್ನ ರೀತಿಯಲ್ಲಿ ಬರುತ್ತದೆ. ಅಲ್ಲಿನ ಭಕ್ತರೆಲ್ಲಾ ಸ್ಥಾವರ ಪೂಜೆಯಲ್ಲಿ ತೊಡಗಿರುವವರು. ಅಲ್ಲಿಯ ಪಾತ್ರಗಳು—

> ಕರಗುತೆ ವಿಭೂತಿಯುಮನುದ್ಧೂಳನಂ ಮಾಡಿ
> ಹರುಷದಿಂ ಪಾಡುತಂ ರುದ್ರಾಕ್ಷಿಯಂ ಸೂಡಿ
> ಬಲವರಲು ಮನವಾಗಿ ನಲವಿಂದೆ ನಿಂದಿರುತೆ
> ನಡುವಗಲ್ತೊಡಗಿ ಮಧ್ಯರಾತ್ರಿ ಪರಿಯಂತ
> ಎಡೆವಜೆಯದೀತೆಱದೊಳರ್ಚಿಸುತ್ತಂ ಸಂತ[48]

ಹೀಗೆ ಸ್ಥಾವರ ಪೂಜೆಯಲ್ಲಿ ನಿರತವಾಗುತ್ತವೆ. ಆದರೆ ಎರಡೂ ಪೂಜೆಯ ಭಾವ ತೀವ್ರತೆಗಳು ಒಂದೇ ಆಗಿರುತ್ತವೆ. ಶಿವನ ಸಾನ್ನಿಧ್ಯಕ್ಕಾಗಿ ಹಾತೊರೆಯುತ್ತವೆ. ಅವರ ಪೂಜೆ ಕೇವಲ ಆಡಂಬರ ವಲ್ಲ. ಎಷ್ಟೋ ಪಾತ್ರಗಳು ಶಿವನಿಗಾಗಿ ತನು, ಮನ, ಧನವನ್ನೇ ಧಾರೆ ಎರೆದ ಸನ್ನಿವೇಶಗಳು ಬರುತ್ತವೆ. ಇಳೆಯಾಂಡಗುಡಿಮಾರ ಅಪ್ರತಿಮವಾದ ಶಿವಭಕ್ತ ಹಾಗೂ ಶ್ರೀಮಂತ. ಆತ ಶಿವನಿಗಾಗಿ ತನ್ನೆಲ್ಲಾ ಆಸ್ತಿಯನ್ನೂ ಕಳೆದುಕೊಳ್ಳುತ್ತಾನೆ. ಕೊನೆಗೆ ತಾನೇ ಬೇಡುವ ಸ್ಥಿತಿಗೆ ಬಂದಿರುತ್ತಾನೆ. ಅವನ ನಿಷ್ಠೆ ತನು, ಮನ, ಧನಗಳ ಅರ್ಪಣೆಯಿಂದ ಕೂಡಿದ್ದಾಗಿದೆ. ಶಿವನಿಗಾಗಿ ಎಷ್ಟೋ ಪಾತ್ರಗಳು ಆತ್ಮಹತ್ಯೆಗೂ ಮುಂದಾಗುವುದನ್ನು ಇಹಃಪ್ಪಗೆಯಾಂಡ, ಮಾದಾರ ಚೆನ್ನಯ್ಯ ಮುಂತಾದ ರಗಳೆಗಳಲ್ಲಿ ಕಾಣುತ್ತೇವೆ. ಇಂಥ ಹೃದಯ ತುಂಬಿದ ಅರ್ಚನೆಯಿಂದ ಪಾತ್ರಗಳು ಶಿವನ ಮೆಚ್ಚಿಗೆಯನ್ನು ಪಡೆದು ಕೈಲಾಸದಲ್ಲಿ ಗಣಪದವಿಯನ್ನು ಪಡೆದುಕೊಂಡಿವೆ.

ಶಿವನ ಸಾನ್ನಿಧ್ಯವೇ ಬದುಕಿನ ಅಂತಿಮ ಗುರಿ ಎಂದು ತಿಳಿದುಕೊಂಡಿರುವ ಪಾತ್ರಗಳು, ಪ್ರಭುಶಕ್ತಿಯನ್ನು ಮತ್ತು ಅದರಿಂದ ಬರುವ ಸುಖ, ಸಂಪತ್ತು, ಕೀರ್ತಿಗಳನ್ನು ಅಷ್ಟೇ ಕಟುವಾಗಿ ವಿರೋಧಿಸುತ್ತವೆ. ಬಸವಣ್ಣ, ಅಕ್ಕಮಹಾದೇವಿ, ಕೇಶಿರಾಜ ದಣ್ಣಾಯಕ, ತೆಲುಗು

ಜೊಮ್ಮಯ್ಯ, ಮಾದಾರ ಚೆನ್ನಯ್ಯ ಮುಂತಾದ ರಗಳೆಗಳಲ್ಲಿ ಇಂಥ ಸನ್ನಿವೇಶಗಳು ಕಂಡುಬರುತ್ತವೆ.

ಬಸವಣ್ಣ ಬಿಜ್ಜಳ ಮಹಾರಾಜನ ಆಸ್ಥಾನದಲ್ಲಿ ಭಂಡಾರಿಯಾಗಿದ್ದವನು. ಸಕಲ ವೈಭವಗಳೂ ಅವನ ಎದುರೇ ಇದ್ದವು. ಆದರೂ ಅವನು ಅವುಗಳ ಆಮಿಷಕ್ಕೆ ಒಳಗಾಗುವುದಿಲ್ಲ. ಬಿಜ್ಜಳನಿಗೂ ಬಸವಣ್ಣನಿಗೂ ಆಗಾಗ್ಗೆ ಮಾತುಕತೆಗಳು ನಡೆಯುತ್ತಲೇ ಇರುತ್ತವೆ. ಬಿಜ್ಜಳ ಬಸವಣ್ಣನನ್ನು ಅನುಮಾನಿಸಿ ಪ್ರಶ್ನಿಸತೊಡಗುತ್ತಾನೆ. ಆ ಸಂದರ್ಭಗಳಲ್ಲಿ ಬಿಜ್ಜಳನ ಅನುಮಾನಕ್ಕೆ ತಕ್ಕ ಉತ್ತರವನ್ನು ಬಸವಣ್ಣ ನೀಡುತ್ತಾನೆ. ನೀಡಿದ ನಂತರ ಬಸವಣ್ಣ ಅಲ್ಲೇ ಉಳಿಯಬಹುದಿತ್ತು. ಆದರೆ ಬಸವಣ್ಣನಿಗೆ ಬಿಜ್ಜಳನ ಹಂಗಿನಲ್ಲಿ ಬದುಕುವುದು ಇಷ್ಟವಿಲ್ಲ. ಹಾಗಾಗಿ ಆತ ಬಿಜ್ಜಳನನ್ನು ಧಿಕ್ಕರಿಸುತ್ತಾನೆ. ಬಿಜ್ಜಳನನ್ನು "ರೋಮಜನಾದ ನೆಂದಡೆ ನೀನೆತ್ತಣಪರಮಾಣು, ಕ್ಷುದ್ರಜಂತು, ಶಿವನ ಮನೆಯ ತೊತ್ತಿನ ತೊತ್ತಪ್ಪ ಮಾಯೆಯಾಡಿಸುವ ಮಣ್ಣರೂಪು, ಕಪ್ಪಡದ ಹಾಹೆ, ಕಲ್ಲಜಂತ್ರ, ಹುಲ್ಲಬೊಂಬೆ, ತೆಗೆ ತೆಗೆ, ಸಡಿಪಡ, ಶರಣರ ಮುಂದೆ ನೀನಾರು?"[49] ಎಂದು ಜರಿಯುತ್ತಾನೆ.

ಮಹಾದೇವಿ ಬಯಸಿದ್ದರೆ ಕೌಶಿಕ ಮಹಾರಾಜನೊಂದಿಗೆ ಮಹಾರಾಣಿಯಾಗಿ ಬದುಕಬಹುದಿತ್ತು. ಆದರೆ ಆಕೆ ಮಲ್ಲಿಕಾರ್ಜುನನಿಗೆ ಒಲಿದವಳು. ಆ ಒಲುಮೆಯ ಮುಂದೆ ಕೌಶಿಕನ ಅರಸತ್ವ ನಶ್ವರವಾಗಿ ಕಂಡಿದೆ. ತಾನು ವಿಧಿಸಿದ ಮೂರು ತಪ್ಪುಗಳು ಘಟಿಸುತ್ತಿದ್ದಂತೆಯೇ ಆಕೆ ಕೌಶಿಕನ ಅರಮನೆಯನ್ನು ತೊರೆಯುತ್ತಾಳೆ. ಹುಡುಕಿ ಬಂದ ಕೌಶಿಕನನ್ನು ತಿರಸ್ಕರಿಸುತ್ತಾಳೆ. ಹಾಗೆಯೇ ಕೇಶಿರಾಜ ದಣ್ಣಾಯಕನೆಂಬ ಮಹಾಭಕ್ತ ಕೂಡ. ಅರಸ ಪೆರ್ಮಾಡಿರಾಯನ ಓಲಗದಲ್ಲಿದ್ದವನು. ಒಮ್ಮೆ ಅರಸನಿಂದಾದ ತಪ್ಪನ್ನು ಮನ್ನಿಸದೆ—

> ಕೇಳರಸ ನಿನ್ನ ಸಿರಿ ನಿನಗಿಕ್ಕೆ ನಿನಗಿಕ್ಕೆ
> ಶೂಲಿಯಣುಗರ ಸಂಗ ಸಂಪದವದೆನಗಿಕ್ಕೆ [50]

ಎಂದು ಅರಸತ್ವವನ್ನು ಧಿಕ್ಕರಿಸಿ ನಡೆಯುತ್ತಾನೆ. ಕೇಶಿರಾಜ ದಣ್ಣಾಯಕರಂತೆ ತೆಲುಗು ಜೊಮ್ಮಯ್ಯ ಮತ್ತು ಮಾದಾರ ಚೆನ್ನಯ್ಯನೆಂಬ ಭಕ್ತರೂ ಅರಸುತನಕ್ಕೆ ಶರಣಾಗದೆ ಬದುಕುತ್ತಾರೆ. ತೆಲುಗು ಜೊಮ್ಮಯ್ಯ ಅರಸ ಪೆರ್ಮಾಡಿರಾಯನನ್ನೇ ಲೆಕ್ಕಕ್ಕೆ ತೆಗೆದು ಕೊಳ್ಳುವುದಿಲ್ಲ. ಅವನ ನಿಷ್ಠೆಗೆ ಪೆರ್ಮಾಡಿರಾಯನೇ ಕ್ಷಮೆ ಕೇಳುವ ಸ್ಥಿತಿಗೆ ಬರುತ್ತಾನೆ.

ಮಾದಾರ ಚೆನ್ನಯ್ಯ ಚೋಳನ ಬಳಿಯಿದ್ದರೂ ತನ್ನ ಕಾಯಕವನ್ನು ಮಾಡಿಕೊಂಡಿದ್ದವನು. ಒಮ್ಮೆ ಮಾದಾರ ಚೆನ್ನಯ್ಯನ ಭಕ್ತಿಯನ್ನು ಶಿವ ಚೋಳನಿಗೆ ತಿಳಿಯುವಂತೆ ಮಾಡುತ್ತಾನೆ. ಆ ಸಂದರ್ಭದಲ್ಲಿ ಮಾದಾರ ಚೆನ್ನಯ್ಯ ಬಹಳಷ್ಟು ನೊಂದುಕೊಳ್ಳುತ್ತಾನೆ. ಚೋಳರಾಜನೇ ತನ್ನ ಮನೆಗೆ ಬಂದಿರಲು ಅವನಿಗೆ ಸಂತೋಷವೇ ಆಗುವುದಿಲ್ಲ. ಬದಲಾಗಿ ತನ್ನ ಭಕ್ತಿ ಬಯಲಾದುದಕ್ಕೆ ಸಂಕಟಪಡುತ್ತಾನೆ. ಶಿವನ ಮೇಲೆ ಸಿಟ್ಟಾಗಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಾನೆ.

ಹೀಗೆ ರಗಳೆಗಳಲ್ಲಿ ಬರುವ ಪ್ರತಿಯೊಂದು ಪಾತ್ರಗಳು ಕೂಡ, ಪ್ರಭುಶಕ್ತಿಯನ್ನು ಗಣನೆಗೆ ತೆಗೆದುಕೊಳ್ಳದೆ ಜೀವನದಲ್ಲಿ ತೊಡಗುತ್ತವೆ.

ಹರಿಹರನ ಕಥೆಗಳಲ್ಲಿ ಬರುವ ಪಾತ್ರಗಳು ಹೆಚ್ಚಾಗಿ ಅಲೌಕಿಕ ಸುಖಕ್ಕೆ ಪ್ರಾಮುಖ್ಯತೆ ನೀಡುತ್ತವೆ. ಹಾಗೆ ಅಲೌಕಿಕ ಸುಖವನ್ನು ಆ ಪಾತ್ರಗಳು ಬಯಸಿದರೂ ಲೌಕಿಕವಾದ ಬದುಕನ್ನು ಅವು ತಿರಸ್ಕರಿಸುವುದಿಲ್ಲ. ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ನಂಬಿಯಣ್ಣ ಮುಂತಾದ ಮಹಾನುಭಾವರಿಂದ ಹಿಡಿದು, ಸಾಮಾನ್ಯ ಭಕ್ತರವರೆಗೂ ಲೌಕಿಕವನ್ನು ಕಡೆಗಣಿಸಿರುವುದು ಕಂಡುಬರುವುದಿಲ್ಲ. ಅಕ್ಕಮಹಾದೇವಿಯ ರಗಳೆಯಲ್ಲಿ ಮಾತ್ರ ಲೌಕಿಕವನ್ನು ಕಡೆಗಣಿಸಿದ ಚಿತ್ರ ಕಂಡುಬರುತ್ತದೆ. ಇದಕ್ಕೆ ಅವಳು ಒಪ್ಪದ ಗಂಡನೊಡನೆ ಮದುವೆಯಾದದ್ದೇ ಕಾರಣವಿರಬಹುದು.

ಒಟ್ಟಿನಲ್ಲಿ ಈ ಎಲ್ಲ ಪಾತ್ರಗಳಿಗೂ ಭೂಮಿಯೇ ಒಂದು ಸಾಧನೆಯ ರಂಗ. ಆ ಸಾಧನೆಯ ರಂಗದಲ್ಲಿ ಪ್ರತಿಯೊಂದು ಪಾತ್ರಗಳೂ ಸಾಧನೆಯಲ್ಲಿ ತೊಡಗುತ್ತವೆ. ಸಾಧನೆ ಮುಗಿದ ನಂತರ ಕೈಲಾಸಕ್ಕೆ ನಡೆಯುತ್ತವೆ. ಹೀಗೆ ಪ್ರತಿಯೊಂದು ಪದ್ಯಗಳೂ ಕವಿ ಹರಿಹರನ ಜೀವನದೃಷ್ಟಿಗೆ ಹಿಡಿದ ಕನ್ನಡಿಯಂತಿವೆ.

ಹರಿಹರನ ಪಾತ್ರದರ್ಶನ ಎಂದರೆ ಅದೊಂದು ಸಂಕೀರ್ಣ ಮೇಳವಿದ್ದಂತೆ! ಅಲ್ಲಿ ಕ್ಷತ್ರಿಯ, ಬ್ರಾಹ್ಮಣ, ಅಸ್ಪೃಶ್ಯ, ವರ್ತಕ, ಹೆಂಗಸು, ಗಂಡಸು, ಹಿರಿಯ ಕಿರಿಯ - ಹೀಗೆ ಅನೇಕ ರೀತಿಯ ಪಾತ್ರಗಳು ಬರುತ್ತವೆ. "ಕಿರು ಕಾವ್ಯದಲ್ಲಿ ದೊರೆತಷ್ಟು ಅಲ್ಪ ಅವಕಾಶ ದಲ್ಲಿಯೇ ಮನ ಮುಟ್ಟುವಂತೆ ಕವಿ ಪಾತ್ರಗಳನ್ನು ಚಿತ್ರಿಸಬಲ್ಲ. ನಾಲ್ಕಾರು ರೇಖೆಗಳಲ್ಲಿ ಸಮರ್ಥ ಕಲಾವಿದನು ಸಮರ್ಥವಾದ ಚಿತ್ರ ರಚಿಸುವಂತೆ ಹರಿಹರ ಸಂಕ್ಷೇಪದಲ್ಲಿಯೇ ಸಮರ್ಥವಾಗಿ ಪಾತ್ರ ಪೋಷಣೆ ಮಾಡುತ್ತಾನೆ. ಹಿಂದೆಯೇ ಹೇಳಿರುವಂತೆ ಅವನು ಪಾತ್ರಗಳನ್ನು ಕಂಡಿರುವುದೆಲ್ಲ ಒಂದೇ ಒಂದು ಚೌಕಟ್ಟಿನಿಂದ. ಪಾತ್ರಗಳ ಸರ್ವಾಂಗೀಣ ಚಿತ್ರಣ ಅವನಲ್ಲಿ ಸಿಕ್ಕುವುದಿಲ್ಲ. ಬೆಳವಣಿಗೆಯಂತೂ ಇಲ್ಲವೆ ಇಲ್ಲ. ಈ ಪಾತ್ರಗಳೆಲ್ಲ ಆಗಲೇ ಬದುಕಿನ ಯಾವುದೋ ಒಂದು ಹಂತಕ್ಕೆ ಬಂದು ನೆಲೆಗೊಂಡಂಥವೇ. ಸಿದ್ಧ ಪಾತ್ರಗಳಲ್ಲಿ ತನಗೆ ಬೇಕಾದ ಒಂದು ಅಂಶವನ್ನು ಬೆಳಕಿಗೆ ತರುವ ಕೆಲಸ ನಡೆಸಿದ್ದಾನೆ"[51] ಪ್ರತೀ ಪಾತ್ರವೂ ಅವನ ಕಲೆಗಾರಿಕೆಯಿಂದ ಉನ್ನತೀಕರಣಗೊಂಡಿದೆ.

* * * * *

## ಅಡಿಟಿಪ್ಪಣಿಗಳು

1. ಟಿ. ಎನ್. ನಾಗರತ್ನ : ಹರಿದಾಸರ ಭಕ್ತಿ ಸ್ವರೂಪ : ಪುಟ : 1
2. ಟಿ. ಎನ್. ನಾಗರತ್ನ : ಹರಿದಾಸರ ಭಕ್ತಿ ಸ್ವರೂಪ : ಪುಟ : 1

3. ಬಸವರಾಜ ಕಲ್ಗುಡಿ : ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ : ಪುಟ 221

4. ಫಾಲಾಕ್ಷ : ಕರ್ನಾಟಕದ ಇತಿಹಾಸ ಪರಿಚಯ : ಪುಟ 136

5. ಫಾಲಾಕ್ಷ : ಕರ್ನಾಟಕದ ಇತಿಹಾಸ ಪರಿಚಯ : ಪುಟ 137

6. ಎಚ್. ರಾಮಲಿಂಗಪ್ಪ : ಭಾರತದ ಸಮಗ್ರ ಇತಿಹಾಸ : ಪುಟ 69

7. ಎಚ್. ರಾಮಲಿಂಗಪ್ಪ : ಭಾರತದ ಸಮಗ್ರ ಇತಿಹಾಸ : ಪುಟ 69

8. ಎಚ್. ರಾಮಲಿಂಗಪ್ಪ : ಭಾರತದ ಸಮಗ್ರ ಇತಿಹಾಸ : ಪುಟ 69

9. ಎಚ್. ರಾಮಲಿಂಗಪ್ಪ : ಭಾರತದ ಸಮಗ್ರ ಇತಿಹಾಸ : ಪುಟ 69

10. ಎಂ. ಚಿದಾನಂದ ಮೂರ್ತಿ : ಮಧ್ಯ ಕಾಲೀನ ಕನ್ನಡ ಸಾಹಿತ್ಯ ಹಾಗೂ ಅಸ್ಪೃಶ್ಯತೆ : ಪುಟ 11.

11. ತರಳಬಾಳು : ಸಂಪುಟ 3 : ಸಂಚಿಕೆ 4 : ಜುಲೈ 1978 : ಪುಟ 48

12. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ 53

13. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ 374

14. ತರಳಬಾಳು : ಸಂಪುಟ 3 :ಸಂಚಿಕೆ 4 :ಜುಲೈ 1978 :ಪುಟ 50-51

15. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ 24

16. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 14

17. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 40

18. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 229

19. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 50

20. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 87

21. ತರಳಬಾಳು : ಸಂಪುಟ 3 :ಸಂಚಿಕೆ 4 :ಜುಲೈ 1978 :ಪುಟ 58

22. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 11
23. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 59-60
24. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 62
25. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 87
26. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 138
27. ಹಿರೇಮಲ್ಲೂರ ಈಶ್ವರನ್ : ಹರಿಹರನ ರಗಳೆಗಳು - ಒಂದು ಸಂಖ್ಯಾ ನಿರ್ಣಯ : ಪುಟ 362
28. ಹಿರೇಮಲ್ಲೂರ ಈಶ್ವರನ್ : ಹರಿಹರನ ರಗಳೆಗಳು - ಒಂದು ಸಂಖ್ಯಾ ನಿರ್ಣಯ : ಪುಟ 362
29. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 319-320
30. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 8
31. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 110
32. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಮಾಪತಿಯ ಮಹಾದೇವಿಯರ ರಗಳೆ : ಪುಟ 42
33. ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 387
34. ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಪುಟ 410
35. ಕನ್ನಡ ಸಾಹಿತ್ಯ ಪರಿಷತ್ತು : ಹರಿಹರ ವಿಚಾರ ಸಂಕಿರಣ :ಪುಟ 125
36. ಜಿ. ಎಸ್. ಶಿವರುದ್ರಪ್ಪ : ಸಾಹಿತ್ಯ ಸಮೀಕ್ಷೆ : ಪುಟ 52
37. ಬಿ. ಸಿ. ಜವಳಿ : ರಸಿಕ ಚಕ್ರಿ ಹರಿಹರ ದೇವ:ಪುಟ 97
38. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 303
39. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 322

40. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 333

41. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 389

42. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 87

43. ಬಿ. ಸಿ. ಜವಳಿ : ರಸಿಕ ಚಕ್ರಿ ಹರಿಹರ ದೇವ:ಪುಟ 245

44. ಬಿ. ಸಿ. ಜವಳಿ : ರಸಿಕ ಚಕ್ರಿ ಹರಿಹರ ದೇವ:ಪುಟ 327

45. ಜಿ. ಎಸ್. ಶಿವರುದ್ರಪ್ಪ : ಅನುರಣನ : ಪುಟ 102

46. ಜಿ. ಎಸ್. ಶಿವರುದ್ರಪ್ಪ : ಅನುರಣನ : ಪುಟ 102

47. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 32

48. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಪುಟ 9

49. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 54

50. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 189

51. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಪ್ರಧಾನ ಸಂಪಾದಕ :ಹಾಮಾನಾ : ಸಂಪುಟ 4 : ಪುಟ 1361

**9**

# ಹರಿಹರನ ಕಾವ್ಯಶೈಲಿ ಅಥವಾ ಅಭಿವ್ಯಕ್ತಿ ವಿಧಾನ

ಕಾವ್ಯಶೈಲಿ ಅಥವಾ ಅಭಿವ್ಯಕ್ತಿ ವಿಚಾರದಲ್ಲಿ ಹನ್ನೆರಡನೆ ಶತಮಾನಕ್ಕಿಂತ ಹಿಂದಿನ ಕವಿಗಳು ಅನುಸರಿಸಿದ ನೀತಿ ಭಿನ್ನವಾದುದು. ಅವರು ಸರಳ ಸುಂದರ ಶೈಲಿಗಿಂತ ವಿದ್ವತ್ತಿಗೆ ಮತ್ತು ಪಾಂಡಿತ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದವರು. ಸಂಸ್ಕೃತದ ವ್ಯಾಮೋಹಕ್ಕೆ ಒಳಗಾದವರು. ಕಾವ್ಯ ವಿದ್ವತ್ ಉಳ್ಳವರಿಗೆ ಮೀಸಲು ಎಂದು ನಂಬಿದ್ದವರು. ಅಷ್ಟಾದಶ ವರ್ಣನೆಗಳಿಲ್ಲದಿದ್ದರೆ ಅದು ಕಾವ್ಯವಲ್ಲ ಎಂದು ತಿಳಿದಿದ್ದವರು. ಆದರೆ ಈ ವಿಚಾರದಲ್ಲಿ ಹರಿಹರನ ಧೋರಣೆಯೇ ಬೇರೆ. ಅದು ಕನ್ನಡ ಸಾಹಿತ್ಯಲೋಕದಲ್ಲಿ ವಿಶಿಷ್ಟ ಹಾಗೂ ಕ್ರಾಂತಿಕಾರಕವಾದದ್ದು. ಪ್ರಾಚೀನ ಕಾವ್ಯ ಧೋರಣೆಗೆ ತೀವ್ರ ಭಿನ್ನವಾದದ್ದು. ಈ ವಿಭಿನ್ನತೆ ಹರಿಹರನ ಕಾವ್ಯದಾದ್ಯಂತ ಕಂಡುಬರುತ್ತದೆ. ಇದನ್ನು ಕ್ರಮವಾಗಿ ಈ ಕೆಳಗಿನಂತೆ ಅಧ್ಯಯನ ಮಾಡಬಹುದು.

## 9.1 ಭಾವಗೀತಾಂಶದ ಹೆಚ್ಚುಗಾರಿಕೆ

ಭಾವಗೀತೆ ಎಂದರೆ "ಕವಿಯ ವೈಯಕ್ತಿಕ ಭಾವದ ನೇರ ಅಭಿವ್ಯಕ್ತಿ; ಕತೆಯ ಹಂಗಿಗೆ ಒಳಗಾಗದ ಸ್ವತಂತ್ರ ವ್ಯಕ್ತಿನಿಷ್ಠ ರಚನೆ. ಒಂದು ಕ್ಷಣದ ಭಾವ, ಅನುಭವ ಮತ್ತು ಸಂವೇದನೆ ಅದರಲ್ಲಿ ಮೂರ್ತವಾಗಿರುತ್ತದೆ. ಆದ್ದರಿಂದಲೇ ಭಾವಗೀತೆ 'ಒಂದು ಕ್ಷಣದ ಸ್ಮಾರಕ' [A MOMENTS MONUMENT]. ಭಾವ ತೀವ್ರತೆ, ಸಂಕ್ಷಿಪ್ತತೆ ಮತ್ತು ಗೇಯತೆ"[1] ಈ ಮೂರು ಗುಣಗಳನ್ನೂ ಒಳಗೊಂಡಿರುತ್ತದೆ.

ಮೇಲಿನ ಈ ಅಂಶಗಳು ಹರಿಹರನ ಹಲವಾರು ರಗಳೆಗಳಲ್ಲಿ ಕಂಡುಬರುತ್ತವೆ. ಅದರಲ್ಲೂ ಸಂಕೀರ್ಣ ರಗಳೆಗಳಲ್ಲಿ ಅವು ಯಥೇಚ್ಛವಾಗಿವೆ. ಸಂಕೀರ್ಣ ರಗಳೆಗಳನ್ನು ಬಿಟ್ಟು ಉಳಿದ ರಗಳೆಗಳಲ್ಲಿಯೂ— ತಿರುನೀಲಕಂಠ, ಬಸವರಾಜದೇವ, ಕೋಳೂರ ಕೊಡಗೂಸು, ಅಕ್ಕಮಹಾದೇವಿ ಮುಂತಾದ ರಗಳೆಗಳಲ್ಲಿ— ಭಾವತೀವ್ರ ಅಂಶಗಳು ಕಂಡುಬರುತ್ತವೆ. ಆದರೆ ಅವು ಕತೆಯ ಹಂಗಿಗೆ ಒಳಗಾಗಿವೆ, ಸಂಕ್ಷಿಪ್ತತೆಯಿಂದ ದೂರ ಸರಿದಿವೆ, ಅಲ್ಲಿ ಗೇಯತೆಯ ಅಂಶ ಕಂಡುಬರುವುದಿಲ್ಲ. ಹಾಗಾಗಿ ಭಾವಗೀತೆಯ ಸಾಲಿನಲ್ಲಿ ಅವುಗಳನ್ನು ಸೇರಿಸಲು ಬರುವುದಿಲ್ಲ.

"ಹರಿಹರನ ಭಾವಗೀತಾತ್ಮಕ ರಗಳೆಗಳಲ್ಲಿ ಪಂಚಾಕ್ಷರಿ, ವಿಭೂತಿ, ರುದ್ರಾಕ್ಷಿ ಇತ್ಯಾದಿಗಳ ಮಹಿಮೆಯನ್ನು ಎತ್ತಿತೋರಿಸುವ ರಗಳೆಗಳು ವಸ್ತುನಿಷ್ಠವಾದುವು; ಪಿಂಡೋತ್ಪತ್ತಿ, ಪುಷ್ಪ ಇತ್ಯಾದಿಗಳು ವ್ಯಕ್ತಿನಿಷ್ಠವಾದುವು."[2] ವಸ್ತುನಿಷ್ಠ ರಗಳೆಗಳಿಗಿಂತ ವ್ಯಕ್ತಿನಿಷ್ಠವಾದ ಪಿಂಡೋತ್ಪತ್ತಿ ಮತ್ತು ಪುಷ್ಪರಗಳೆಯಲ್ಲಿ ಭಾವಗೀತೆಯ ಅಂಶ ಯಥೇಚ್ಛವಾಗಿದೆ. ಪಿಂಡೋತ್ಪತ್ತಿ ರಗಳೆಯಲ್ಲಿ "ತಾಯಿಯ ಗರ್ಭವನ್ನು ಪ್ರವೇಶಿಸಿದಂದಿನಿಂದ ಯೌವನವನ್ನು ಮುಟ್ಟುವವರೆಗೆ ಅನುಭವಿಸಿದ ಸಂಕಟಗಳೂ, ಯೌವನದಲ್ಲಿ 'ದೈತೆ'ಯಂತಹ ಹೆಂಡತಿಯನ್ನು ಕಟ್ಟಿಕೊಂಡು, ವಿರಸ ದಾಂಪತ್ಯದ

ಫಲವಾಗಿ ಅಷ್ಟ ಹಾವಿ ಹಿಡಿದು 'ಸಂತತಂ ಯವ್ವನದ ನರಕಮೊಳ್ ಮುಳುಗಿ' ಕೈಲಿದ್ದ ಕಾಸೂ ಮೈಲಿದ್ದ ಕಸುವೂ ಮುಗಿದ ಮೇಲೆ 'ನಡೆವೆಣನೆ, ನುಡಿವೆಣನೆ, ಬಾಳ್ವೆಣನೆ ಪೋಗೆಂದು' ವಾರಸ್ತ್ರೀಯರಿಂದ ಬಂದ ನಿಂದನೆಗಳೂ 'ಕಾಲದಿಂದ ಸಿಗ್ಗಾಗಿ ಪಲವುಪಾಸಂ ಪತ್ತಿ' ಹೆಂಡತಿ ಮಕ್ಕಳ ಕಾಟಕ್ಕಾಗಿ ಪರರ ಆಳಾಗಿ ಭಿಕ್ಷಾಟನೆಯನ್ನು ಕೂಡ ಕೈಗೊಂಡು, ಜೀವ ರೋಸಿ 'ಅನೇಕೆ ಸಂಸಾರವೇಕೆ ಕೇಳಲೆ ತಂದೆ' ಎಂದು ಶಿವನನ್ನು ಕುರಿತು ಮಾಡುವ ಪ್ರಾರ್ಥನೆಗಳು"[3] ಹೃದಯಂಗಮವಾಗಿ ವರ್ಣಿತವಾಗಿವೆ. ಇಡೀ ಕಾವ್ಯದ ತುಂಬ ಹರಿಹರ ಸಾಂಸಾರಿಕ ಬದುಕಿನ ಅನರ್ಥಕತೆಯನ್ನು ಚಿತ್ರಿಸುತ್ತಾನೆ. ಹಾಗೆ ಚಿತ್ರಿಸುವಾಗ ಆತ ಬಳಸುವ ಪದ ಮತ್ತು ವಾಕ್ಯಗಳು ಅವನ ಭಾವಕ್ಕೆ ತಕ್ಕಂತೆ ಬಳುಕುತ್ತವೆ.

ಪಿಂಡೋತ್ಪತ್ತಿ ರಗಳೆಯಲ್ಲಿ ಸಾಂಸಾರಿಕ ಬದುಕಿನ ನರಕವನ್ನು ಚಿತ್ರಿಸಿದರೆ, ಪುಷ್ಪರಗಳೆಯಲ್ಲಿ ವಿರಕ್ತಜೀವನದ ಆನಂದದ ಸ್ಥಿತಿಯನ್ನು ಮನೋಹರವಾಗಿ ಚಿತ್ರಿಸುತ್ತಾನೆ. ಶಿವಪೂಜೆಗಾಗಿ ಹೂತೋಟದಿಂದ ಹೂಗಳನ್ನು ಕಿತ್ತು ತಂದು ಪೂಜೆಯಲ್ಲಿ ನಿರತವಾಗುವುದು ಈ ರಗಳೆಯ ವಸ್ತು. ಆದರೆ ಆತ ಹೂತೋಟಕ್ಕೆ ಹೋಗುವಾಗ, ಹೂಗಳನ್ನು ಕೀಳುವಾಗ, ಹೂಗಳನ್ನು ಕಿತ್ತು ತಂದು ಮಾಲೆ ಕಟ್ಟುವಾಗ, ಕಟ್ಟಿದ ಮಾಲೆಯನ್ನು ಶಿವನಿಗೆ ಮುಡಿಸುವಾಗ— ಪ್ರತೀ ಸಂದರ್ಭದಲ್ಲೂ ಅವನ ಮನಸ್ಸಿನಲ್ಲಿ ಉಂಟಾಗುವ ಭಾವಗಳ ಚಿತ್ರ ಅನ್ಯಾದೃಶವಾಗಿದೆ. ಆತ ಮುಂಜಾನೆ ಎದ್ದು ಹೂತೋಟಕ್ಕೆ ಹೋಗುತ್ತಾನೆ. ಹೋಗುವಾಗ ಕೈಕಾಲು ಮುಖ ತೊಳೆದು ವಿಭೂತಿ ಧರಿಸುತ್ತಾನೆ. ದೂರದಿಂದಲೇ ಹೂಗಳನ್ನು ಕಂಡು ಕುಣಿಯುತ್ತಾನೆ. ಪ್ರತೀ ಹೂಗಳ ಹತ್ತಿರ ಹೋಗಿ ಅವುಗಳೊಡನೆ ಮಾತನಾಡುತ್ತಾನೆ. ಹೂಗಳು ಕೂಡ ಮನುಷ್ಯರೆಂದೇ ಅವನ ಭಾವನೆ. ವಿನಯ ತುಂಬಿದ ಅವನ ಮಾತು ಅತ್ಯಂತ ಸೊಗಸು. ಸಂಪಿಗೆ, ಸೇವಂತಿಗೆ, ಇರುವಂತಿಗೆಗಳನ್ನು ಕಂಡು ನಲಿದು ಜಾಜಿಯ ಬಳಿಗೆ ಬರುತ್ತಾನೆ. ಜಾಜಿಯನ್ನು ಕಂಡು -

> **ಜಾತಿನೀನೇ ಸಕಲ ಪುಷ್ಪ ಜಾತಿಗೆ ಜಾತಿ**
> **ಭೂತೇಶ್ವರನ ಜಡೆಯ ಮುಡಿಗೇರಿದೊಡೆ ಜಾತಿ**[4]

ಎಂದು ಅದನ್ನು ಹೊಗಳಿ ಕೇದಗೆಯ ಬಳಿಬರುತ್ತಾನೆ. ಕೇದಗೆಯನ್ನು ಕಂಡು -

> **ಹೊರಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ**
> **ಹೆರೆಸೂಡಿದನ ಗುಪ್ತ ಭಕ್ತನಂತಿರ್ಪ ಪರಿ**[5]

ಎಂದು ಅದನ್ನೂ ಹೊಗಳಿ ಬುಟ್ಟಿಗೆ ಹಾಕಿಕೊಳ್ಳುತ್ತಾನೆ. ಅನಂತರ ಮರುಗ, ಮಲ್ಲಿಗೆ ಮುಂತಾದ ಹೂಗಳನ್ನೆಲ್ಲ ಶೇಖರಿಸಿ ಮಾಲೆಕಟ್ಟಲು ಒಂದೆಡೆ ಬರುತ್ತಾನೆ. ಆ ಮಾಲೆಯನ್ನು ಕಟ್ಟುವಾಗ ಅವನಲ್ಲಿ ಉಂಟಾಗುವ ಭಾವ ಅದೆಷ್ಟು ಕೋಮಲವೆಂದರೆ, ಆತ ಹೂಗಳನ್ನು ಕೈಯಲ್ಲಿ ಮುಟ್ಟಲೂ ಬೆದರುತ್ತಾನೆ. ಆ ಹೆದರಿಕೆಯಲ್ಲಿ ಹೂಗಳನ್ನು ಮನಮುಟ್ಟಿ ಮುಟ್ಟುತ್ತಾನೆ.

ನೋಡುವರೆ ಎಲ್ಲಿ ಬಾಡಿಹೋಗುತ್ತವೆಯೋ ಎಂದು ಕಣ್ಣು ಮುಚ್ಚಿಕೊಳ್ಳುತ್ತಾನೆ. ಆಕಸ್ಮಿಕವಾಗಿ ಕೈತಪ್ಪಿ ಹೂ ಬಿದ್ದರೆ 'ಮಿಗೆ ಸತ್ತು' ಹುಟ್ಟುತ್ತಾನೆ. ನಮ್ಮ ದೃಷ್ಟಿಯಲ್ಲಿ ಹೂವು ಒಂದು ಯಕಃಶ್ಚಿತ್ ಆದದ್ದು. ಆದರೆ ಅದು ಹರಿಹರನಿಗೆ ದೈವ ಸ್ವರೂಪವಾದದ್ದು!

ಹೂ ಮಾಲೆಯನ್ನು ಕಟ್ಟುವಾಗ ಹೂವಿನ ಪರಿಮಳಕ್ಕೆ ದುಂಬಿಗಳು ಬಂದೆರಗುತ್ತವೆ. ಆ ದುಂಬಿಗಳನ್ನು ಕುರಿತಂತೆ ಅವನಾಡುವ ಮಾತು ಅಪೂರ್ವವಾದದ್ದು ;

**ಬೇಡೆಲೆಲೆ ಹಂಪೆಯರಸನ ಕುಮಾರ ಶಿತಗ**
**ನಾಡಂಬರಂಗಳಂ ಕೊಳ್ಳನಾಜವಿಗೆರಗ**
**ಅಳಿಯಾಸೆ ಬೇಡ, ನಿಮಗಿಲ್ಲಿ ಸೋಲುವರಿಲ್ಲ**
**ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ**[6]

ಎಂಬ ಈ ಮಾತಿನಲ್ಲಿ ಸ್ವಲ್ಪವೂ ಒರಟುತನವಿಲ್ಲ. ಎಂಥ ಸಂದರ್ಭದಲ್ಲೂ ಅವನ ಮಾತು ವಿನಯದ ಸೀಮೆಯನ್ನು ದಾಟುವುದಿಲ್ಲ. ದುಂಬಿಗಳನ್ನೆಲ್ಲ ಓಡಿಸಿದ ಮೇಲೆ ಅವನು ಹೂ ಮಾಲೆಯನ್ನು ತೆಗೆದುಕೊಂಡು ಶಿವನ ಗುಡಿಗೆ ಬರುತ್ತಾನೆ. ಶಿವನನ್ನು ಕುರಿತು 'ಏನೆನ್ನ ಶಿವನೆ ಉಪ್ಪವಡಿಸಿರ್ದಾ ತಂದೆ ?' ಎನ್ನುತ್ತಾ ಸೇವಂತಿಗೆ ಹೂವಿನ ಪನ್ನೀರಿನಿಂದ ಮುಖವನ್ನು ತೊಳೆಯುತ್ತಾನೆ. ಹೂಗಳಿಂದ ಶಿವನನ್ನು ಸಿಂಗರಿಸುತ್ತಾನೆ. ಹೀಗೆ ಪ್ರತೀ ಸನ್ನಿವೇಶದಲ್ಲೂ ಭಾವ ತುಂಬಿ ಹರಿಯುವುದನ್ನು ಕಾಣುತ್ತೇವೆ.

ವಸ್ತುನಿಷ್ಠ ರಗಳೆಗಳ ಗುಂಪಿಗೆ ಸೇರಿದ ವಿಭೂತಿ, ರುದ್ರಾಕ್ಷಿ ಮುಂತಾದ ರಗಳೆಗಳಲ್ಲೂ ಭಾವಗೀತೆಯ ಅಂಶಗಳು ಕಂಡುಬರುತ್ತವೆ. ಆದರೆ ಅವುಗಳಲ್ಲಿ ಮೇಲಿನ ರಗಳೆಗಳಷ್ಟು ತೀವ್ರತೆಯನ್ನು ಕಾಣಲಾಗದು. ಅವು ಆಯಾಯ ವಸ್ತುವಿನ ಬಗೆಗೆ ಹರಿಹರನಿಗೆ ಇರುವ ಆಪ್ತತೆ ಮತ್ತು ನಂಬಿಕೆಯನ್ನು ಚಿತ್ರಿಸುತ್ತವೆ.

## 9. 2 ಗದ್ಯದಲ್ಲಿ ತೋರಿದ ಸ್ವೋಪಜ್ಞತೆ

ಗದ್ಯದ ಬಳಕೆ ಹರಿಹರನಿಗೂ ಹಿಂದೆ ಇತ್ತು. ಶಾಸನ ಮತ್ತು ಚಂಪೂ ಕೃತಿಗಳಲ್ಲಿ ಇದರ ಬಳಕೆಯನ್ನು ಕಾಣುತ್ತೇವೆ. ಆದರೆ ಅಲ್ಲಿ ಪದ್ಯಕ್ಕೆ ಇದ್ದ ಬೆಲೆ ಗದ್ಯಕ್ಕೆ ಇರಲಿಲ್ಲ. ಗದ್ಯದ ಮಹತ್ವವನ್ನು ಅರಿತು ಕಾವ್ಯದಲ್ಲಿ ಅಳವಡಿಸಿಕೊಂಡವನೆಂದರೆ ಹರಿಹರ. ಅವನ ಗದ್ಯ ಕನ್ನಡ ಸಾಹಿತ್ಯದಲ್ಲಿ ವಿನೂತನವಾದದ್ದು. ಛಂದಸ್ಸು, ವ್ಯಾಕರಣ, ವಸ್ತು, ಶೈಲಿ ಮುಂತಾದವುಗಳಲ್ಲಿ ಹಲವು ವಿನೂತನತೆಗಳನ್ನು ಮೆರೆದ ಹಾಗೆ ಗದ್ಯದಲ್ಲಿಯೂ ವಿನೂತನತೆಯನ್ನು ಮೆರೆದಿದ್ದಾನೆ. ಅವನ ಗದ್ಯ ಸ್ವತಂತ್ರವಾದದ್ದು. ಅಲ್ಲಿ ಯಾರ ಅನುಕರಣೆಯೂ ಇಲ್ಲ. ಆದರೆ ವಚನಕಾರರ ವಚನಗಳಲ್ಲಿನ "ಮೊನಚು, ಸೊಗಡು, ಸತ್ವ, ನೇರತನ, ಅವರು ಜೀವನದಿಂದ ಎತ್ತಿಕೊಳ್ಳುವ ದೃಷ್ಟಾಂತ, ರೂಪಕ, ಉಪಮೆ ಮುಂತಾದವುಗಳನ್ನು ಅನುಕರಣೆ ಮಾಡಿದ್ದಾನೆ. ಆದರ ಭಾಷೆಯ ದೃಷ್ಟಿಯಿಂದ ತನ್ನದೇ ದಾರಿಯನ್ನು" ನಿರ್ಮಿಸಿಕೊಂಡಿದ್ದಾನೆ. ಅವನ ಭಾಷೆ ಅತ್ಯಂತ

ತಿಳಿಯಾದದ್ದು. ಸಾಮಾನ್ಯರಿಗೂ ಅರ್ಥವಾಗುವಂಥದ್ದು. ಅಲ್ಲಿ ಸಂಸ್ಕೃತದ ಅಬ್ಬರವಿಲ್ಲ, ಪಾಂಡಿತ್ಯದ ಮೆರಗೂ ಇಲ್ಲ. ಚಿಕ್ಕ ಚಿಕ್ಕ ಪದ ಮತ್ತು ವಾಕ್ಯಗಳಿಂದ ಕೂಡಿರುತ್ತದೆ. ಕೆಲವೊಮ್ಮೆ ಒಂದೆರಡು ಶಬ್ದಗಳೇ ವಾಕ್ಯವಾಗಿಬಿಟ್ಟಿವೆ. ವೀರ, ಶೃಂಗಾರ, ವೈರಾಗ್ಯ, ಭಕ್ತಿ ಯಾವುದನ್ನೇ ಆಗಲಿ ಅಷ್ಟೇ ಸುಂದರ ಹಾಗೂ ಪರಿಣಾಮಕಾರಿಯಾಗಿ ಪಡಿಮೂಡಿಸುವ ಶಕ್ತಿಯನ್ನು ಗದ್ಯ ಹೊಂದಿದೆ.

ನಂಬಿಯಣ್ಣನ ರಗಳೆಯಲ್ಲಿ ನಂಬಿಯಣ್ಣ ತಿರುವತ್ತಿಯೂರ ದೇವಾಲಯದಲ್ಲಿ ಸಂಕಿಲಿನಾಚಿಯನ್ನು ಕಾಣುತ್ತಾನೆ. ಆ ಬಳಿಕ ಅವನು ಅವಳನ್ನು ಕೊಡಿಸಬೇಕೆಂದು ಶಿವನನ್ನು ಕೇಳುತ್ತಾನೆ. ಆಗ ಶಿವನಿಗೂ ನಂಬಿಯಣ್ಣನಿಗೂ ನಡೆಯುವ ಒಂದು ಸಂಭಾಷಣೆ ಹೀಗಿದೆ :

"ಇತ್ತಲ್ ನಂಬಿಯಣ್ಣಂ ಪ್ರದಕ್ಷಿಣಮಂ ಕಳಿದು ತಿರುಗಿ ಬಂದೈದಾಱಡಿಯೊಳೇಳೆಂಟಪಸ್ಥೆಗೊಂಡು ಶಿವನಲ್ಲಿಗೈತಂದೆಲೆಯೆಲೆದೇವಾ, ಪ್ರಮಾಣ ಪತ್ರಮಂ ಕೊಡು ಕೊಡು ಕೊಟ್ಟ ಬಳಿಕಂ ಮಾತಾಡೆಂಬ ಬಳಲ್ಕುಡಿಯಂ ಕೇಳ್ದು ಶಿವಂ ಕೌತುಕಂಬಟ್ಟಿದೇನಿದೇನೆಲೆ ಮಗನೆ ನಂಬಿ ನಿಷ್ಕಾರಣಮಂ ಮುನಿಯದೆ ಕಾರಣಮಂ ಪೇಳ್ದು ಬಳಿಕ ಮುಳುವುದೆನೆ ದೇವರ ದೇವ, ನಿಮ್ಮರಮನೆಯ ಪರಿ ಸೂತ್ರದೊಳೊರ್ವ ಸಂಕಿಲಿನಾಚಿಯರೆಂಬನರ್ಘ್ಯ ರತ್ನಮಂ ಕಂಡೆನೆನಗಾ ಕನ್ನಿಕೆಯಂ ಮಾಡಿಕೊಡುವುದೆನೆ ಶಿವ ಶಿವ ಎಂದು ಶಿವಂ ಕಿವಿಯಂ ಮುಚ್ಚಿಕೊಳುತ್ತಿದಾವ ದುರುಳತನವಿದಾವ ಮೂರ್ಖತ್ವವಿದಾವರಸುತನವಿದಾವ ಪಾಪದ ಸರಸವಿದಂ ನುಡಿಯದಿರವರ ಕುಲಕ್ಕೆ ಕನ್ನಡಿ ಕಲ್ಮಷಂ ಮಾರ್ತಂಡಂ ಮಲಿನಂ ಆ ಮಾತನಾಡದಿರ್ ಅವಳಂ ಶೈಶವ ಕಾಲದೊಳು ಮುನ್ನೊರ್ವ ರಾಜಪುತ್ರಂ ತನಗೆಂದು ಪೆಸಗೊಂಡವಂ ಸತ್ತಡವನೆ ಗಂಡನೀ ಬಾಳ್ಗೆಂದು ಸರ್ವಶುಚಿಯಾಗಿ ಕಟ್ಟುಬ್ಬಟೆಯಾಗಿ ನಡೆಯಿಸುತಿರ್ದಪರೀ ಮಾತನವರ ಮಾತೆಪಿತರು ಕೇಳ್ದಡೆನ್ನುವಂ ನಿನ್ನುಮನಿರಲೀಯರು ಮರುಳುಮಗನೆ ಇದಂ ಬಿಡು ಬಿಡು ಬಿಟ್ಟುಕಳೆಯೆಂದು ಮನದೊಳು ಸಂತೋಷಂಬಡುತ್ತಂ ಮಾತಿನೊಳಂಜಲೆಂದೊಲಿದು ನುಡಿಯೆ ನಂಬಿಯಣ್ಣಂ ಕೇಳ್ದು ಬಲ್ಲೆಬಲ್ಲೆನಿದೆಲ್ಲವಂ ಕೊಳ್ಳೆಕೊಳ್ಳೆನೀಪಗಟನೆನಗೆ ಸಂಕಿಲಿ ಬೇಡ ಪ್ರಮಾಣ ಪತ್ರವೆ ಸಾಲ್ಗುಂ ಕೊಡು ಕೊಡುಯೆಂದು ಕಾಮಗಿಚ್ಚಿಲಿ ಬಿದ್ದ ಕೀಡಿಯಂತೆ ಮಿಡುಕಿ ಬಿದ್ದು ಸಿಡಿಮಿಡಿಗೊಂಡು ಮೊಲೆಗುಡದ ತಾಯ ಕಾಲ ಬಾಯೊಳು ಶಿಶು ನಾಲಗೆಗಿತ್ತಳುವಂತೆ ರಂಗಮಂಟಪದೊಳು ಪೊರಳ್ದು ಹೊಡಕರಿಸಲಾಱದ ಕಿಂಕುರ್ವಾಣಂ ಕೈಮಿಕ್ಕು ತೊತ್ತುಗೊಂಡ ತವರೆ ಆಳ್ಗೊಂಡರಸನೆ ಮನಂಗೊಂಡ ಮಹಿಮನೆ ಸುರತಂಗೊಂಡರವೆಣ್ಣೆಯೆಂದು ಮಱುಗಿ ಮಱುಗಿ ಮೊಱತೆಯಿಟ್ಟೊಱಲುವ ನಂಬಿಯಂ ಶಂಭು ಕರುಣಿಸಿ ನೋಡಿ ಹೋ ಹೋ ಮಗನೆ ಇನಿತಾಸುರವೇಕಂಜದಿರಂಜದಿರ್ ಮೆಲ್ಲನೆ ಪೋಗಿ ವಿಚಾರಿಸಿಬಂದಪೆ ......"[೪]

ಎಂಥ ಹಿತವಾದ ಸಂಭಾಷಣೆ! ಇಬ್ಬರ ಮಾತಿನಲ್ಲೂ ಅವರ ನಡುವೆ ಇದ್ದ ಪ್ರೀತಿ ಮತ್ತು ಆತ್ಮೀಯತೆ ವ್ಯಕ್ತವಾಗುತ್ತದೆ. ನಂಬಿಯಣ್ಣನಿಗೆ ಅವನು ಶಿವ ಎಂಬ ಪರಿಜ್ಞಾನವೇ ಇಲ್ಲ. ಶಿವನಿಗೆ ಇವನೊಬ್ಬ ಸಾಮಾನ್ಯ ವ್ಯಕ್ತಿ ಎನ್ನುವ ಕಲ್ಪನೆಯೂ ಇಲ್ಲ. ಇಬ್ಬರಲ್ಲೂ ಒಂದು ರೀತಿಯ ಸಹೋದರ ಭಾವವೇ ತುಂಬಿಕೊಂಡಿದೆ. ಹಟ ಹಿಡಿಯುವುದು, ಮುನಿಸಿಕೊಳ್ಳುವುದು, ಸಮಾಧಾನಿಸುವುದು ಎಲ್ಲವೂ ಸ್ವಜವಾಗಿ ಚಿತ್ರಣಗೊಂಡಿವೆ. 'ಅವರ

ಕುಲಕ್ಕೆ ಕನ್ನಡಿ ಕಲ್ಮಷಂ, ಮಾರ್ತಂಡಂ ಮಲಿನಂ' ಎಂಬ ಮಾತಾಗಲೀ 'ಅವರಿಗೆ ಈ ಮಾತು ಗೊತ್ತಾವರೆ ನನ್ನನ್ನೂ ನಿನ್ನನ್ನೂ ಇರಗೊಡರು' ಎಂಬ ಮಾತಾಗಲಿ ತುಂಬ ಸಹಜ ಮಾತಿನಂತೆಯೇ ತೋರುವುದು.

'ಬಸವರಾಜದೇವರ ರಗಳೆ'ಯಲ್ಲಿ, ಬೀದಿ ಬೀದಿಯಲ್ಲಿ ದಿವ್ಯಾಭರಣಗಳನ್ನು ತೊಟ್ಟು ಸುತ್ತಾಡುವ ಶರಣರನ್ನು ಕಂಡ ಅನ್ಯಧರ್ಮೀಯರು ಅಸೂಯೆಯಿಂದ ನರಳಿ ಬಿಜ್ಜಳರಾಯನಿಗೆ ದೂರು ಸಲ್ಲಿಸುವ ಪ್ರಸಂಗವೊಂದು ಹೀಗಿದೆ :

"ಬಿಜ್ಜಳನ ಗುರುಪಪ್ಪ ನಾರಣಕ್ರಮಿತಂ ಸೌರಿಭಟ್ಟಂ ವಿಷ್ಣುಪೆದ್ದಿಗಳು ಮೊದಲಾದ ವೈಷ್ಣವರೆಲ್ಲಂ ಕಂಡು ಅಸೂಯೆಯೊಳು ನಡೆದು ಅಹಂಕಾರದೊಳುಬ್ಬಿ ಮತ್ಸರದೊಳು ಬಿರಿದು ಹರಭಕ್ತರ ಸಂಪದಮಂ ನೋಡಲಾಱದೆ ಬಿಸುಸುಯ್ದು ಸೈರಿಸಲಾಱದೆ ಕುದಿಕುದಿದು ಕೋಟಲೆಗೊಂಡು ಅನುತಾಪದೊಳುರಿದು ಮನಂ ಕರಿಮುರಿವೋಗಿ ಬುದ್ಧಿ ಬಱಿದಾಗಿ, ನಿಲಲಾಱದೆ ಗಳಗಳನೆ ಪರಿತಂದು - ಎಲೆ ಎಲೆ ಮರುಳರಸ ಪುರದೊಳು ಸುಳಿವ ಶಿವಭಕ್ತರ ಸಿರಿಯನೇನಂ ಬಿನ್ನವಿಪೆವು! ನಿನ್ನ ಭಂಡಾರದೊಳು ನೀನಿಕ್ಕಲಮ್ಮದ ಪದಕಂ ಶರಣರ ಪೇರುರದೊಳು, ನೀಂ ಮುಟ್ಟಲಂಜುವ ತೋರಹಾರಂ ಭಕ್ತರ ಕೊರಳ್ಗಳೊಳು ......ಇಂತು ಷಡ್ದರ್ಶನಂ ಕೀಳಾದುದು, ಮೃಡದರ್ಶನಂ ಮೇಲಾದುದು, ಇದಂ ದಿಟಂ ವಿಚಾರಿಸದೆ ಕ್ಷತ್ರಿಯ ಧರ್ಮವಂ ಕೆಡಿಸುವರೆ? ಈ ರಾಜ್ಯಮನುದಾಸೀನ ಮಾಳ್ಪರೆ? ಆಗಲಿದಂ ಸೈರಿಸಿರ್ಪೊಡೆ ಎಮ್ಮೆಲ್ಲರಂ ಬೀಳ್ಕೊಟ್ಟು ನೀನುಂ ಬಸವನುಂ ಸುಖದೊಳಿಪ್ಪುದು."[9]

ಮನುಷ್ಯನ ಅಸೂಯೆಯು ಪರಮಾವಧಿ ಹೇಗೆ ಕೆಲಸ ಮಾಡುತ್ತದೆ ಎಂಬುದಕ್ಕೆ ಈ ಗದ್ಯಭಾಗ ಒಳ್ಳೆಯ ಉದಾಹರಣೆ. ಅಹಂಕಾರದೊಳುಬ್ಬಿ, ಮತ್ಸರದೊಳು ಬಿರಿದು, ಸೈರಿಸಲಾರದೆ ಕುದಿದು ಕೋಟಲೆಗೊಂಡು, ಅನುತಾಪದೊಳು ಮನಂಕರಿಮುರಿವೋಗಿ, ಬುದ್ಧಿಬರಿದಾಗಿ, ನಿಲಲಾರದೆ ಗಳಗಳನೆ ಪರಿತಂದು - ಎಂಬ ಈ ವಾಕ್ಯಗಳು ಅಸೂಯೆಯ ತೀವ್ರತೆಯನ್ನು ಸಮರ್ಥವಾಗಿ ಕಟ್ಟಿಕೊಡುತ್ತವೆ.

ಮಹಾದೇವಿಯಕ್ಕನ ರಗಳೆ'ಯಲ್ಲೂ ಹರಿಹರ ಬಳಸುವ ಗದ್ಯ ಉತ್ಕೃಷ್ಟವಾದದ್ದು. ವಿಷಮ ಸಂಸಾರದ ಬದುಕು ಹೇಗಿರುತ್ತದೆ ಎಂಬುದಕ್ಕೆ ಇದಕ್ಕಿಂತ ಇನ್ನೊಂದು ಚಿತ್ರ ಬೇಕಿಲ್ಲ.

"ಮಹದೇವಿಯರ ಮನದನುರಾಗವಿಳಿವಂತೆ ಪ್ರಭಾಕರಂ ಪಶ್ಚಿಮವಾರ್ಧಿಯೊಳಿಳಿಯೆ, ಮನದುಮ್ಮಳಂ ಕವಿವಂತೆ ತಮಂ ಕವಿಯೆ, ಶರಣರಂ ಪಿಂಗಲಾಱದಂಗಲಾಚಿ ಸಂಸಾರಕ್ಕೆ ಸುರುಳ್ದು ಕಾಮಕ್ಕೆ ಕೆರಳ್ದು ಅಲ್ಪ ಸುಖಕ್ಕೆ ತೆರಳ್ದು ಮನವಲ್ಲದ ಮನದೊಳಂತಕ್ಕೆ ಮಹೇಶ್ವರರಂ ಮಹಾಮನೆಗೆ ಬಿಜಯಂಗೆಯ್ಯವೇಳ್ದು ಬಿನ್ನಪಂಗೆಯ್ದು, ಕಜ್ಜನೆ ಕಂದಿ ಸುಜ್ಜನೆ ಸುಯ್ದು ಸುಮ್ಮಾನವುಡುಗಿ ನಡೆವುತ್ತಯ್ಯೋ ಶಿವನೆ ಉಳಿವ ಕರೆವ ನೇಹವುಂಟೆ, ಸಂಸಾರಕ್ಕೆ ನಿಮ್ಮಲ್ಲಿಗೆಡೆ ಯಾಡುವ ಭಕ್ತಿಯುಂಟೆ, ಏನಯ್ಯ ಶಿವನೆ, ಏನಂ ಪೇಳ್ವೆನೀ ಲಜ್ಜೆಯ ಮಾತನೆಂದು ಚೆನ್ನಮಲ್ಲಿಕಾರ್ಜುನಂಗೆ ಮೊಱೆಯಿಟ್ಟು, ಮುಳಿದು ಗೀತಮುಂ ಪಾಡುತ್ತೆ ಭಂಡಾಳದ ಮನೆಯಲ್ಲಿಗೆ ಬಂದಾಭರಣಮಂ ತೆಗೆದು ಬಿಸುಟ್ಟು ಮೈಲಿಗೆಯನುಟ್ಟು ದುಮ್ಮಾನಮಂ ತೊಟ್ಟು

ನಿರ್ವೇದಮಂ ಮುಂದಿಟ್ಟು, ಸಿಂಗರಕ್ಕೆ ಸಲ್ಲದೆ ತಾಂಬೂಲಮನೊಲ್ಲದೆ ಪರಿಮಳದೊಳು ನಿಲ್ಲದೆ ಕೈಗೊಟ್ಟು, ಬರ್ಪ ಕೆಳದಿಯರ ಮೇಲೆ ಕರಪಲ್ಲವಮನಿಟ್ಟು, ಮೆಲ್ಲಮೆಲ್ಲನೆ ನಡೆತಪ್ಪಾಗಳು, ಸಜ್ಜೆಯ ಮನೆಯೊಳಾಸೆಗೆಯ್ವುತ್ತಿಪ್ಪ ಕೌಶಿಕರಾಜಂ ಹಾವುಗೆಯ ದನಿಗೆ ಭಾವರಸಂ ದಳವೇಱೆ ನೆಲನುಗ್ಗಡಣೆಗೆ ಸಲವು ಬಲವೇಱೆ ನಡೆತಂದು ಮಹಾದೇವಿಯರು ಸಿರಿಮಂಚದೊಳು ಮೆಯ್ಯನೀಡಾಡೆ ಮಾಸಿದ ರೂಪು ಮನೋಹರಮಾಗೆ ...... ಪರುಶದ ಪುತ್ತಳಿಯ ಮುನಿಸಿನ ಸೋಂಕು ಕರ್ಬೊನ್ನ ಪ್ರತುಮೆಗೆ ವರ್ಣೋತ್ಕರ್ಷವೆಂಬಂತೆ ಮಹಾದೇವಿಯರುದಾಸೀನಮೆ ಕೌಶಿಕರಾಜಂಗೆ ಕಾಮಸಾಮ್ರಾಜ್ಯಮಾಗಿರೆ ......"[10]

ಇಡೀಭಾಗದಲ್ಲಿ, ಒಂದುಕಡೆ ಮಹಾದೇವಿಯಕ್ಕನ ವೈರಾಗ್ಯ ಇನ್ನೊಂದು ಕಡೆ ಮಹಾದೇವಿಯಕ್ಕಳೊಡನೆ ಸುರತ ಸುಖಕ್ಕಾಗಿ ಹಾತೊರೆಯುವ ಕೌಶಿಕನ ವಿಷಮ ಸಂಬಂಧ, ಇನ್ನೇನು ಕೌಶಿಕನೊಡನೆ ತಾನು ಸೇರಬೇಕಲ್ಲ ಎಂಬ ನೋವಿನಲ್ಲಿ ಆಕೆ ಅನುಭವಿಸುವ ಸಂಕಟ, ಅನುತಾಪಗಳನ್ನು ಕವಿ ಸಮುಚಿತ ಅಲಂಕಾರ ಮತ್ತು ಪದಗಳಿಂದ ಚಿತ್ರಿಸಿದ್ದಾನೆ. ಇಷ್ಟು ತೀವ್ರವಾಗಿ, ಗಾಢವಾಗಿ, ಆಕೆಯ ಒಲ್ಲದ ಮನಸ್ಸಿನ ಆವೇಗಗಳನ್ನು ಅನ್ಯ ಶಬ್ದಗಳಿಂದ ಚಿತ್ರಿಸಲು ಸಾಧ್ಯವಿಲ್ಲ ಎನಿಸುತ್ತದೆ. ಅಲ್ಲಿ ಒಂದು ಶಬ್ದವನ್ನು ತೆಗೆದು ಹಾಕಿದರೂ ಇಡೀ ಪದ್ಯ ಹಾಳುಗೆಡುತ್ತದೆ ಎನ್ನುವ ಹಾಗೆ ಹರಿಹರ ಪದ ಸಂಯೋಜನೆ ಮಾಡಿದ್ದಾನೆ. ಇದೇ ಸಂದರ್ಭದಲ್ಲಿ ಕವಿ ಬಳಸುವ 'ಪರುಷದ ಪುತ್ತಳಿಯ ಮುನಿಸಿನ ಸೋಂಕು ಕರ್ಬೊನ್ನ ಪ್ರತುಮೆಗೆ ವರ್ಣೋತ್ಕರ್ಷವೆಂಬಂತೆ' ಎಂಬ ಉಪಮಾಲಂಕಾರ ಇಡೀ ಸನ್ನಿವೇಶಕ್ಕೆ ಜೀವ ತುಂಬಿದೆ.

ಇವುಗಳಲ್ಲದೆ ಬಸವರಾಜದೇವರ ರಗಳೆಯಲ್ಲಿ ಬರುವ ಬಸವಣ್ಣ ಜನಿವಾರ ಕಿತ್ತು ಮನೆ ಬಿಟ್ಟು ಹೋಗುವಾಗಿನ ಚಿತ್ರಣ, ಕಪ್ಪಡಿ ಸಂಗಮಕ್ಕೆ ಬಸವಣ್ಣನವರು ಬಂದಾಗ ತಾನೇ ಬಸವಣ್ಣನೆಂಬಂತೆ ಚಿತ್ರಿಸುವ ಸಂದರ್ಭ, ಶಿವನು ಮಾಯಿದೇವಿಯನ್ನು ಕೇಳಿಕೊಂಡು ಬಂದಾಗಿನ ಚಿತ್ರಣ, 'ಮಹಾದೇವಿಯಕ್ಕನ ರಗಳೆ'ಯಲ್ಲಿ ಮಹಾದೇವಿಯಕ್ಕ ನಿದ್ರೆಯಲ್ಲಿರುವಾಗ ಅವಳನ್ನು ನೋಡಲು ಬಂದ ಮಹೇಶ್ವರರಿಗೆ ಕೌಶಿಕ ಸುಳ್ಳು ಹೇಳಿ ಹಿಂದೆ ಕಳುಹಿಸಿದಾಗಿನ ಸಂದರ್ಭದ ಚಿತ್ರಣ, 'ಮಲುಹಣನ ರಗಳೆ'ಯಲ್ಲಿ ಪದ್ಮಾವತಿ ಮಲುಹಣ-ಮಲುಹಣೆ ಯರಿಬ್ಬರನ್ನು ದೂರಮಾಡಿದ ಸಂದರ್ಭದ ಚಿತ್ರಣ, 'ಶಂಕರದಾಸಿಮಯ್ಯನ ರಗಳೆ'ಯಲ್ಲಿ ಜೇಡರ ದಾಸಿಮಯ್ಯ ತಪ್ಪುಮಾಡಿದಾಗ ಅವನ ಹೆಂಡತಿ ದುಗ್ಗಳೆ ಶಂಕರದಾಸಿಮಯ್ಯನಲ್ಲಿ ಜೇಡರ ದಾಸಿಮಯ್ಯನ ತಪ್ಪನ್ನು ಮನ್ನಿಸುವಂತೆ ಕೇಳಿಕೊಳ್ಳುವ ಸಂದರ್ಭದ ಚಿತ್ರಣ, ಆದಯ್ಯನ ರಗಳೆಯಲ್ಲಿ ಪಾರಿಷ ಪಂಡಿತನು ಸೋನವನ್ನು ತೆಗೆದುಕೊಂಡು ಹೋಗಲು ಬಂದ ಸಂದರ್ಭದ ಚಿತ್ರಣ, 'ನಂಬಿಯಣ್ಣನ ರಗಳೆ'ಯಲ್ಲಿ ಶಿವನು ವೃದ್ಧ ವೇಷವನ್ನು ಧರಿಸಿಬಂದು ಗಲಾಟೆ ಎಬ್ಬಿಸುವ ಸಂದರ್ಭದ ಚಿತ್ರಣ - ಹೀಗೆ ಇನ್ನೂ ಹಲವು ಉದಾಹರಣೆಗಳಿವೆ.

ಪ್ರತಿಯೊಂದು ಸಂದರ್ಭದಲ್ಲೂ ಆತ ತರುವ ಶಬ್ದಾಲಂಕಾರ ಮತ್ತು ಅರ್ಥಾಲಂಕಾರ ವನ್ನು ಸನ್ನಿವೇಶಕ್ಕೆ ತಕ್ಕಂತೆ ಬಳಸಿಕೊಳ್ಳುವ ಭಾಷೆ, ಚಿಕ್ಕ ಚಿಕ್ಕ ಪದ ಮತ್ತು ಸಾಲುಗಳಲ್ಲಿ ನೀಡುವ ಹಿರಿದಾದ ಅರ್ಥ, ಸುಂದರವಾದ ವರ್ಣನೆ ಎಲ್ಲವೂ ಕವಿಯ ಗದ್ಯದ ಬಳಕೆಯಲ್ಲಿನ ಸ್ವೋಪಜ್ಞತೆಯನ್ನು ಎತ್ತಿಹಿಡಿಯುತ್ತವೆ.

ಹರಿಹರ ರಗಳೆಗಳಲ್ಲಿ ಬಳಸಿದ ಗದ್ಯದ ಉತ್ಕೃಷ್ಟತೆಯನ್ನು ಕುರಿತಂತೆ ಕೆಲವು ವಿದ್ವಾಂಸರು ತಮ್ಮದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಡಿ. ಎಲ್. ನರಸಿಂಹಾಚಾರ್ :** "ಹಿಂದಿನ ಕನ್ನಡ ಸಾಹಿತ್ಯದಲ್ಲಿ ಗದ್ಯ ಕಾವ್ಯಗಳು ಕಡಿಮೆ. ವಚನಕಾರರ ಕಾಲಕ್ಕೆ ಗದ್ಯ ಸ್ವಲ್ಪ ತಲೆ ಎತ್ತಿಕೊಂಡಿತು. ಆಡುವ ಮಾತನ್ನು ಅವರು ಬಳಸತೊಡಗಿದ್ದರಿಂದ ಕನ್ನಡ ಗದ್ಯ ಕಳೆಗೂಡಲು ಕಾರಣವಾಯಿತು. ಹರಿಹರನ ಕೈಯಲ್ಲಿ ಅದಕ್ಕೆ ಮಹೋನ್ನತಿ ಉಂಟಾಯಿತು. ಅದಕ್ಕೆ ಪ್ರಾಣ ಬಂದು ಎಂಥ ಭಾವವನ್ನಾಗಲಿ ಯಾವ ರಸವನ್ನಾಗಲಿ ಚಿಮ್ಮಿಸಲು ಸಮರ್ಥವಾಯಿತು. ನಂಬಿಯಣ್ಣ, ಬಸವರಾಜ, ಮಹಾದೇವಿಯಕ್ಕ ಇವರ ಕಥೆಗಳಲ್ಲಿರುವ ಗದ್ಯ ಉತ್ಕೃಷ್ಟವಾದದ್ದು."[11]

**ಎಂ. ಆರ್. ಶ್ರೀ :** "ಹರಿಹರನ ಪದ್ಯಶೈಲಿಗಿಂತಲೂ ಗದ್ಯಶೈಲಿ ಉತ್ತಮವಾದುದು. ಕಥೆ ದೊಡ್ಡದಾಗಿರುವ ಸಂದರ್ಭದಲ್ಲಿ ಒಂದು ಸ್ಥಲವನ್ನು ಪದ್ಯದಲ್ಲಿಯೂ ಒಂದು ಸ್ಥಲವನ್ನು ಗದ್ಯದಲ್ಲಿಯೂ ಬರೆಯುತ್ತಾನೆ. ಗದ್ಯದಲ್ಲಿ ಕಥೆಯನ್ನು ಹಿಂದೆ ಚಾವುಂಡರಾಯನು ಹೇಳಿದ್ದನು. ಆದರೆ ಹರಿಹರನ ಮನೋಹರವಾದ ಶೈಲಿ ಅಲ್ಲಿ ಕಂಡುಬರುವುದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹರಿಹರನು ಹೀಗೆ ಹೊಸ ಮಾದರಿಯ ಗದ್ಯ ನಿರ್ಮಾಪಕನಾಗಿ ಸಾಹಿತ್ಯ ಪ್ರಪಂಚದಲ್ಲಿ ಒಬ್ಬ ಅಭಿನವ ಬ್ರಹ್ಮನಾಗಿದ್ದಾನೆ."[12]

**ಎಚ್. ದೇವೀರಪ್ಪ :** ಹರಿಹರನ ಗದ್ಯವಾದರೋ ಕಂಪು ಪೆಂಪುಗಳನ್ನುಳ್ಳ ಬನಿಯುಳ್ಳ ಹೊಸಗನ್ನಡ. ಅವನ ಸುದೀರ್ಘ ಕೃತಿಗಳಲ್ಲಿ ಪದ್ಯಕ್ಕಿರುವಂತೆಯೇ ಗದ್ಯಕ್ಕೂ ಸಮಾನ ಸ್ಥಾನಮಾನವಿದೆ. ಜನತೆಯ ನಾಲಗೆಯ ಮೇಲೆ ನಲಿಯುತ್ತಿದ್ದ ಅರ್ಥಯುಕ್ತ ಕಾಂತಿದೀಪ್ತ ಸಂಸ್ಕೃತಪದಗಳ ಹದವರಿತ ಮಿಶ್ರಣದಿಂದ ಅವನ ಕನ್ನಡ ಗದ್ಯ ಹೊಸಬೆಡಗನ್ನೂ ಸಾಮರ್ಥ್ಯವನ್ನೂ ಸುಗಮತೆಯನ್ನೂ ಪಡೆದಿದೆ. ಜನಪದದ ಶಬ್ದ ಭಂಡಾರದಲ್ಲಿದ್ದ ಆಣಿಮುತ್ತಿನಂತಹ ಸತ್ವಪೂರ್ಣ 'ಹೊಸ' ಮಾತುಗಳನ್ನು ಪಡೆನುಡಿ, ನಾಣ್ನುಡಿ, ಜಾಣ್ನುಡಿ ಗಳನ್ನು ಒಳಗೊಂಡು, ಜನಪದ ವಾಕ್ಯ ರಚನಾ ರೀತಿಯನ್ನು ಅಳವಡಿಸಿಕೊಂಡು ಸರ್ವಾಂಗ ಸುಂದರವಾಗಿದೆ. ಅದರಲ್ಲಿ ಒಂದಕ್ಕೊಂದು ಅಂಟಿಕೊಳ್ಳದ ಬಿಡಿ ಬಿಡಿಯಾದ ರಸಾತ್ಮಕ ವಾಕ್ಯಗಳುಂಟು. ಹೃದಯಂಗಮ ವರ್ಣನೆಗಳುಂಟು. ಪದ್ಯ ಭಾಗದಲ್ಲಿರುವಂತೆ ಆಯಾ ಕಥೆಯಲ್ಲಿನ ಮುಖ್ಯ ಘಟನೆಗಳ ಸುದೀರ್ಘ ಸರಸ ನಿರೂಪಣೆ ಇದೆ. ಅಲ್ಲಿ ಪರಿಣಾಮಕಾರಿಯಾದ ಸಮುನ್ನತ ಭಾವಾನುಭಾವಗಳ ರಸ ಪ್ರತಿಪಾದನೆ ಇದೆ.[13]

ಹರಿಹರನ ಗದ್ಯವನ್ನು ಕುರಿತಂತೆ ಈ ಮೂವರು ವಿದ್ವಾಂಸರು ಆಡಿರುವ ಮಾತುಗಳು ಅವನ ಗದ್ಯದ ಸ್ವೋಪಜ್ಞತೆಯ ಪ್ರತಿಬಿಂಬಗಳಂತಿವೆ.

## 9.3 ನಾಟಕೀಯತೆ ಮತ್ತು ಸಂಭಾಷಣೆಯ ಸೊಗಸು

ಹರಿಹರನ ಕಥೆಗಳಿಗೆ ಒಂದು ಅಪೂರ್ವ ಮೆರಗು ಬರುವುದಕ್ಕೆ ಬಹುಮುಖ್ಯ ಕಾರಣ ಅವನು ಕಥೆಯ ನಡುವೆ ಗದ್ಯವನ್ನು ಬಳಸಿಕೊಂಡಿದ್ದು ಮಾತ್ರವೇ ಅಲ್ಲ, ಅದರ ಜೊತೆಗೆ ಬಳಸಿಕೊಂಡಿರುವ ನಾಟಕೀಯ ಸನ್ನಿವೇಶ ಹಾಗೂ ಸಂಭಾಷಣೆಗಳೂ ಇವೆ. ಅವನು "ಕಥೆಯನ್ನು

ನೇರವಾಗಿ ತಾನೇ ನಿರೂಪಿಸಿ ವರ್ಣಿಸದೆ ನಾಟಕೀಯವಾದ, ಮನೋಹರವಾದ ಸಂಭಾಷಣೆಗಳ ಮೂಲಕ ಕಥೆಯನ್ನು ವಿಸ್ತರಿಸಿಕೊಂಡಿದ್ದಾನೆ. ಆ ಸಂಭಾಷಣೆಯಲ್ಲಿಯೇ ಅವರವರ ವ್ಯಕ್ತಿತ್ವದ ಬೆಳಕು ತೋರಿಸಿದ್ದಾನೆ."[14] ಇದು ಕಥೆಯ ವೈವಿಧ್ಯತೆ ಹಾಗೂ ಸೌಂದರ್ಯಕ್ಕೆ ಮೆರಗನ್ನು ನೀಡಿದೆ.

ಸಾಮಾನ್ಯವಾಗಿ ಒಂದಕ್ಕಿಂತ ಹೆಚ್ಚು ಸ್ಥಲಗಳನ್ನು ಒಳಗೊಂಡಿರುವ ಕಥೆಗಳಲ್ಲಿ ಕವಿ ಇಂಥ ಮನೋಹರ ನಾಟಕೀಯ ಸಂಭಾಷಣೆಯನ್ನು ತರುತ್ತಾನೆ. 'ಬಸವರಾಜ ದೇವರ ರಗಳೆ', 'ನಂಬಿಯಣ್ಣನ ರಗಳೆ', 'ಮಹಾದೇವಿಯಕ್ಕನ ರಗಳೆ', 'ಮಲುಹಣನ ರಗಳೆ', 'ಆದಯ್ಯನ ರಗಳೆ' ಮುಂತಾದ ಕಡೆ ಈ ಬಗೆಯ ನಾಟಕೀಯ ಸನ್ನಿವೇಷಗಳು ಹೆಚ್ಚಾಗಿ ಬರುತ್ತವೆ. ಒಂದು ಸ್ಥಲ ಇರುವಲ್ಲಿಯೂ (ಉದ್ಭಟಯ್ಯನ ರಗಳೆ, ಏಕಾಂತರಾಮಿ ತಂದೆಯ ರಗಳೆ ಮುಂತಾದವು) ಇಂಥ ಸನ್ನಿವೇಶಗಳು ಕಂಡುಬರುತ್ತವೆ.

'ಬಸವರಾಜದೇವರ ರಗಳೆ'ಯ ಎರಡನೆ ಸ್ಥಲದಲ್ಲಿ ಕಪ್ಪಡಿ ಸಂಗಮಕ್ಕೆ ಬಂದ ಬಸವಣ್ಣನನ್ನು ಕಂಡು ಸ್ಥಾನಪತಿಯಾಗಿದ್ದ 'ಈಶಾನ್ಯಗುರು'ಗಳು ಅವನಿಗೆ "ಎಲೆ ಭಕ್ತ, ನೀನೆಲ್ಲಿಗಂ ಪೋಗ ಬೇಡ. ಆವುದುಂ ಚಿಂತೆ ಬೇಡ. ಸಂಗಮೇಶ್ವರಂಗೆ ಹೊಸ ಪುಷ್ಪಮಂ ತಿಳಿಯಗ್ಘವಣಿಯುಂ ತಂದು ಓಜೆಯಿಂ ಪೂಜೆಗೈದು ಪ್ರಸಾದ ಕಾಯಕನಾಗಿ ಸುಖ ದೊಳಿಪ್ಪುದು"[15] ಎನ್ನುತ್ತಾರೆ. ಈಶಾನ್ಯ ಗುರುಗಳ ಈ ಮಾತಿನಲ್ಲಿ ಎಂಥ ಅಕ್ಕರೆಯಿದೆ! "ಕಳವಳದಿಂದ ಕದಡಿಹೋದ ಮನಸ್ಸು ಮಾರ್ಗಗಾಣದೆ ಬಳಲುತ್ತಿರುವಾಗ 'ಆವುದುಂಚಿಂತೆ ಬೇಡ' 'ನೀನಿಲ್ಲಿಯೇ ಇರು' ಎಂದು ಹೇಳಿದರೆ ಯಾರಿಗೆ"[16] ತಾನೆ ಸಂತೋಷವಾಗದು?

ಇದೇ ರಗಳೆಯ ಎಂಟನೆ ಸ್ಥಲದಲ್ಲಿ ಬಿಜ್ಜಳನು, ಪರರ ಮಾತುಕೇಳಿ, ಬಸವಣ್ಣನವರ ಮೇಲೆ, ಆದಾಯದ ವಿಷಯದಲ್ಲಿ ಸಂಶಯಗೊಂಡು, ಅದರ ಬಗೆಗೆ ಮಾತನಾಡಲು ಬಸವಣ್ಣನವರನ್ನು ಕರೆಯಿಸುತ್ತಾನೆ. ಆಗ ಬಿಜ್ಜಳನು ಬಸವಣ್ಣನಿಗೆ -

"ನಿಮ್ಮ ನಂಬಿ ಭಂಡಾರಮಂ ಕೊಟ್ಟಡೆನ್ನನಿಂತು ಕೆಡಿಸುವರೆ? ಶಿವಭಕ್ತಿಗ್ಗಿತ್ತು ರಾಜ್ಯಮಂ ನೀರೊಳದ್ದುವರೆ? ಹಲವು ಮಾತೇನು? ನಿಂದ ಹೊನ್ನಿಂಗೆ ನಿರ್ಣಯಮಂ ಕೊಡುವುದು"[17] ಎಂದು ಕೇಳುತ್ತಾನೆ. ಆ ಮಾತಿಗೆ ಬಸವಣ್ಣ -

"ಕೇಳಲೆ ಸಜ್ಜನರಸಜಿಯದ ಬಿಜ್ಜಳ ಭೂಪ, ಉದದಿ ನದಿಯ ನೀರಂ ಸೀವುದೆ? ಭಾಸ್ಕರಂ ಕನ್ನಡಿಯ ಬೆಳಗಂ ಪಾರ್ವನೆ? ಶಿವಭಕ್ತರು ನಿನ್ನೊಡವೆಗಾಸೆಯ ಮಾಳ್ಪರೆ? ತಮ್ಮೊಡವೆಯುಂ ತಾವು ಕೊಂಡರು ನಡೆ ನಡೆ"[18] ಎಂದು ಭಂಡಾರದ ಮನೆಗೆ ಕರೆದು ತಂದು ಅಲ್ಲಿ ಭಂಡಾರವನ್ನು ತೆಗೆಯಿಸಿ ಸಂಪತ್ತನ್ನು ಲೆಕ್ಕ ಹಾಕುತ್ತಾನೆ. ಸಂಪತ್ತು ಕೋಟಿ ಕೋಟಿ ಮಡಿ ಹೆಚ್ಚಾಗಿರುತ್ತದೆ. ಆಗ ಬಸವಣ್ಣ ಬಿಜ್ಜಳನಿಗೆ "ಎಲೆ ಮುಗ್ಧ ಭೂಪ ಕೇಳು ...... ನೀನೆತ್ತಣ ಪರಮಾಣು, ಕ್ಷುದ್ರ ಜಂತು, ಶಿವನ ಮನೆಯ ತೊತ್ತಿನ ತೊತ್ತಪ್ಪ ಮಾಯೆಯಾಡಿಸುವ ಮಣ್ಣರೂಪು, ಕಪ್ಪಡದ ಹಾಹೆ, ಕಲ್ಲಜಂತ್ರ, ಹುಲ್ಲಬೊಂಬೆ? ತೆಗೆ ತೆಗೆ, ನಡಿಘಡ, ಶರಣರ ಮುಂದೆ ನೀನಾರು?"[19] ಎಂದು ಆಸ್ಫೋಟಿಸುತ್ತಾನೆ. ಇಡೀ ಸಂದರ್ಭ ಬಸವಣ್ಣನ ಧೀರ ವ್ಯಕ್ತಿತ್ವ, ಶರಣರ ಬಗೆಗೆ ಆತ ಹೊಂದಿದ್ದ ನಂಬಿಕೆ, ಪ್ರೀತಿ ಮತ್ತು ಅಧಿಕಾರ ಅಥವಾ ರಾಜತ್ವದ ಬಗೆಗೆ ಅವನಲ್ಲಿದ್ದ ನಿಲುವನ್ನು ಚಿತ್ರಿಸುತ್ತದೆ.

ಹತ್ತನೆ ಸ್ಥಲದಲ್ಲಿ ಇನ್ನೊಂದು ಸೊಗಸಾದ ನಾಟಕೀಯ ಚಿತ್ರಣವಿದೆ. ಒಮ್ಮೆ ಬಸವಣ್ಣನು ಸಂಬೊಳಿನಾಗಿದೇವನೆಂಬ ಹೊಲೆಯನ ಮನೆ ಹೊಕ್ಕು ಪ್ರಸಾದ ಸ್ವೀಕರಿಸಿ ಬಂದಾಗ ಅದನ್ನು ಬಿಜ್ಜಳ ವಿರೋಧಿಸುತ್ತಾನೆ. ಆಗ ಇಬ್ಬರ ನಡುವೆಯೂ ನಡೆಯುವ ಒಂದು ಸಂಭಾಷಣೆ ಇದು :

**ಬಿಜ್ಜಳ :** "ಎಲೆ ಬಸವಣ್ಣ, ಸುವರ್ಣಂ ಕಮ್ಮಿತಾದಂತೆ ವಿಪ್ರಕುಲಕನುಕೂಲಮಪ್ಪ ಶಿವಭಕ್ತಿ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದನೊಲ್ಲದೆ, ಅತಿಭಕ್ತಿ ತಲೆಗೇರಿ ಹಿರಿಯ ...... ಮಾಳ್ಪುದು ಮಾರ್ಗವಲ್ಲ"[20] ಎನ್ನುತ್ತಾನೆ.

**ಬಸವಣ್ಣ :** "ಎಲೆ ಬುದ್ಧಿಯಿಲ್ಲದ ಭೂಪ. ಎರಗಿಪಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ? ಮುಕುಂದ ಭಟ್ಟರ ಮನೆಯೊಳುಂಡೆನೆ? ...... ಹರನನಱಿಯದ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ."[21]

ಹೀಗೆ ನಾಟಕೀಯ ಸಂಭಾಷಣೆ ಮುಂದುವರಿಯುತ್ತದೆ. ಇಡೀ ಸಂಭಾಷಣೆಯಲ್ಲಿ ಅಸ್ಪೃಶ್ಯ ಜನತೆಯ ಬಗೆಗೆ ಬಸವಣ್ಣನವರಿಗೆ ಇದ್ದಂಥ ಪ್ರೀತಿ, ವಿಶಾಲ ಮನೋಭಾವಗಳು ವ್ಯಕ್ತವಾದರೆ, ಅಸ್ಪೃಶ್ಯರ ಬಗೆಗೆ ವಿಪ್ರ ಸಮುದಾಯದವರಲ್ಲಿ ತುಂಬಿಕೊಂಡಿದ್ದ ತುಚ್ಛ ನಂಬಿಕೆ ವ್ಯಕ್ತವಾಗುತ್ತದೆ. 'ನಾರಣಕ್ರಮಿತರ ಕೇರಿಯಂ ಪೊಕ್ಕೆನೆ? ಮುಕುಂದ ಭಟ್ಟರ ಮನೆಯೊಳುಂಡೆನೆ? ಎಂಬಲ್ಲಿ ಬ್ರಾಹ್ಮಣರು ಅಸ್ಪೃಶ್ಯರಿಗಿಂತಲೂ ಕೀಳು; ಅವರೇ ನಿಜವಾದ ಅಸ್ಪೃಶ್ಯರು; ಸಂಬೊಳಿನಾಗಿದೇವನಲ್ಲ ಎಂಬ ಅಭಿಪ್ರಾಯವಿರುವುದನ್ನು ಕಾಣಬಹುದು. ಇಲ್ಲಿ ಜಾತಿಯ ಬಗ್ಗೆ ವ್ಯವಸ್ಥೆ ಇಟ್ಟಿದ್ದ ನಂಬಿಕೆಯನ್ನು ಒಡೆಯುವ ಪ್ರಯತ್ನವೂ ಇದೆ.

**ನಂಬಿಯಣ್ಣನ ರಗಳೆ :** ನಂಬಿಯಣ್ಣನ ಮದುವೆಯ ಸಂದರ್ಭದಲ್ಲಿ ಶಿವನು ಮದುವೆ ಮಂಟಪಕ್ಕೆ ಬಂದು ಗಲಾಟೆ ಮಾಡುವ ಸನ್ನಿವೇಶ; ಶಿವನನ್ನು ಪ್ರಮಾಣಪತ್ರ ಕೊಡು ಎಂದು ನಂಬಿಯಣ್ಣನು ಕೇಳಿಕೊಳ್ಳುವ ಸನ್ನಿವೇಶ; ಪರವೆನಾಚಿಯ ತಾಯಿ ಮತ್ತು ಶಿವನ ನಡುವೆ, ನಂಬಿಯಣ್ಣ ಮತ್ತು ಪರವೆಯರ ಪುನರ್ ಸಮಾಗಮಕ್ಕಾಗಿ ನಡೆಸುವ ಮಾತಿನ ಸನ್ನಿವೇಶ - ಮುಂತಾದ ಸನ್ನಿವೇಶಗಳಲ್ಲಿ ನಾಟಕೀಯ ಸಂಭಾಷಣೆಗಳು ಕಂಡುಬರುತ್ತವೆ. ಇಡೀ ಸನ್ನಿವೇಶಗಳಲ್ಲೇ ಅತ್ಯಂತ ಸುಂದರವಾದುದು ಶಿವ ಮದುವೆ ಮಂಟಪಕ್ಕೆ ಬಂದು ಗಲಾಟೆ ಮಾಡುವ ಸನ್ನಿವೇಶ.

ಮಣಮಂದ ಪುತ್ತೂರಿನ ಸುಂದರ ಕನ್ಯೆಯೊಂದಿಗೆ ನಂಬಿಯಣ್ಣನ ಮದುವೆ ನಿಶ್ಚಯವಾಗಿರುತ್ತದೆ. ಮದುವೆಗೆ ಎಲ್ಲ ಏರ್ಪಾಡುಗಳೂ ನಡೆದಿದ್ದು ಇನ್ನೇನು ಮದುವೆ ಪ್ರಾರಂಭವಾಗಬೇಕು ಎನ್ನುವಷ್ಟರಲ್ಲಿ ವೃದ್ಧವೇಷದ ಶಿವ ಮದುವೆ ಮಂಟಪಕ್ಕೆ ಆಗಮಿಸುತ್ತಾನೆ. ಅಲ್ಲಿದ್ದ ಪದಾರ್ಥಗಳನ್ನೆಲ್ಲ ತಳ್ಳಿ ಮೇಲೆ ಬಿದ್ದು ಅಸ್ತವ್ಯಸ್ತಗೊಳಿಸುತ್ತಾನೆ. ಸುಸ್ತಾದವರಂತೆ ಒಂದೆಡೆ ಬೀಳುತ್ತಾನೆ. ಬಿದ್ದ ಮುದುಕನನ್ನು ಅಲ್ಲಿದ್ದ ಜನರೆಲ್ಲ ಸೇರಿ ಚಪ್ಪರದಿಂದ ಹೊರಗಿರಿಸುತ್ತಾರೆ. ಆದರೆ ಕೆಲ ಕ್ಷಣದಲ್ಲಿ ಆ ಮುದುಕ ಚಪ್ಪರದೊಳಕ್ಕೆ ಪ್ರವೇಶಿಸುತ್ತಾನೆ. ಎಲ್ಲರ ಸಮ್ಮುಖದಲ್ಲೇ -"...... ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲವಂ ಕೆಡಿಸಿಕೊಳ್ಳದಿರಿ, ನಾನಪ್ಪಡೆ ಮದುವೆಯಾಗಲೀಯೆಂ ನೀವಿದಱಾದ್ಯಂತವನೇಂ

ದಱಿಯರಿವಂ ನರಸಿಂಗಮೊನೆಯರ್ಪೆತ್ತ ಮಗನಲ್ಲಂ ಕೊಂಡು ಸಾಕಿದ ...... ಪ್ರಮಾಣ ಪತ್ರಪ್ರಾಪ್ತಂದು"[22] ತಿಳಿಸುತ್ತಾನೆ. ಆಗ ನಂಬಿಯಣ್ಣನ ತಂದೆ ತಾಯಿಯರು "...... ಅಯ್ಯಾ ಚಿತ್ತೈಸೆಮ್ಮ ಮಾತಂ ಸೀಂತಡೊಳಗಾಗಿ ಮಹಾಪ್ರತಿಷ್ಠೆಗಳಂ ಮಾಣ್ದು ಕಳೆವರಲ್ಲದೆ ಪ್ರತ್ಯಕ್ಷ ಶಿವನಂತಿರ್ದ ನೀವೇ ಬಂದು ತುಪ್ಪದ ಕೊಡನನೆಡಹಿ ತೋರಣದ ತಳಿರಂ ಹಱಿದು ತಱಿದು ಗಳಿಗೆವಟ್ಟಲನೊಡೆದು ...... ನೀವರಸುವ ನಂಬಿಯಣ್ಣಂ ಬನದೊಳ್ಳೆದನೆ ಅವರೊಡನಾಡಿ ಕೊಂಬುದೆಮ್ಮಂ ಕಾಡಲಾಗದು"[23] ಎನ್ನುತ್ತಾರೆ. ಆ ಮಾತನ್ನು ಕೇಳಿದ ಶಿವ ನಂಬಿಯಣ್ಣನಿದ್ದ ವನಕ್ಕೆ, ಕೆಮ್ಮುತ್ತ ನಡುಗುತ್ತ ಬಂದು ಎದುರು ನಿಲ್ಲುತ್ತಾನೆ. ಆಗ ಶಿವನನ್ನು ಕಂಡ ನಂಬಿ "ಅಯ್ಯಾ ಏನನೆಳಸಿ ಬಂದಿರೊಳ್ಳಿತ್ತಪ್ಪ ಸಮಯವೇನನಾದಡಂ ಬೇಡಿಕೊಳ್ಳಿ"[24] ಎನ್ನುತ್ತಾನೆ. ನಂಬಿಯ ಮಾತಿಗೆ ಶಿವ " ಎಲವೊ ನಾಂ ಬೇಡಿ ಬರ್ಪವಂ ನೀಂ ಕುಡುವವನುಂಟುಂಟೇಕೆ ತಪ್ಪುವುದಕ್ಕಕ್ಕು ನಡೆನಡೆ ನಿನ್ನಂ ಬೇಡಿ ಬಂದುದುಂಟುಂಟು, ನೀನೆನ್ನ ತೊತ್ತಿನ ಮಗಂ, ನಿನ್ನ ಪೆಸರು ಸೌಂದರಪೆರುಮಾಲೆಯಲ್ಲಂ; ನಂಬಿಯೆಂಬುದು ...... ಸಿಂಹಾಸನದೊಳಿರ್ದ ಕುಮಾರಂಗೆ"[25] ಕೊಡೆ, ಕೋಲು, ಕಮಂಡಲವನ್ನು ನೀಡುತ್ತಾನೆ. ಆಗ ನಂಬಿ ಕೋಪದಿಂದ "ಈ ಪಿಕ್ಕ ಬ್ರಾಹ್ಮಣನನೀ ಹೆಡ್ಡ ವೃದ್ಧನಂ ತಂದರಾರೋ ನೂಂಕು"[26] ಎನ್ನುತ್ತಾನೆ.

ಈ ಸುದೀರ್ಘ ನಾಟಕೀಯ ಸಂಭಾಷಣೆ ನಂಬಿಯಣ್ಣನ ಮದುವೆ ಸಂದರ್ಭದಲ್ಲಿ ನಡೆಯುತ್ತದೆ. ಇಲ್ಲಿ ಶಿವ ನಂಬಿಯಣ್ಣನಲ್ಲಿ ಪೂರ್ವಜ್ಞಾನವುಂಟು ಮಾಡಲು ಮಾಡುವ ನಾಟಕೀಯ ಪ್ರಯತ್ನವನ್ನು ಕಾಣಬಹುದು. ನಂಬಿಯಣ್ಣನ ಸಿಟ್ಟು, ಹಾಗೂ ಉತ್ತಮ ಕುಲದ ನಡವಳಿಕೆಯೂ ಇಲ್ಲಿ ಕಂಡುಬರುತ್ತದೆ. ಬಂದವನು ಶಿವ ಎಂದು ಗುರುತಿಸದಾದ ನಂಬಿಯಣ್ಣ ಸಾಮಾನ್ಯ ಮನುಷ್ಯನಂತೆ ಇದ್ದಾನೆ.

'ಮಹಾದೇವಿಯಕ್ಕನ ರಗಳೆ'ಯಲ್ಲಿ ಮಹಾದೇವಿಯಕ್ಕ ಮತ್ತು ಅವಳ ತಂದೆ ತಾಯಿಯರ ನಡುವೆಯೂ ಒಂದು ನಾಟಕೀಯ ಸಂಭಾಷಣೆಯನ್ನು ಹರಿಹರ ತಂದಿದ್ದಾನೆ.

ಕೌಶಿಕನನ್ನು ತೊರೆದು ಶ್ರೀಶೈಲದ ಕಡೆ ಹೊರಟ ಮಹಾದೇವಿಯನ್ನು ಹುಡುಕಿಕೊಂಡು ಅವಳ ತಂದೆ ತಾಯಿಯರು ಶ್ರೀಶೈಲಕ್ಕೆ ಬರುತ್ತಾರೆ. ಅಲ್ಲಿ ಮಗಳನ್ನು ಕಂಡು -

> ಏನವ್ವ ಮಹದೇವಿ ಇಂತಿಪ್ಪರೇ ಮಗಳೆ
> ನಾನಾ ನಿರೋಧದೊಳು ಸಂದಿಪ್ಪರೇ ಮಗಳೆ
> ತಲೆಸೋಂಕೆ ಕಂದುವಂಗಂ ಬಿಸಿಲಿಗಾಂತುದೆ
> ಉಸುರನಾನದ ತನುವು ಬಿಱುಗಾಳಿಗಾಂತುದೆ
> ಮೃದು ಪದಂ ನೆಲಕ್ಕೆ ಸೇರಿದ್ದವೇ ಮಗಳೆ[27]

ಎನ್ನುತ್ತಾರೆ. ಆಗ ತಂದೆ ತಾಯಿಯರ ಮಾತನ್ನು ಕೇಳಿದ ಮಹಾದೇವಿ ಅವರಿಗೆ -

ಶಿವಭಕ್ತರಾಗಿಯುಂ ನೀವಿಂತು ನುಡಿವರೆ
ಶಿವಪೂಜೆಯೇಕಾಂತಮಂ ಬಿಡಿಸಬಗೆವರೆ
ಭವಿಯ ಸಂಗಂ ತಪ್ಪಿ ಭವನ ಸಂಗವನಪ್ಪಿ
ಶಿವಭಕ್ತಿರಸಭರಿತ ಶರನಿಧಿಯ ನಡುವೊಪ್ಪಿ
ಇರ್ಪುದಂ ಕೆಡಿಸುವರು ಮಾತೆಪಿತರೆನಗಲ್ಲ[28]

ಎನ್ನುತ್ತಾಳೆ. ಈ ಸಂಭಾಷಣೆಯಲ್ಲಿ ಮಹಾದೇವಿ ಬಗ್ಗೆ ಅವಳ ತಂದೆ ತಾಯಿಯರಿಗೆ ಇದ್ದ ಪ್ರೀತಿ ವಾತ್ಸಲ್ಯದ ದರ್ಶನವಾಗುತ್ತದೆ. ಬೆಳದಿಂಗಳು ಸೋಕಿದರೂ ಕುಂದುವಂತಹ ಮಗಳ ಮೈ ಬಿಸಿಲಿಗೆ ಸಿಕ್ಕುವಂತಾದುದಕ್ಕೆ ಅವರು ಮರುಗುತ್ತಾರೆ. ತಂದೆ ತಾಯಿಯರ ಈ ಪ್ರೀತಿ ಮಹಾದೇವಿಗೂ ಗೊತ್ತಿದೆ. ಆದರೆ ಶಿವನ ಸಂಗದ ಮುಂದೆ ಅದು ಏನೇನೂ ಅಲ್ಲ. ಶಿವನ ಮೇಲೆ ಅವಳಿಗಿದ್ದ ಅಗಾಧ ಪ್ರೀತಿ ಇಲ್ಲಿ ವ್ಯಕ್ತವಾಗುತ್ತದೆ. 'ಇರ್ಪುದಂ ಕೆಡಿಸುವರು ಮಾತೆಪಿತರೆನಗಲ್ಲ' ಎಂಬ ಮಾತಿನಲ್ಲಿ ಅವಳು ನಿಷ್ಠುರವಾಗಿಯೂ ಮಾತನಾಡಬಲ್ಲಳು ಎಂಬುದನ್ನು ಗುರುತಿಸಬಹುದು.

'ಮಲುಹಣನ ರಗಳೆ'ಯಲ್ಲೂ ಮಲುಹಣೆ ಮತ್ತು ಅವಳ ತಾಯಿ ಪದ್ಮಾವತಿಯ ನಡುವೆ ನಡೆಯುವ ಸಂಭಾಷಣೆ ಬಹಳ ಸೊಗಸಾಗಿದೆ.

ಪದ್ಮಾವತಿ, ಮಲುಹಣೆಯನ್ನು ಬೇರ್ಪಡಿಸುವುದಕ್ಕೋಸ್ಕರ ಮಗಳನ್ನು ಕರೆಯುವಂತೆ ವಿಳಾಸಿನಿಯರನ್ನು ಕಳುಹಿಸುತ್ತಾಳೆ. ಆದರೆ ಮಲುಹಣೆಯನ್ನು ಕರೆಯಲು ಬಂದ ಸಖಿಯರು ಅವರು ಇರುವ ಸ್ಥಿತಿಯನ್ನು ಕಂಡು ಕರೆಯಲಾರದೆ ಸುಮ್ಮನಾಗುತ್ತಾರೆ. ಆಗ ಸಿಟ್ಟುಗೊಂಡ ಪದ್ಮಾವತಿ ತಾನೇ ಬಂದು ಎಲ್ಲರನ್ನು 'ಜಡಿದು' 'ಝಂಕಿಸಿ' ಮಲುಹಣೆಗೆ "ಏಳ್ಮಗಳೆ ನಿಮ್ಮ ಮಾವಂ ದ್ವೀಪಾಂತರದಿಂದಂ ದಿವ್ಯವಸ್ತ್ರಾಭರಣಂಗಳಂ ಕೊಂಡುಬಂದನವಂ ನೋಡಲ್ಕೇಳ್ಮಗಳೆ ಮಲುಹಣೇ"[29] ಎನ್ನುತ್ತಾಳೆ. ಆಗ ಮಲುಹಣೆ ಸಿಟ್ಟಿನಿಂದ ಪದ್ಮಾವತಿ ಬಳಿಗೆ ಬಂದು 'ಎಲೆ ಪಾಪಿ, ಎಲೆ ಸುಖವೈರಿ, ಕರೆದ ಕಾರಣ' ಏನೆಂದು ಕೇಳುತ್ತಾಳೆ. ಮಗಳ ಮಾತಿಗೆ ಪದ್ಮಾವತಿ "ಎಲೆ ಮರುಳ್ಮಗಳೆ, ಅರ್ಥಂತೀರ್ದುದು, ಯೌವನಂ ತೀರ್ದುದು ಇನ್ನೀ ಮಲುಹಣನಂ ಬಿಡು"[30] ಎಂದು ತಿಳಿಸುತ್ತಾಳೆ. ಆಗ ಮಲುಹಣೆ " ...... ವಿನಾಭೇದ ಸುಖದೊಳಿಪ್ಪೆ ನ್ನೊಡನೀಮಾತಂ ನುಡಿವರೆ? ಎಲೆ ಲೋಭ ಮುಂತಾಗಿ ಹುಟ್ಟಿದ ಹೇಸೆ ಕ್ರೋಧ ಮುಂತಾಗಿ ಹುಟ್ಟಿದ ನೀರಸೆ, ಸುಖಮಂ ಕೊಯ್ವ ಮಾನಸಗರಗಸವೆ, ಅಯ್ಯೋ, ಏಕೆನ್ನನರಿದರಿದು ಬಿಸುಟರಿರಿದಿರಿದು ಸುಟ್ಟಪೆ ದಾಕ್ಷಿಣ್ಯ ದಹನೆ ಹೋಗು"[31] ಎಂದು ನುಡಿಯುತ್ತಾಳೆ.

ಇಡೀ ಸಂಭಾಷಣೆಯಲ್ಲಿ ಕವಿ ಎರಡು ವಿರುದ್ಧ ಮನಸ್ಸುಗಳನ್ನು ಮನೋಹರವಾಗಿ ಸೆರೆಹಿಡಿದ್ದಾನೆ. ಇಲ್ಲಿ ಬಳಸುವ ಪದ ಮತ್ತು ವಾಕ್ಯಗಳು ಆಯಾಯ ಸನ್ನಿವೇಶಕ್ಕೆ ತಕ್ಕಂತೆ ಮೂಡಿಬಂದಿವೆ. ಒಂದೆಡೆ ಪ್ರೀತಿ ತುಂಬಿದ ಹೃದಯದ ಚಿತ್ರಣವಿದ್ದರೆ ಮತ್ತೊಂದೆಡೆ ಹಣಕ್ಕಾಗಿ ತನ್ನ ದೇಹವನ್ನಲ್ಲದೆ ತನ್ನ ಮಗಳ ದೇಹವನ್ನೂ ಮಾರಲು ಸಿದ್ಧವಿರುವ ತಾಯಿಯ ಹೀನ

ಹೃದಯದ ಚಿತ್ರಣವಿದೆ. ಎಲೆ ಪಾಪಿ, ಎಲೆ ಸುಖವೈರಿ, ಲೋಭ ಮುಂತಾಗಿ ಹುಟ್ಟಿದ ಹೀನೆ, ಸುಖಮಂ ಕೊಯ್ವ ಮಾನಸಗರಗಸವೇ' ಎಂಬ ಮಲುಹಣೆಯ ಮಾತುಗಳು ಮಲುಹಣನೊಡನೆ ಅವಳಿಗಿದ್ದ ಬಿಟ್ಟಿರಲಾರದ ಸಂಬಂಧ, ಅವನನ್ನು ತನ್ನಿಂದ ದೂರ ಮಾಡಿಬಿಟ್ಟಳಲ್ಲ ಎಂಬ ಸಿಟ್ಟು, ಕೊರಗು ಎಲ್ಲವೂ ತುಂಬಿಕೊಂಡಿವೆ. ಆದರೆ ಪದ್ಮಾವತಿಯ ಮಾತಿನಲ್ಲಿ ವೇಶ್ಯೆಯೊಬ್ಬಳ ಕ್ರೂರ ಮನಸ್ಸು ಕಂಡುಬರುತ್ತದೆ. ಎಲ್ಲವನ್ನು ಕವಿ ಸಮಯೋಚಿತ ಅಲಂಕಾರಗಳಿಂದ ಸಾದರಪಡಿಸಿದ್ದಾನೆ.

ಈ ಬಗೆಯ ನಾಟಕೀಯ ಸನ್ನಿವೇಶಗಳನ್ನು ಹರಿಹರನ ಹಲವಾರು ಕಥೆಗಳಲ್ಲಿ ನೋಡಬಹುದು. ಎಲ್ಲ ಸಂದರ್ಭಗಳಲ್ಲೂ ಕವಿ ಹೊಸ ಹೊಸ ಅಲಂಕಾರ, ಪದ ಮತ್ತು ವಾಕ್ಯಗಳನ್ನು ಬಳಸಿಕೊಂಡಿದ್ದಾನೆ. ಒಮ್ಮೆ ಬಳಸಿದ ಪದ, ವಾಕ್ಯ ಮತ್ತು ಅಲಂಕಾರವನ್ನು ಆತ ಮತ್ತೊಮ್ಮೆ ಎಲ್ಲೂ ಬಳಸಿಕೊಳ್ಳುವುದಿಲ್ಲ. ಏನನ್ನೇ ಚಿತ್ರಿಸಲಿ ಅದನ್ನು ಕಣ್ಣಿಗೆ ಕಟ್ಟುವಂತೆ ಹಾಗೂ ಮನ ಮುಟ್ಟುವಂತೆ ಕಟ್ಟುವ ಕೌಶಲವನ್ನು ಹರಿಹರ ಪಡೆದಿರುವುದು ಇದರಿಂದ ವ್ಯಕ್ತವಾಗುತ್ತದೆ.

ಹರಿಹರ ಕವಿಯ ಈ ನಾಟಕೀಯ ಸಂಭಾಷಣೆಯ ಸೊಗಸನ್ನು ಕುರಿತಂತೆ ಆಡಿರುವ ಬಿ.ಸಿ. ಜವಳಿ ಅವರ - " ಒಟ್ಟಾರೆ ಕವಿಯು ಕಾವ್ಯದ ತುಂಬೆಲ್ಲಾ ಈ ನಾಟಕೀಯ ಸಂಭಾಷಣೆಯ ರೀತಿಯನ್ನು ಬೆಳೆಸಿಕೊಂಡು ಬಂದು ಕಾವ್ಯವನ್ನು ಸಜೀವವಾಗಿಸಿ, ಕಳೆದುಂಬಿಸಿ ವ್ಯಕ್ತಿಗಳ ವ್ಯಕ್ತಿತ್ವವನ್ನು ಪರಿಸ್ಫುಟವಾಗಿಸಿದ್ದಾನೆ. ಕಲೆಯನ್ನು ಮೆರೆದಿದ್ದಾನೆ. ಕಥೆ ಕೇಳುವವರಲ್ಲಿ ಕುತೂಹಲವನ್ನುಂಟುಮಾಡಿದ್ದಾನೆ ಈ ನಾಟಕೀಯ ಶೈಲಿ ಕನ್ನಡದಲ್ಲಿ ಉತ್ತಮ ಕವಿಗಳು ಬಳಸಿಕೊಂಡ ಕಲಾತ್ಮಕ ವಿಧಾನವಾಗಿದೆ"[32] ಮಾತು ಕವಿಯ ಗದ್ಯ ಕೌಶಲಕ್ಕೆ ಅಕ್ಷರಸಹ ಒಪ್ಪುತ್ತದೆ.

## 9.4 ವರ್ಣನೆ ಮತ್ತು ಅಲಂಕಾರ

ವರ್ಣನೆ ಮತ್ತು ಅಲಂಕಾರ ಹರಿಹರನ ಕಾವ್ಯದ ಆತ್ಮವಿದ್ದಂತೆ, ಅದನ್ನು ಪ್ರತಿಯೊಂದು ಕಥೆಯಲ್ಲೂ ಕಾಣಬಹುದು. ಕವಿ ಯಾವುದೇ ಒಂದು ಪಾತ್ರದ ಮಹತ್ವವನ್ನು ಕಟ್ಟಿಕೊಡಬೇಕಾದ ಸಂದರ್ಭ; ಸನ್ನಿವೇಶವನ್ನು ಚಿತ್ರಿಸುವ ಸಂದರ್ಭ; ಒಂದು ವಸ್ತುವಿನ ಇಲ್ಲವೆ ಸ್ಥಳದ ಮಹಿಮೆಯನ್ನು ಚಿತ್ರಿಸುವ ಸಂದರ್ಭದಲ್ಲಿ ವರ್ಣನೆ ಮತ್ತು ಅಲಂಕಾರಗಳನ್ನು ಬಳಸಿಕೊಂಡು ಪರಿಣಾಮಕಾರಿಯಾಗಿ ಚಿತ್ರಿಸುತ್ತಾನೆ. ಅವನು ಎಷ್ಟು ವರ್ಣನೆಗಳನ್ನೇ ಬಳಸಿಕೊಳ್ಳಲಿ, ಎಷ್ಟು ಅಲಂಕಾರಗಳನ್ನೇ ಬಳಸಿಕೊಳ್ಳಲಿ ಅವುಗಳಲ್ಲಿ ಅವನ ಔಚಿತ್ಯ ಪ್ರಜ್ಞೆ ಎದ್ದು ಕಾಣುತ್ತದೆ.

### 9.4.1 ವರ್ಣನೆ

ಕಥೆಗಳಲ್ಲಿ ಭಕ್ತನ ಹುಟ್ಟು, ಬಾಲ್ಯ, ಯೌವನ, ಶಿವನ ಕಪಟ ವೇಷ, ಭಕ್ತನ ಪ್ರಣಯ, ವಿರಹ ಮುಂತಾದ ಸನ್ನಿವೇಶಗಳನ್ನು ಚಿತ್ರಿಸುವಾಗ ಹರಿಹರನ ಸಮಯೋಚಿತ ವರ್ಣನೆಯನ್ನು

ಮಾಡಿದ್ದಾನೆ. ಅವನು ಮಾಡಿರುವ ವರ್ಣನೆಯನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು.

* ವ್ಯಕ್ತಿ ಸಂಬಂಧಿ ವರ್ಣನೆ
* ನಿಸರ್ಗ ಸಂಬಂಧಿ ವರ್ಣನೆ
* ಇತರ ವರ್ಣನೆ

## 9.4.1.1 ವ್ಯಕ್ತಿ ಸಂಬಂಧಿ ವರ್ಣನೆ

ಈ ವರ್ಣನೆಯ ಸಾಲಿನಲ್ಲಿ ಭಕ್ತನ ಹುಟ್ಟು ಅಥವಾ ಗರ್ಭಾಂಕುರದ ವರ್ಣನೆ, ಬಾಲ್ಯದ ವರ್ಣನೆ, ಯೌವನದ ವರ್ಣನೆ, ಪ್ರಣಯದ ವರ್ಣನೆ, ವಿರಹದ ವರ್ಣನೆ, ಶಿವನ ಕಪಟವೇಷದ ವರ್ಣನೆ, ಭಕ್ತಿ (ಪೂಜಾ)ಯ ವರ್ಣನೆಗಳು ಮುಖ್ಯವಾಗಿವೆ.

### (ಅ) ಹುಟ್ಟು ಅಥವಾ ಗರ್ಭಾಂಕುರದ ವರ್ಣನೆ

ಹರಿಹರ ಭಕ್ತನ ಹುಟ್ಟು ಅಥವಾ ಗರ್ಭಾಂಕುರದ ವರ್ಣನೆಯನ್ನು ನೂತನರ ರಗಳೆಗಳಲ್ಲಿ ಹೆಚ್ಚಾಗಿ ಬಳಸಿದ್ದಾನೆ. ಈ ವರ್ಣನೆಯನ್ನು ಮಾಡುವಾಗ ಕವಿ ಹುಟ್ಟಲಿರುವ ಮಗುವಿನ ತಾಯಿಯ ಬಾಹ್ಯ ವರ್ಣನೆ ಮಾಡುತ್ತಾನೆ. ಅವಳ ಅಂಗಾಂಗಗಳ ವರ್ಣನೆ ಮಾಡಿದ ನಂತರ ಹುಟ್ಟುವ ಮಗುವಿನ ಗುಣವನ್ನು ಸಮಯೋಚಿತ ಹಾಗೂ ಔಚಿತ್ಯಪೂರ್ಣ ಅಲಂಕಾರವನ್ನು ಬಳಸಿ ತಿಳಿಸುತ್ತಾನೆ. ಅದರಲ್ಲಿಯೇ ತಾಯಿಯ ಗುಣವನ್ನು ಬಣ್ಣಿಸುತ್ತಾನೆ. ಉದಾ :

ಸಲ್ಲಲಿತ ನಾಯಕನ ಸತಿಯ ಬಸುಜೊಳ್ಪರ್ಪ
ನೆವದಿಂದೆ ನಿರ್ಮಾಯನಿರ್ದನಾ ಬಸುಜೊಳಗೆ
ನವಯೌವನೆಯ ಗರ್ಭವಾಗಲುದಯಿಸಿತೊಳಗೆ
ಹೊಱಗೆ ಸಾಱಿದವಯವಂ ಗರ್ಭಚಿಹ್ನಮಂ
ತುಱುಗಿದುದು ಲಾವಣ್ಯವೊಪ್ಪವಿಡಿದಂಗಮಂ
ಪೊಕ್ಕುಳುಣ್ಮುತ್ತಮಿರೆ
ಮಿಕ್ಕು ಕೀಳ್ವೊಡೆಯುದರೆ
ತಿವಳಿ ಬಸುರಿಂಹಾಱೆ
ನವಬಾಸೆ ಮೈದೋಱೆ
ನಡು ಬಟ್ಟನಾಗಿ ನಿಲೆ
ಕುಡಿಗಪ್ಪನಾಳೆ ಮೊಲೆ
------------------------------------------
ಜನಿಯಿಸುವ ಸಮಯಮಂ ಪಾರ್ದಿರುತ್ತಿರಲಂದು
ವಾಸವಾಶಾಂತರದೊಳಗರ್ಕನುದಯಿಸುವಂತೆ

ಭಾಸುರದ ಪಾಲ್ಗಡಲೊಳಿಂದು ಜನಿಯಿಸುವಂತೆ
ವಸುಧೆಯೊಳು ಸುರಕುಜದ ಸಸಿ ಪುಟ್ಟುವಂದದಿಂ
ಶಿಶುವೆನಿಸಿ ಪುಟ್ಟಿದಂ ನಿರ್ಮಾಯ ನೊಪ್ಪದಿಂ[35]

ಹೀಗೆ ಹರಿಹರ, ಪ್ರಭುದೇವರು ಹುಟ್ಟುವ ಬಗೆಯನ್ನು ವರ್ಣಿಸುತ್ತಾನೆ. ಇಲ್ಲಿ ಕವಿ ಮೊದಲು ಮಗುವಿನ ತಾಯಿಯ ದೇಹ ವರ್ಣನೆ ಮಾಡುತ್ತಾನೆ. ಗರ್ಭಾಂಕುರವಾಗುತ್ತಿದ್ದಂತೆಯೇ ತಾಯಿಯ ಹೊಕ್ಕುಳು 'ಉಣ್ಮು'ತ್ತದೆ, ತ್ರಿವಳಿ ಬಸುರಲ್ಲಿ ಕಾಣಿಸಿಕೊಳ್ಳುತ್ತದೆ, 'ನವಬಾಸೆ ಮೈದೋರು'ತ್ತದೆ, ಮೊಲೆಯ ಕುಡಿ ಕಪ್ಪಾಗುತ್ತದೆ. ತೊಡೆ 'ಡಾಳ'ವಾಗುತ್ತವೆ. ಹೀಗೆ ಅವಳ ಅಂಗಾಂಗಗಳು ಲಾವಣ್ಯ ಪಡೆಯುತ್ತವೆ. ನವಮಾಸವಾಗುತ್ತಿದಂತೆಯೇ 'ಭಾಸುರದ ಪಾಲ್ಗಡ'ಲಿನಲ್ಲಿ ಚಂದ್ರ ಹುಟ್ಟುವ ಹಾಗೆ, ವಸುಧೆಯಲ್ಲಿ 'ಸುರಕುಜ'ದ ಸಸಿ ಹುಟ್ಟುವ ಹಾಗೆ ನಿರ್ಮಾಯನು ಜನಿಸುತ್ತಾನೆ. ಇಲ್ಲಿ ಕವಿ ನಿರ್ಮಾಯನ ತಾಯಿಯನ್ನು ಬೆಳ್ಳನೆಯ ಹಾಲಿನ ಕಡಲಿಗೆ ಹೋಲಿಸಿದರೆ ನಿರ್ಮಾಯನನ್ನು ಚಂದ್ರನಿಗೆ ಹೋಲಿಸುತ್ತಾನೆ. ಹಾಗೆಯೇ ಅವನ ತಾಯಿಯನ್ನು ಕಲ್ಪವೃಕ್ಷಕ್ಕೆ ಹೋಲಿಸಿದರೆ ನಿರ್ಮಾಯನನ್ನು ಕಲ್ಪವೃಕ್ಷದ ಸಸಿ ಎಂದು ಹೋಲಿಸಿ ಅವರ ಗುಣವನ್ನು ಬಣ್ಣಿಸುತ್ತಾನೆ.

ಈ ಬಗೆಯ ವರ್ಣನೆ ಕಾಣಸಿಗುವುದು ನೂತನರ ರಗಳೆಗಳಲ್ಲಿ ಮಾತ್ರ. ಪುರಾತನರ ರಗಳೆಗಳಲ್ಲಿ ಕಥೆಯನ್ನು ಪ್ರಾರಂಭಿಸುವ ರೀತಿಯೇ ಬೇರೆಯದಾಗಿದ್ದು, ಪ್ರಾರಂಭದಲ್ಲಿ ಭಕ್ತನ ದೇಶ, ಊರುಗಳನ್ನು ಪರಿಚಯಿಸಿ, ಅನಂತರ ಅವನ ವೃತ್ತಿಯ ಬಗೆಗೆ ತಿಳಿಸುತ್ತಾನೆ. ಕೆಲವೆಡೆ ಈ ವರ್ಣನೆ ಇದ್ದರೂ ಅದು ಒಂದೆರಡು ಸಾಲುಗಳಲ್ಲಿಯೇ ಮುಕ್ತಾಯವಾಗುತ್ತದೆ. ಆದರೆ ನಂಬಿಯಣ್ಣನ ರಗಳೆ ಮಾತ್ರ ನೂತನರ ರಗಳೆಗಳ ಮಾದರಿಯಲ್ಲೆ ರಚನೆಯಾಗಿದೆ. ಅಲ್ಲಿಯೂ ನೂತನರ ರಗಳೆಗಳಲ್ಲಿ ಬರುವಂತೆ ಗರ್ಭಾಂಕುರದ ವರ್ಣನೆ ಬಂದಿದೆ.

### (ಆ) ಬಾಲ್ಯದ ವರ್ಣನೆ

ಬಾಲ್ಯದ ವರ್ಣನೆಯನ್ನು ಕವಿ ಕೆಲವು ರಗಳೆಗಳಲ್ಲಿ ಮಾತ್ರ ತಂದಿದ್ದಾನೆ. ಇದು ನೂತನರ ರಗಳೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅಲ್ಲಿಯೂ ಕೂಡ ಕವಿ ಅಗತ್ಯವರಿತು ವರ್ಣನೆ ಮಾಡಿದ್ದಾನೆ. ಅಲ್ಲಮ, ಬಸವಣ್ಣ, ಅಕ್ಕಮಹಾದೇವಿಯ ಕಥೆಗಳಲ್ಲಿ ಈ ವರ್ಣನೆಗಳನ್ನು ತಂದಿದ್ದಾನೆ. ಪ್ರಭುದೇವರ ರಗಳೆಯಲ್ಲಿ, ಬಾಲ್ಯದ ವರ್ಣನೆ ಮೂರ್ನಾಲ್ಕು ಸಾಲುಗಳಲ್ಲಿಯೇ ಮುಕ್ತಾಯವಾಗಿದ್ದರೆ ಬಸವಣ್ಣ ಮತ್ತು ಅಕ್ಕನ ರಗಳೆಗಳಲ್ಲಿ ಸ್ವಲ್ಪ ವಿವರವಾಗಿಯೇ ಇದೆ. ಪುರಾತನರ ರಗಳೆಗಳಲ್ಲಿ ಈ ವರ್ಣನೆ ಹೆಚ್ಚಾಗಿ ಬಂದಿರುವುದು ನಂಬಿಯಣ್ಣನ ರಗಳೆಯಲ್ಲಿ ಮಾತ್ರ. ಒಟ್ಟಿನಲ್ಲಿ ಬಾಲ್ಯದ ವರ್ಣನೆಯನ್ನು ತರುವ ಉದ್ದೇಶ ಭಕ್ತನ ಇಲ್ಲವೆ ಭಕ್ತೆಯ ಮಹಿಮೆಯನ್ನು ಬಣ್ಣಿಸುವುದು. ಬೆಳೆಯುವ ಪೈರನ್ನು ಮೊಳಕೆಯಲ್ಲೇ ಗುರುತಿಸುವ ಪ್ರಯತ್ನ ಈ ವರ್ಣನೆಯ ಹಿಂದೆ ಇರುವುದು ಸ್ಪಷ್ಟವಾಗಿದೆ.

"...... ಶಶಿಕಳೆಯಂತೆ ದಿನದಿನಕೆ ಕಳೆಯೇರಿ ನಳನಳಿಸಿ ಬೆಳೆಯುತ್ತಿರ್ಪಲ್ಲಿ

ಮಹಾದೇವಿಯುತ್ಪಲದೊಳು ಸಿಲ್ಕಿದ ಪೆಣ್ದುಂಬಿ ಜಿನುಂಗುವಂತೊಮ್ಮೊಮ್ಮೆಯಳುತ್ತಂ. ಕಮಳ ಕುಟ್ಮಳವಲರ್ವಂತೆ ನಗುತ್ತಂ ...... ವೀಣೆ ಧನಿಗುಡುವಂತೆ ನುಡಿಗಲಿವುತ್ತಂ, ಅರಳೆಲೆಯ ಸಿರಿವಂತೆ ಸೂಸಕದ ಸುಪ್ಪಾನಿ ಭಸಿತದ ಭಾವಕಿ ......"[34].

ಎಂಬ ವರ್ಣನೆಯನ್ನು ಹರಿಹರ ಮಹಾದೇವಿಯಕ್ಕನ ಬಾಲ್ಯದ ಸಂದರ್ಭದಲ್ಲಿ ತರುತ್ತಾನೆ. ಈ ವರ್ಣನೆಯಲ್ಲಿ 'ಶಶಿಕಳೆಯಂತೆ ದಿನದಿನಕೆ ಕಳೆಯೇರುವ,'ವೀಣೆ ಧನಿಗುಡುವಂತೆ ನುಡಿಗಲಿಯುವ '. 'ಕಮಳ ಕುಟ್ಮಳದಂತೆ ನಗುವ' ಉಪಮೆಗಳು ಮುಂದೆ ಅವಳು ಹೇಗೆ ಸುಂದರಿ ಹಾಗೂ ಸೌಮ್ಯವತಿಯಾಗಿ ಬೆಳೆಯಲಿದ್ದಾಳೆ ಎಂಬುದನ್ನು ತಿಳಿಸಿದರೆ 'ಉತ್ಪಳದೊಳು ಸಿಲ್ಕಿದ ಪೆಣ್ದುಂಬಿ ಜಿನುಗುವಂತೆ' ಒಮ್ಮೊಮ್ಮೆ ಅಳುತ್ತ ಎಂಬ ಉಪಮೆ ಮುಂದೆ ಅವಳು ಕೌಶಿಕನೊಡನೆ ಅನುಭವಿಸಲಿರುವ ಸಂಕಟವನ್ನು ತಿಳಿಸುತ್ತದೆ ಮತ್ತು 'ಭಸಿತದ ಭಾವಕಿ' ಎಂಬ ರೂಪಕ, ಅವಳು ಭಕ್ತೆಯಾಗಿ ಬದುಕುತ್ತಾಳೆ ಎಂಬುದನ್ನು ಸೂಚಿಸುತ್ತದೆ.

## (೩) ಯೌವನದ ವರ್ಣನೆ

ಯೌವನವನ್ನು ಕುರಿತಾದ ವರ್ಣನೆ ಹರಿಹರನ ರಗಳೆಗಳಲ್ಲಿ ಮಿತವಾಗಿವೆ. ಚಪಲತೆಗೆ ಮಾರುಹೋಗಿ ಆತ ಇಷ್ಟ ಬಂದಂತೆ ಯೌವನವನ್ನು ವರ್ಣಿಸದೆ ಉಚಿತವೆಂದು ಕಂಡುಬಂದಲ್ಲಿ ಮಾತ್ರ ಸ್ವಲ್ಪ ನೀಳವಾಗಿ ವರ್ಣಿಸಿ ಉಳಿದ ಕಡೆ ಮೂರ್ನಾಲ್ಕು ಸಾಲುಗಳಲ್ಲಿಯೇ ವರ್ಣಿಸಿಬಿಡುತ್ತಾನೆ.

ಮಹಾದೇವಿಯಕ್ಕ ಮತ್ತು ಸಂಕಿಲಿನಾಚಿಯ ವರ್ಣನೆಯನ್ನು ಕವಿ ತುಂಬ ಸೊಗಸಾಗಿ ತಂದಿದ್ದಾನೆ. ಮಹಾದೇವಿಯಕ್ಕನನ್ನು " ...... ಕೌಶಿಕ ರಾಜನ ಸರ್ವಸಾಮ್ರಾಜ್ಯವನುಂಗುಟದ ಕೊನೆಯೊಳೊತ್ತಿಯಾಳ್ವ ಸೊಬಗಂ ಮೆಱೆದ ...... ಕಡು ಚೆಲ್ವನಾಂತ ಕಣಕಾಲ್ಗಳ, ಮತ್ತಂ ಸೆಱಂಗಿನೊಳು ಕೀಲಿಸಿದ ಪೊಂಗೆಜ್ಜೆಗಳ ಝಣ ಝಣಿತದಿಂ ವಿಳಾಸಂಬಡೆದ ಸುವರ್ಣಪಳಿಯಿಂ ಬಾಸಣಿಸಿ ಬಾಳೆಯ ಕಂಭಮಂ ಕೀಳ್ಮಾಡುವ ಬಟ್ಟನುಣ್ದೊಡೆಗಳಿಂ, ಮಕರ ಪತಾಕನ ಮತ್ತ ಕುಂಜರದ ಕುಂಭಯುಗಳಮಂ ಬೆಳ್ದಿಂಗಳಿಂ ಮುಸುಂಕಿದಂತೆ ನವ್ಯದುಕೂಲದಿಂ ಮುಸುಂಕಿ ಮೆಱೆವ ನಿತಂಬ ಮಂಡಲದಿಂ ......"[35] ಎಂದು ವರ್ಣಿಸಿದರೆ; ಸಂಕಿಲಿನಾಚಿಯ ವರ್ಣನೆಯನ್ನು "ಎಲೆ ಮುಗ್ಧೆ ನಿನ್ನವಯವಂಗಳ ಚೆಲ್ವಿಂಗಾಭರಣಂ ಮಱೆ, ನಿನ್ನ ಸೌಕುಮಾರ್ಯಕ್ಕೆ ಹೂದೊಡುಗೆ ಹೊಱೆ, ನಿನ್ನ ಮುಖಮಂಡಲಕ್ಕೆ ಶಶಿಮಂಡಲವುಪ್ಪಾರತಿಯ ಪಾತ್ರೆ ...... ನಿನ್ನ ಕೊರ್ವಿದ ಕುಚಂಗಳ್ಗೆಪೊಣರ್ವಕ್ಕಿ ಗವಸಣಿಗೆ, ನಿನ್ನ ನಡುವಿಂಗೆ ನಳಿನ ತಂತು ನಿರೋಧಂ ...... ನಿನ್ನ ನಾಭಿವಳಯಕ್ಕೆ ಪೂಗೊಳಂ ಪುಸಿ, ನಿನ್ನ ನಿತಂಬಕ್ಕೆ ಪುಳಿನಸ್ಥಳಂ ಪಳಿವು, ನಿನ್ನ ಬಟ್ಟದೊಡೆಗೆ ಬಾಳೆ ಬಹಿಷ್ಕಾರಂ, ನಿನ್ನ ಕಿರುದೊಡೆಗೆ ಕಾಮನಮೊನೆ ತೊಣೆಯಲ್ಲಂ"[36] ಎಂದು ವರ್ಣಿಸುತ್ತಾನೆ.

ಈ ಎರಡೂ ಸಂದರ್ಭಗಳಲ್ಲಿ ಹರಿಹರ ಯೌವನದ ವರ್ಣನೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದಾನೆ. ಕಾರಣ, ಮುಂದಿನ ಕಥೆಯೆಲ್ಲವೂ ಯೌವನದ ಮೇಲೆಯೇ ನಿಂತಿರುವುದು. ಯೌವನವನ್ನು ಕಂಡ ಓದುಗನಿಗೆ, ಮುಂದೆ ಈ ಪಾತ್ರಗಳು ಸಂಕಟಕ್ಕೆ ಸಿಕ್ಕಿದಾಗ ಮರುಕ ಉಂಟಾಗದೆ ಇರದು. ಅದಕ್ಕಾಗಿಯೇ ಅವರ ಯೌವನವನ್ನು ಕವಿ ಹೀಗೆ ಬಣ್ಣಿಸಿದ್ದಾನೆ. ಇಂಥ

ವರ್ಣನೆಗೆ ಕವಿ ಎಲ್ಲ ಸಂದರ್ಭದಲ್ಲೂ ಒತ್ತು ಕೊಡುವುದಿಲ್ಲ. ಉದಾಹರಣೆಗೆ ಕಾಮಲತೆಯ ಯೌವನದ ವರ್ಣನೆ. ಕಾಮಲತೆಯ ಯೌವನವನ್ನು ಕವಿ -

> ಶಶಿಕಿರಣದಂತೆ ಬೆಳೆದಳ್ಳೆಳೆದಳಮ್ಮಮ್ಮ
> ಕುಸುಮಶರದಂತೆ ನೆಜೆದಳ್ನೆಜೆದಳಮ್ಮಮ್ಮ
> ರತಿಗಿತಿಯ ರಂಭೆಗಿಂಭೆಯ ಮಾತು ಜೇಡಿಲ್ಲಿ[37]

ಎಂದು ಮೂರು ಸಾಲುಗಳಲ್ಲಿಯೇ ವರ್ಣಿಸಿಬಿಡುತ್ತಾನೆ. ಕಥೆಯ ಸಂದರ್ಭಕ್ಕೆ ತಕ್ಕಂತೆ ವರ್ಣನೆ ಇದೆ. ಏಕೆಂದರೆ ಕಥೆಯಲ್ಲಿ ಮುಖ್ಯವಾಗಿ ಬೇಕಾಗಿರುವುದು ಅಲ್ಲಮನ ವ್ಯಕ್ತಿತ್ವ. ಕಾಮಲತೆ ಅದಕ್ಕೆ ಪೋಷಕವಾಗಿದ್ದಾಳೆ ಅಷ್ಟೆ.

ಇದೇ ರೀತಿ ಗಂಡಿನ ಯೌವನದ ವರ್ಣನೆಯನ್ನು ತರುತ್ತಾನೆ. ಅಲ್ಲಿಯೂ ಔಚಿತ್ಯವನ್ನು ಕಾಪಾಡುತ್ತಾನೆ.

## (ಈ) ಪ್ರಣಯದ ವರ್ಣನೆ

ನಂಬಿಯಣ್ಣ, ಮಲುಹಣ, ಪ್ರಭುದೇವ ಮತ್ತು ಆದಯ್ಯನ ರಗಳೆಯಲ್ಲಿ ಪ್ರಣಯ ವರ್ಣನೆಯನ್ನು ಹರಿಹರ ಸೊಗಸಾಗಿ ತಂದಿದ್ದಾನೆ. ಸಾಮಾನ್ಯವಾಗಿ ಎಲ್ಲ ಕಡೆಯೂ ಈ ವರ್ಣನೆ ಒಂದೇ ಬಗೆಯಲ್ಲಿದೆ. ಎಲ್ಲರೂ ಸುಂದರವಾಗಿರುವವರೇ. ಎಲ್ಲೋ ಒಂದೆಡೆ ಇಬ್ಬರೂ ಸಂಧಿಸಿ ಪರಸ್ಪರ ಆಕರ್ಷಿತರಾಗುತ್ತಾರೆ, ಸಖಿಯರು ಬಂದು ಸೆಜ್ಜೆಮನೆಗೆ ಸೇರಿಸುತ್ತಾರೆ. ಅಲ್ಲಿ ಹಲವು ವರ್ಷಗಳು ನಿಮಿಷಗಳೆಂಬಂತೆ ಕಾಲ ಕಳೆಯುತ್ತಾರೆ. ಪ್ರಣಯದ ಮೂಲಕವೇ ಕಥೆ ಮುಂದಿನ ಬೆಳವಣಿಗೆಯನ್ನು ಕಾಣಬೇಕಾದ್ದರಿಂದ ಕವಿ ಹೀಗೆ ವರ್ಣಿಸಿದ್ದಾನೆ. "...... ಆಲಿಂಗನಸಕ್ಕಾತುರಿಸಿ ರೂಪಂ ಕಣ್ಣೀವಿ ನೋಡಿ ಕುಚವಾಜಿಲಪ್ಪಿ ಮೈಯಾರೆ ಕೂಡಿ ಮನಂದಣಿಯದೆ ಅಜಲುಗೊಂಡ ಚಕೋರನಂ ಬೆಳುದಿಂಗಳೊಳು ಬಿಸುಟ್ಟಂತೆ ಹಸಿದ ಪಿಕನಂ ಹೊಸವನದೊಳಿರಿಸಿದಂತೆ ...... ಮೈಯೆಲ್ಲಂ ಕೂಟ, ಕೂಟವೆಲ್ಲಂ ಮನ, ಮನವೆಲ್ಲಂ ಸೋಲ, ಸೋಲವೆಲ್ಲಂ ಸುಖಮಯವಾಗಿ, ದಿನಂಗಳು ನಿಮಿಷಂಗಳಾಗಿ, ಮಾಸಂಗಳು ದಿನಂಗಳಾಗಿ, ವತ್ಸರಂಗಳು ಮಾಸಂಗಳಾಗಿ"[38] ಕಳೆದರು ಎಂದು, ಹರಿಹರ ಮಲುಹಣ-ಮಲುಹಣೆಯರ ಪ್ರಣಯದ ವರ್ಣನೆ ಮಾಡಿದ್ದಾನೆ. ಒಟ್ಟಿನಲ್ಲಿ ಗಂಡು ಹೆಣ್ಣುಗಳಿಬ್ಬರೂ ಬಹಳ ಅನ್ಯೋನ್ಯ ವಾಗಿದ್ದರು ಎಂಬುದನ್ನು ಕವಿ ಓದುಗನಿಗೆ ಹೇಳಬೇಕು. ಅದಕ್ಕಾಗಿಯೇ ಇಂಥ ವರ್ಣನೆಯನ್ನು ಕಾವ್ಯದ ಮಧ್ಯೆ ಮಧ್ಯೆ ತರುತ್ತಾನೆ.

## (ಉ) ವಿರಹದ ವರ್ಣನೆ

ನಂಬಿಯಣ್ಣ, ಪ್ರಭುದೇವ ಮತ್ತು ಮಲುಹಣನ ರಗಳೆಯಲ್ಲಿ ವಿರಹ ವರ್ಣನೆಯನ್ನು ಹರಿಹರ ಪ್ರಧಾನವಾಗಿ ತಂದಿದ್ದಾನೆ. ನಂಬಿಯಣ್ಣನ ರಗಳೆಯಲ್ಲಿ ಪರವೆನಾಚಿ ಮತ್ತು ಸಂಕಿಲಿನಾಚಿಯರು ವಿರಹತಾಪವನ್ನು ಅನುಭವಿಸಿದರೆ, ಪ್ರಭುದೇವರ ರಗಳೆಯಲ್ಲಿ ಪ್ರಭುದೇವ

ಮಾತ್ರ ವಿರಹತಾಪಕ್ಕೆ ಸಿಕ್ಕುತ್ತಾನೆ. ಮಲುಹಣನ ರಗಳೆಯಲ್ಲಿ ಮಲುಹಣ ಮತ್ತು ಮಲುಹಣೆಯರಿಬ್ಬರೂ ವಿರಹಕ್ಕೆ ಒಳಗಾಗುತ್ತಾರೆ.

ಹರಿಹರ ವರ್ಣಿಸುವ ವಿರಹ ವರ್ಣನೆಗಳು ಅತ್ಯಂತ ಸ್ವೈಜ ರೀತಿಯಲ್ಲಿ ಕಂಡುಬರುತ್ತವೆ. ಬಗೆಬಗೆಯ ಕ್ರಿಯೆಗಳನ್ನು ಬಳಸಿ ಅವುಗಳಿಗೆ ತೀವ್ರತೆ ಹಾಗೂ ಅರ್ಥಪೂರ್ಣತೆಯನ್ನು ತಂದು ಕೊಡುತ್ತಾನೆ. ಹರಿಹರ ವರ್ಣಿಸುವ ವಿರಹ ತೀವ್ರತೆಯನ್ನು ಪ್ರಭುದೇವರ ರಗಳೆಯ ಒಂದು ಉದಾಹರಣೆಯ ಮೂಲಕ ಗಮನಿಸಬಹುದು. ಈ ರಗಳೆಯಲ್ಲಿ ಪ್ರಭುದೇವರ ವಿರಹವನ್ನು ಕವಿ -

ಮರುಳಂತೆ ಮಱೆದಿರ್ದರಂತೆ ಮರವಟ್ಟಂತೆ
ಉರವಣೆಯ ದುಃಖದೊಳೆಱಗಿ ಬಿಸುಸುಯ್ಯುತಂ
ಪರಿಪರಿಯ ವಿರಹಾಗ್ನಿಯಿಂದುರಿದು ಬೇವುತಂ
--------------------------------------
ಕಾಮಲತೆ ಕಾಮಲತೆಯೆನುತಿರ್ದನಲ್ಲಮಂ[39]

ಹೀಗೆ ಬಣ್ಣಿಸುತ್ತಾನೆ. ಇಲ್ಲಿ ಕಾಮಲತೆ ಕಾಮಲತೆ ಎಂದು ಅಲ್ಲಮ ಪೇಚಾಡುವುದು, ಮರೆತವನಂತೆ ಇರುವುದು, ಮರುಳನಂತೆ ಇರುವುದು, ಅಳುತ್ತ ನಿಲ್ಲುವುದು ಮುಂತಾದ ಕ್ರಿಯೆಗಳು ಅವನ ವಿರಹಯಾತನೆಯ ತೀವ್ರತೆಯನ್ನು ವೇದ್ಯವಾಗಿಸುತ್ತವೆ.

ಮಲುಹಣನ ರಗಳೆಯಲ್ಲಿಯೂ ವಿರಹ ವರ್ಣನೆಯನ್ನು ತರುತ್ತಾನೆ. ಅಲ್ಲಿ ಈ ವರ್ಣನೆ—

ಸಂತತಂ ಮಲುಹಣೆಯ ಚಿಂತೆಯೊಳು ನೋವುತಂ
ಪೊಱಮಡಿಸೆ ಪೋಗಲಾರದೆ ಮನೆಯ ಮುಂದಿರ್ದು
----------------------------------------
ನಿಂದರಂ ಕಂಡು ಮಲುಹಣೆಯೆಂದು ಸೋಂಕುವಂ
ಬಂದರಂ ಕಂಡು ಮಲುಹಣೆಯೆನುತಪ್ಪುವಂ
ದಾರಿಯೊಳು ಬೀದಿಯೊಳು ಮಲುಹಣೆಯ ಕಳವಳಂ[40]

ಹೀಗೆ ಬರುತ್ತದೆ. ಇಲ್ಲಿ ಬೆಚ್ಚುವ, ಕಳವಳಿಸುವ, ಕಂಡವರನ್ನೆಲ್ಲ ಅಪ್ಪುವ, ಕಂಡವರನ್ನೆಲ್ಲ ಸೋಂಕುವ, ನಿಂತಲ್ಲಿ ನಿಲ್ಲದೆ ಕೂತಲ್ಲಿ ಕೂರದೆ ಇರುವ ಸ್ಥಿತಿಯ ಕ್ರಿಯೆಗಳನ್ನು ಹೇಳುವ ಮೂಲಕ ಹರಿಹರ ಮಲುಹಣನ ವಿರಹದ ತೀವ್ರತೆಯನ್ನು ಕಲ್ಪಿಸಿಕೊಡುತ್ತಾನೆ.

**(ಊ) ಶಿವನ ಕಪಟವೇಷದ ವರ್ಣನೆ**

ಹರಿಹರನ ಅತ್ಯಂತ ಸೊಗಸಾದ ವರ್ಣನೆಗಳಲ್ಲಿ ಶಿವನ ಕಪಟವೇಷದ ವರ್ಣನೆಗಳು

ಬಹಳ ಮುಖ್ಯ. ಅವುಗಳನ್ನು ಕವಿ ತುಂಬ ಕಲಾತ್ಮಕವಾಗಿ ಕಾವ್ಯದಲ್ಲಿ ತರುತ್ತಾನೆ. ಈ ವರ್ಣನೆ ಹೆಚ್ಚಾಗಿ ಕಂಡುಬರುವುದು ಪುರಾತನರ ರಗಳೆಗಳಲ್ಲಿ. ಕಪಟ ವೇಷದ ಶಿವನ ಚಿತ್ರವನ್ನು ತಂದ ಹಾಗೆಯೇ, ಕೆಲವೆಡೆ ನಿಜರೂಪುದೋರಿದ ಶಿವನ ಚಿತ್ರವನ್ನು ತಂದಿರುವುದನ್ನು ರಗಳೆಗಳಲ್ಲಿ ಕಾಣಬಹುದು.

ತಿರುನೀಲಕಂಠನ ರಗಳೆಯಲ್ಲಿ ಭಿಕ್ಷುಕ ವೇಷ, ಇಳೆಯಾಂಡ ಗುಡಿಮಾರನ ರಗಳೆಯಲ್ಲಿ ಚಳಿಯಲ್ಲಿ ನಡುಗುತ್ತ ಬರುವ ವೇಷ, ಇಹ:ಪ್ಪಗೆಯಾಂಡನ ರಗಳೆಯಲ್ಲಿ ವಿಟವೇಷ, ಅಮರನೀತಿಯ ರಗಳೆಯಲ್ಲಿ ಶತವೃದ್ಧ ವೇಷ, ಮಾನಕಂಜಾರನರಗಳೆಯಲ್ಲಿ ಭಿಕ್ಷುಕ ವೇಷ, ರುದ್ರಪಶುಪತಿಯ ರಗಳೆಯಲ್ಲಿ ಭಕ್ತ ವೇಷ, ಕಾರಿಕಾಲಮ್ಮೆಯ ರಗಳೆಯಲ್ಲಿ ತಪಸಿಯ ವೇಷ - ಹೀಗೆ ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ವೇಷವನ್ನು ಧರಿಸಿ ಶಿವ ಪ್ರತ್ಯಕ್ಷನಾಗುತ್ತಾನೆ.

ನೂತನರ ರಗಳೆಯಲ್ಲಿ ಈ ಬಗೆಯ ವರ್ಣನೆ 'ಬಸವರಾಜ ದೇವರ ರಗಳೆ'ಯಲ್ಲಿ ಕಂಡು ಬರುತ್ತದೆ. ಇಲ್ಲಿ ಶಿವ ಷೋಡಶ ಪ್ರಾಯದವನಾಗಿ ಬಂದು, ಬಸವಣ್ಣನ ಹೆಂಡತಿಯನ್ನು ಬಯಸುತ್ತಾನೆ. ಆಗ ಶಿವನ ಆ ಷೋಡಶ ಪ್ರಾಯವನ್ನು ಕವಿ "ಕುಸುಮ ಕುಲದಿಂ ಪರಿಮಳಾವೋದಕ್ಕೆಡೆ ಗೊಟ್ಟು ಮೊಕ್ಕಳವಾದ ಸಿರಿಮುಡಿಯೊಳು ನೀಲದರಮನೆಯ ಸುರನದಿಯ ಸುಕುಮಾರನೆನಿಪ ಬಾಲಶಶಿಯಂ ಕೇಳಿಸುವ ಗಾಯಕರಂತೆ ಸುತ್ತಿ ಮುತ್ತಿ ಝೋಂಕಾರಂಗೊಂಬ ತುಂಬಿಗಳ ಪಙ್ತಿಯಂ ಮುಸುಂಕಿಟ್ಟು ಪವಡಿಸುವ ಬಿಸುಗಣ್ಣ ...... ಮತ್ತಂ ಎರಡಱಿಯದೆಱಗುವ ಲೋಕಪಾಲಕರ ಮಕುಟದ ಮಾಣಿಕದ ತಂಬೆಳಗನುಂಡು ಬೆಳೆದಂತೆ ಲಕ್ತಕದ ಹಂಗಿಲ್ಲದೆ ನಿಜರಾಗದಿಂ ರಂಜನೆವಡೆದನುಂಬೆಳಗನುಗುಳ್ವ ಪದತಳದ ಸೌಂದರಿಯದಿಂದೆಸೆವಡೆದ ಹದಿನಾಱಱ ಹರೆಯದ ಹರಂ"[41] ಎಂದು ಬಣ್ಣಿಸುತ್ತಾನೆ.

ಅಮರನೀತಿ ರಗಳೆಯಲ್ಲಿ ಕಪಟವೇಷದ ಶಿವನನ್ನು -

> ಅಂದು ಶತವೃದ್ಧ ಭಾವಮನೊಪ್ಪೆ ಕೈಕೊಂಡು
> ಎಳೆಲ್ವ ಕಿವಿ ತೆರೆಮೊಗಂ ಜೋಲ್ವ ಪುರ್ವಿಂದೆಸೆಯೆ
> ನಳಿತ ಬೆನ್ ಲಾತಕೋಲ್ಲುದಿಯ ಕೋವಣವೆಸೆಯೆ
> ನಡೆತಂದ ಸಂದೊಲ್ವು ನೊಸಲ ಭಸಿತದಿನೊಪ್ಪೆ[42]

ಎಂದು ವರ್ಣಿಸುತ್ತಾನೆ. ಹೀಗೆಯೇ ನಿಜರೂಪುದೋರಿದ ಚಿತ್ರವು ಅಲ್ಲಲ್ಲಿ ಕಂಡುಬರುತ್ತದೆ. ನಿಜರೂಪುದೋರಿದ ಶಿವನ ಚಿತ್ರ ನೂತನರ ರಗಳೆಗಳಲ್ಲಿ ಬಸವರಾಜದೇವರ ರಗಳೆಯಲ್ಲಿಕಂಡು ಬಂದರೆ ಪುರಾತನರ ರಗಳೆಯಲ್ಲಿ ಇಹ:ಪ್ಪಗೆಯಾಂಡ, ನಂಬಿಯಣ್ಣ ಮುಂತಾದ ರಗಳೆಗಳಲ್ಲಿ ಕಂಡುಬರುತ್ತದೆ.

ಯಾವುದೇ ವೇಷವನ್ನಾಗಲಿ ಅತ್ಯಂತ ಸಮರ್ಪಕ ಹಾಗೂ ನೈಜವೆಂಬಂತೆ ವರ್ಣಿಸುವ

ಕಲೆಯನ್ನು ಹರಿಹರ ಪಡೆದಿದ್ದ ಎಂಬುದು ಮೇಲಿನ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

### (೫) ಭಕ್ತಿ ಅಥವಾ ಪೂಜಾ ವರ್ಣನೆ

ಭಕ್ತಿ ವರ್ಣನೆ ಪುರಾತನರ ರಗಳೆಯಲ್ಲಿ ಒಂದು ರೀತಿ ಬಂದರೆ ನೂತನರ ರಗಳೆಯಲ್ಲಿ ಮತ್ತೊಂದು ರೀತಿಯಲ್ಲಿ ಬರುತ್ತದೆ. ಪುರಾತನರ ರಗಳೆಗಳಲ್ಲಿ ಸ್ಥಾವರ ಪೂಜೆಗೆ ಹೆಚ್ಚಿನ ಆದ್ಯತೆಯಿದ್ದರೆ, ನೂತನರ ರಗಳೆಯಲ್ಲಿ ಇಷ್ಟಲಿಂಗದ ಪೂಜೆಗೆ ಆದ್ಯತೆಯಿದೆ. ಕೆಲವೆಡೆ, ಮಾಡುವ ಕಾಯಕವೇ ಪೂಜಾ ವಿಧಾನವಾಗಿರುವುದೂ ಉಂಟು.

'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನು ಬೆಳಿಗ್ಗೆ ಎದ್ದು ಹೂತೋಟಕ್ಕೆ ಹೋಗಿ, ಹೂಗಳನ್ನು ತಂದು ಶಿವನನ್ನು ಅಲಂಕರಿಸಿ ಅವನಿಗೆ ಬಗೆ ಬಗೆಯ ಪಕ್ವಾನ್ನಗಳನ್ನಿಟ್ಟು, ಅಗ್ಘವಣೆಯನ್ನು ಕೊಟ್ಟು ಮಾಡುವ ಪೂಜೆಯನ್ನು-

ಗುರುಸಂಗ ಶಿವಲಿಂಗ ಸತ್ಯಶರಣರ ಸಂಗ
ವರಸಂಗ ಲಿಂಗ ಶರಣಾಗು ಬಸವನ ಸಂಗ
ಕರುಣರಸನಿಧಿ ಘನತರಂಗ ಸಂಗಮ ದೇವ
--------------------------------
ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ[43]

ಎಂದು ವರ್ಣಿಸಿದ್ದಾನೆ. ಕಣ್ಣಪ್ಪನ ರಗಳೆಯಲ್ಲಿನ ಪೂಜಾ ವಿಧಾನ ಬೇರೊಂದು ರೀತಿಯದು. ಅಲ್ಲಿ ಕಣ್ಣಪ್ಪ, ಮೃಗಗಳನ್ನು ಬೇಟೆಯಾಡಿ ತಂದು ಮಾಡುವ ಪೂಜೆಯನ್ನು ಹರಿಹರ-

ಕೆಂಪುಳ್ಳ ನುಂಪುಳ್ಳ ಸೊಂಪುಳ್ಳ ಕಂಡಮಂ
ಇಂಪುಳ್ಳ ತಂಪುಳ್ಳ ಕಂಪುಳ್ಳ ಕಂಡಮಂ
ಕಾಸುತಂ ತೆಗೆತೆಗೆದು ಪರಿಪಾಕಮಂ ಮಾಡಿ
ಲೇಸಪ್ಪ ಮೃದುವಪ್ಪ ತೆಳುಗಂಡಮಂ ನೋಡಿ
--------------------------------
ಭಕ್ತಿಯಿಂದವೆ ತಣಿದು ತೇಗಿ ತೂಗಾಡುತಂ [44]

ಎಂದು ವರ್ಣಿಸುತ್ತಾನೆ. ಇಲ್ಲಿ ಇಬ್ಬರ ಪೂಜಾ ವರ್ಣನೆಯೂ ಬೇರೆ ಬೇರೆ ರೀತಿಯಲ್ಲಿ ಬಂದಿದೆ. ಪೂಜಾ ವಿಧಾನ ಯಾವುದಿದ್ದರೇನು ಅಂತರಂಗದ ಭಕ್ತಿ ಮುಖ್ಯ. ಅದಕ್ಕೆ ಶಿವನೊಲುಮೆ ಇದ್ದೇ ಇದೆ ಎಂಬುದನ್ನು ಕವಿ ಪ್ರತಿಪಾದಿಸಿದ್ದಾನೆ. ಆಯಾ ಸನ್ನಿವೇಶಕ್ಕೆ ತಕ್ಕಂತೆ ವರ್ಣನೆ ಮಾಡುವ ಹರಿಹರನ ಜಾಣ್ಮೆ ಮೆಚ್ಚುವಂತಹುದು.

### (೩೦) ಕಾಳಗದ ವರ್ಣನೆ

ಇಹ:ಪ್ಪಗೆಯಾಂಡ, ಆದಯ್ಯ, ಏಕಾಂತರಾಮಿತಂದೆ ಮುಂತಾದ ರಗಳೆಗಳಲ್ಲಿ ಹರಿಹರ ಕಾಳಗದ ವರ್ಣನೆಯನ್ನು ತರುತ್ತಾನೆ. ಹರಿಹರನನ್ನು ಭಕ್ತಿಯ ನೆಲೆಯಲ್ಲೇ ಕಂಡವರು ಅವನ ಯುದ್ಧದ ವರ್ಣನೆಯನ್ನು ಕಂಡಾಗ ಬೆಚ್ಚಿಬೀಳಬಹುದು. ಏಕೆಂದರೆ ಅವನ ಯುದ್ಧದ ವರ್ಣನೆ ಅಷ್ಟು ನೈಜವಾಗಿರುತ್ತದೆ. ಆ ಸಂದರ್ಭಕ್ಕೆ ತಕ್ಕ ಪದಗಳನ್ನು ಬಳಸುವ ಮೂಲಕ ಹರಿಹರ ವರ್ಣನೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸುತ್ತಾನೆ. ಉದಾ:

'ಇಹಃಪ್ಪಗೆಯಾಂಡನ ರಗಳೆ'ಯಲ್ಲಿ ಪದ್ಮಾವತಿಯ ಕಡೆಯವರಿಗೂ ಇಹಃಪ್ಪಗೆಯಾಂಡನಿಗೂ ನಡೆಯುವ ಭೀಕರ ಹೋರಾಟವನ್ನು ಕವಿ-

> ...... ಖಣಿಲೆಂಬ ಖಟಿಲೆಂಬ ನೆಳಿಲೆಂಬ ನೆರ್ಕೆಂಬ
> ಘುಳಿಲೆಂಬ ಘುಣ್ಮೆಂಬ ದೊಗಹೆಂಬ ದೊಕ್ಕೆಂಬ
> ಸಜ್ಜೆಂಬ ಘುರಿಲೆಂಬ ಧಗಿಲೆಂಬ ಭುಗಿಲೆಂಬ
> ------------------------------------
> ಸುಗಿದು ಘಳಘಳಲೆನಲ್ಕಳಚುತಿರೆ ನಾಲ್ದೆಸೆಗೆ
> ಅಚ್ಚುಡಿ ಕೀಲ್ಮುರಿದು ಬಿಚ್ಚಿ ಬೇಜೂಗಿರಲು
> ಸುಚ್ಚು ನೂರಂ ಮಾಡೆ ಶೂಲಿ ಮೆಚ್ಚುತ್ತಿರಲು[45]

ಎಂದು ವರ್ಣಿಸುತ್ತಾನೆ. ಇಲ್ಲಿ ಕವಿ ಬಳಸುವ ಖಣಿಲೆಂಬ, ಖಟಿಲೆಂಬ, ದೊಗಲೆಂಬ, ಭುಗಿಲೆಂಬ ಮುಂತಾದ ಪದಗಳು ಅವರ ಯುದ್ಧ (ಕಾಳಗ)ದ ಸ್ವರೂಪ ಹೇಗಿತ್ತು? ಎಂಬುದನ್ನು ಅಷ್ಟೇ ಪರಿಣಾಮಕಾರಿಯಾಗಿ ಚಿತ್ರಿಸುತ್ತವೆ.

### 9.4.1.2. ನಿಸರ್ಗ ಸಂಬಂಧಿ ವರ್ಣನೆ

ನಿಸರ್ಗವನ್ನು ಬಳಸಿಕೊಳ್ಳದೆ ಯಾವ ಕವಿಯೂ ಕಾವ್ಯ ರಚಿಸಲಾರ. ಪ್ರತಿಯೊಬ್ಬ ಕವಿಯೂ ಒಂದಲ್ಲ ಒಂದು ಬಗೆಯಲ್ಲಿ ನಿಸರ್ಗವನ್ನು ಬಳಸಿಕೊಂಡು ಕಾವ್ಯರಚನೆಯಲ್ಲಿ ತೊಡಗಿರುತ್ತಾನೆ. ಎಷ್ಟೋ ಕವಿಗಳು ನಿಸರ್ಗವನ್ನೇ ಕಾವ್ಯದ ವಸ್ತುವಾಗಿಸಿಕೊಂಡು ಕಾವ್ಯರಚನೆ ಮಾಡಿರುವುದೂ ಉಂಟು. ಅವರ ಸಾಲಿನಲ್ಲಿ ಹರಿಹರನೂ ಒಬ್ಬ.

ಈವರೆಗೆ ನಾವು ಕಂಡಿರುವ ಹಾಗೆ ವರ್ಣನೆಗಾಗಿ ಹರಿಹರ ನಿಸರ್ಗದಿಂದ ಹೆಚ್ಚಾಗಿ ಬಳಸಿಕೊಂಡಿರುವುದು ಹೂಗಳನ್ನು. ಹಲವು ಬಗೆಯ ಹೂಗಳನ್ನು ಕಾವ್ಯದಲ್ಲಿ ಬಳಸಿಕೊಂಡಿದ್ದಾನೆ. ಅವುಗಳನ್ನು ಬಿಟ್ಟರೆ ಕಲ್ಪವೃಕ್ಷ ಮತ್ತು ಅಶೋಕ ವೃಕ್ಷಗಳನ್ನು; ಕಿತ್ತಳೆ, ಹೇರೀಳೆ, ಮಾವು, ದಾಳಿಂಬೆ ಮುಂತಾದ ಹಣ್ಣುಗಳನ್ನು ; ಚಮರೀಮೃಗ, ಹಸು, ಕರು, ಹಾವು, ಕರಡಿ, ಕುದುರೆ, ಆನೆ ಮುಂತಾದ ಪ್ರಾಣಿಗಳನ್ನು ಹಾಗೂ ಸೂರ್ಯ, ಚಂದ್ರ, ಮಳೆ, ಮೋಡ, ಗುಡುಗು, ಸಿಡಿಲುಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾನೆ.

ಕವಿ ನಿಸರ್ಗವನ್ನು ಕಾವ್ಯದಲ್ಲಿ ಬಳಸಿಕೊಂಡಿರುವುದನ್ನು ನಾಲ್ಕು ರೀತಿಯಿಂದ ನೋಡಬಹುದು.

ಅ. ಪೂಜಾ ವರ್ಣನೆಯ ಸಂದರ್ಭ

ಆ. ಊರು ದೇಶಗಳ ವರ್ಣನೆಯ ಸಂದರ್ಭ

ಇ. ಹೆಣ್ಣಿನ ಸೌಂದರ್ಯ ವರ್ಣನೆಯ ಸಂದರ್ಭ

ಈ. ಚಿತ್ತ ವೃತ್ತಿಗಳ ಅಭಿವ್ಯಕ್ತಿ ಸಂದರ್ಭ

## (ಅ) ಪೂಜಾವರ್ಣನೆಯ ಸಂದರ್ಭ

ಶಿವಪೂಜೆಯನ್ನು ವರ್ಣಿಸುವಾಗ ಹರಿಹರ ಸಾಮಾನ್ಯವಾಗಿ ಹೂ ಹಾಗೂ ಪತ್ರೆಗಳನ್ನು ಬಳಸಿಕೊಳ್ಳುವುದುಂಟು. ಆದರೆ ಈ ಬಗೆ ಅವನ ಪುರಾತನರ ರಗಳೆಗಳಲ್ಲಿ ಕಂಡುಬರುವುದಿಲ್ಲ. ಅಲ್ಲಿ, ಭಕ್ತ ಯಾವ ಕಾಯಕದಲ್ಲಿ ತೊಡಗಿರುತ್ತಾನೋ ಅದನ್ನೇ ಪೂಜೆಗೆ ಬಳಸಿಕೊಂಡಿರುತ್ತಾನೆ. ನೂತನರ ರಗಳೆಗಳಲ್ಲಿ 'ಬಸವರಾಜದೇವರ ರಗಳೆ' ಮತ್ತು 'ಮಹಾದೇವಿಯಕ್ಕನ ರಗಳೆ'ಗಳಲ್ಲಿ ಬರುವ ಪೂಜಾವರ್ಣನೆಯಲ್ಲಿ ಹೂ ಹಾಗೂ ಪತ್ರೆಗಳ ಬಳಕೆ ಯಥೇಚ್ಛವಾಗಿದೆ. ಇವುಗಳನ್ನು ಬಿಟ್ಟರೆ ಸಂಕೀರ್ಣ ರಗಳೆಗಳಲ್ಲಿ ಬರುವ 'ಪುಷ್ಪರಗಳೆ' ಯಲ್ಲಿ ಹೂವಿನ ವರ್ಣನೆಯೇ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ.

ಬಸವಣ್ಣನು ಮುಂಜಾವದಲ್ಲಿಯೇ ಎದ್ದು ಹೂದೋಟಕ್ಕೆ ಹೋಗಿ ಅಲ್ಲಿ ಹೂಗಳನ್ನು ಬಿಡಿಸಿಕೊಂಡ ಬಗೆಯನ್ನು ಬಸವರಾಜದೇವ ರಗಳೆಯಲ್ಲಿ -

> **ಅಳಿಯೆಱಗನಿಲನಲುಗದ ರವಿಕರಂ ಪುಗದ**
> **ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ**
> **ಸುರುಚಿರಮೆನಿಪ್ಪ ಮೀಸಲ ಮೊಗ್ಗೆಯುಂ ಕೊಂಡು**
> **ಇರುವಂತಿಯೊಳ್ ಮೆಱೆವ ಬಿರಿಮುಗುಳ್ಗಳುಂ ಕೊಂಡು**
> **----------------------------------------**
> **ಮರುಗದೆಲೆಯುಂ ಕೊಂಡು ಸುರಹೊನ್ನೆಯುಂ ಕೊಂಡು**
> **ಸರಸಿರುಹಮಂಕೊಂಡು ಸೇವಂತಿಯುಂ ಕೊಂಡು** [46]

ಕವಿ ಹೀಗೆ ಬಣ್ಣಿಸುತ್ತಾನೆ. ಇಲ್ಲಿ ಹಲವು ರೀತಿಯ ಹೂಗಳನ್ನು ಬಸವಣ್ಣನು ಪೂಜೆಗಾಗಿ ಬಿಡಿಸಿಕೊಳ್ಳುತ್ತಿರುವುದನ್ನು ಚಿತ್ರಿಸಿದ್ದಾನೆ. ಮಹಾದೇವಿಯಕ್ಕನ ರಗಳೆಯಲ್ಲೂ ಇದೇ ಬಗೆಯ ವರ್ಣನೆಯನ್ನು ಹರಿಹರ ತಂದಿದ್ದಾನೆ. ಅಲ್ಲಿ -

ಸುರಭಿಗಂಧದರಳ ತೆಕ್ಕೆಯೆನಿಸಿದಿರವತಿಗಳನಾಂತು
ಪರಿಮಳಂಗಳೆಸೆವ ಸೇವಂತಿಗೆಯ ಕುಸುಮ ಕುಲವನಾಂತು
ಇಂಪನುಗುಳ್ವ ಸಂಪಗೆಗಳ ಕಂಪಿನೆಸಳ ನೆಱೆ ತುಱುಂಬಿ
ಕಂಪು ಸುರಿವ ಕನಕ ಕೇತಕೀದಳಗಳಂಗಳಂ ತುಱುಂಬಿ [47]

ಎಂದು ಹೂವಿನ ವರ್ಣನೆ ಮಾಡುತ್ತಾನೆ. ಇಂಥದ್ದೇ ವರ್ಣನೆ ಸಂಕೀರ್ಣ ರಗಳೆಯ ಸಾಲಿನಲ್ಲಿ ಬರುವ ಪುಷ್ಪರಗಳೆಯಲ್ಲಿ ಬರುತ್ತದೆ. ಆ ರಗಳೆಯಲ್ಲಿ ಬರುವ ಪುಷ್ಪ ವರ್ಣನೆ ಮೇಲಿನ ಎರಡೂ ಸಂದರ್ಭಗಳಿಗಿಂತಲೂ ಉತ್ಕೃಷ್ಟವಾದದ್ದು. ಅಲ್ಲಿ ಭಕ್ತ ಬೆಳಿಗ್ಗೆಯೇ ಎದ್ದು ಹೂದೋಟಕ್ಕೆ ಹೋಗಿ ಒಂದೊಂದು ಹೂವಿನ ಜೊತೆಯೂ ಮಾತನಾಡಿ ಅವುಗಳನ್ನು ಪಡೆದುಕೊಂಡು, ಮಾಲೆ ಮಾಡಿ ಶಿವನಿಗೆ ಅರ್ಪಿಸುವುದರ ವರ್ಣನೆಯನ್ನು ತಂದಿದ್ದಾನೆ. ಅಲ್ಲಿ ಹೂಗಳನ್ನು ಕೀಳುವಾಗ ಕವಿ ಆಡುವ ಮಾತುಗಳು -

ಏನಪ್ಪ ಸಂಪಿಗೆಯೆ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು [48]

ಹೀಗೆ ಭಾವತುಂಬಿ ಬಂದಿರುತ್ತದೆ. ಓದುತ್ತಾ ಹೋದಂತೆ ಹೂಗಳ ರಾಶಿಯ ಮಧ್ಯೆಯೇ ಇರುವಂತೆ ಭಾಸವಾಗುತ್ತದೆ. ಅವುಗಳ ಪರಿಮಳವನ್ನು ನಾವೂ ಆಘ್ರಾಣಿಸುತ್ತಿರುವಂತೆಯೇ ಅನಿಸುತ್ತದೆ.

**(ಆ) ಊರು ದೇಶಗಳ ವರ್ಣನೆಯ ಸಂದರ್ಭ**

ಹರಿಹರ ಸಾಮಾನ್ಯವಾಗಿ ಕಥೆಗಳನ್ನು ಪ್ರಾರಂಭಿಸುವಾಗ ಭಕ್ತನ ಊರು ಮತ್ತು ದೇಶಗಳ ಪರಿಚಯ ಮಾಡಿಕೊಡುತ್ತಾನೆ. ಅಂಥ ಸಂದರ್ಭದಲ್ಲಿ ಆ ಊರು ಇಲ್ಲವೆ ದೇಶ ಎಷ್ಟು ಸಂಪದ್ಭರಿತವಾಗಿತ್ತು ಎಂಬುದನ್ನು ಪರಿಚಯಿಸಲು, ಆ ಸುತ್ತಮುತ್ತಣ ನಿಸರ್ಗದ ವರ್ಣನೆಯನ್ನು ತರುತ್ತಾನೆ.

ಮಲುಹಣನ ರಗಳೆಯ ಪ್ರಾರಂಭದಲ್ಲಿ ಕಾಶ್ಮೀರ ದೇಶದ ವರ್ಣನೆಯನ್ನು ಕವಿ ತರುತ್ತಾನೆ. ಅದರ ಸೌಂದರ್ಯವನ್ನು-

ಶ್ರೀ ವಸುಮತೀ ವದನಮುಕುರವೆಂದೆನಿಸಿರ್ಪ
ಪಾವನಂ ಸಕಳ ದೇಶಕ್ಕೆ ತಾನೆನಿಸಿರ್ಪ
-------------------------------
ಊರೂರ್ಗೆ ತೀವಿದ ತಟಾಕನಿಕರಂಗಳಿಂ

ಊರೂರ್ಗೆ ಕಿಕ್ಕಿರಿದು ಕೊಬ್ಬಿದ ಬನಂಗಳಿಂ
ವನದೊಳಗೆ ಸುಳಿವುತಿಪ ದೇಶದೊಳಗೆಲ್ಲಿಯು[49]

ಎಂದು ವರ್ಣಿಸುತ್ತಾನೆ. ಈ ವರ್ಣನೆಯ ನಂತರ ಆ ದೇಶದೊಳಗಿನ ಭಾರತೀಪೀಠ ಎಂಬ ಪಟ್ಟಣದ ವರ್ಣನೆ ಮಾಡುತ್ತಾನೆ. 'ಭೂದೇವಿಯ ನೊಸಲ ತಿಲಕ' ಎನ್ನಲು ಒಪ್ಪುವಂಥ ಈ ಪಟ್ಟಣವನ್ನು ಕವಿ -

ಈರೇಳು ಜಗದೊಳಗೆ ಕೀರ್ತಿವಡೆಯಿತು ಗ್ರಾಮ
ಅಲ್ಲಿ ಶುದ್ಧ ಸ್ಫಟಿಕದಿಂದೆಸೆವ ಕೋಂಟೆಯಿಂ
ಅಲ್ಲಿ ಕತ್ತುರಿಯ ಕೆಸಱೌಕ್ಕೇರಿ ಮಹಿಮೆಯಿಂ
ಅಲ್ಲಿ ಮನೆಮನೆಗಳೊಳು ಕುಂಕುಮದ ಮಡಿಗಳಿಂ
------------------------------------------
ರಾಜಿಸುವ ಹೊಸ ಸೂರ್ಯ ಸೋಮ ವೀಧಿಗಳಿಂದೆಸೆವ
ರಾಜಭೂಷಣನ ಭವನಾವಳಿಗಳಿಂದೆಸೆವ[50]

ಹೀಗೆ ವರ್ಣಿಸುತ್ತಾನೆ. ಎರಡೂ ವರ್ಣನೆಗಳಲ್ಲಿ ಆಯಾಯ ಸ್ಥಳ ಮತ್ತು ಸಂಪತ್ತನ್ನು ವರ್ಣಿಸು ವುದು ಹರಿಹರನ ಉದ್ದೇಶ ಎಂದು ಕಾಣುತ್ತದೆ. ಕಾಶ್ಮೀರ ದೇಶದ ವರ್ಣನೆಯಲ್ಲಿ ಬರುವ ತಟಾಕ, ಬನ, ಕಸ್ತೂರಿ ಮೃಗ, ದೇವ ನದಿ ಮತ್ತು ದೇವಾಲಯಗಳು ಆ ದೇಶದ ಅಗಾಧ ಸಂಪತ್ತನ್ನು ತೋರಿದರೆ; ಭಾರತೀಪೀಠದ ವರ್ಣನೆಯಲ್ಲಿ ಬರುವ ಶಶಿಕಾಂತದ ಭವನ, ಕರುಮಾಡ, ಸೂರ್ಯಸೋಮ ವೀಥಿಗಳು, ರಾಜ ಭವನ, ಬಾಳೆ, ಕಿತ್ತೀಳೆ, ಹೇರೀಳೆ, ದಾಳಿಂಬೆ, ಕಲ್ಪವೃಕ್ಷ, ಅಶೋಕ ವೃಕ್ಷ ಮುಂತಾದುವು ಭಾರತೀಪೀಠದ ಪ್ರಸಿದ್ಧಿಯನ್ನು ತೋರುತ್ತವೆ.

ಒಂದು ಪ್ರದೇಶದ ಸಂಪತ್ತನ್ನು ಅಲ್ಲಿನ ಗಿಡಮರ, ನದಿ ಮುಂತಾದವುಗಳನ್ನು ತರುವ ಮೂಲಕ ವರ್ಣಿಸುವುದು ಹರಿಹರನ ಎಲ್ಲ ರಗಳೆಗಳಲ್ಲೂ ಬರುವ ಸಾಮಾನ್ಯ ದೃಶ್ಯ. ಪುರಾತನ ರಗಳೆಯಲ್ಲಿನ ಚೋಳದೇಶದ ವರ್ಣನೆ ಇದಕ್ಕೆ ಸಾಕ್ಷಿ.

## (ಇ) ಸೌಂದರ್ಯ ವರ್ಣನೆಯ ಸಂದರ್ಭ

ಹೆಣ್ಣಿನ ಸೌಂದರ್ಯವನ್ನು ವರ್ಣಿಸುವ ಸಂದರ್ಭದಲ್ಲಿ ನಿಸರ್ಗವನ್ನು ಬಳಸಿಕೊಂಡಿರುವುದು ಹರಿಹರನ ಅನೇಕ ರಗಳೆಗಳಲ್ಲಿ ಕಂಡುಬರುತ್ತದೆ. ಮಹಾದೇವಿಯಕ್ಕ, ಪರವೆನಾಚಿ, ಸಂಕಿಲಿನಾಚಿ, ಮಲುಹಣಿ, ವೈಜಕವ್ವೆ, ಪದ್ಮಾವತಿಯರ ಸೌಂದರ್ಯ ವರ್ಣನೆಯಲ್ಲಿ ಈ ಬಗೆಯ ವರ್ಣನೆಯನ್ನು ನೋಡಬಹುದು.

ಮಹಾದೇವಿಯಕ್ಕನ ಸೌಂದರ್ಯವನ್ನು ವರ್ಣಿಸುವಾಗ - ಅವಳ ತೊಡೆಗಳು ಬಾಳೆಯ ಕಂಬವನ್ನು ಕೀಳು ಮಾಡುವಂತಿದ್ದವು, ತೆಳ್ಳನೆಯ ಹೊಸ ವಸ್ತ್ರದಿಂದ ಮುಚ್ಚಿದ ಅವಳ

ನಿತಂಬಗಳು ಬೆಳದಿಂಗಳು ಮುಸುಕಿದ ಕುಂಜರದ ಕುಂಭಯುಗಳಗಳಂತಿದ್ದವು, ಮುತ್ತಿನ ಮೂಕುತಿಯು 'ಹೊಂದಾವರೆಗೆಱಗಿದ ಬಿಳಿಯ ತುಂಬಿಯಂತೆ' ಇದ್ದವು, ಕಣ್ಣ ಹುಬ್ಬುಗಳು ಕಬ್ಬಿನ ಬಿಲ್ಲಿನಂತಿದ್ದವು, ನೊಸಲು ಶಶಿಕಳೆಯಿಂದ ನಗುವಂತೆ ಇತ್ತು ಎಂದು ವರ್ಣಿಸುತ್ತಾನೆ.

ಸಂಕಿಲಿನಾಚಿಯ ಸೌಂದರ್ಯವನ್ನು ವರ್ಣಿಸುವಾಗ - ಅವಳ 'ಸೌಕುಮಾರ್ಯ'ಕ್ಕೆ ಹೂದೊಡುಗೆ ಹೊರೆಯಾಗಿತ್ತು, ತೋಳುಗಳು ಎಳೆಲತೆಯಂತಿದ್ದುವು, 'ಬಟ್ಟದೊಡೆ'ಗಳಿಗೆ 'ಬಾಳೆ ಬಹಿಷ್ಕಾರ'ವಾಗಿತ್ತು, ಪದತಳಕ್ಕೆ ಕೆಂದಾವರೆ ಕರ್ಕಶವಾಗಿತ್ತು, ನಿತಂಬಕ್ಕೆ 'ಪುಳಿನ ಸ್ಥಳ'ವು 'ಪಳಿ'ವಾಗಿತ್ತು - ಮುಂತಾದಾಗಿ ವರ್ಣಿಸುತ್ತಾನೆ. ಆದರೆ ಯಾವ ವರ್ಣನೆಯನ್ನೇ ಮಾಡಲಿ ಅಲ್ಲಿ ಕವಿಯ ಉದ್ದೇಶ ಸೌಂದರ್ಯವನ್ನು ಬಣ್ಣಿಸುವುದು ಮಾತ್ರವೇ ಹೊರತು, ಬೇರೆ ಯಾವುದೇ ಉದ್ದೇಶದಿಂದಲೂ ಅಲ್ಲ. ಅನಗತ್ಯ ವರ್ಣನೆಗೆ ಆತ ಕೈ ಹಾಕುವುದಿಲ್ಲ.

## (ಈ) ಚಿತ್ತವೃತ್ತಿಯ ಅಭಿವ್ಯಕ್ತಿ ಸಂದರ್ಭ

ವಿರಹ ಮೊದಲಾದ ಚಿತ್ತವೃತ್ತಿಗಳನ್ನು ನೇರವಾಗಿ ಬಣ್ಣಿಸುವುದು ಸಾಧ್ಯವಿಲ್ಲ. ಯಾವ ವರ್ಣನೆಯನ್ನು ನೇರವಾಗಿ ಮಾಡಲು ಸಾಧ್ಯವಿಲ್ಲವೋ ಅಂಥ ಸಂದರ್ಭದಲ್ಲಿ ಎಲ್ಲ ಕವಿಗಳೂ ನಿಸರ್ಗವನ್ನು ಬಳಸಿಕೊಳ್ಳುವುದು ಸಹಜ. ಅಂತೆಯೇ ಹರಿಹರನೂ ಕೆಲವು ಚಿತ್ತವೃತ್ತಿಗಳನ್ನು ವರ್ಣಿಸುವ ಸಂದರ್ಭದಲ್ಲಿ ನಿಸರ್ಗವನ್ನು ಬಳಸಿಕೊಳ್ಳುತ್ತಾನೆ.

ಮಲುಹಣ ಮಲಹಣೆಯನ್ನು ಅತೀವವಾಗಿ ನೆಚ್ಚಿಕೊಂಡಿದ್ದವನು. ಆದರೆ ಪದ್ಮಾವತಿಯ ಹಣದಾಸೆಯಿಂದಾಗಿ, ಬಯಕೆ ಇನ್ನೂ ಇರುವಾಗಲೇ ಮಲುಹಣೆಯಿಂದ ದೂರವಾಗಿ ಬಿಡುತ್ತಾನೆ.ಅವಳ ಅಗಲಿಕೆಯಿಂದ ಮಲುಹಣನಿಗೆ ವಿರಹ ಆವರಿಸುತ್ತದೆ. ಆ ವಿರಹಾಗ್ನಿಯನ್ನು ಕವಿ -

> ಕಮಲಮಂ ಮಲುಹಣೆಯ ಮೊಗವೆಂದು ಮುತ್ತುವಂ
> ಕುಮುದಮಂ ಕಣ್ಣಳೆಂದಕ್ಷಿಯೊಳಗೊತ್ತುವಂ
> ಮಧುಕರಂಗಳನಳಕವೆಂದು ತಲೆಗೊತ್ತುವಂ
> ಅಧರವೆಂದಾ ಬಿಂಬಫಳವನಚ್ಚೊತ್ತುವಂ
> -------------------------------
> ಪೊಕ್ಕ ಕೊಳನುಕ್ಕಿ ನೆಱೆ ಬತ್ತಿ ಬಱಿದಾದಪುದು
> ಮಿಕ್ಕು ಮುಟ್ಟಿದ ಪಲ್ಲವಂಗಳುಱೆ ಸೀದಪುದು[51]

ಎಂದು ವರ್ಣಿಸುತ್ತಾನೆ. ಇಲ್ಲಿ ಹರಿಹರ ನೀಡುವ ಪ್ರತಿಯೊಂದು ವರ್ಣನೆಯೂ ಮಲುಹಣನ ವಿರಹ ತೀವ್ರತೆಯನ್ನು ಅತ್ಯಂತ ನೈಜ ಎಂಬಂತೆ ಚಿತ್ರಿಸುತ್ತದೆ.

"ಪ್ರಣಯಾಗ್ನಿಯ ಒಂದು ಪ್ರತಿಮೆಯಾಗಿ ಮಲುಹಣ ರೂಪುಗೊಳ್ಳುವುದನ್ನು ಹರಿಹರನ ಈ ಮೇಲಿನ ವರ್ಣನೆಯಲ್ಲಿ ಕಾಣುತ್ತೇವೆ. ಈ ಹಂತದಲ್ಲಿ ರೂಪುಗೊಳ್ಳುವ ಪ್ರತಿಮೆ, ಇಲ್ಲಿಂದ

ಮುಂದೆ ನಿಸರ್ಗದ ಹಿನ್ನೆಲೆಯ ಪರಿಕರಗಳನ್ನು ಅಳವಡಿಸಿಕೊಂಡು ಒಂದು ಪರಿಪೂರ್ಣ ಸ್ವರೂಪವನ್ನು ನಿರ್ಮಿಸಿಕೊಳ್ಳುವ ಹೊಂದುಹಾಕುತ್ತದೆ."[52]

ಮಲುಹಣನ ವಿರಹವನ್ನು ತೋರಲು ಹರಿಹರ ಸೃಷ್ಟಿಸುವ ಪ್ರತಿಮೆ ಅರ್ಥಪೂರ್ಣವಾಗಿದೆ. ವಿರಹಯಾತನೆಯಲ್ಲಿ ಸಿಕ್ಕಿದವನಿಗೆ ಚಳಿ, ಮಳೆ, ಬಿಸಿಲು, ಬೆಂಕಿ, ಕೊರೆಯುವ ಹಿಮ - ಹೀಗೆ ಯಾವುದರ ಪರಿವೆಯೂ ಇರುವುದಿಲ್ಲ ಎಂಬುದನ್ನು ಹರಿಹರ-

ಇರೆ ಕಡೆದುದತಿ ಸೂಕ್ಷ್ಮಶೀತವಾತನ ಮೇಲೆ
ಪರಿಪರಿಯ ಹೊಸ ಹಿಮದ ಘಟ್ಟಿಯಾತನ ಮೇಲೆ
ಮುಚ್ಚಿ ಮುಸುಕಲು ನಡುವೆ ಮಲುಹಣಂ ನಿಂದಿರ್ದು
ಅಚ್ಚರಿಯ ವಿರಹದಿಂ ಹಿಮದೊಳಗೆ ಸಂದಿರ್ದು
ಎಳೆಯ ಬೆಳುಮುಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿಕಲ್ಲ ಮನೆಯೊಳಗಿಪ್ಪ ರವಿಯಂತೆ
-----------------------------------
ಬೆಳಗಪ್ಪಿನಂ ಶೀತಶಾಲೆಯೊಳಗೊಪ್ಪಿರಲು[53]

ಎಂಬ ವರ್ಣನೆಯಲ್ಲಿ ತರುತ್ತಾನೆ. ಕೊರೆಯುವ ಚಳಿಯಲ್ಲಿ ಇರುವುದೇ ಅಸಾಧ್ಯವಾಗಿರುವಾಗ ವಿರಹ ಯಾತನೆಯಲ್ಲಿ ಸಿಕ್ಕಿದ ಮಲುಹಣ ಹೆಪ್ಪುಗಟ್ಟಿದ ಹಿಮದೊಳಗೆ ಇಡೀ ರಾತ್ರಿ ಕಳೆದಿದ್ದಾನೆ ಎಂದರೆ, ಆ ವಿರಹ ತೀವ್ರತೆ ಎಷ್ಟಿತ್ತು ಎಂಬುದು ತಿಳಿಯುತ್ತದೆ.

ಇದೇ ಬಗೆಯ ವಿರಹ ವರ್ಣನೆಯನ್ನು ಮಹಾದೇವಿಯಕ್ಕನ ರಗಳೆಯಲ್ಲಿ, ಕೌಶಿಕನ ವಿರಹ ಸಂದರ್ಭದಲ್ಲಿ ನೋಡಬಹುದು. ಅಲ್ಲಿ ಕೌಶಿಕನ ವಿರಹಾಗ್ನಿಯಿಂದ 'ಮುತ್ತಿದಳಿಮಾಲೆ ಕರಿಮುರಿವೋಗಿ' ಬೀಳುತ್ತವೆ. 'ಒತ್ತುವಂಬುಜಪ್ರತತಿ ಹೊತ್ತಿ ಹೊಗೆ'ವುತ್ತಿರುತ್ತವೆ. 'ಸುತ್ತಿಪಲ್ಲವಿಸುವ ಪಲ್ಲವ' ಉರಿದು ಬೇಯುತ್ತಿರುತ್ತದೆ. 'ಸೂಸುತಿರ್ಪಾಲಿನೀರ್ಗಳು ಕಡಿದು' ಬತ್ತುತ್ತಿರುತ್ತವೆ. 'ಬೀಸುತಿರ್ಪ ತಳಿರ' ಚಾಮರ ಸೀದುಹೋಗುತ್ತಿರುತ್ತದೆ. ಹೀಗೆ ಹರಿಹರ ವಿರಹ ಯಾತನೆಯನ್ನು ಬಣ್ಣಿಸುವ ಸಂದರ್ಭದಲ್ಲಿ ನಿಸರ್ಗವನ್ನು ಬಳಸಿಕೊಂಡು ಅವುಗಳನ್ನು ಹೆಚ್ಚು ಹತ್ತಿರವಾಗಿಸುತ್ತಾನೆ.

ನಿಸರ್ಗವನ್ನು ಬಳಸಿಕೊಂಡು ವಿರಹವನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಹಾಗೆಯೇ ದೀನ ಸ್ಥಿತಿಯ ವರ್ಣನೆಯ ಸಂದರ್ಭದಲ್ಲಿಯೂ ಕೆಲವೊಮ್ಮೆ ನಿಸರ್ಗವನ್ನು ಬಳಸಿಕೊಂಡು ಹರಿಹರ ಪರಿಣಾಮಕಾರಿಯಾಗಿ ಚಿತ್ರಿಸಬಲ್ಲ ಎಂಬುದಕ್ಕೆ 'ಮಲುಹಣನ ರಗಳೆ'ಯೇ ಒಂದು ಸಾಕ್ಷಿ. ಅಲ್ಲಿ ಮಲುಹಣೆಯನ್ನು ಮಲುಹಣನಿಂದ ಬೇರ್ಪಡಿಸುವುದಕ್ಕೋಸ್ಕರ ಅವಳ ತಾಯಿ ಮಲುಹಣೆಯನ್ನು ಕರೆಯುತ್ತಾಳೆ. ಆಗ ಮಲುಹಣನನ್ನು ಬಿಟ್ಟುಬರಲಾಗದ ಮಲುಹಣೆ ತನ್ನ ತಾಯಿಗೆ "ಸಿಡಿಲ ದನಿಗೇಳ್ದ ಹಂಸೆಯಂತೆ ನಡನಡನೆ ನಡುಗಿ ಎಲೆ ತಾಯಿ, ಕಮಲ ತಂಡುಲವನಾರೋಗಿಸುವ ಹಂಸೆಗೆ ಹರಳನಿಕ್ಕುವರೆ? ಕೋರಕಮಂ ಸವಿವ ಕೋಕಿಲೆಗೆ

ಕೊರಡನಿಕ್ಕುವರೆ? ಫಳರಸವನೀಂಟುವರಗಿಳಿಗೆ ಕಾದನೀರನೆಱೆವರೆ? ಪರಿಮಳವನುಂಬ ದುಂಬಿಗೆ ಹೊಗೆಯನಿಕ್ಕುವರೆ? ಬೆಳದಿಂಗಳನಾಸ್ವಾದಿಪ ಚಕೋರಿಗೆ ಬಿಸಿಲಂ ಮಾಳ್ಪರೆ?"[54] ಎಂದು ನುಡಿಯುತ್ತಾಳೆ. ಮಲುಹಣೆಯ ಈ ನುಡಿಗಳಲ್ಲಿ ಅವಳ ದೀನ ಸ್ಥಿತಿಯನ್ನು ಕವಿ ತುಂಬಿಸಿಟ್ಟಿದ್ದಾನೆ. ಅಲ್ಲಿ ನಿಸರ್ಗದ ಪಾತ್ರ ಮಹತ್ವದ್ದು.

ಹೀಗೆ ಕಾವ್ಯ ರಚನೆಯ ಹಲವಾರು ಸಂದರ್ಭಗಳಲ್ಲಿ ನಿಸರ್ಗವನ್ನು ಬಳಸಿಕೊಂಡು ಆಯಾಯ ಸಂದರ್ಭ ಸನ್ನಿವೇಶಗಳನ್ನು ಮನೋಜ್ಞ ಹಾಗೂ ಅರ್ಥಪೂರ್ಣವಾಗಿ ಚಿತ್ರಿಸು ವುದನ್ನು ಹರಿಹರನ ಕಾವ್ಯಗಳಲ್ಲಿ ನೋಡುತ್ತೇವೆ.

### 9.4.1.3 ಇತರ ವರ್ಣನೆಗಳು

ಈ ವರ್ಣನೆಗಳ ಸಾಲಿನಲ್ಲಿ ವಿಭೂತಿ, ರುದ್ರಾಕ್ಷಿ, ಲಿಂಗಾರ್ಚನೆ, ಸಂಸಾರ ವ್ಯಾಮೋಹ, ಪಂಚಾಕ್ಷರಿ ಮತ್ತು ಪಂಪಾಕ್ಷೇತ್ರಗಳ ಬಗೆಗೆ ಮಾಡಿರುವ ವರ್ಣನೆಯನ್ನು ಸೇರಿಸಬಹುದು. ಪ್ರತಿಯೊಂದರಲ್ಲೂ ಅದರದರ ಮಹಿಮೆಯನ್ನು ಅಭೂತಪೂರ್ವವಾಗಿ ಬಣ್ಣಿಸಿರುವುದನ್ನು ಕಾಣಬಹುದು. 'ವಿಭೂತಿ ರಗಳೆ'ಯಲ್ಲಿ-

...... ನೊಸಲೊಳಿಟ್ಟ ಭಸಿತದೊಳಗೆ ಭಾಳನಯನ ನಿರ್ಪನೊಲಿದು
ಎಸೆವ ಭುಜದ ಭೂತಿಯೊಳಗೆ ಶೂಲ ಹಸ್ತ ನಿರ್ಪನೊಲಿದು ......[55]

ಹೀಗೆ ಸುಮಾರು ನೂರಕ್ಕೂ ಹೆಚ್ಚು ಸಾಲುಗಳನ್ನು ಬಳಸಿ ವಿಭೂತಿಯ ಮಹಿಮೆಯನ್ನು ಬಣ್ಣಿಸುತ್ತಾನೆ. ಇಡೀ ವರ್ಣನೆಯಲ್ಲಿ ವಿಭೂತಿಯ ಮಹಿಮೆ ಎಂಥದ್ದು, ಅದನ್ನು ಎಲ್ಲೆಲ್ಲಿ ಧರಿಸಿದರೆ ಯಾರ್‍ಯಾರು ಒಲಿಯುತ್ತಾರೆ, ಯಾರ್‍ಯಾರಿಗೆ ವಿಭೂತಿಯನ್ನು ಧರಿಸುವುದರಿಂದ ಎಂಥೆಂಥ ಉಪಯೋಗಗಳಾಗುತ್ತವೆ ಎಂಬುದರ ಬಗ್ಗೆ ವರ್ಣಿಸುತ್ತಾನೆ. ಇದೇ ಬಗೆಯಲ್ಲಿ ರುದ್ರಾಕ್ಷಿಯನ್ನು -

...... ಸುಗತಿಯನುಗುಳ್ವ ಪುಣ್ಯದ ಚಿನ್ನದ ಘಟ್ಟಿಗಳು
ಸೊಗಯಿಸುವ ಪದಪಿ ಮುಸುರಿದ ಜೇನ ಹುಟ್ಟುಗಳು
------------------------------------
ಕಾಲ ವೈರಿಯ ಜಪದ ಮಾಲೆಗಳು ರುದ್ರಾಕ್ಷಿ
ಭಾಳ ನೇತ್ರನ ನಯನ ಲೀಲೆಗಳು ರುದ್ರಾಕ್ಷಿ[56]

ಎಂಬುದಾಗಿ ವರ್ಣಿಸುತ್ತಾನೆ. ಇಡೀ ವರ್ಣನೆಯಲ್ಲಿ ರುದ್ರಾಕ್ಷಿಯ ಮಹಿಮೆಯನ್ನು ಅಚ್ಚಿಳಿಸಿ ದ್ದಾನೆ. ಹಾಗೆಯೇ ಲಿಂಗಾರ್ಚನೆಯ ರಗಳೆಯಲ್ಲಿ - ಬೆಳಿಗ್ಗೆಯೇ ಎದ್ದು ಹಲವು ಹೂಗಳನ್ನು ಆರಿಸಿತಂದು, ಲಿಂಗವನ್ನು ತೊಳೆದು ಪೂಜಿಸುವ ಬಗೆಯನ್ನು ಕವಿ ವರ್ಣನೆ ಮಾಡುತ್ತಾನೆ.

ಇಡೀ ರಗಳೆಗಳಲ್ಲಿ ಅತ್ಯಂತ ಮಹತ್ವದ ಮತ್ತು ಕವಿಯ ಕೈಯಲ್ಲಿ ಸುಂದರವಾಗಿ ಮೂಡಿ

ಬಂದಿರುವ ರಗಳೆ ಎಂದರೆ ಸಂಸಾರ ವ್ಯಾಮೋಹ ನಿರಸನ ರಗಳೆ. ಅಲ್ಲಿ ಮನುಷ್ಯ ಸಂಸಾರದ ಬಗೆಗೆ ಇಟ್ಟುಕೊಂಡಿರುವ ಎಲ್ಲ ಬಯಕೆ, ನಂಬಿಕೆ ಮತ್ತು ಅವರೊಳಗಿನ ಅಸಹ್ಯಗಳನ್ನು ಸುಂದರವಾಗಿ ವರ್ಣಿಸುತ್ತಾನೆ. ಇಲ್ಲಿ ಕವಿ ಸೃಷ್ಟಿಸುವ ಪ್ರತಿಯೊಂದು ಸಾಲೂ ಬಹಳ ಮಹತ್ವಪೂರ್ಣವಾದುದು.

ಓಂ ನಮ: ಶಿವಾಯ ಎಂಬ ಪಂಚಾಕ್ಷರ ಮಹಿಮೆಯನ್ನು ಹರಿಹರ ಪಂಚಾಕ್ಷರಿಯ ರಗಳೆಯಲ್ಲಿ ವರ್ಣಿಸಿದ್ದಾನೆ. ಅದನ್ನು -

> **ಪರಮನ ಕಣ್ಣುಂ ಗತಿ ಪಂಚಾಕ್ಷರಿ**
> **ಪರಮನ ಮತಿಯುನ್ನತಿ ಪಂಚಾಕ್ಷರಿ**
> **ಈಶ್ವರ ಜಪಮಾಲೆಯು ಪಂಚಾಕ್ಷರಿ**[57]

ಈ ರೀತಿಯಲ್ಲಿ ವರ್ಣಿಸುತ್ತಾನೆ. ಇಲ್ಲಿ ಪಂಚಾಕ್ಷರಿಯ ಹುಟ್ಟು, ಅದನ್ನು ಜಪಿಸುವ ರೀತಿ ಮುಂತಾದವುಗಳನ್ನು ಬಣ್ಣಿಸುತ್ತಾನೆ. ಹಾಗೆಯೇ ಪಂಪಾಕ್ಷೇತ್ರದ ರಗಳೆಯಲ್ಲಿ, ಪಂಪಾಕ್ಷೇತ್ರದಲ್ಲಿರುವ ಹಲವಾರು ದೇವಾಲಯ, ಆ ಕ್ಷೇತ್ರಕ್ಕೆ ಇರುವ ಬಾಗಿಲು, ಆ ಕ್ಷೇತ್ರಗಳಲ್ಲಿರುವ ತೀರ್ಥ, ಅಲ್ಲಿ ನೆಲೆಸಿರುವ ದೇವತೆ ಮುಂತಾದ ವರ್ಣನೆಗಳನ್ನು ಮಾಡುತ್ತಾನೆ.

ಹೀಗೆ ವೈವಿಧ್ಯಮಯ ವರ್ಣನೆಗಳನ್ನು ಹರಿಹರ ಕಾವ್ಯದಲ್ಲಿ ತರುತ್ತಾನೆ. ಒಟ್ಟಾರೆ ಈ ವರ್ಣನೆಗಳ ಮುಖ್ಯ ಉದ್ದೇಶ ಆಯಾ ಪಾತ್ರ ಹಾಗೂ ಸನ್ನಿವೇಶಗಳ ಮಹತ್ವವನ್ನು ಸಾರುವುದು. ಅದನ್ನು ಈಡೇರಿಸುವಲ್ಲಿ ಪ್ರತೀ ವರ್ಣನೆಗಳೂ ಯಶಸ್ಸನ್ನು ಕಂಡಿವೆ.

### 9.4.2 ಅಲಂಕಾರ

ಕಾವ್ಯದ ಮಧ್ಯೆ ಮಧ್ಯೆ ವರ್ಣನೆಯನ್ನು ತರುವ ಮೂಲಕ ಕವಿ ಕಾವ್ಯದ ಸೊಗಸು ಮತ್ತು ಅರ್ಥವಂತಿಕೆಯನ್ನು ಹೇಗೆ ಹೆಚ್ಚಿಸುತ್ತಾನೆಯೋ, ಹಾಗೆಯೇ ಕಾವ್ಯದ ಮಧ್ಯೆ ಅಲಂಕಾರಗಳನ್ನು ಬಳಸುವುದರ ಮೂಲಕ ಕಾವ್ಯಕ್ಕೆ ಸೊಗಸು ಮತ್ತು ಅರ್ಥವಂತಿಕೆಯನ್ನು ಹೆಚ್ಚಿಸಿದ್ದಾನೆ. ಅವನ ಕಾವ್ಯದಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳೆರಡನ್ನೂ ನೋಡಬಹುದು. ಶಬ್ದಾಲಂಕಾರಗಳಲ್ಲಿ ಯಮಕ ಮತ್ತು ಅನುಪ್ರಾಸಗಳನ್ನು ಬಳಸಿಕೊಂಡಿದ್ದರೆ, ಅರ್ಥಾಲಂಕಾರಗಳಲ್ಲಿ ಉಪಮಾ, ರೂಪಕ ಮತ್ತು ಉತ್ಪ್ರೇಕ್ಷಾಲಂಕಾರಗಳನ್ನು ಬಳಸಿ ಕೊಂಡಿದ್ದಾನೆ. ಪ್ರತೀ ಅಲಂಕಾರಗಳನ್ನು ಬಳಸಿಕೊಳ್ಳುವಾಗಿನ ಕವಿಯ ಜಾಗ್ರತೆ ಮೆಚ್ಚುವಂಥದ್ದು. ಆತ ತನಗೆ ಗೊತ್ತಿರುವ ಅಲಂಕಾರಗಳನ್ನೆಲ್ಲ ಬಲವಂತವಾಗಿ ಕಾವ್ಯದಲ್ಲಿ ತಂದು ತುರುಕುವುದಕ್ಕಿಂತ ಸಹಜತೆ ಮತ್ತು ಸನ್ನಿವೇಶಕ್ಕೆ ತಕ್ಕಂತೆ ಅವುಗಳನ್ನು ಬಳಸುವ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾನೆ. ಆಯಾ ಸನ್ನಿವೇಶಕ್ಕೆ ಸಹಜವಾಗಿ ಯಾವ ಅಲಂಕಾರ ಹೊಂದುತ್ತದೆಯೋ ಅಂಥದ್ದನ್ನು ಮಾತ್ರ ಬಳಸಿ ಕಾವ್ಯದ ಸೌಂದರ್ಯ ಹೆಚ್ಚಿಸಿದ್ದಾನೆ.

### 9.4.2.1 ಶಬ್ದಾಲಂಕಾರ

ಶಬ್ದಾಲಂಕಾರಗಳಲ್ಲಿ ಹರಿಹರ ಹೆಚ್ಚಾಗಿ ಬಳಸಿಕೊಂಡಿರುವುದು ವೃತ್ತ್ಯಾನುಪ್ರಾಸ ಮತ್ತು ಯಮಕಗಳನ್ನು. ಕೆಲವು ಉದಾಹರಣೆಗಳ ಮೂಲಕ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು.

#### (ಅ) ವೃತ್ತ್ಯಾನುಪ್ರಾಸ

'ಮಲಯರಾಜದೇವರ ರಗಳೆ'ಯಲ್ಲಿ ಬರುವ ಪೂಜಾವರ್ಣನೆಯ ಒಂದು ಸಂದರ್ಭ -

ಜಾವವಿಲ್ಲ ಘಳಿಗೆಯಿಲ್ಲ ದಿವಸವಿಲ್ಲ ನಿತ್ಯಪೂಜೆ
ಆವ ನಿಯಮವಿಲ್ಲ ಸಂಶಯಂಗಳಿಲ್ಲ ನಿಜದಪೂಜೆ
ತರ್ಕವಿಲ್ಲ ಬೆರಕೆಯಿಲ್ಲ ಬಚ್ಚಬಜೀಯ ಶಿವನಪೂಜೆ
ಕರ್ಕಶಂಗಳಿಲ್ಲ ಬೋಧೆಯಿಲ್ಲದಭವನಳ್ತಿ ಪೂಜೆ [58]

'ವಿಭೂತಿ ರಗಳೆ'ಯಲ್ಲಿ ವಿಭೂತಿಯ ಮಹಿಮೆಯನ್ನು ಬಣ್ಣಿಸುವಾಗ-

ಭವದ ಭೀತಿ ಶಿವನ ಜಾತಿ ಶೃತಿ ವಿಭೂತಿ ಮತಿ ವಿಭೂತಿ
ಪತಿ ವಿಭೂತಿ ರತಿ ವಿಭೂತಿ ಸಿರಿವಿಭೂತಿ ಗುರು ವಿಭೂತಿ[59]

'ಇಹ:ಪ್ಪಗೆಯಾಂಡರ ರಗಳೆ'ಯಲ್ಲಿ ಬರುವ ಕಾಳಗದ ವರ್ಣನೆಯ ಸಂದರ್ಭದಲ್ಲಿ-

ಖಣಿಲೆಂಬ ಖಟಿಲೆಂಬ ನೆಳಲೆಂಬ ನೆರ್ಕೆಂಬ
ಘಣಿಲೆಂಬ ಘಣ್ಮೆಂಬ ದೊಗಹೆಂಬ ದೊಕ್ಕೆಂಬ
ಸಜ್ಜೆಂಬ ಘರಿಲೆಂಬ ಧರಿಲೆಂಬ ಭುಗಿಲೆಂಬ
ಝೊಜ್ಜೆಂಬ ಝೊಮ್ಮೆಂಬ ಚಕ್ಕೆಂಬ ಚೊಕ್ಕೆಂಬ[60]

ಹೀಗೆ ಹಲವಾರು ಸಂದರ್ಭಗಳಲ್ಲಿ ವೃತ್ತ್ಯಾನುಪ್ರಾಸಗಳನ್ನು ಬಳಸಿಕೊಂಡು ಹರಿಹರ ಕಾವ್ಯ ರಚನೆ ಮಾಡಿದ್ದಾನೆ.

#### (ಆ) ಯಮಕ

ವೃತ್ತ್ಯಾನುಪ್ರಾಸಗಳ ಬಳಕೆ ಹರಿಹರನ ಕಾವ್ಯದಲ್ಲಿ ಹೇಗೆ ಯಥೇಚ್ಛವಾಗಿ ಬಳಕೆಯಾಗಿದೆಯೋ, ಹಾಗೆಯೇ ಯಮಕಗಳ ಬಳಕೆಯೂ ಆಗಿರುವುದು ಕಂಡುಬರುತ್ತದೆ. ಎಲ್ಲ ರಗಳೆಯಲ್ಲೂ ಒಂದಲ್ಲ ಒಂದು ಕಡೆ ಈ ಯಮಕಗಳ ಬಳಕೆ ಇದ್ದೇ ಇರುತ್ತದೆ.

'ಬಸವರಾಜದೇವರಗಳೆ'ಯಲ್ಲಿ ಬಸವಣ್ಣನವರ ಪೂಜಾವರ್ಣನೆಯನ್ನು ಮಾಡುವ ಸಂದರ್ಭ-

ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತೆ
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ
ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣೆಂದೆನುತೆ
ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ [61]

'ನಂಬಿಯಣ್ಣನ ರಗಳೆ'ಯಲ್ಲಿ ನಂಬಿಯಣ್ಣನು ಶಿವನಿಂದ ಕುದುರೆ, ದಿವ್ಯಸೌರಭ್ಯ, ನವ್ಯವಸ್ತ್ರಗಳನ್ನು ಪಡೆದು ಬರುವಾಗ -

ಎಂದಲ್ಲಿ ಮೆಱೆವ ಪಚ್ಚೆಯ ಕುದುರೆಯಂ ಪಡೆದು
ಸಂದ ಧವಳಾರ ಪತ್ರಪ್ರಕರಮಂ ಪಡೆದು
ದಿವ್ಯ ಸೌರಭ್ಯ ಸಂದೋಹಂಗಳಂ ಪಡೆದು
ನವ್ಯ ವಸ್ತು ಪಡಿವೊಂಗಳಂ ಪಡೆದು[62]

'ಚಂಡೇಶ ಪಿಳ್ಳೆಯ ರಗಳೆ'ಯಲ್ಲಿ ಪುರಜನರೆಲ್ಲ ಚಂಡೇಶ ಪಿಳ್ಳೆಯನ್ನು ಸಾಕುವವರಿಗೆ ಕೊಟ್ಟುಬಿಡುವಂತೆ ಚಂಡೇಶ ಪಿಳ್ಳೆಯ ತಂದೆಗೆ ತಿಳಿಸಿದ ಸಂದರ್ಭದಲ್ಲಿ -

ಎನಗೆನ್ನ ಹೊನ್ನುವುಂ ಚೆನ್ನುವುಂ ಕಂದನೇ
ಎನಗೆನ್ನ ಬಂಧುವುಂ ಬಳಗವುಂ
ಎನಗೆನ್ನ ಜೀವಮುಂ ಭಾವಮುಂ
ಎನಗೆನ್ನ ಸಂಪದಂ ಸುಖರಸಂ[63]

ಹೀಗೆ ಹಲವಾರು ಕಡೆ ಹರಿಹರ ಯಮಕಾಲಂಕಾರವನ್ನು ಬಳಸಿಕೊಂಡಿದ್ದಾನೆ. ಕೆಲವೆಡೆಯಂತೂ ಹತ್ತು ಹದಿನೈದು ಸಾಲುಗಳಿಗಿಂತಲೂ ಹೆಚ್ಚಾಗಿ ಇಂಥ ಬಳಕೆ ಕಂಡುಬರುತ್ತದೆ. ವಿಭೂತಿ ರಗಳೆ ಇದಕ್ಕೆ ಉತ್ತಮ ನಿದರ್ಶನ.

## 9.4.2.1 ಅರ್ಥಾಲಂಕಾರ

ಅರ್ಥಾಲಂಕಾರಗಳಲ್ಲಿ ಹರಿಹರ ಅತಿ ಹೆಚ್ಚಾಗಿ ಬಳಸಿಕೊಂಡಿರುವುದು ಉಪಮಾ, ರೂಪಕ, ಉತ್ಪ್ರೇಕ್ಷಾಲಂಕಾರಗಳನ್ನು ಮಾತ್ರ. ಇವುಗಳಿಂದಲೇ ಆತ ಕಥೆಯಲ್ಲಿ ಪರಿಣಾಮವನ್ನು ಸಾಧಿಸುವುದು.

### (ಅ) ಉಪಮಾಲಂಕಾರ

"...... ಕೆಸರ ಕೊರತೆಗೆ ಕತ್ತುರಿಯಂ ಕೊಳ್ವಂತೆ, ಸುಣ್ಣದ ಕೊರೆಗೆ ಬೆಳ್ದಿಂಗಳಂ ಬಸುವಂತೆ, ಮಸಿಯ ಕೊರತೆಗೆ ಮಾಣಿಕವಂ ಕೊಡುವಂತೆ, ಬೇಲಿಯ ಕೊರತೆಗೆ ಕಲ್ಪತರುವ ತರಿವಂತೆ, ಕಸದಕೊರತೆಗೆ ಕರ್ಪೂರದ ರಂಜನಂಬೆರಸುವಂತೆ ......" [64]

ಈ ಉಪಮಾಲಂಕಾರ ಆದಯ್ಯನ ರಗಳೆಯಲ್ಲಿ ಬರುತ್ತದೆ. ಪಾರಿಷ ಪಂಡಿತನು

ಪದ್ಮಾವತಿಯ ಮನೆಗೆ ಬಂದು ಬೋನವನ್ನು ಕೇಳುವ ಸಂದರ್ಭದಲ್ಲಿ ಇದನ್ನು ಬಳಸುತ್ತಾನೆ. ಇಲ್ಲಿ ಕವಿ ಪಾರಿಷ ಪಂಡಿತ (ಜೈನ)ನನ್ನು ಕೆಸರು, ಸುಣ್ಣ, ಮಸಿ, ಬೇಲಿ ಮತ್ತು ಕಸಕ್ಕೂ ಪದ್ಮಾವತಿಯನ್ನು ಕಸ್ತೂರಿ, ಬೆಳ್ದಿಂಗಳು, ಮಾಣಿಕ್ಯ, ಕಲ್ಪತರು, ಕರ್ಪುರದ ರಂಜನಗಳಿಗೂ ಹೋಲಿಸುತ್ತಾನೆ. ಇದು ಪಾರಿಷ ಪಂಡಿತ ಮತ್ತು ಪದ್ಮಾವತಿಯರ ಗುಣವನ್ನು ಸಂಕೇತಿಸುತ್ತದೆ.

"...... ಬಿಸಿನೀರನುಂಡ ಲತೆಯಂತೆ ಕೊರಗಿ, ಮುಗಿಲ ದನಿಗೇಳ್ದ ಹಂಸೆಯಂತೆ ಕರಗಿ ಬಿಸಿಲೊಳಗಿರ್ದ ಚಕೋರಿಯಂತೆ ಬೆಂಬಿರ್ದು ...... ರಾಹುವಂನೆರೆದ ಚಂದ್ರಕಳೆಯಂತೆ ಕಂದಿ, ಕಾರಮಳೆಯಂ ಪಡೆಯದ ಚಾದಗೆಯಂತೆ ಕುಂದಿ ......"[65]

ಮಹಾದೇವಿಗೆ ಕೌಶಿಕನೊಂದಿಗೆ ಮದುವೆಯಾಗಲು ಇಷ್ಟವಿಲ್ಲ. ಆದರೆ ಇಬ್ಬರ ನಡುವೆ ಮದುವೆ ನಿಶ್ಚಯವಾಗಿ ಎಲ್ಲ ಸಿದ್ಧತೆಗಳೂ ನಡೆದಿವೆ. ಮದುವೆ ಮಂಟಪದಲ್ಲಿ ಮದುವೆ ಸಿದ್ಧವಾಗಿದೆ. ಆ ಸಂದರ್ಭದಲ್ಲಿ ಮಹಾದೇವಿ ಮನಸ್ಸಿಲ್ಲದ ಮನಸ್ಸಿನಿಂದ ಸುವಾಸಿನಿಯರ ನಡುವೆ ನಿಂತಿದ್ದಾಳೆ. ಆ ಸಮಯದಲ್ಲಿ ಅವಳ ಸ್ಥಿತಿ ಹೇಗಿತ್ತೆಂಬುದನ್ನು ತಿಳಿಸಲು ಕವಿ ಮೇಲಿನ ಉಪಮಾಲಂಕಾರವನ್ನು ಬಳಸುತ್ತಾನೆ.

"ಪರಮಾನುರಾಗದಿಂ ಪರೀಕ್ಷಕನ ಕೈಯೊಳನರ್ಘ್ಯ ರತ್ನಮಂ ಕೊಡುವಂತೆ ವಸಂತರಾಜನ ಕೈಯೊಳಾ ಕಲ್ಪತರುವಿನ ಸಸಿಯಂ ಕೈಲೆಡೆಗುಡುವಂತೆ"[66] ಎಂಬ ಉಪಮಾಲಂಕಾರವನ್ನು ಕವಿ 'ನಂಬಿಯಣ್ಣನ ರಗಳೆ'ಯಲ್ಲಿ , ಜೆಡೆಯನಾಯ್ನಾರ ಮತ್ತು ಯಸ್ಯಜ್ಞಾನ ದೇವಿಯರು ತಮ್ಮ ಮಗನನ್ನು ನರಸಿಂಗಮೊನೆಯರಿಗೆ ಕೊಡಬೇಕಾದ ಸಂದರ್ಭದಲ್ಲಿ ಬಳಸಿದ್ದಾನೆ. ಇಲ್ಲಿ ಅನರ್ಘ್ಯ ರತ್ನ ಮತ್ತು ಕಲ್ಪತರು ಎಂಬುವು ನಂಬಿಯಣ್ಣನ ಗುಣವನ್ನು ಪ್ರತಿಬಿಂಬಿಸುತ್ತವೆ.

'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನ ಬಾಲ್ಯವನ್ನು ಕುರಿತಂತೆ ವರ್ಣಿಸುವಾಗ "ಭಸಿತಕ್ಕೆ ಬಣ್ಣವೇರುವಂತೆ ರುದ್ರಾಕ್ಷಿಗೆ ಸೌಂದರ್ಯಂ ಸಾರುವಂತೆ ಪಂಚಾಕ್ಷರಿಯ ಮಂತ್ರಕ್ಕೆ ಸಾಮರ್ಥ್ಯಂ ಹೊದ್ದುವಂತೆ ಶಿವಲಿಂಗಮಂ ನವಪೂಜೆಯಡರ್ವಂತೆ"[67] ಎಂಬ ಉಪಮಾಲಂಕಾರವನ್ನು ಬಳಸಿದ್ದಾನೆ.

ಹೀಗೆ ಇನ್ನೂ ಹಲವು ಉಪಮಾಲಂಕಾರಗಳು ರಗಳೆಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ಬಳಸಿಕೊಳ್ಳುವ ಮೂಲಕ ಹರಿಹರ ಕಾವ್ಯದ ಉದ್ದೇಶವನ್ನು ಸಾಧಿಸುತ್ತಾನೆ.

## (ಆ) ರೂಪಕಾಲಂಕಾರ

ಉಪಮಾಲಂಕಾರಗಳನ್ನು ಕಾವ್ಯದಲ್ಲಿ ಬಳಸಿಕೊಂಡಿರುವಂತೆಯೇ ರೂಪಕಾಲಂಕಾರವನ್ನು ಹರಿಹರ ತನ್ನ ಕಾವ್ಯದಲ್ಲಿ ಬಳಸಿಕೊಂಡಿದ್ದಾನೆ. ಆದರೆ ಉಪಮಾಲಂಕಾರದಷ್ಟು ಯಥೇಚ್ಛವಾಗಿ ರೂಪಕಾಲಂಕಾರವನ್ನು ಈತ ಬಳಸಿಕೊಂಡಿಲ್ಲ. ಈ ಅಲಂಕಾರ ಅವನ ಕಾವ್ಯದಲ್ಲಿ ವಿರಳವಾಗಿ ಕಂಡುಬರುತ್ತದೆ.

'ಬಸವರಾಜದೇವರ ರಗಳೆ'ಯಲ್ಲಿ ಹಲವೆಡೆ ರೂಪಕಾಲಂಕಾರವನ್ನು ಬಳಸಿ ಕೊಂಡಿದ್ದಾನೆ. ಏಳನೆ ಸ್ಥಲದ ಪ್ರಾರಂಭದ ಒಂದು ಚಂಪೂವಿನಲ್ಲಿ ಶರಣರು ಮತ್ತು ಬಸವಣ್ಣನ ನಡುವಿನ ಸಂಬಂಧವನ್ನು ಕುರಿತು ಹೇಳುವಾಗ - 'ಶರಣಸರೋಜ ಸಂಕುಳ ಸಹಸ್ರಕರಂ',

'ಶರಣಸಮಾಜಚಾತಕಸುಧಾವರುಷಂ', 'ಶರಣಮಯೂರಮೇಘನಿನದಂ', 'ಶರಣಾಬ್ಧಿಚಂದ್ರಮಂ' ಎಂಬ ರೂಪಕಗಳನ್ನು ಹರಿಹರ ಬಳಸಿಕೊಂಡಿದ್ದಾನೆ.

'ಮಹಾದೇವಿಯಕ್ಕನ ರಗಳೆ'ಯಲ್ಲಿ ಮಹಾದೇವಿಯಕ್ಕ ಅವಳ ಸಖಿಯರೊಡನೆ ಪೂಜೆಗೆ ಬರುವಾಗ ಹರಿಹರ ಆ ಸಖಿಯರ ವರ್ಣನೆ ಮಾಡುತ್ತಾನೆ. ಆ ಸಂದರ್ಭದಲ್ಲಿ 'ಚಂದ್ರಮುಖಿ'ಯರು ಎಂಬ ರೂಪಕವೊಂದನ್ನು ಬಳಸಿ ಅವರನ್ನು ವರ್ಣಿಸುತ್ತಾನೆ. ಇದೇ ರಗಳೆಯಲ್ಲಿ, ಭಕ್ತನೊಬ್ಬ ಮಹಾದೇವಿಯಕ್ಕನನ್ನು ನೋಡಿಕೊಂಡು ಹೋಗಿ ಮಾಹೇಶ್ವರರಿಗೆ ಮಹಾದೇವಿಯಕ್ಕನ ಇರವನ್ನು ಹೇಳುವ ಸಂದರ್ಭದಲ್ಲಿ 'ಇಂದುಮುಖಿ' ಎಂಬ ರೂಪಕವನ್ನು ಬಳಸುತ್ತಾನೆ. 'ಒಲಘಾಂಡ ಮೂರ್ತಿಯ ರಗಳೆ'ಯಲ್ಲಿ ಭಕ್ತ ಒಲಘಾಂಡ ಶಿವನಿಗೆ ಚಂದನವನ್ನು ಅರ್ಪಿಸಲು ಹಣವಿಲ್ಲದೆ ಹೋದಾಗ, ತನ್ನ ಹೆಂಡತಿಯ ತಾಳಿಯನ್ನೇ ಮಾರಿ ಶಿವನಿಗೆ ಚಂದನವನ್ನು ಅರ್ಪಿಸುವ ನಿರ್ಧಾರಕ್ಕೆ ಬರುತ್ತಾನೆ. ಅಂತೆಯೇ ತನ್ನ ಹೆಂಡತಿಯ ತಾಳಿಯನ್ನು ಕೀಳಲು ಹೋಗುತ್ತಾನೆ. ಆ ಸಂದರ್ಭದಲ್ಲಿ 'ಹಜಿದನಾಗಳೆ ತಾಳಿಯಂ ಕುಲದ ತಾಳಿಯಂ' ಎಂಬ ರೂಪಕವನ್ನು ಬಳಸಿ ಆ ಸನ್ನಿವೇಶಕ್ಕೆ ಭಾವ ತುಂಬುತ್ತಾನೆ.

'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನು ಬಿಜ್ಜಳ ರಾಜನಿಗೆ ಎದುರು ಉತ್ತರವನ್ನು ಕೊಡುವಾಗಲೂ ಹರಿಹರ 'ಕಪ್ಪಡದ ಹಾಹೆ', 'ಹುಲ್ಲ ಬೊಂಬೆ', ಮುಂತಾದ ರೂಪಕಗಳನ್ನು ಬಳಸಿಕೊಂಡಿದ್ದಾನೆ. ಇವುಗಳ ಜೊತೆಗೆ 'ವಿಭೂತಿಯ ಸುಭಟಂ', 'ರುದ್ರಾಕ್ಷಿಯ ರುದ್ರಂ' ಎಂಬ ರೂಪಕಗಳನ್ನು ಇದೇ ರಗಳೆಯಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ.

### (ಇ) ಉತ್ಪ್ರೇಕ್ಷಾಲಂಕಾರ

ಹರಿಹರ ತನ್ನ ಕಾವ್ಯದಲ್ಲಿ ಉಪಮ ಮತ್ತು ರೂಪಕಾಲಂಕಾರಗಳನ್ನು ಹೇಗೆ ಬಳಸಿಕೊಂಡಿದ್ದಾನೆಯೋ ಹಾಗೆಯೇ ಉತ್ಪ್ರೇಕ್ಷಾಲಂಕಾರವನ್ನೂ ಬಳಸಿಕೊಂಡಿದ್ದಾನೆ. ಇವುಗಳ ಪ್ರಮಾಣ ಉಪಮಾಲಂಕಾರಕ್ಕೆ ಹೋಲಿಸಿಕೊಂಡರೆ ಕಡಿಮೆಯೆಂದೇ ಹೇಳಬೇಕು. ಆದರೂ ಅವುಗಳ ಪಾತ್ರ ಮಹತ್ವದ್ದು.

'ಬಾಹೂರ ಬೊಮ್ಮಯ್ಯನ ರಗಳೆ'ಯಲ್ಲಿ ಬಾಹೂರ ಬೊಮ್ಮಯ್ಯ ತನ್ನ ಭಕ್ತಿಯ ಮಹಿಮೆಯನ್ನು ತೋರಿಸಿಕೊಡಲು, ನಂದಿಗೆ (ಕಲ್ಲು ಬಸವ) ಕಬ್ಬು ತಿನ್ನಿಸಬೇಕಾದ ಪ್ರಸಂಗವೊಂದು ಬರುತ್ತದೆ. ಆ ಸಂದರ್ಭದಲ್ಲಿ ಬೊಮ್ಮಯ್ಯ ನಂದಿಗೆ ಕಬ್ಬು ತಿನ್ನಿಸಲು ಮುಂದೆ ಬರುತ್ತಾನೆ. ಆಗ ಕವಿ -

> **ಹೊಳೆವ ಚಂದ್ರಿಕೆಗೆ ಕೈ ಕಾಲ್ಮೊಗಂ ಮೂಡಿತೋ**
> **ಕಳಧೌತಗಿರಿ ಬಸವನಂದದೊಳ್ಮೂಡಿತೋ**
> **ಸಕಲಲೋಕದ ಸುಕೃತ ನಿಧಿ ನೇಮಗೊಂಡುದೋ**[68]

ಎಂಬ ಉತ್ಪ್ರೇಕ್ಷಾಲಂಕಾರವನ್ನು ಬಳಸಿ ಸನ್ನಿವೇಶದ ಮಹತ್ವವನ್ನು ಬಣ್ಣಿಸುತ್ತಾನೆ.

'ನಂಬಿಯಣ್ಣನ ರಗಳೆ'ಯಲ್ಲಿ, ನಂಬಿಯಣ್ಣನು ಬಾಲಕನಾಗಿದ್ದಾಗ ಮದ್ದಾನೆಯೊಂದನ್ನು

ಹಿಂತಿರುಗಿಸಿದ ಸಂದರ್ಭ ಬರುತ್ತದೆ. ಆ ಸಂದರ್ಭದಲ್ಲಿ ಆನೆಯನ್ನು ಹಿಂತಿರುಗಿಸಿದ ಸಂಬಿಯಣ್ಣನ ಮಹಿಮೆಯನ್ನು ಬಣ್ಣಿಸಲು -

" ...... ಕಂಡಿದಾವ ಕಾರಣಿಕನೋ, ಇದಾವ ಸಾಮರ್ಥ್ಯದ ಬೀಜವೋ, ಇದಾವ ಪುಣ್ಯದಂಕುರವೋ, ಇದಾವ ಸತ್ವದ ಮುಗುಳೋ, ಇದಾವ ನಿತ್ಯದ ಫಳವೋ, ಇದಾವ ಭಕ್ತಿಯ ಬೆಳೆಯೋ"[69] ಎಂಬ ಉತ್ಪ್ರೇಕ್ಷಾಲಂಕಾರವನ್ನು ಬಳಸುತ್ತಾನೆ.

'ತಿರುನಾಳ್ಪೋವರ ರಗಳೆ'ಯಲ್ಲಿ ತಿರುನಾಳ್ಪೋವನು ಕೊಂಡದಲ್ಲಿ ಮುಳುಗಿ ಮೇಲೆ ಏಳುವ ಸನ್ನಿವೇಶವೊಂದು ಬರುತ್ತದೆ. ಹಾಗೆ ಮೇಲೇಳುವಾಗ ತಿರುನಾಳ್ಪೋವನನ್ನು ವರ್ಣಿಸಲು ಹರಿಹರ ಕವಿ-

ಪುಣ್ಯಂ ಪುರುಷಾಕಾರಂಗೊಂಡುದೊ
ಬೆಳಗಿನ ಬಳಗವದೊಬ್ಬುಳಿಗೊಂಡುದೊ
ನಳನಳಿಸುವ ನಿಜರೂಪಂ ತಾಳ್ದುದೊ
ಚಂದ್ರಂ ಶಿವ ರೂಹಿಂ ನಿಂದಿರ್ದನೊ
ಚಂದ್ರಿಕೆಗಪಯುವಂ ಶಿವನಿತ್ತನೋ
ಶಿವಕಾರುಣ್ಯವೆ ತವೆ ರೂಹಾದುದೊ[70]

ಎಂಬ ಉತ್ಪ್ರೇಕ್ಷಾಲಂಕಾರವೊಂದನ್ನು ಬಳಸುತ್ತಾನೆ. ಅದರ ಮೂಲಕ ತಿರುನಾಳ್ಪೋವರ ಮಹಿಮೆಯನ್ನು ಕಟ್ಟಿಕೊಡುತ್ತಾನೆ.

ಈ ಅಲಂಕಾರಗಳನ್ನು ಬಳಸುವುದರಲ್ಲಿ ಹರಿಹರನಿಗಿರುವ ಮುಖ್ಯ ಉದ್ದೇಶ ಆಯಾ ಸನ್ನಿವೇಶದ ಮಹತ್ವವನ್ನು ಅಷ್ಟೇ ಪರಿಣಾಮಕಾರಿಯಾಗಿ ತಿಳಿಸಿಕೊಡುವುದು. ಅದನ್ನು ಪ್ರತಿಯೊಂದು ಅಲಂಕಾರಗಳ ಬಳಕೆಯಲ್ಲಿ ಸಾಧಿಸಿ ತೋರಿದ್ದಾನೆ. ಯಾವ ಕಾರಣಕ್ಕೂ ಆತ ಆಯಾ ಸಂದರ್ಭಕ್ಕೆ ಹೊಂದದೆ ಇದ್ದಲ್ಲಿ ಅಲಂಕಾರಗಳನ್ನು ಬಳಸುವ ಕೆಲಸಕ್ಕೆ ಕೈ ಹಾಕಿಲ್ಲ. ಅಲಂಕಾರಗಳು ಅವನ ಕಾವ್ಯದಲ್ಲಿ ನವನವೀನವಾಗಿ ಕಂಗೊಳಿಸಿ ಅರ್ಥಸ್ಫುರಣೆ ಮಾಡುತ್ತವೆ.

## 9.5 ರೂಪಕ ನಿರೂಪಣಾ ಸಾಮರ್ಥ್ಯ

ರೂಪಕ ಎಂದರೆ "ಒಂದು ವಸ್ತುವನ್ನು ಬಹಳ ಬೇಗನೆ ತನ್ನ ಭಾವಬಲದಿಂದ ಇನ್ನೊಂದನ್ನಾಗಿ ಮಾಡುವ ಕೌಶಲ್ಯ. ರೂಪಕದ ಸಾರ: ಗಾಜಿಗೆ ರಸದ ಲೇಪಕೊಟ್ಟು, ಕನ್ನಡಿಯ ಕಾಂತಿಯನ್ನು ತರುವಂತೆ"[71] ಇಂಥ ರೂಪಕವನ್ನು ನಿರ್ಮಾಣ ಮಾಡುವ ಶಕ್ತಿಯನ್ನು ಹರಿಹರನಲ್ಲೂ ಕಾಣುತ್ತೇವೆ.

ಇಳೆಯಾಂಡಗುಡಿಮಾರ ಅಚಲ ಭಕ್ತ. ಒಕ್ಕಲುತನವೇ ಅವನ ವೃತ್ತಿ. ಹರಿಹರನ ದೃಷ್ಟಿಗೆ ಇಳೆಯಾಂಡನ ಈ ಕಸುಬು ಭಕ್ತಿಯ ಕಾರ್ಯವಾಗಿಯೇ ಕಂಡಿದೆ. ಹಾಗಾಗಿ ಅವನ ಕಸುಬನ್ನು-

ಸಮಚಿತ್ತವೆಂಬ ಭೂಮಿಯನೆ ಹಸನಾಗಿರಿಸಿ
ಅಮರ್ದ ಶಂಕರನ ನೆನಹೆಂಬ ನೇಗಿಲನಿರಿಸಿ
ಅರಿಷಟ್ಕಮಂ ತಂದು ಹೂಡುವೆತ್ತಂ ಮಾಡಿ
ಹರಿವ ಮನಮಂ ಕಟ್ಟಿ ಹಿಡಿವ ಹಗ್ಗಂ ಮಾಡಿ
ಗರ್ವಿಸುವಹಂಕಾರಮಮುನಚ್ಚುವಂ ಮಾಡಿ
ಸರ್ವೇಶ ನಿಷ್ಠೆಯಂ ತಳಿವ ಬೀಜಂ ಮಾಡಿ
ಸುರುಚಿತ ಶಿವಜ್ಞಾನ ಸಸಿಗಳಂಕುರಿಸುತಿರೆ
ಹರನ ಪರಮಾನಂದದ ರಸದ ಮಳೆ ಕರೆವುತಿರೆ
ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
ಕಿತ್ತು ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ[72]

ಎಂದು ವರ್ಣಿಸುತ್ತಾನೆ. ಇಲ್ಲಿ ಇಳೆಯಾಂಡನ ಭಕ್ತಿ ಮತ್ತು ಬೇಸಾಯ ಎರಡೂ ಒಂದೇ ಎಂಬಂತೆ ಕವಿ ವರ್ಣಿಸಿದ್ದಾನೆ. "ಭಕ್ತಿಗೂ ಬೇಸಾಯಕ್ಕೂ ಇರುವ ಸಾದೃಶ್ಯವು ಹರಿಹರನ ಬುದ್ಧಿಗೆ ಹೊಳೆದು ಭಾವಲೇಪದಿಂದ ಭಕ್ತಿ ಕ್ರಿಯೆಯಾಗಿಬಿಟ್ಟಿದೆ. ಕವಿಯ ಮನಸ್ಸು ಅನುಭವಿಸುವ ರೀತಿ ಇದು."[73]

ಇಂಥದ್ದೇ ಇನ್ನೊಂದು ಉದಾಹರಣೆಯನ್ನು ತಿರುಕುರುಂಪೆತೊಂಡನ ರಗಳೆಯಿಂದ ಕೊಡಬಹುದು. ಅಲ್ಲಿ ಹರಿಹರ ತಿರುಕುರುಂಪೆತೊಂಡನ ಬಟ್ಟೆ ಒಗೆಯುವ ವೃತ್ತಿಯನ್ನೇ ಭಕ್ತಿ ಕ್ರಿಯೆಯಾಗಿ ಕಂಡಿದ್ದಾನೆ. ಭಕ್ತನ ವೃತ್ತಿ ನಿಷ್ಠೆಯನ್ನು ಕವಿ-

ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ,
ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ,
ನಡೆದು ಭವನ ಭಕ್ತಿ ರಸದ ಹೊಳೆಯ ತಡಿಯ ಬಳಿಗೆ ಬಂದು
-----------------------------------
ತಿರುಕುಱುಂಪೆ ತೊಂಡರೆಸೆವ ಮನದ ಮಡಿಯನೊಂದುಗೂಡಿ
ಸಕಳ ಜನಕೆ ಮನದ ಮಡಿಯನೀವುತಿರ್ಪನಲ್ಲಿ[74]

ಹೀಗೆ ವರ್ಣಿಸುತ್ತಾನೆ. "ಮಲಿನ ವಸ್ತ್ರವನ್ನು ಹೊರೆಕಟ್ಟಿ, ಕತ್ತೆಯ ಮೇಲೆ ಹೇರಿ, ಹೊಳೆಯ ಬಳಿ ನಡೆದು, ಕುದಿಸಿ, ಒಗೆದು, ಹಿಂಡಿ, ಹೊಳಪು ಕೊಟ್ಟು, ಬಿಸಿಲಲ್ಲಿ ಒಣಗಿಸಿ, ಮಡಿಸಿ, ಮಡಿ ಮಾಡುವ ಕ್ರಿಯೆಗಳೆಲ್ಲವೂ ಇಲ್ಲಿ ಆಧ್ಯಾತ್ಮಿಕವಾದ ಹೊಳಪಿನಿಂದ ಮಡಿಯಾಗಿವೆ, ದಿಟಕ್ಕೂ ಪೂಜ್ಯವಾಗಿವೆ. ತಾಪತ್ರಯದ ಕಿಚ್ಚು, ದಿಟದ ಬಿಸಿಲು, ಮಲಿನ ಮನ ಎಂಬ ಉಕ್ತಿಗಳು ಹೃದ್ಯವಾಗಿವೆ. ವ್ಯಾಪಕವಾದ ಅರ್ಥಕೋಶವನ್ನು ಹೊಂದಿವೆ."[75]

## 9.6 ಸಂಸ್ಕೃತ ಪದಗಳ ಸಮಯೋಚಿತ ಬಳಕೆ

"ಹರಿಹರ, ಸಂಸ್ಕೃತ ಮತ್ತು ಪ್ರಾಕೃತದಲ್ಲಿರುವ ಕಾವ್ಯಗಳನ್ನೂ, ಶಾಸ್ತ್ರಗಳನ್ನೂ ಕರತಲಾಮಲಕ ಮಾಡಿಕೊಂಡಿದ್ದಂಥವನು."[76] ಸಂಸ್ಕೃತದಲ್ಲಿಯೇ ಕಾವ್ಯ ಬರೆಯುವುದು ಅವನಿಗೆ ಕಷ್ಟವೇನೂ ಆಗಿರಲಿಲ್ಲ. ಆದರೆ ಅದನ್ನು ಬಯಸಲಿಲ್ಲ. ಸಂಸ್ಕೃತದಲ್ಲಿ ಬರೆದರೆ ಆ ಕಾವ್ಯ ಜನಸಾಮಾನ್ಯರನ್ನು ತಲುಪುವುದಿಲ್ಲ ಎಂಬ ಅರಿವು ಅವನಿಗೆ ಚೆನ್ನಾಗಿತ್ತು. ಜೊತೆಗೆ, ತನ್ನ ಕಾವ್ಯ ಜನಸಾಮಾನ್ಯರನ್ನು ತಲುಪಬೇಕು ಎಂಬುದೇ ಹರಿಹರನ ದೃಷ್ಟಿ ಆಗಿತ್ತು. ಹಾಗಾಗಿ ಕಾವ್ಯರಚನೆಗೆ ಕನ್ನಡವನ್ನೇ ಆರಿಸಿಕೊಂಡ. ಆದರೆ ಸಂಪೂರ್ಣವಾಗಿ ಕನ್ನಡದಲ್ಲೇ ಕಾವ್ಯ ರಚನೆ ಮಾಡುವುದು ಆಗದ ವಿಚಾರ ಎಂಬುದರ ಪ್ರಜ್ಞೆ ಅವನಿಗೆ ಇದ್ದಂತೆ ಕಾಣುತ್ತದೆ. ಆದ್ದರಿಂದ ಕನ್ನಡ ಕಾವ್ಯದ ಮಧ್ಯೆಯೇ ಸಂಸ್ಕೃತವನ್ನು ಸಮಯೋಚಿತವಾಗಿ ಬಳಸಿಕೊಂಡು ಕಾವ್ಯರಚನೆ ಮಾಡಿರುವುದನ್ನು ಅವನ ಕಾವ್ಯದಲ್ಲಿ ಕಾಣಬಹುದು.

ರಗಳೆಗಳಲ್ಲಿ ಹಲವಾರು ಸಂಸ್ಕೃತ ಪದಗಳು ಬಳಕೆಯಾಗಿವೆ. ಕೆಲವೆಡೆಯಂತೂ ಸಂಸ್ಕೃತವನ್ನೇ ಹೆಚ್ಚಾಗಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಅಲ್ಲಿ - ಭೂಷಣ, ಜನನ, ಸಮಕ್ಷ, ಧರಣಿ, ವೃಷಭ, ನಿರೋಧ, ಮಧ್ಯಾಹ್ನ, ಶುದ್ಧಾಂಗ, ಶೀತ, ಘಟ್ಟಿ, ಅಗ್ನಿ, ಕರ್ಣ, ವ್ರಜ, ಶಿರ, ಶಶಿಧರ, ಸಂಭ್ರಮ, ಮಹಾವಾಗ್ಮಿ, ಮಹಿಷ, ಮಹೀತಳ, ಶ್ವಪಚ, ಧರಾ, ಅಶ್ವತ್ಥ, ಅಶ್ರುಧಾರೆ, ಶಿಖಿ. ಕಲ್ಮಷ, ಕ್ರೋಧ, ಸಂಧ್ಯೆ, ಮತ್ಸರ, ವ್ಯೋಮ, ನಿಷ್ಠೆ, ಕ್ಷುದ್ರ, ವಾಣಿ, ಕನಿಷ್ಠ - ಇತ್ಯಾದಿ ಸಂಸ್ಕೃತ ಪದಗಳನ್ನು ಕಾಣಬಹುದು.

ಈ ರೀತಿ ಹಲವಾರು ಸಂಸ್ಕೃತ ಪದಗಳನ್ನು ಆತ ಬಳಸಿಕೊಂಡಿದ್ದರೂ ಅವುಗಳ ಬಳಕೆಯಲ್ಲಿ ಸಮಯೋಚಿತತೆಯನ್ನು ಕಾಣಬಹುದು. ಇಷ್ಟ ಬಂದೆಡೆಯಲ್ಲೆಲ್ಲ ಆತ ಸಂಸ್ಕೃತವನ್ನು ಬಳಸುವುದಿಲ್ಲ. ಉದಾ:

> ಬೇಡೆನ್ನ ಕಂದ ನಿನ್ನೊಡನೆ ಬಪ್ಪೆಂ ಬಸವ
> ನೋಡು ನಿನ್ನಾಣೆ ನಿನ್ನೊಡನೆ ಬಪ್ಪೆಂ ಬಸವ
> ನೀನಗಲಲಿರಲಾರ್ಪನೇ ಬಸವ ಬಸವಣ್ಣ
> ನೀನಿಂತಳುತ್ತಿಪ್ಪಡೆನಗರಿದು ಬಸವಣ್ಣ
> ಕಂದ ಬೇಡಯ್ಯ ಬೇಡಯ್ಯ ನೇಹದ ನಿಧಿಯೆ
> ಹಿಂದುಗೊಂಡೇ ಬಪ್ಪೆನೆನ್ನ ಸುಕೃತದ ಸುಧೆಯೆ
> ನೆನೆಯೆ ಮುಂದಿರ್ದಪೆಂ ಕರೆದೊಡೋ ಎಂದಪೆಂ
> ಮನದೊಳಗೆ ಕರದೊಳಗೆ ತನುವಿನೊಳಗಿರ್ದಪೆಂ
> ನಿಂದಲ್ಲಿ ನಿಂದಪೆಂ ನಡೆದಲ್ಲಿ ನಡೆದಪೆಂ[77]

'ಬಸವರಾಜದೇವರ ರಗಳೆ'ಯಲ್ಲಿ ಬರುವ ಈ ಪದ್ಯವನ್ನು ಗಮನಿಸಿದರೆ, ಹರಿಹರ ಸಂಸ್ಕೃತವನ್ನು ಹೇಗೆ ಸಮಯೋಚಿತವಾಗಿ ಬಳಸಿಕೊಂಡಿದ್ದಾನೆ ಎಂಬುದು ತಿಳಿಯುತ್ತದೆ.

ಇಡೀ ಪದ್ಯದಲ್ಲಿ ಆತ ಸಂಸ್ಕೃತ ಪದಗಳನ್ನು ಬಳಸಿಕೊಂಡಿರುವುದು ಮೂರ್ನಾಲ್ಕು ಮಾತ್ರ. ಆದರೆ ಶರಣ ವಿಪ್ರನಾಗಿದ್ದ ಸಂದರ್ಭದಲ್ಲಿ ಹೆಚ್ಚಿನ ಸಂಸ್ಕೃತ ಪದಗಳನ್ನು ಬಳಸಿಕೊಂಡಿರುವುದು ಉಂಟು. ಉದಾ :

ಆದ್ಯಂತರಹಿತ ಸ್ವತಂತ್ರ ಸ್ವಯಂಭುವೇ
ಚೋದ್ಯಕ್ಕೆ ಚೋದ್ಯವೆನಿಸುವ ಭಕ್ತ ಬಂಧುವೇ
ಕಮಲಭವ ವಿಮಲ ಮಸ್ತಕ ಹಸ್ತ ಪಲ್ಲವನೆ[78]

'ವಾಗೀಶನಾಯನಾರನ ರಗಳೆ'ಯಲ್ಲಿ ಬರುವ ಈ ಪದ್ಯದಲ್ಲಿ 'ಎನಿಸುವ' ಎಂಬ ಒಂದು ಪದವನ್ನು ಬಿಟ್ಟರೆ ಉಳಿದೆಲ್ಲವೂ ಸಂಸ್ಕೃತವೇ ಆಗಿರುವುದನ್ನು ಕಾಣುತ್ತೇವೆ. ಇದು ಹರಿಹರನ ಸಮಯೋಚಿತ ಪ್ರಜ್ಞೆಗೆ ಉತ್ತಮ ಉದಾಹರಣೆ.

## 9.7 ತಮಿಳು ಮಾತುಗಳ ಪ್ರಯೋಗ

ಹರಿಹರನ ಕಾವ್ಯವೇನೋ ಕನ್ನಡದ್ದು. ಆದರೆ ಅವನ ಕಥೆಗಳಲ್ಲಿ ಅರ್ಧಕ್ಕೂ ಹೆಚ್ಚು ಕಥೆಗಳ ವಸ್ತು ತಮಿಳಿನದ್ದು. ತಮಿಳಿನಲ್ಲಿ ಅರವತ್ತುಮೂವರು ಪುರಾತನರು ಎಂದೇ ಹೆಸರಾದ ಶರಣರ ಜೀವನವನ್ನು ಕುರಿತಂತೆ ಹರಿಹರ ಕಾವ್ಯವನ್ನು ಬರೆದಿದ್ದಾನೆ. ವಸ್ತು ಅಲ್ಲಿಯದು ಎಂದ ಮೇಲೆ ಅಲ್ಲಿಂದ ವಾಕ್ಯಗಳನ್ನಾಗಲಿ ಪದಗಳನ್ನಾಗಲಿ ತೆಗೆದುಕೊಳ್ಳದೆ ಕಾವ್ಯವನ್ನು ರಚಿಸುವುದು ಆಗದ ವಿಚಾರ. ಏನಿಲ್ಲವೆಂದರು ಊರು ದೇಶಗಳನ್ನಾದರೂ ಅಲ್ಲಿಂದಲೇ ತೆಗೆದುಕೊಳ್ಳಬೇಕಾಗುತ್ತದೆ. ಅಂತೆಯೇ ಹರಿಹರ ಕೂಡ ಅನುಕೂಲ ಸಂದರ್ಭಗಳಲ್ಲೆಲ್ಲ ಅಲ್ಲಿನ ಪದಗಳನ್ನು ತೆಗೆದುಕೊಂಡು ಕಾವ್ಯ ಬರೆದಿರುವುದನ್ನು ಕಾಣುತ್ತೇವೆ.

ಹರಿಹರನ ಕಥೆಗಳಲ್ಲಿ ಬರುವ ತಮಿಳು ಪದಗಳೆಂದರೆ - ಪಾಡಿರೇ ಅಪ್ಪರೇ, ಎಲೆಯಾಂಡಿ, ಮೂವಾಯಿಲರ್, ಉಲಘಕ್ಕಯ್ಯನ್, ತೋಳನ್, ತಿರುವರಘೆ, ಪೇಶಾದ ಪೆಐವಾದ, ಉಲಗಕ್ಕಳಹಂ, ಸಿಂದಾಂ, ತಿರುಪಾಡು, ಕುಶವರ್, ಶಿವಂದ ಕಾಲೇ, ತಿರುನಾಳ್, ಎನ್ನಪ್ಪಾಲೀ, ಅಳಘಪ್ಪಾಲೀ, ಅಮ್ಮೆ, ತಣ್ಣೆ, ಪಿಚ್ಚೆ, ಕಡುಘಾಂ, ತಂಬಿರಾನ್, ತೋಳನ್, ಅಳಹಿಯ ಚಾಲು, ಕಾಣ್ಣಾ, ಪೊನ್ನಾಂಬಲಕಂ; ತಿರುಮುಡಿಕೊಂಡ, ಜಾನಾಲುಡಯೇ, ಕಿಣ್ಣೆಕ್ಕಿನಿಯನೆ, ಅಂಬಲಕೂತರು, ಅಳಘಿಯಕೂತರೆ - ಮುಂತಾದವು.

ಇವುಗಳ ಬಳಕೆಯಲ್ಲಿ ಹರಿಹರನ ಸಮಯೋಚಿತತೆ ಗಮನಾರ್ಹವಾದದ್ದು. ಅವನು ಕಾವ್ಯದಲ್ಲಿ ಎಲ್ಲಿಯೂ ತನಗೆ ತಮಿಳು ಪದಗಳು ಗೊತ್ತಿವೆ ಎಂಬುದನ್ನು ತೋರಿಸಿಕೊಳ್ಳುವುದಕ್ಕಾಗಿಯಾಗಲಿ ಅಥವಾ ಬಳಸಲೇ ಬೇಕು ಎಂಬ ಪೂರ್ವಗ್ರಹವನ್ನಾಗಲಿ ಇಟ್ಟುಕೊಂಡು ಕಾವ್ಯ ಬರೆಯಲು ಹೊರಟಂತೆ ಕಾಣುವುದಿಲ್ಲ. ಆಗತ್ಯವಿದ್ದಲ್ಲಿ ಅಗತ್ಯವಿದ್ದಷ್ಟು ಮಾತ್ರ ಬಳಸುವುದು ಅವನ ಜಾಯಮಾನ. ಹಾಗಾಗಿ ವಾಗೀಶ, ತಿರುನಾಳ್ಪೋವರ ಕಥೆಗಳಲ್ಲಿ ತಮಿಳು

ಪದಗಳು ಹೆಚ್ಚಾಗಿ ಕಂಡುಬಂದರೆ, ತಿರುನೀಲಕಂಠ, ಕಾರಿಕಾಲಮ್ಮೆ ಮುಂತಾದ ಕಥೆಗಳಲ್ಲಿ ಅಗತ್ಯವಿದ್ದಷ್ಟು ಮಾತ್ರ ಬಳಕೆಯಾಗಿರುವುದನ್ನು ಕಾಣುತ್ತೇವೆ.

## 9.8 ಕಾವ್ಯಭಾಷೆಗೆ ಆಡುಭಾಷೆಯ ಜೋಡಣೆ

ಕಾವ್ಯವನ್ನು ಜನತೆಯ ಹತ್ತಿರ ಕೊಂಡೊಯ್ಯಬೇಕು ಎಂಬುದು ಹರಿಹರನ ಮಹತ್ವದ ಆಕಾಂಕ್ಷೆಯಾಗಿತ್ತು. ಆದರೆ ಜನರಾಡುವ ಭಾಷೆಯನ್ನು ಕಾವ್ಯದಲ್ಲಿ ಅಳವಡಿಸಿಕೊಳ್ಳದ ಹೊರತು ಯಾವ ಕಾರಣಕ್ಕೂ ಜನತೆಯ ಬಳಿಗೆ ಕೊಂಡೊಯ್ಯಲು ಸಾಧ್ಯವಿಲ್ಲ ಎಂಬ ಸತ್ಯದ ಅರಿವು ಹರಿಹರನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೇ ಆತ ಕಾವ್ಯದ ಭಾಷೆಯನ್ನು ಸರಳಗೊಳಿಸಲು ಯತ್ನಿಸಿದ. ಸಾಧ್ಯವಾದಷ್ಟೂ ಜನರಾಡುವ ಭಾಷೆಯನ್ನೇ ಕಾವ್ಯದಲ್ಲಿ ತರಲು ಯತ್ನಸಿದ. ಆ ಯತ್ನದ ಫಲವಾಗಿಯೇ ಅವನ ಕಾವ್ಯದಲ್ಲಿ ಜನಭಾಷೆಯ ಸುಂದರ ಬಳಕೆಯಿದೆ.

ಇತ್ತಲೆಗ, ಜೋಗು, ಅಂಬಳಿಕು, ಮಗಸೆ, ಕಡುಬೇಗ, ಕುಣಿದಾಡು, ಕುಪ್ಪಳಿಸು, ಮುಂಜೂರು, ಪಡುಗೋಲೆ, ಎತ್ತಿಕ್ಕಿ, ಅರಳ್, ಹೆಡೆಯಾಡು, ಅಲ್ಲಾಡು, ತಳ್ಳಾಡು, ಬೊಬ್ಬಿಡು, ಉಮ್ಮಳಿಸು, ಹಜಲೆ, ಗಂಧೆ, ಒಡೆಯ, ನೀನೆತ್ತ, ಕೆಟ್ಟಿತು - ಇತ್ಯಾದಿ ಪದಗಳನ್ನು ಬಳಸುತ್ತಾನೆ. **ಅಲ್ಲದೆ 'ಎಲೆಲೆ ಕೌಶಿಕಹೋಗು** ನೀನೇಕೆ ನಾನೇಕೆ', 'ಕುದರೆ ಕೆಟ್ಟಿತು ನೋಡಿ ತನ್ನಿರೇ', 'ನಿದ್ದೆಗೆಯ್ ತಂದೆ ಇನ್ನಾವ ದುಗುಡಂ ಬೇಡ'. 'ಕಡುಬೇಗದಿಂ ಬಂದಪೆಂ', 'ಚಳಿಮಗನೆ ಚಳಿಮಗನೆ', 'ಎಲೆ ಭಕ್ತ ತೆಗೆ ಪುರಾಣದ ಮಾತು ನಿನಗೇಕೆ', 'ಏಳಿರೆ ಗುಡಿತೋರಣಂಗಳಕಟ್ಟಿರೆ', 'ನೋಡು ನೋಡೆಲೆ ವೀರಭದ್ರ', 'ಇದು ಪತ್ರವಲ್ಲಲ್ಲ ಮೂಲ ಪತ್ರಂ ಬೇರೆ', 'ಏಳ್ಮಗನೆ ಹರನುಣಲೊಲ್ಲ', ' ಎಲೆ ತಂದೆ ಹೇಳೆನಗೆ', 'ಬಿಡು ಬಿಡೆನ್ನಾಣೆ ಶಿವನಾಣೆ', ' ಒಡೆಯ ಎನ್ನಲ್ಲಿ ತಪ್ಪೇನು ಕಂಡಿರಿ', ' ಏನೀ ಪೆಟ್ಟಿಗೆ ತಿಂದಿತೆ' -ಇತ್ಯಾದಿ ಮಾತುಗಳನ್ನು ಬಳಸಿದ್ದಾನೆ. ಹರಿಹರನ ಈ ಭಾಷೆ ಯಾರಿಗೆ ತಾನೆ ಅರ್ಥವಾಗುವುದಿಲ್ಲ; ಇದಕ್ಕೆ ಎಲ್ಲರನ್ನೂ ಆಕರ್ಷಿಸುವ ಶಕ್ತಿಯಿದೆ.

ಒಟ್ಟಿನಲ್ಲಿ ಹರಿಹರನ ಭಾಷೆ ಶ್ರೀಮಂತವಾದದ್ದು ಹಾಗೂ ಅಷ್ಟೇ ಶಕ್ತಿಯುತವಾದದ್ದು. ಅದು ಪಂಡಿತ ಪಾಮರರಿಗಷ್ಟೇ ಅಲ್ಲ ಸಾಮಾನ್ಯರಿಗೂ ತಲುಪುವಂಥದ್ದು. ಅಲ್ಲಿ ಭಾಷೆಯ ಬಳಕೆ ಹೀಗೆಯೇ ಆಗಬೇಕು ಎಂಬ ನಿಯಮವೇನಿಲ್ಲ. ಆಯಾಯ ಸಂದರ್ಭಗಳಿಗೆ ತಕ್ಕಂತೆ ಭಾಷೆ ಬದಲಾವಣೆ ಹೊಂದುತ್ತದೆ. ಸಂಸ್ಕೃತದ ಅವಶ್ಯಕತೆ ಇದ್ದಲ್ಲಿ ಸಂಸ್ಕೃತವನ್ನು, ತಮಿಳಿನ ಅವಶ್ಯಕತೆಯಿದ್ದಲ್ಲಿ ತಮಿಳನ್ನು, ಹಳೆಗನ್ನಡದ ಅವಶ್ಯಕತೆಯಿದ್ದಲ್ಲಿ ಹಳೆಗನ್ನಡವನ್ನು, ಹೊಸಗನ್ನಡದ ಅವಶ್ಯಕತೆಯಿದ್ದಲ್ಲಿ ಹೊಸಗನ್ನಡವನ್ನೂ ಹರಿಹರ ಬಳಸುತ್ತಾನೆ. ಅವನ ಕಾವ್ಯದಲ್ಲಿ ಭಾವಕ್ಕೆ ತಕ್ಕಂತೆ ಭಾಷೆ ಸೃಷ್ಟಿಗೊಳ್ಳುತ್ತದೆ.

ಹೀಗೆ ಹರಿಹರ ತನ್ನದೇ ಆದ ಶೈಲಿ ಮತ್ತು ಅಭಿವ್ಯಕ್ತಿ ವಿಧಾನವನ್ನು ಕಾವ್ಯ ರಚನೆಯಲ್ಲಿ ಅನುಸರಿಸಿದ್ದಾನೆ. ಅತ್ಯಂತ ಕ್ಲಿಷ್ಟಕರ ಸನ್ನಿವೇಶದಲ್ಲಿ ತನ್ನ ನೂತನ ಶೈಲಿ ಹಾಗೂ ಅಭಿವ್ಯಕ್ತಿಯ ವಿಧಾನದಿಂದ ಇಡೀ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವು ನೀಡಿದ ಹರಿಹರ ನಿಜಕ್ಕೂ ಅವಿಸ್ಮರಣೀಯ.

* * * * *

## ಅಡಿ ಟಿಪ್ಪಣಿಗಳು

1. ಸಿ. ಪಿ. ಕೃಷ್ಣಕುಮಾರ್ : ಕಾವ್ಯಗೌರವ : ಪುಟ 25
2. ತ. ಸು. ಶಾಮರಾಯ : ಕನ್ನಡ ಸಾಹಿತ್ಯ ಚರಿತ್ರೆ : ಪುಟ 109
3. ತ. ಸು. ಶಾಮರಾಯ : ಕನ್ನಡ ಸಾಹಿತ್ಯ ಚರಿತ್ರೆ : ಪುಟ 109
4. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 332
5. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 332
6. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 334
7. ಕನ್ನಡ ಸಾಹಿತ್ಯ ಪರಿಷತ್ತು : ಹರಿಹರ ವಿಚಾರ ಸಂಕಿರಣ :ಪುಟ 150
8. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ 399-400
9. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 51-52
10. ಸಂ : ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 135
11. ಡಿ. ಎಲ್. ನರಸಿಂಹಾಚಾರ್ : ಪೀಠಿಕೆಗಳು, ಲೇಖನಗಳು : ಪುಟ 266
12. ಕನ್ನಡ ಸಾಹಿತ್ಯ ಪರಿಷತ್ತು : ಹರಿಹರ ದೇವ : ಪುಟ 210
13. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ CCXXXII
14. ಬಿ. ಸಿ. ಜವಳಿ : ಹರಿಹರ ಮಹಾಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ (ಗದ್ಯಾನುವಾದ - ಕಾವ್ಯ ವಿಮರ್ಶೆ) : ಪುಟ 91
15. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 12
16. ಬಿ. ಸಿ. ಜವಳಿ : ಹರಿಹರ ಮಹಾಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ (ಗದ್ಯಾನುವಾದ - ಕಾವ್ಯ ವಿಮರ್ಶೆ ) : ಪುಟ 91
17. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 53
18. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 53
19. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 53-54
20. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 66
21. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 66

22. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 146-147
23. ಆರ್. ಸಿ. ಹಿರೇಮಠ: ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 147
24. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 147
25 ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 147-148
26. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 148
27. ಸಂ : ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 142
28. ಸಂ : ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 142
29. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 111
30. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 111
31. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 112
32. ಬಿ. ಸಿ. ಜವಳಿ : ಹರಿಹರ ಮಹಾಕವಿಯ ಶ್ರೀ ಬಸವೇಶ್ವರ ದೇವರ ಚರಿತ್ರೆ (ಗದ್ಯಾನುವಾದ - ಕಾವ್ಯ ವಿಮರ್ಶೆ) : ಪುಟ 99
33. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 4-5
34. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಪುಟ 11
35. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 110-111
36. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 194

37. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 6
38. ಸಂ. ಎಂ. ಎಸ್. ಸುಂಕಾಪುರ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 110
39. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 10
40. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 113
41. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 89-90
42. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 99
43. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 55
44. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 264
45. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 45
46. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 14
47. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 128
48. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 331
49. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 97-98
50. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 98-99
51. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 114

52. ಜಿ. ಸಿ. ಜವಳಿ ಮತ್ತು ಪ್ರಿ. ಶಾಂತರಸ : ರಸಿಕ ಚಕ್ರಿ ಹರಿಹರ ದೇವ : ಪುಟ 377
53. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 116
54. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 111
55. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 282
56. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 291
57. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 99
58. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 147
59. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 285
60. ಆರ್. ಸಿ. ಹೀರೆಮಠ :ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು :ಪುಟ 45
61. ಸಂ. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಶಿವ ಭಕ್ತಿ ಮಹಿಮಾ ರಗಳೆಗಳು : ಪುಟ 36
62. ಆರ್. ಸಿ. ಹೀರೆಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 216
63. ಆರ್. ಸಿ. ಹೀರೆಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 385
64. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 321
65. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 124
66. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 127

67. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 29
68. ಸಂ: ಎಂ. ಎಸ್. ಸುಂಕಾಪುರ : ಹಂಪೆಯ ಹರಿಹರ ದೇವ ಕೃತ ನೂತನ ಪುರಾತನ ರಗಳೆಗಳು : ಪುಟ 418
69. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 125
70. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 367
71. ಡಿ. ಎಲ್. ನರಸಿಂಹಾಚಾರ್ : ಹಂಪೆಯ ಹರಿಹರ : ಪುಟ 57
72. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 53-54
73. ಡಿ. ಎಲ್. ನರಸಿಂಹಾಚಾರ್ : ಹಂಪೆಯ ಹರಿಹರ : ಪುಟ 57
74. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 374
75. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 4 ಪ್ರ. ಸಂ. ಹಾಮಾನಾ :ಪುಟ 1357
76. ಎಚ್. ದೇವೀರಪ್ಪ :ಹಂಪೆಯ ಹರಿಹರ ವಿರಚಿತ ಶರಣ ಚರಿತ ಮಾನಸಂ : ಪುಟ CLXX
77. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜದೇವರ ರಗಳೆ : ಪುಟ 26
78. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 414

10

# ಹರಿಹರನ ಸಾಹಿತ್ಯಕ ಸಾಧನೆ

ಕನ್ನಡ ಸಾಹಿತ್ಯಕ್ಕೆ ಪಂಪ, ರನ್ನ, ಪೊನ್ನ ಮುಂತಾದ ಕವಿಗಳು ಹೇಗೆ ಮಹತ್ತರ ಕೊಡುಗೆ ನೀಡಿದ್ದಾರೆಯೋ ಹಾಗೆಯೇ ಹರಿಹರನೂ ನೀಡಿದ್ದಾನೆ. "ಅವನು ಕನ್ನಡ ಸಾಹಿತ್ಯದ ಮಾರ್ಗವನ್ನೇ ಬದಲಾಯಿಸಿದ ಯುಗಪುರುಷ. ಹಳೆಯದನ್ನು, ಉಪಯುಕ್ತವಲ್ಲದುದನ್ನೂ ಪ್ರತಿಭಟಿಸಿ; ಹೊಸತನ್ನು, ಸರ್ವೋಪಯೋಗಿಯಾದುದನ್ನು ನಿರ್ಮಿಸಿದ ಎದೆಗಾರ."[1] ಆತ ಪರಂಪರೆಯ ಸಲ್ಲದ್ದನ್ನು ವಿರೋಧಿಸುವವರಿಗೆ ಹಾಗೂ ನೂತನ ಮಾರ್ಗವನ್ನು ಹುಡುಕುವವರಿಗೆ ಮಾರ್ಗದರ್ಶಕನಿದ್ದಂತೆ. ಅವನ ಸಾಹಿತ್ಯಕವಾದ ಸಾಧನೆ ಅಪಾರ. ಅವನ ಸಾಧನೆಯ ವಿವಿಧ ಮುಖಗಳನ್ನು ಕೆಳಗಿನಂತೆ ಅಧ್ಯಯನ ಮಾಡಬಹುದು.

## 10.1 ಲಿಂಗಭೇದವಿಲ್ಲದೆ ಕಾವ್ಯ ನಾಯಕರನ್ನು ಆರಿಸಿದ್ದು

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾವ್ಯದ ನಾಯಕರನ್ನು ಆಯ್ಕೆ ಮಾಡುವಾಗ ಸ್ತ್ರೀ - ಪುರುಷ ಎಂಬ ತಾರತಮ್ಯವನ್ನು ಕಾಪಾಡಿಕೊಂಡು ಬಂದಿರುವುದನ್ನು ಕಂಡಿದ್ದೇವೆ. ಆದರೆ ಹರಿಹರ ಮಾತ್ರ ಇಂಥ ತಾರತಮ್ಯದಿಂದ ಹೊರತಾಗಿದ್ದಾನೆ. ಅವನು ಸ್ತ್ರೀಯರನ್ನು ಅತ್ಯಂತ ಗೌರವದಿಂದ ಕಂಡಿದ್ದಾನೆ. ಸ್ತ್ರೀಯರನ್ನೇ ಪ್ರಧಾನ ಪಾತ್ರಗಳಾಗಿಸಿಕೊಂಡು ಕಾವ್ಯ ರಚಿಸಿದ್ದಾನೆ.

ಹರಿಹರನ ಕಾವ್ಯದಲ್ಲಿ ಅನೇಕ ಸ್ತ್ರೀ ಪಾತ್ರಗಳು ಬರುತ್ತವೆ. ಆದರೆ ನಾಯಕ ಪಾತ್ರವನ್ನು ಎಲ್ಲ ಪಾತ್ರಗಳು ನಿರ್ವಹಿಸುವುದಿಲ್ಲ. ನೂತನ ಪುರಾತನರ ರಗಳೆಗಳಲ್ಲಿ ಮಹಾದೇವಿಯಕ್ಕ, ನಿಂಬಿಯಕ್ಕ, ವೈಜಕವ್ವೆ, ಹೇರೂರ ಹೆಣ್ಣು ಮತ್ತು ಪುರಾತನರ ರಗಳೆಗಳಲ್ಲಿ ಕಾರಿಕಾಲಮ್ಮೆ, ಪಾಂಡ್ಯಮಹಾದೇವಿ, ಅಮ್ಮವ್ವೆಯ ಪಾತ್ರಗಳು ನಾಯಕ ಪಾತ್ರವನ್ನು ನಿರ್ವಹಿಸುತ್ತವೆ. ಇನ್ನು ಕೆಲವು ರಗಳೆಗಳಲ್ಲಿ ನಾಯಕ ಪಾತ್ರದಷ್ಟೇ ಮಹತ್ವ ಇತರ ಸ್ತ್ರೀ ಪಾತ್ರಗಳಿಗೂ ಇದೆ. ಅವುಗಳಲ್ಲಿ ಮಲುಹಣಿ, ಪದ್ಮಾವತಿ, ಮುತ್ತೈದೆ, ಯಸ್ಯಜ್ಞಾನದೇವಿಯರ ಪಾತ್ರಗಳು ಬರುತ್ತವೆ.

ಈ ಪಾತ್ರಗಳನ್ನು ಬಿಟ್ಟರೆ ಉಳಿದ ಎಲ್ಲ ರಗಳೆಗಳಲ್ಲೂ ಪುರುಷ ಪಾತ್ರಗಳೇ ನಾಯಕ ಪಾತ್ರದಲ್ಲಿ ಪ್ರಧಾನವಾಗಿ ಕಂಡುಬರುತ್ತವೆ. ಒಟ್ಟಿನಲ್ಲಿ ಹರಿಹರ ನಾಯಕ ಪಾತ್ರಗಳ ವಿಚಾರದಲ್ಲಿ ಲಿಂಗಭೇದವನ್ನು ಗಣನೆಗೆ ತೆಗೆದುಕೊಂಡಿಲ್ಲ. ಅವನಿಗೆ ಎಲ್ಲರೂ ಸರಿಸಮಾನರೇ.

## 10. 2 ಕೆಳಸ್ತರದವರನ್ನು ಕಥಾನಾಯಕರನ್ನಾಗಿ ಮಾಡಿದ್ದು

ಹರಿಹರ ಸಾಹಿತ್ಯ ಸೃಷ್ಟಿ ಮಾಡುವವರೆಗೆ ಕೆಳವರ್ಗದ ಜನರನ್ನು ಕಾವ್ಯನಾಯಕರನ್ನಾಗಿ ಆರಿಸಿಕೊಂಡ ಉದಾಹರಣೆ ಕನ್ನಡ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಕಾಲದ ಒತ್ತಡ ದಿಂದಾಗಿಯೋ ಏನೋ ಪ್ರಾಚೀನ ಕವಿಗಳೆಲ್ಲರೂ ಮೇಲ್ವರ್ಗದವರನ್ನೇ ಕಾವ್ಯದ ನಾಯಕ ರನ್ನಾಗಿ ಮಾಡಿಕೊಂಡು ಕಾವ್ಯ ರಚಿಸಿದ್ದಾರೆ. ಆದರೆ ಹರಿಹರ ಪ್ರಾರಂಭದಲ್ಲಿಯೇ ಪ್ರಾಚೀನ

ಕವಿಗಳ ಧೋರಣೆಯನ್ನು ಕೈಬಿಟ್ಟು ಕೆಳವರ್ಗದವರಿಗೂ ನಾಯಕ ಪಟ್ಟವನ್ನು ನೀಡಿ ಗೌರವಿಸುತ್ತಾನೆ. ಅಂತೆಯೇ ಅವನ ಕಾವ್ಯದಲ್ಲಿ ಬರುವವರೆಲ್ಲರೂ ಹೆಚ್ಚಾಗಿ ಕೆಳವರ್ಗದಿಂದ ಬಂದವರೇ ಆಗಿದ್ದಾರೆ.

ಇಳೆಯಾಂಡಗುಡಿಮಾರ, ಬೇಡರ ಕಣ್ಣಪ್ಪ, ತಿರುಕುರುಂಪೆತ್ತೊಂಡ, ಅತಿಭಕ್ತ, ಆನಾಯನಾರ, ಮಾದಾರ ಚೆನ್ನಯ್ಯ, ಕುಂಬರ ಗುಂಡಯ್ಯ, ಚಿರುತೊಣೆಯಾಂಡ, ಪಾಹಿಲ್ಯ, ಮೊನೆಯಿಡುವ ಇವರೆಲ್ಲರೂ ಕೆಳವರ್ಗದಿಂದ ಬಂದವರು. ಇವರಲ್ಲಿ ಭಕ್ತ ಇಳೆಯಾಂಡಗುಡಿಮಾರ ಒಕ್ಕಲು ವರ್ಗದವನು, ಬೇಡರ ಕಣ್ಣಪ್ಪ ಬೇಟೆಯ ಕಾಯಕದವನು. ಆನಾಯನಾರ ಗೋವಳಿಗ, ಅತಿಭಕ್ತ ಮೀನು ಹಿಡಿಯುವ ಕಾಯಕದವನು, ಮಾದಾರ ಚೆನ್ನಯ್ಯ ಕುದುರೆಗೆ ಹುಲ್ಲು ತರುವ ಕಾಯಕದವನು, ಕುಂಬರಗುಂಡಯ್ಯ ಮಡಕೆ ಮಾಡುವ ಕಾಯಕದವನು. ಹೀಗೆ ಒಬ್ಬೊಬ್ಬರೂ ಒಂದೊಂದು ಕುಲದವರಾಗಿದ್ದು ಬೇರೆ ಬೇರೆ ಕಾಯಕದಲ್ಲಿ ನಿರತರಾಗಿರುವುದನ್ನು ಕಾಣುತ್ತೇವೆ. ಇವರಲ್ಲಿ ಪಾಹಿಲ್ಯ, ಮೊನೆಯಿಡುವ ಮತ್ತು ಚಿರುತೊಣೆಯಾಂಡರನ್ನು ಕವಿ ಶೂದ್ರ ಕುಲದವರು ಎಂದೇ ಕರೆಯುತ್ತಾನೆ.

ಇವರುಗಳಷ್ಟೇ ಅಲ್ಲದೆ ಇನ್ನೂ ಹಲವಾರು ಭಕ್ತರು ಕೆಳವರ್ಗದಿಂದ ಬಂದು ನಾಯಕ ಪದವಿಯನ್ನು ಪಡೆದವರಾಗಿದ್ದಾರೆ. ಅವರಲ್ಲಿ ತಿರುನೀಲಕಂಠ, ಮಾನಕಂಜಾರ, ತಿರುನಾಳ್ಪೋವ, ಕೋಳೂರ ಕೊಡಗೂಸು, ನಿಂಬಿಯಕ್ಕ ಮುಂತಾದವರು ಮುಖ್ಯರು. ಇವರೆಲ್ಲರನ್ನೂ ಕವಿ ಶಿವಭಕ್ತರೆಂದು ಕರೆದಿರುವುದರಿಂದ ಅವರ ಕುಲ, ಜಾತಿ, ವರ್ಗಗಳು ತಿಳಿಯದೆ ಹೋಗುತ್ತವೆ. ಇದರಿಂದಾಗಿ "ಸಮಾಜದ ಕೆಳವರ್ಗಕ್ಕೆ ಸೇರಿದ ಶ್ರೀಸಾಮಾನ್ಯರಲ್ಲಿದ್ದ ಹಿರಿಮೆಯನ್ನು ಗುರುತಿಸಿ ಅವರನ್ನು ಮೊಟ್ಟಮೊದಲ ಬಾರಿಗೆ ಕನ್ನಡ ಕಾವ್ಯದಲ್ಲಿ ನಾಯಕ ಪಟ್ಟಕ್ಕೇರಿಸಿದ ಕೀರ್ತಿ"[2]ಗೆ ಹರಿಹರ ಪಾತ್ರನಾಗಿದ್ದಾನೆ.

## 10.3 ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಬಾರಿಗೆ ಸಾಮಾನ್ಯರ ಚರಿತ್ರೆಗಳನ್ನು ಸೇರಿಸಿದ್ದು ಮತ್ತು ಭಕ್ತಿಗೆ ನೀಡಿದ ಪ್ರಾಶಸ್ತ್ಯ

"ಕಾವ್ಯಕ್ಕೆ ಏನು ಬೇಕಾದರೂ ವಸ್ತುವಾಗಬಹುದು. ರಮ್ಯವಾದದ್ದು, ಉದಾರವಾದದ್ದು, ನೀಚವಾದದ್ದು; ಕವಿಗೆ ಗೋಚರವಾಗುವ ಏನೆಲ್ಲವೂ ತಾರತಮ್ಯವಿಲ್ಲದೆ ಕವಿಯ ಕಾವ್ಯವಸ್ತುವಾಗಬಲ್ಲದು ಎಂದು ಸಂಸ್ಕೃತ ಆಲಂಕಾರಿಕರು ಧಾರಾಳವಾಗಿ ಹೇಳಿದರು."[3] ಆದರೆ ಪ್ರಾಚೀನ ಕವಿಗಳಾದ ಪಂಪ, ರನ್ನ ಮುಂತಾದವರು ಕಾವ್ಯವಸ್ತುವನ್ನು ಆರಿಸಿಕೊಳ್ಳುವುದರಲ್ಲಿ ಪಕ್ಷಪಾತ ತೋರಿದರು. ಅವರ ಪ್ರಕಾರ ಕಾವ್ಯಕ್ಕೆ ವಸ್ತುವಾಗಬಲ್ಲದ್ದು ಉದಾತ್ತ ಹಾಗೂ ಗಂಭೀರವಾಗಿರಬೇಕು. "ಕಾವ್ಯ ಜನದ ಬದುಕನ್ನು ತಿದ್ದಬೇಕಾದರೆ ಅದು ಉದಾತ್ತ ವ್ಯಕ್ತಿಗಳ ಚರಿತೆಯನ್ನು, ಉದಾತ್ತ ವಿಷಯಗಳನ್ನು ಒಳಗೊಳ್ಳಬೇಕು. ಕಾವ್ಯದಿಂದ ಧರ್ಮಾರ್ಥ ಕಾಮ ಮೋಕ್ಷಗಳು ದೊರೆಯಬೇಕು. ಅವರ ದುರಿತವೆಂಬ ಕತ್ತಲೆ ಪರಿಹಾರವಾಗಿ ನಿರ್ಮಲ ದೃಷ್ಟಿ ದೊರಕೊಳ್ಳಬೇಕು. ದಯೆ, ಧರ್ಮ, ದಾನ ಇವುಗಳನ್ನು ಮೈಯಾಗಿ ಉಳ್ಳ ಕಾವ್ಯವೇ ಅವರನ್ನು ಉದ್ಧರಿಸಬಲ್ಲದು 'ಕಾವ್ಯಮಂ ಕೇಳ್ದು ಜನ ಬದುಕಬೇಕು' ಇತ್ಯಾದಿ ಕಾವ್ಯೋದ್ದೇಶ

ಗಳನ್ನಿರಿಸಿಕೊಂಡ ಕನ್ನಡ ಕಾವ್ಯ ಸಹಜವಾಗಿಯೇ ಉದಾತ್ತ ವ್ಯಕ್ತಿಗಳ ಚರಿತೆಯನ್ನು ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡದ್ದು ಆಶ್ಚರ್ಯವಲ್ಲ. 'ನಾಯಕನ್ ಉದಾತ್ತನಾಗೆ ಕೃತಿ ವಿಶ್ರುತಮಪ್ಪುದು' ಎಂದು"[4] ಅವರು ನಂಬಿದ್ದರು. ಹಾಗಾಗಿ ಅವರ ಕಾವ್ಯದ ತುಂಬ ಉದಾತ್ತನಾಯಕರೇ ತುಂಬಿಕೊಂಡಿದ್ದಾರೆ. ಅವರ ಕಾವ್ಯದಲ್ಲಿ ಸಾಮಾನ್ಯರ ಚರಿತೆಗಳಿಗೆ ಅವಕಾಶವೇ ಇಲ್ಲ. ಆದರೆ ಪ್ರಾಚೀನ ಕವಿಗಳ ಆನಂತರದಲ್ಲಿ ಬಂದ ಹರಿಹರ ಯಾವ ವ್ಯಕ್ತಿಗಳನ್ನು ಪ್ರಾಚೀನರು ಅನರ್ಹರೆಂದು ತೀರ್ಮಾನಿಸಿದ್ದರೋ ಅವರನ್ನೇ ತನ್ನ ಕಾವ್ಯದಲ್ಲಿ ತಂದು ಅವರ ಚರಿತೆಯನ್ನು ಚಿತ್ರಿಸುತ್ತಾನೆ.

'ಗಿರಿಜಾಕಲ್ಯಾಣ'ದ ರಚನೆಯ ಸಂದರ್ಭದಲ್ಲಿ ಪ್ರಾಚೀನರ ದಾರಿಯನ್ನು ಹಿಡಿದು ಶಿವನನ್ನೇ ತನ್ನ ಕಥೆಯ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಆದರೆ ರಗಳೆಗಳ ರಚನೆಯ ಸಂದರ್ಭದಲ್ಲಿ ತನ್ನ ನಿರ್ಧಾರವನ್ನು ಬದಲಿಸಿಕೊಂಡಿದ್ದಾನೆ. ಅಲ್ಲಿ ಸಾಮಾನ್ಯರ ಚರಿತೆಗಳಿಗೆ ಮಾನ್ಯತೆ ನೀಡಿದ್ದಾನೆ. ಅವನ ಕಥೆಗಳಲ್ಲಿ ಸಾಮಾನ್ಯರ ಚರಿತೆಗಳು ಯಥೇಚ್ಛವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು.

**ತಿರುಕುರುಪ್ಪೆತೊಂಡ :** ಇವನು ಕಂಚಿಯ ಅಗಸ. ಕವಿ, ತಿರುಕುರುಪ್ಪೆತೊಂಡನಿಗೆ ಬಟ್ಟೆ ಒಗೆಯುವ ಕಾಯಕದಲ್ಲಿದ್ದ ನಿಷ್ಠೆಯನ್ನು ಮನಮೆಚ್ಚುವ ಹಾಗೆ ಚಿತ್ರಿಸಿ, ಅವನು ತನ್ನ ಅಪಾರ ನಿಷ್ಠೆಯಿಂದ ಕೈಲಾಸಕ್ಕೆ ಹೋದ ಕಥೆಯನ್ನು ಹೇಳುತ್ತಾನೆ.

**ಆನಾಯನಾರ :** ಆನಾಯನಾರ ಆಕಳು ಕಾಯುವ ಕಾಯಕವನ್ನು ಮಾಡಿಕೊಂಡಿದ್ದ ಸಾಮಾನ್ಯ ಭಕ್ತ. ಆದರೆ ಅವನು ಆ ವೃತ್ತಿಯನ್ನು ಅತ್ಯಂತ ಪೂಜ್ಯಭಾವನೆಯಿಂದ ಮಾಡಿ ಕೈಲಾಸ ಸೇರಿದ. ಕವಿ ಇಲ್ಲಿ ಆನಾಯನಾರನ ಆಕಳು ಕಾಯುವ ವೃತ್ತಿ ಮತ್ತು ಕೊಳಲು ಊದುತ್ತಾ ಕೂರುವ ಸನ್ನಿವೇಶಗಳನ್ನು ಚೆನ್ನಾಗಿ ಚಿತ್ರಿಸಿದ್ದಾನೆ.

**ಇಳೆಯಾಂಡಗುಡಿಮಾರ :** ಇಳೆಯಾಂಡಗುಡಿಮಾರ ವ್ಯವಸಾಯ ಮಾಡಿಕೊಂಡು ಬದುಕುತ್ತಿದ್ದವನು. ಮಹಾಭಕ್ತನಾದ ಅವನು ವೃತ್ತಿಯನ್ನೇ ಅಧ್ಯಾತ್ಮದ ಹಾದಿಯನ್ನಾಗಿ ಮಾಡಿಕೊಂಡಿದ್ದ. ಕವಿ ಗುಡಿಮಾರನ ವ್ಯವಸಾಯ ನಿಷ್ಠೆ, ಭಕ್ತರಿಗಾಗಿ ಎಲ್ಲವನ್ನು ದಾನಮಾಡುವ ರೀತಿ, ಶಿವನಿಗಾಗಿ ತನ್ನ ಮನೆಯ ಸೂರನ್ನೇ ಕಿತ್ತು ಬೆಂಕಿ ಕಾಯಿಸುವ ರೀತಿ, ಅರ್ಧ ರಾತ್ರಿಯಲ್ಲಿ ಎದ್ದು ಹೋಗಿ ಭತ್ತದ ಮೊಳೆಯನ್ನು ತಂದು ಶಿವನಿಗೆ ಉಣಬಡಿಸಿದ ರೀತಿಯನ್ನು ಸುಂದರವಾಗಿ ಚಿತ್ರಿಸಿದ್ದಾನೆ.

**ಬೇಡರ ಕಣ್ಣಪ್ಪ :** ಇವನೂ ಸಾಮಾನ್ಯ ಭಕ್ತ. ಬೇಡರ ಕುಲಕ್ಕೆ ಸೇರಿದವನು. ಇಲ್ಲಿ ಕವಿ ಕಣ್ಣಪ್ಪನು ಬೇಟೆಯಾಡುವ ರೀತಿ, ಆ ಬೇಟೆಯಲ್ಲಿ ಅವನಿಗಿದ್ದ ನಿಷ್ಠೆ, ತನ್ನ ಕಣ್ಣುಗಳನ್ನೇ ಶಿವನಿಗೆ ಒಪ್ಪಿಸಿದ ಅಪೂರ್ವ ಚರಿತೆಯನ್ನು ಹೇಳುತ್ತಾನೆ.

**ಮಾದಾರ ಚೆನ್ನಯ್ಯ :** ಮಾದಾರ ಚೆನ್ನಯ್ಯ, ಚೋಳ ಅರಸನ ಅರಮನೆಯ ಲಾಯದಲ್ಲಿ ಕುದುರೆಗಳಿಗೆ ಹುಲ್ಲು ತರುವ ಕಾಯಕ ಮಾಡಿಕೊಂಡಿದ್ದವನು. ಕೊನೆಗೆ ಆ ಕಾಯಕದಲ್ಲಿಯೇ ಶಿವನ ಅನುಗ್ರಹಕ್ಕೆ ಪಾತ್ರನಾದ. ಮಾದಾರ ಚೆನ್ನಯ್ಯನ ಭಕ್ತ ಜೀವನವನ್ನು ಕವಿ ಸಂಕ್ಷಿಪ್ತವಾಗಿಯಾದರೂ ಸುಂದರವಾಗಿ ಸೆರೆ ಹಿಡಿದಿದ್ದಾನೆ.

ಇಲ್ಲಿ ಕೆಲವು ಕಥೆಗಳನ್ನು ಉದಾಹರಣೆಯಾಗಿಟ್ಟುಕೊಂಡು ಅವರು ಹೇಗೆ ಸಾಮಾನ್ಯರು ಎಂಬುದನ್ನು ತೋರಿಸಿಕೊಟ್ಟಿವೆ. ಆದರೆ ಅವರಂತೆ ಇನ್ನೂ ಹಲವರು ಸಾಮಾನ್ಯರು ಹರಿಹರನ ಕಥೆಯೊಳಗೆ ಬರುತ್ತಾರೆ. ತೆಲುಗು ಜೊಮ್ಮಯ್ಯ, ಬಾಹೂರ ಬೊಮ್ಮಯ್ಯ, ಏಕಾಂತರಾಮಿ ತಂದೆ, ಅಮ್ಮವ್ವೆ, ನಿಂಬಿಯಕ್ಕ, ವೈಜಕವ್ವೆ, ಕೋಳೂರ ಕೊಡಗೂಸು, ಏಣಾದಿನಾಥ— ಹೀಗೆ. ಇವರೆಲ್ಲರ ವಿವರಣೆಯನ್ನು ನೀಡಬೇಕಾದ ಅಗತ್ಯವಿಲ್ಲ. ಬಿಜ್ಜಳ, ಕೌಶಿಕ, ಕರಿಕಾಲಚೋಳ, ಪಾಂಡ್ಯ ಮಹಾದೇವಿ, ಪೆರ್ಮಾಡಿರಾಯರಂಥ ಉತ್ತಮ ವರ್ಗಗಳಿಂದ ಬಂದ ಕೆಲವರನ್ನು ಬಿಟ್ಟರೆ ಉಳಿದವರೆಲ್ಲರೂ ಸಾಮಾನ್ಯರೆಂದು ಪರಿಗಣಿಸಬಹುದು.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯರ ಚರಿತೆಗಳು ಹೇಗೆ ತಿರಸ್ಕಾರಕ್ಕೆ ಒಳಗಾಗಿದ್ದವೋ ಹಾಗೆಯೇ ಭಕ್ತಿಯೂ ತಿರಸ್ಕಾರಕ್ಕೆ ಒಳಗಾಗಿತ್ತು. ಅವರು ಶೃಂಗಾರ ಮತ್ತು ವೀರವನ್ನು ಬಿಟ್ಟರೆ ಉಳಿದ ಯಾವುವೂ ಸಾಹಿತ್ಯ ಕ್ರಿಯೆಗೆ ಯೋಗ್ಯವಲ್ಲ ಎಂದೇ ನಿರ್ಧರಿಸಿದ್ದರು. ಹಾಗಾಗಿ ಪ್ರತಿಯೊಬ್ಬ ಕವಿ ತನ್ನ ಕಾವ್ಯದಲ್ಲಿ ಶೃಂಗಾರ ಮತ್ತು ವೀರವನ್ನು ಮರೆಯದೆ ಬಳಸಿಕೊಂಡಿದ್ದಾನೆ. ಅವರ ಕಾವ್ಯರಚನೆಯ ಉದ್ದೇಶ ರಾಜಮಹಾರಾಜರನ್ನು ಮೆಚ್ಚಿಸುವುದಾದ್ದರಿಂದ ಅವರು ರಾಜ ಮಹಾರಾಜರಿಗೆ ಇಷ್ಟವಾದುದನ್ನೇ ಹೆಚ್ಚಾಗಿ ಕಾವ್ಯದಲ್ಲಿ ಚಿತ್ರಿಸುತ್ತಿದ್ದರು. ಆದರೆ ಹರಿಹರ ಪ್ರಾಚೀನ ಕವಿಗಳ ಈ ಧೋರಣೆಗೆ ವಿರುದ್ಧವಾಗಿದ್ದಾನೆ. ಆತ ಶೃಂಗಾರ ಮತ್ತು ವೀರವನ್ನು ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಬಳಸಿಕೊಂಡಿದ್ದರೂ ಭಕ್ತಿಗೆ ಹೆಚ್ಚಿನ ಆದ್ಯತೆ ಕೊಡುತ್ತಾನೆ. ಅವನ ಕಾವ್ಯದಲ್ಲಿ ಬರುವ ಎಲ್ಲ ಪಾತ್ರಗಳು ಭಕ್ತಿ ಪ್ರಧಾನವಾದುವು. ಕೆಲವು ಪಾತ್ರಗಳು ಭೂಮಿಯಲ್ಲಿಯೇ ಹುಟ್ಟಿ ಶಿವನನ್ನು ಮನಃ ಪೂರ್ವಕವಾಗಿ ಭಜಿಸಿ ಕೈಲಾಸ ಪದವಿಯನ್ನು ಪಡೆದರೆ, ಇನ್ನು ಕೆಲವು ಕೈಲಾಸದಲ್ಲಿ ಹುಟ್ಟಿ ಭೂಮಿಗೆ ಬಂದು ಅಲ್ಲಿ ಶಿವನನ್ನು ಆರಾಧಿಸಿ ನಂತರ ಕೈಲಾಸ ಪದವಿಯನ್ನು ಪಡೆಯುತ್ತವೆ. ಹಾಗೆಯೇ ಪಾರಿಷಪಂಡಿತ, ಪೆರ್ಮಾಡಿರಾಯ, ಜಯಸಿಂಹ ಮೊದಲಾದವರು ಭಕ್ತಿಯನ್ನು ಹೀಗಳೆದು ನಂತರ ಭಕ್ತಿಗೆ ಮನಸೋಲುವುದನ್ನು ಕವಿ ಚಿತ್ರಿಸುತ್ತಾನೆ.

ಹರಿಹರನ ಕಾವ್ಯದಲ್ಲಿ ಭಕ್ತಿಗೇ ಪ್ರಥಮ ಪ್ರಾಶಸ್ತ್ಯ. ಅದರ ಹೊರತಾಗಿ ಬರುವ ಎಲ್ಲವೂ ಭಕ್ತಿಯ ಮಹತ್ತನ್ನು ವ್ಯಕ್ತಪಡಿಸಲು ಬರುವ ಪೂರಕ ಸಾಮಗ್ರಿಗಳಷ್ಟೇ. ಉದಾ: ಮಲುಹಣನ ರಗಳೆ. ಇಲ್ಲಿ ಕವಿ ಮಲುಹಣ-ಮಲುಹಣೆಯರ ಪ್ರೇಮ, ಕಾಮ ಮತ್ತು ವಿರಹಗಳನ್ನು ಮನೋಹರವಾಗಿ ಬಣ್ಣಿಸಿದ್ದಾನೆ. ಇವುಗಳಷ್ಟೇ ಕವಿಗೆ ಮುಖ್ಯವಾಗಿದ್ದರೆ ಮಲುಹಣನ ರಗಳೆ ಸುಂದರ ಪ್ರೇಮಕಾವ್ಯವಾಗುತ್ತಿತ್ತು. ಆದರೆ ಕವಿಗೆ ಮಲುಹಣ-ಮಲುಹಣೆಯರ ಪ್ರೇಮವಾಗಲಿ, ಕಾಮವಾಗಲಿ, ವಿರಹವಾಗಲಿ ಮುಖ್ಯವಲ್ಲ. ಅವನಿಗೆ ಮುಖ್ಯವಾದದ್ದು ಭಕ್ತಿ. ಆದ್ದರಿಂದಲೇ ಸುಂದರವಾಗಿ ಹರಿದೋಡುತ್ತಿದ್ದ ಪ್ರೇಮ ಕಥೆಯನ್ನು 'ಎನ್ನಮೇಲಿಕ್ಕುವೀ ಚಿತ್ತಮುದಾರತೆಯಂ' 'ಪನ್ನಗಾಭರಣ'ನೊಳು ಇಡು ಎಂಬ ಮಾತನ್ನು ಮಲುಹಣೆಯ ಮೂಲಕ ಹೇಳಿಸಿ ಕಥೆ ಭಕ್ತಿಯ ಕಡೆಗೆ ಹರಿಯುವಂತೆ ಮಾಡುತ್ತಾನೆ. ಇಂಥವ್ವೇ ಸನ್ನಿವೇಶಗಳು ಪ್ರಭುದೇವರ ರಗಳೆ ಮತ್ತು ತಿರುನೀಲಕಂಠನ ರಗಳೆಗಳಲ್ಲೂ ಸೃಷ್ಟಿಯಾಗಿರುವುದನ್ನು ನೋಡಬಹುದು.

## 10.4 ಸಾಮಾಜಿಕವಾದ ಭಕ್ತರ ಸಮಸ್ಯೆಗಳು

ಹರಿಹರ ತನ್ನ ಕಾವ್ಯದಲ್ಲಿ ಅಲೌಕಿಕದ ಮಹತ್ವವನ್ನು ಹೇಳುವ ಪ್ರಯತ್ನಮಾಡುತ್ತಾನೆ. ಅಲೌಕಿಕದ ಮಹತ್ವವನ್ನು ಹೇಳುವುದು ಹರಿಹರನ ಮುಖ್ಯ ಉದ್ದೇಶವಾಗಿದ್ದರೂ ಆತ ಸಮಾಜದ ಸಮಸ್ಯೆಗಳನ್ನು ಸಂಪೂರ್ಣ ಕಡೆಗಣಿಸುವುದಿಲ್ಲ. ಕಥೆಯ ನಡುವೆ ಆ ಸಮಸ್ಯೆಗಳನ್ನು ತರುತ್ತಾನೆ. ಭಕ್ತರು ಅವುಗಳನ್ನು ಎದುರಿಸಿ ಆನಂತರವೇ ಕೈಲಾಸಕ್ಕೆ ಹೋಗಬೇಕಾಗುತ್ತದೆ. ಈ ಸಂರಚನೆಯನ್ನು ಒಂದೆರಡು ಉದಾಹರಣೆಗಳ ಮೂಲಕ ಗಮನಿಸಬಹುದು.

**ಬಸವಣ್ಣ :** ಬಸವಣ್ಣ ಎದುರಿಸಿದ ಸಾಮಾಜಿಕ ಸಮಸ್ಯೆಗಳು ಹಲವು. ಆತ ಚಿಕ್ಕಂದಿನಲ್ಲಿಯೇ ಜನಿವಾರವನ್ನು ಕಿತ್ತೆಸೆಯುತ್ತಾನೆ. ತಂದೆ ತಾಯಿಯರನ್ನು ಕಳೆದುಕೊಂಡು ಮುತ್ತಜ್ಜಿಯ ಹತ್ತಿರ ಬೆಳೆಯುತ್ತಾನೆ. ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಗಳಿಂದ ಕಿರುಕುಳ ಅನುಭವಿಸುತ್ತಾನೆ. ಹೊಲೆಯರ ಮನೆಯನ್ನು ಹೊಗಬಾರದು ಎಂಬ ಕಾಲದಲ್ಲಿ ಹೊಲೆಯನಾದ ಸಂಬೋಳಿನಾಗಿ ದೇವನ ಮನೆಗೆ ಹೋಗಿ ಪ್ರಸಾದವನ್ನು ಸ್ವೀಕರಿಸುತ್ತಾನೆ. ಹೊಲೆಯರೂ ಮನುಷ್ಯರೇ ಎಂಬುದನ್ನು ತೋರುವ ಸಲುವಾಗಿ ಬಿಜ್ಜಳನೆದುರು ಸಂಬೋಳಿನಾಗಿದೇವನ ಕಾಲಿನಿಂದ ಹಾಲು ಬರಿಸುತ್ತಾನೆ.

**ಅಕ್ಕಮಹಾದೇವಿ :** ಅಕ್ಕಮಹಾದೇವಿ ಎದುರಿಸಿದ ಸಾಮಾಜಿಕ ಸಮಸ್ಯೆ ದೊಡ್ಡದು. ಅವಳು ಮದುವೆಯಾಗಬೇಕು ಎಂದುಕೊಂಡಿದ್ದ ಗಂಡೇ ಬೇರೆ. ಆದರೆ ಅವಳು ಮದುವೆಯಾದ ಗಂಡೇ ಬೇರೆ. ಮನಸ್ಸಿಲ್ಲದ ಮನಸ್ಸಿನಲ್ಲಿ ತಂದೆ ತಾಯಿಯರಿಗಾಗಿ ಮದುವೆಯಾಗಿ ವಿಷಮ ಸುಖದಲ್ಲಿ ತೊಳಲಾಡುತ್ತಾಳೆ.

**ತಿರುನೀಲಕಂಠ :** ತಿರುನೀಲಕಂಠನ ಕಥೆಯಲ್ಲಿ ವೇಶ್ಯಾ ಬದುಕಿಗೆ ಸಂಬಂಧಿಸಿದಂತೆ ಒಂದು ಸಮಸ್ಯೆ ಬರುತ್ತದೆ. ತಿರುನೀಲಕಂಠ ದೇವಸ್ಥಾನದಿಂದ ಬರುವಾಗ ಗಣಿಕೆಯೊಬ್ಬಳು ಅವನ ಮೇಲೆ ಎಂಜಲು ನೀರು ಸುರಿಯುತ್ತಾಳೆ. ತಾನು ಸುರಿದ ನೀರು ತಿರುನೀಲಕಂಠನ ಮೇಲೆ ಬಿದ್ದಾಗ, ಸಹಜವಾಗಿಯೇ ಆ ಗಣಿಕೆ ತಿರುನೀಲಕಂಠನನ್ನು ಮನೆಯೊಳಗೆ ಕರೆದು ಸ್ನಾನ ಮಾಡಿಸಿ ಸುಗಂಧ ಹಚ್ಚಿ ಕಳುಹಿಸುತ್ತಾಳೆ. ಆದರೆ ಸುಗಂಧ ಹಚ್ಚಿಕೊಂಡು ಬಂದಿರುವ ತನ್ನ ಗಂಡನನ್ನು ನೋಡಿದ ಮುತ್ತೈದೆ ತಪ್ಪು ತಿಳಿದು 'ಶಿವನಾಣೆ' ಇಟ್ಟು ಹತ್ತಿರ ಸುಳಿಯದಂತೆ ಮಾಡುತ್ತಾಳೆ. ಈ ಸಂದರ್ಭ ಆ ಕಾಲದ ಸಾಮಾಜಿಕ ಬದುಕಿನ ಬಿಗುವನ್ನು ಚಿತ್ರಿಸುತ್ತದೆ.

**ವೈಜಕವ್ವೆ :** ಜೈನನ ಹೆಂಡತಿಯಾದ ವೈಜಕವ್ವೆ ಒಮ್ಮೆ ಜೈನ ಋಷಿಗಳಿಗಾಗಿ ರುಚಿಯಾದ ಓಗರವನ್ನು ಮಾಡಿರುತ್ತಾಳೆ. ಅದೇ ಸಂದರ್ಭಕ್ಕೆ ಶಿವ ಮಾರುವೇಷದಲ್ಲಿ ಬರಲು ವೈಜಕವ್ವೆ ಊಟವನ್ನು ಉಣಬಡಿಸುತ್ತಾಳೆ. ಶಿವ ಊಟ ಮಾಡಿದುದನ್ನು ತಿಳಿದ ಋಷಿಗಳು ಊಟ ಮಾಡದೇ ಹೋಗುತ್ತಾರೆ. ಇದು ಜೈನನಿಗೆ ತಿಳಿದಾಗ ವೈಜಕವ್ವೆಯ ಮೇಲೆ ಸಿಟ್ಟಾಗುತ್ತಾನೆ. ಆ ಸಿಟ್ಟಿನಲ್ಲಿ ವೈಜಕವ್ವೆಗೆ ಮನಸೋ ಇಚ್ಛೆ ಬಡಿಯುತ್ತಾನೆ. ಇಲ್ಲಿ ಒಲ್ಲದ ಗಂಡನೊಡನೆ ವೈಜಕವ್ವೆ ಬದುಕಬೇಕಾದ ಸ್ಥಿತಿಯನ್ನು ಕವಿ ಸುಂದರವಾಗಿ ಬಣ್ಣಿಸಿದ್ದಾನೆ.

**ನಿಂಬಿಯಕ್ಕ :** ನಿಂಬಿಯಕ್ಕನ ಬದುಕೇ ಅತ್ಯಂತ ಭೀಕರವಾದದ್ದು. ಚಿಕ್ಕಂದಿನಲ್ಲಿಯೇ ಅವಳು

ತಾಯಿಯನ್ನು ಕಳೆದುಕೊಳ್ಳುತ್ತಾಳೆ. ತಂದೆ ರೋಗಪೀಡಿತನಾಗುತ್ತಾನೆ. ತಂದೆಯನ್ನು ಸಾಕುವ ಜವಾಬ್ದಾರಿಯನ್ನು ನಿಂಬಿಯಕ್ಕನೇ ಹೊರುತ್ತಾಳೆ. ಶ್ರೀಮಂತನೊಬ್ಬನ ಮನೆಯಲ್ಲಿ ಕೆಲಸಕ್ಕೆ ಸೇರುತ್ತಾಳೆ. ಆ ಹೊತ್ತಿಗೆ ತಂದೆಯೂ ಮರಣ ಹೊಂದುತ್ತಾನೆ. ಯೌವನ ಪ್ರಾಪ್ತವಾಗುತ್ತದೆ. ಎಷ್ಟೇ ಕಷ್ಟ ಬಂದರೂ ಅವಳು ಸ್ವಾವಲಂಭಿಯಾಗಿ ಬದುಕು ಸಾಗಿಸುತ್ತಾಳೆ.

**ಪದ್ಮಾವತಿ :** ಇವಳು ಮಲುಹಣೆಯ ತಾಯಿ. ವೇಶ್ಯೆಯಾಗಿ ಬದುಕು ಸಾಗಿಸುತ್ತಿದ್ದವಳು. ಹಣವೇ ಅವಳಿಗೆ ಪ್ರಧಾನ. ಅದಕ್ಕಾಗಿ ಮಗಳನ್ನು ಮಲುಹಣನೆಂಬ ಸುಂದರ ಯುವಕನೊಡನೆ ಕೂಡುವಂತೆ ಮಾಡುತ್ತಾಳೆ. ಮಲುಹಣನಲ್ಲಿ ಹಣ ತೀರುತ್ತಿದ್ದಂತೆಯೇ ಮಲುಹಣೆಯನ್ನು ದೂರ ಮಾಡುವ ಪ್ರಯತ್ನ ಮಾಡುತ್ತಾಳೆ. ಒಮ್ಮೆ ಸೆಜ್ಜೆಮನೆಯಲ್ಲಿದ್ದ ಮಲುಹಣ ಮಲುಹಣೆಯರನ್ನು, ನಿರ್ದಾಕ್ಷಿಣ್ಯವಾಗಿ ಬೇರ್ಪಡಿಸುತ್ತಾಳೆ. ಮಲುಹಣ-ಮಲುಹಣೆಯರಿಬ್ಬರೂ ಹಲವು ಕಾಲ ನರಳುತ್ತಾರೆ. ಭಕ್ತರಾದ ಅವರು ಧನದಾಹಿ ಹೆಣ್ಣೊಬ್ಬಳಿಂದ ಅನುಭವಿಸಿದ ನರಕವನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಒಂದೊಂದು ಕಥೆಯಲ್ಲೂ ಭಕ್ತ ಅಥವಾ ಭಕ್ತೆಯರು ಅನುಭವಿಸುವ ಸಮಸ್ಯೆಗಳು ಬೇರೆ ಬೇರೆ ರೀತಿಯಾಗಿದೆ. ಸಮಸ್ಯೆ ಯಾವುದೇ ಇರಲಿ ಭಕ್ತ ಅಷ್ಟೇ ಸಮರ್ಥವಾಗಿ ಆ ಸಮಸ್ಯೆಯನ್ನು ಎದುರಿಸಿ ತನ್ನ ಗುರಿ ಸಾಧಿಸುವುದನ್ನು ಹರಿಹರನ ಕಥೆಗಳಲ್ಲಿ ಕಾಣುತ್ತೇವೆ.

## 10.5 ಭಾವಾವೇಶದಿಂದ ಕಾವ್ಯಕ್ಕೆ ಒದಗುವ ಪರಿಮಿತಿ

ಭಾವಾವೇಶ ಹರಿಹರನ ಕಾವ್ಯದಲ್ಲಿ ಕಂಡುಬರುವ ಒಂದು ಗುಣ. ಈ ಭಾವಾವೇಶ ಕಾವ್ಯದಲ್ಲಿ ಬರುವುದು ದೋಷವೇನಲ್ಲ. ಆದರೆ ಅದು ತೀವ್ರವಾದಾಗ ದೋಷವಾಗಿ ಪರಿಣಮಿಸಿ ಕಾವ್ಯ ವೈಶಾಲ್ಯತೆಯನ್ನು ತಗ್ಗಿಸುತ್ತದೆ. ಇಂತಹ ಭಾವಾವೇಶದಿಂದ ಹರಿಹರನ ಕಾವ್ಯ ಒಂದು ಪರಿಮಿತಿಯೊಳಗೆ ಸಿಕ್ಕಿಕೊಂಡಿರುವುದನ್ನು ಅವನ ಕಥೆಗಳಲ್ಲಿ ಗುರುತಿಸಬಹುದು.

**ಉದ್ಭಟಯ್ಯನ ಕಥೆ :** ಒಮ್ಮೆ ಉದ್ಭಟಯ್ಯ ಮತ್ತು ಅವನ ಹೆಂಡತಿ 'ನೆತ್ತವನ್ನು' ಆಡುತ್ತಿರುತ್ತಾರೆ. ಆ ಸಂದರ್ಭದಲ್ಲಿ ಉದ್ಭಟಯ್ಯ ಇದ್ದಕ್ಕಿದ್ದಂತೆ ನಸುನಗುತ್ತಾನೆ. ಆ ನಸುನಗೆಯಿಂದ ಉದ್ಭಟಯ್ಯನ ಹೆಂಡತಿ ಮುನಿಸಿಕೊಳ್ಳುತ್ತಾಳೆ. ನಸುನಗೆಗೆ ಕಾರಣವನ್ನು ಕೇಳುತ್ತಾಳೆ. ಆಗ ಉದ್ಭಟಯ್ಯ ಸೌರಾಷ್ಟ್ರದ ಓಹಿಲಯ್ಯ ಎಲ್ಲರನ್ನು ಬಿಟ್ಟು ತಾನೊಬ್ಬನೇ ಕೈಲಾಸಕ್ಕೆ ಹೋದುದನ್ನು ನೆನಪಿಸಿಕೊಂಡು ನಕ್ಕಿದ್ದಾಗಿ ತಿಳಿಸುತ್ತಾನೆ. ಉದ್ಭಟಯ್ಯನ ಮಾತನ್ನು ಕೇಳಿದ ಅವನ ಹೆಂಡತಿ "ನಗೆಯೊಪ್ಪುವುದೀ ಪುರಸಹಿತೊಯ್ವಡೆ / ನಗೆ ಸಲುವುದು ನಗುವಂದದೊಳೊಯ್ವಡೆ / ಕುಳ್ಳಿರ್ದೆಲ್ಲರನಾಡಲು ಬಾರದೆ / ಒಳ್ಳಿದರಂ ಪೊಲ್ಲೆನುತಿರಬಾರದೆ/ ಮಾತರಿದೇ ಮಾತಿನಲೇನಪ್ಪುದು / ಮಾತಿನ ಗುಣಮಂ ತೋಱಲುವೇಳ್ವುದು"[5] ಎಂದು ಕಟಕಿಯಾಡುತ್ತಾಳೆ. ಆಗ ಇದ್ದಕ್ಕಿದ್ದಂತೆ ಭಾವಾವೇಶಕ್ಕೆ ಒಳಗಾದ ಉದ್ಭಟಯ್ಯ " ಪುರಮಂ ಕೊಂಡೊಯ್ವಪೆನೇವುದು / ಧರೆ ಚಿತ್ರವೆನಲ್ಕೊಯ್ವಪೆನೇವುದು / ನಾಡಿದು ಪೋಪೆಂ ಸೋಮನವಾರಂ....."[6] ಎಂದು ಪ್ರತಿಜ್ಞೆಗೈಯುತ್ತಾನೆ. ಈ ಭಾವಾವೇಶದಿಂದಾಗಿ ಕಥೆಯ ಹಾದಿ ಬದಲಾಗುವುದು; ಸತತ ಭಕ್ತಿ ಸಾಧನೆಯಿಂದ ಪುರವನ್ನು ಕೊಂಡೊಯುವುದಕ್ಕಷ್ಟೆ,

ಸೀಮಿತವಾಗುತ್ತದೆ.

**ಹಲಾಯುಧನ ಕಥೆ:** ಈ ಕಥೆಯಲ್ಲಿ ಹಲಾಯುಧನೆಂಬ ಭಕ್ತನಿಗೂ ನವಗ್ರಾಮದ ಪ್ರಭುಗಳಿಗೂ ಮಾತಿಗೆ ಮಾತು ಬೆಳೆಯುತ್ತದೆ. ಆ ಸಂದರ್ಭದಲ್ಲಿ ನವಗ್ರಾಮದ ಪ್ರಭುಗಳು "ಉದ್ಘಟಿಸನಾಳಿಗೊಂಬಾ ಹಲಾಯುಧ ನಿನಗೆ / ಸದ್ಭಕ್ತನಪ್ಪಂಗೆ ಕೊಱತೆಯುಂಟೇ ನಿನಗೆ / ಇಂತಾಳಿಗೊಂಬವರು ಘನವಲ್ಲದಿರ್ಪಿರೆ / ಕಂತುಮದಹರನಲ್ಲಿಗೊಬ್ಬರೇ ಪೋಪಿರೆ/ ಎಮ್ಮೀ ನವ ಗ್ರಾಮಮುಮನೊಯ್ಯದಿರ್ಪಿರೆ / ಎಮ್ಮೆಲ್ಲರಂ ಶಿವನ ಮುಂದಿರಿಸದಿರ್ಪಿರೆ"[7] ಎಂದು ಕಟಕಿಯಾಡುತ್ತಾರೆ. ಆ ಕಟಕಿ ಮಾತಿಗೆ ಹಲಾಯುಧ 'ನೀವೆಂದ ಮಾಳ್ಕೆಯಿಂ ಕೊಂಡು ಪೋದಪೆ' ಎಂದು ಶಿವಮಂದಿರಕ್ಕೆ ಬಂದು ಶಿವ ಸ್ತುತಿಯಲ್ಲಿ ತೊಡಗುತ್ತಾನೆ. ಈ ರೀತಿ ಹಲಾಯುಧ ಭಾವಾವೇಶಕ್ಕೆ ಒಳಗಾದುದರಿಂದ ಕಥೆ ವೈವಿಧ್ಯತೆಯಿಂದ ದೂರ ಸರಿಯುತ್ತದೆ. ಹಲಾಯುಧನ ಆ ಪ್ರತಿಜ್ಞೆ ಓದುಗನಿಗೆ ತಿಳಿಯುತ್ತಿದ್ದಂತೆಯೇ, ಕಥೆಯ ಮುಂದಿನ ಪರಿಣಾಮವೂ ಗೊತ್ತಾಗಿ ಬಿಡುತ್ತದೆ. ಆಗ ಓದುಗನಲ್ಲಿ ಅನಾಸಕ್ತಿ ಮೂಡುತ್ತದೆ.

ಹೀಗೆ ಇನ್ನೂ ಹಲವು ಕಥೆಗಳಲ್ಲಿ ಹರಿಹರನ ಭಕ್ತರು ಭಾವಾವೇಶಕ್ಕೆ ಒಳಗಾಗುವುದು ಉಂಟು. ಈ ಭಾವಾವೇಶದ ಸಂದರ್ಭಗಳು ಕೆಲವೊಮ್ಮೆ ಕಥೆಯಲ್ಲಿ ಔಚಿತ್ಯಪೂರ್ಣವಾಗಿದ್ದರೆ ಮತ್ತೆ ಕೆಲವೊಮ್ಮೆ ಔಚಿತ್ಯದ ಗಡಿಯನ್ನೇ ದಾಟಿವೆ. ಅಂಥ ಸಂದರ್ಭಗಳಲ್ಲೆಲ್ಲ ಕಥೆ ಒಂದು ಸೀಮಿತ ಚೌಕಟ್ಟಿನೊಳಗೆ ಸಿಕ್ಕಿ ವೈವಿಧ್ಯತೆಯನ್ನು ಕಳೆದುಕೊಂಡಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆ ಚಂಡೇಶಪಿಳ್ಳೆ, ಚಿರುತೊಣೆಯಾಂಡ, ತಿರುನಾಳ್ಪೋವ, ಸುರಗಿಯ ಚೌಡಯ್ಯ ಮುಂತಾದವರ ಕಥೆಗಳನ್ನು ಹೆಸರಿಸಬಹುದು.

## 10.6 ವೃತ್ತಿ ಮತ್ತು ಪ್ರವೃತ್ತಿಗಳ ನಡುವೆ ಸಾಮರಸ್ಯ ಸಾಧಿಸುವ ಪರಿ

"ಭಕ್ತಿ, ನಿಷ್ಠೆ, ಸಮರ್ಪಣೆ ಇವುಗಳು ದೈವೀ ಜೀವನದ ಸಾಧನೆಗಳೆಂಬ ಮಾತು ಸ್ಪಷ್ಟವಿದೆ. ಆದರೆ ಜೀವನದ ವ್ಯವಹಾರ ಬೇರೆ, ಅಧ್ಯಾತ್ಮದ ಹಾದಿ ಬೇರೆ ಎಂಬ ವಿಭಾಜಕ ದೃಷ್ಟಿಯು ಸಾಮಾನ್ಯವಾಗಿ ಮಾನವರಲ್ಲಿ ಕಂಡುಬರುತ್ತದೆ. ಜೀವನದ ವ್ಯವಹಾರವು ಅಧ್ಯಾತ್ಮದ ಸಾಧನೆಗೆ ತೊಡಕಾಗುವುದೆಂದು ತಿಳಿದು, ಜೀವನದಿಂದ ವಿರಕ್ತಿ ಪಡೆಯುವ ಹವಣಿಕೆಯಾದರೂ ಇರುತ್ತದೆ. ಹರಿಹರನ ಶಿವಗಣ ಪ್ರಪಂಚದಲ್ಲಿ ಇಂತಹ ದೃಷ್ಟಿಗಳಿಗೆ ಅವಕಾಶವಿಲ್ಲ. ವ್ಯವಹಾರದೊಂದಿಗೇ ದೈವೀ ಜೀವನವನ್ನು ಸಾಧಿಸಬೇಕೆಂಬ ದೃಷ್ಟಿಯನ್ನು ಹರಿಹರ ನಿರೂಪಿಸಿದ್ದಾನೆ."[8] ಅಲ್ಲಿ ವೃತ್ತಿಗೂ ಪ್ರವೃತ್ತಿಗೂ ಯಾವ ಅಡ್ಡಿಯೂ ಇಲ್ಲ. ಅಡ್ಡಿಯಾಗದ ಹಾಗೆ ಕವಿ ಎರಡರ ನಡುವೆಯೂ ಸಾಮರಸ್ಯವನ್ನು ಕಾಪಾಡಿದ್ದಾನೆ.

ಮಾದಾರ ಚೆನ್ನಯ್ಯನ ವೃತ್ತಿ ಅರಸ ಕರಿಕಾಲಚೋಳನ ಅರಮನೆಯಲ್ಲಿ ಕುದುರೆಗಳಿಗೆ ಹುಲ್ಲುತಂದು ಹಾಕುವುದು. ಆದರೆ ಅವನ ಪ್ರವೃತ್ತಿ ಮಾತ್ರ ಭಕ್ತಿ. ಇಲ್ಲಿ ಕವಿ ಚೆನ್ನಯ್ಯನ ಪ್ರವೃತ್ತಿಗೆ ಅವನ ವೃತ್ತಿ ಅಡ್ಡಿಯಾಗದ ಹಾಗೆ ನೋಡಿಕೊಂಡಿದ್ದಾನೆ. ಹುಲ್ಲು ಕೊಯ್ಯುವಲ್ಲಿಯೇ ಆತ ತನ್ನ ಭಕ್ತಿ ಕಾರ್ಯವನ್ನು ನೆರವೇರಿಸುವಂತೆ ಮಾಡಿದ್ದಾನೆ. ಭಕ್ತಿಗಾಗಿ ಆತ ಬೇರೊಂದು ಸ್ಥಳಕ್ಕೆ ಹೋಗಬೇಕಾಗಿಯೇ ಇಲ್ಲ. ಮಾಡುವ ಕಾಯಕವನ್ನೇ ಭಕ್ತಿಯ ಸಾಧನವನ್ನಾಗಿ

ಮಾಡಿಕೊಂಡಿದ್ದಾನೆ. ಚೆನ್ನಯ್ಯ ಉದಯ ಕಾಲದಲ್ಲಿ ಎದ್ದು ಕಾನನಕ್ಕೆ ನಡೆಯುತ್ತಾನೆ. ಅಲ್ಲಿ "ನಿರ್ಮಲ ನದೀ ತೀರದಲ್ಲಿ ಮಗಮಗಿಸುವ ಮಲ್ಲಿಗೆಯ ಮಂಟಪದಲ್ಲಿ ಹೂವುಗಳನ್ನು ಇಟ್ಟು ಕುಳಿತು ಕಣ್ಮನಗಳನ್ನು ನಿಲಿಸಿ ಕೈಮೀಸಿ 'ಬಾರಯ್ಯ ಭಕ್ತರ ಬಂಧು, ಕಾರುಣ್ಯ ಸಿಂಧು' ಎಂದು ಪುಳಕ ತುಂಬಿ ಬೇಡಿಕೊಳ್ಳುತ್ತಿದ್ದ. ನಂತರ ಸೆಜ್ಜೆಯಲ್ಲಿದ್ದ ಶಿವಲಿಂಗವನ್ನು ತೆಗೆದು ಕರತಳದಲ್ಲಿಟ್ಟುಕೊಂಡು ತಿಳಿನೀರಿನಿಂದ ಮಜ್ಜನ ಮಾಡಿಸಿ ನವ ಪತ್ರ ಪುಷ್ಪಗಳಿಂದ ಪೂಜಿಸಿ, ಹಾಡಿ, ನೋಡಿ, ಕೊಂಡಾಡಿ, ದಣಿದು ತಣಿಯದೆ ಪರಮ ಸ್ನೇಹದಿಂದ ಹಸಿದೆಯಯ್ಯ ನನ್ನ ಜೀವವೆ ಎಂದು ಜಂಬು, ಚೂತಫಲಗಳನ್ನು ಒಲವಿನಿಂದ ಕೊಯ್ದು ಎತ್ತಿನ ಮೇಲೆ ಹೇರಿ ತಂದು ಕುದುರೆಯ ಮನೆಯಲ್ಲಿ ಹಾಕಿ ತನ್ನ ಮನೆಗೆ ತೆರಳಿ ಶಿವಲಿಂಗದತ್ತ ಚಿತ್ತವನ್ನು ನಿಲಿಸಿ ಕೂರುತ್ತಿದ್ದ"[೨] ಹೀಗೆ ಅವನ ವೃತ್ತಿ ಮತ್ತು ಪ್ರವೃತ್ತಿಗಳೆರಡೂ ಜೊತೆ ಜೊತೆಯಲ್ಲಿಯೇ ಸಾಗುತ್ತಿರುತ್ತವೆ.

ಇಳೆಯಾಂಡಗುಡಿಮಾರನ ವೃತ್ತಿ ಒಕ್ಕಲುತನ. ಅದನ್ನು ಮಾಡಿಕೊಂಡೇ ಆತ ಶಿವನನ್ನು ಭಜಿಸುವ ಪ್ರವೃತ್ತಿಯನ್ನು ಮಾಡುತ್ತಿದ್ದ. ಅವನ ವ್ಯವಸಾಯದಲ್ಲಿ ಸಮುಚಿತ್ತವೇ ಭೂಮಿಯಾಗಿತ್ತು. ಶಂಕರನ ನೆನಪು ನೇಗಿಲಾಗಿತ್ತು. ಅರಿಷಟ್ಕಗಳು ಎತ್ತುಗಳಾಗಿದ್ದವು. ಹರಿಯುವ ಮನಸ್ಸು ಹಗ್ಗವಾಗಿತ್ತು. ಅಹಂಕಾರ 'ಅಚ್ಚು' ಆಗಿತ್ತು. ಸರ್ವೇಶನಿಷ್ಠೆ ಬೀಜವಾಗಿತ್ತು. ಸುರುಚಿರ ಶಿವಜ್ಞಾನ ಸಸಿಯಾಗಿತ್ತು. ಹರನ ಪರಮಾನಂದವೇ ಮಳೆಯಾಗಿರಲು ಆತ ಶಿವನ ಸದ್ಭಕ್ತಿ ಸಸಿಗಳನ್ನು ಬೆಳೆಯುತ್ತಿದ್ದ. ಇಳೆಯಾಂಡಗುಡಿಮಾರನ ಈ ಬಗೆಯ ಪ್ರವೃತ್ತಿಯಿಂದ ಅವನ ವೃತ್ತಿಗೆ ಯಾವ ಅಡ್ಡಿಯೂ ಆಗಿಲ್ಲ. ಹಾಗೆಯೇ ಅವನ ವೃತ್ತಿಯಿಂದ ಪ್ರವೃತ್ತಿಗೂ ಯಾವ ಅಡ್ಡಿಯೂ ಆಗಿಲ್ಲ. ಅಡ್ಡಿಯಾಗದ ಹಾಗೆ ಕವಿ ಸಾಮರಸ್ಯವನ್ನು ಕಾಪಾಡಿದ್ದಾನೆ.

ಆನಾಯನಾರನ ಕಥೆಯಲ್ಲಿ ಭಕ್ತ ಆನಾಯನಾರ ದನ ಕಾಯುವ ವೃತ್ತಿಯಲ್ಲಿ ತೊಡಗಿರುತ್ತಾನೆ. ಶಿವನನ್ನು ಪೂಜಿಸುವ ತನ್ನ ಪ್ರವೃತಿಗೆ ದನಕಾಯುವ ವೃತ್ತಿಯೇ ಸರಿಯೆನಿಸುತ್ತದೆ. ಹಾಗಾಗಿ ಅವನು ದನಕಾಯುವ ವೃತ್ತಿಯನ್ನೇ ಆರಂಭಿಸುತ್ತಾನೆ. ಊರ ದನಗಳನ್ನೆಲ್ಲ ಅಟ್ಟಿಕೊಂಡು ಹೋಗಿ ಹುಲ್ಲು ಇರುವ ಹೊಲದಲ್ಲಿ ಮೇಯಲು ಬಿಟ್ಟು ಶಿವಭಕ್ತಿಯಲ್ಲಿ ತಲ್ಲೀನನಾಗುತ್ತಾನೆ. ಹಾಗಾಗಿ ಇಲ್ಲಿ ಅವನ ವೃತ್ತಿ, ಪ್ರವೃತ್ತಿಗೆ ಅನುಕೂಲ ವಾಗಿಯೇ ಇದೆ.

ಅತಿಭಕ್ತನ ಕಥೆಯಲ್ಲಿ ಭಕ್ತನಾದ ಅತಿಭಕ್ತ ಮೀನು ಹಿಡಿಯುವ ವೃತ್ತಿಯನ್ನು ಕೈಗೊಂಡಿರುತ್ತಾನೆ. ಆ ವೃತ್ತಿಯನ್ನೇ ಅವನು ಭಕ್ತಿಯ ಸಾಧನೆಗೆ ಬಳಸಿಕೊಳ್ಳುತ್ತಾನೆ. ಹಿಡಿದ ಮೊದಲನೇ ಮೀನನ್ನು ಶಿವನಿಗೆ ಅರ್ಪಿಸುವ ವ್ರತವನ್ನು ಕೈಗೊಳ್ಳುತ್ತಾನೆ. ಅವನ ವ್ರತವನ್ನು ಮುರಿಯಲು ಶಿವ ಹಲವು ಅಡ್ಡಿ ಆತಂಕಗಳನ್ನು ಒಡ್ಡುತ್ತಾನೆ. ಆದಾಗ್ಯೂ ಭಕ್ತ ತನ್ನ ವ್ರತವನ್ನು ಬಿಡದೆ ಪಾಲಿಸುತ್ತಾನೆ. ಕೊನೆಗೆ ಶಿವನೇ ಅತಿಭಕ್ತನ ನಿಷ್ಠೆಗೆ ಸೋತು ಒಲಿಯುತ್ತಾನೆ. ಅವನ ಪ್ರವೃತ್ತಿಗೆ ಯಾವ ತೆರನಾದ ಅಡ್ಡಿಗಳೂ ಬರುವುದಿಲ್ಲ.

ತಿರುಕುರುಂಪತೊಂಡ ಮಾಡುತ್ತಿದ್ದ ವೃತ್ತಿ ಬಟ್ಟೆ ಒಗೆಯುವುದು. ಭಕ್ತನಾದವನಿಗೆ

ಮಾಡುವ ಕಾಯಕ ಯಾವುದಾದರೇನು; ಆ ಕಾಯಕವನ್ನೇ ಭಕ್ತಿ ಸಾಧನೆಗೆ ಬಳಸಿಕೊಳ್ಳುತ್ತಾನೆ. ಹಾಗೆಯೇ ತಿರುಕುರುಂಪೆತೊಂಡ ಕೂಡ ಬಟ್ಟೆ ಒಗೆಯುವ ವೃತ್ತಿಯನ್ನೇ ಭಕ್ತಿಗೆ ಬಳಸಿಕೊಳ್ಳುತ್ತಾನೆ. ಅವನ ದೃಷ್ಟಿಯಲ್ಲಿ ಪಾಪವೇ ಮಲಿನದ ಬಟ್ಟೆ. ಕೋಪವು ಕತ್ತೆಯ ಹಾಗೆ, ಶಿವಭಕ್ತಿಯು ಹೊಳೆಯಿದ್ದಂತೆ, ದೇಹವೆಂಬುದು ಬಟ್ಟೆಗಳನ್ನು ಒಗೆಯುವ ಕಲ್ಲಿನಂತೆ, ತಾಪತ್ರಯಗಳೇ ಕಿಚ್ಚು ಇದ್ದಂತೆ. ಕವಿ ಬಹಳ ಜಾಣ್ಮೆಯಿಂದ ತಿರುಕುರುಂಪೆತೊಂಡನ ಪ್ರವೃತ್ತಿ ಮತ್ತು ವೃತ್ತಿಗಳ ನಡುವೆ ಸಾಮರಸ್ಯ ಕಾಪಾಡಿದ್ದಾನೆ.

ಹೀಗೆ ಕವಿ ಹಲವು ರಗಳೆಗಳಲ್ಲಿ ಬೇರೆ ಬೇರೆ ವೃತ್ತಿಯಲ್ಲಿ ತೊಡಗಿರುವ ಭಕ್ತರನ್ನು ಚಿತ್ರಿಸಿ ಅವರ ವೃತ್ತಿ ಮತ್ತು ಪ್ರವೃತ್ತಿಗಳ ನಡುವೆ ಸಾಮರಸ್ಯವನ್ನು ಕಾಪಾಡುತ್ತಾನೆ. ಅವುಗಳಲ್ಲಿ ಅರಿವಾಳ್ತಾಂಡ, ಬೇಡರ ಕಣ್ಣಪ್ಪ ಮತ್ತು ಕುಂಬರ ಗುಂಡಯ್ಯನ ರಗಳೆಗಳಲ್ಲಿ ಹರಿಹರ ವೃತ್ತಿ ಮತ್ತು ಪ್ರವೃತ್ತಿಗಳ ನಡುವೆ ಸಾಮರಸ್ಯವನ್ನು ಕಾಪಾಡುವ ರೀತಿ ಅರ್ಥಪೂರ್ಣವಾಗಿದೆ.

## 10.7 ಮುಂದಿನ ಕವಿಗಳ ಮೇಲೆ ಹರಿಹರನ ಪ್ರಭಾವ

ಯಾವುದೇ ಕಾಲದ ಅಥವಾ ದೇಶದ ಸಾಹಿತ್ಯವನ್ನು ತೆಗೆದುಕೊಂಡರೂ ಒಬ್ಬ ಕವಿ ಮತ್ತೊಬ್ಬ ಕವಿಯಿಂದ ಅಥವಾ ಅವನ ಸುತ್ತಣ ಪರಿಸರದಿಂದ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಭಾವಿತನಾಗಿಯೇ ಇರುತ್ತಾನೆ. ಇಂಥ ಪ್ರಭಾವ ಕೆಲವರಲ್ಲಿ ಸ್ಪಷ್ಟವಾಗಿ ಗೋಚರಿಸಿದರೆ ಮತ್ತೆ ಕೆಲವರಲ್ಲಿ ಅಸ್ಪಷ್ಟವಾಗಿರುತ್ತದೆ. ಹಾಗೆಯೇ ಹರಿಹರನ ಪ್ರಭಾವಕ್ಕೆ ಒಳಗಾದ "ಅನೇಕ ಕವಿಗಳು ತಮ್ಮ ಹೆಸರನ್ನೇ ಮರೆಮಾಡಿ ಈತನದೇ ಅಂಕಿತವನ್ನಿಟ್ಟುಕೊಂಡು ರಗಳೆಯ ಶೈಲಿಯಲ್ಲಿ ಕೃತಿ ರಚನೆ ಮಾಡಿ ಈತನಿಗೆ ತಮ್ಮ ಗೌರವ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಇನ್ನು ಕೆಲವರು ತಮ್ಮದೇ ಆದ ಮುದ್ರೆಯನ್ನಿಟ್ಟು ರಘಟಾ ಪ್ರಬಂಧಗಳನ್ನು ರಚಿಸಿದ್ದಾರೆ."[10]

"ಬಹುಶ: ಎಲ್ಲಾ ವೀರಶೈವ ಕವಿಗಳೂ ಈತನ ಅಡಿಗೆ ಮುಡಿಚಾಚಿ ಕಾವ್ಯಾರಂಭ ಮಾಡುತ್ತಾರೆ. ಇವನು ಒದಗಿಸಿಕೊಟ್ಟಿರುವ ಸರಕನ್ನು ಬಳಸಿಕೊಂಡೋ, ಹಾಕಿರುವ ಉದಿತ ಮಾರ್ಗವನ್ನು ನೋಡಿಕೊಂಡೋ ಕಾವ್ಯಗಳನ್ನು ಕಟ್ಟಿರುವರು. ಕೀರ್ತನಕಾರರಿಗಂತೂ ಈತನ ಕಾವ್ಯರಾಶಿ ಉಪಕಥೆಗಳ ಬಣ್ಣಶಾಲೆ, ಸ್ಫೂರ್ತಿ ಆವೇಶಗಳ ಹಿರಿಯ ಸೆಲೆ."[11] ಹಾಗೆಯೇ ಕೆಲವರಿಗೆ ಕಾವ್ಯವಸ್ತುವೂ ಆಗಿದ್ದಾನೆ. "ಪದ್ಮರಾಜ ಪುರಾಣವೇ ಮೊದಲಾದ ವೀರಶೈವ ಕಾವ್ಯಗಳಲ್ಲಿ ಈತನ ವೃತ್ತಾಂತ ಆನುಷಂಗಿಕವಾಗಿ ಬಂದಿರುತ್ತದೆ. ಆದ್ದರಿಂದ ವೀರಶೈವ ಕವಿಗಳ ಮೇಲೆಯೂ ಸಾಹಿತ್ಯ ಸಂಸ್ಕೃತಿಗಳ ಮೇಲೆಯೂ ಈತನು ಅತಿಶಯವಾದ ಪ್ರಭಾವ ಬೀರಿರುವನೆಂಬುದು ಸಿದ್ಧವಾಗುತ್ತದೆ."[12]

### 10.7. 1 ಹರಿಹರ - ರಾಘವಾಂಕ

ಹರಿಹರ ಕವಿಯಿಂದ ಪ್ರಭಾವಿತರಾದ ಕವಿಗಳಲ್ಲಿ ರಾಘವಾಂಕ ಮುಖ್ಯ. ರಾಘವಾಂಕ ಹರಿಹರನ ಹತ್ತಿರದ ಸಂಬಂಧಿ. ಒಮ್ಮೆ ತಾನು ಬರೆದ ಹರಿಶ್ಚಂದ್ರ ಕಾವ್ಯವನ್ನು ಹರಿಹರನಿಗೆ ತೋರಲು ಹರಿಹರ ಆ ಕಾವ್ಯವನ್ನು ನೋಡಿ ಸಿಟ್ಟಿಗೇಳುತ್ತಾನೆ. ಹರಿಹರ ರಾಘವಾಂಕರ ಮಧ್ಯೆ

ಮಾತು ಬೆಳೆದು ಹರಿಹರ 'ಪಾವುಗೆ'ಯನ್ನು ಎತ್ತಿ ರಾಘವಾಂಕನ ಮುಂದಿನ ಹಲ್ಲುಗಳು ಕಳಚಿ ಬೀಳುವಂತೆ ಹೊಡೆಯುತ್ತಾನೆ -

> ಮನುಜರ ಮೇಲೆ ಸಾವವರ ಮೇಲೆ ಕನಿಷ್ಕರ ಮೇಲೆ ಪದ್ಯಮಂ
> ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರರೆಂದು ತಾ
> ನನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಹರ್ನಿಶಂ
> ನೆನೆ ಪೊಗಳರ್ಚಿಸೆಮ್ಮ ಕದು ಸೊಂಪಿನ ಪೆಂಪಿನ ಹಂಪೆಯಾಳ್ವನಂ[13]

ಎಂದು, ಸಾಯುವವರ ಮೇಲೆ ಮನುಜರ ಮೇಲೆ ಕಾವ್ಯ ಬರೆಯದಿರುವಂತೆ ಬೋಧಿಸುತ್ತಾನೆ. ಈ ಉಪದೇಶವನ್ನೇ ರಾಘವಾಂಕ ತನ್ನ ಮುಂದಿನ ಜೀವನದಲ್ಲಿ ಅತ್ಯಂತ ವಿಶ್ವಾಸದಿಂದ ಪಾಲಿಸಿಕೊಂಡು ಬಂದಿರುವಂತೆ ತಿಳಿಯುತ್ತದೆ.

ರಾಘವಾಂಕನು ಹರಿಶ್ಚಂದ್ರ ಕಾವ್ಯ, ಸೋಮನಾಥ ಚಾರಿತ್ರ, ವೀರೇಶ ಚರಿತೆ, ಸಿದ್ಧರಾಮ ಚಾರಿತ್ರ, ಶರಭ ಚಾರಿತ್ರ ಮತ್ತು ಹರಿಹರ ಮಹತ್ವ ಎಂಬ ಆರು ಕೃತಿಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ಇವುಗಳಲ್ಲಿ ಶರಭ ಚಾರಿತ್ರ ಮತ್ತು ಹರಿಹರ ಮಹತ್ವ ಲಭ್ಯವಾಗಿಲ್ಲ. ಉಳಿದ ನಾಲ್ಕು ಕಾವ್ಯಗಳಲ್ಲಿ ಹರಿಶ್ಚಂದ್ರ ಕಾವ್ಯವನ್ನು ಬಿಟ್ಟರೆ ಸಿದ್ಧರಾಮ ಚರಿತೆ, ವೀರೇಶ ಚರಿತೆ ಮತ್ತು ಸೋಮನಾಥ ಚಾರಿತ್ರದಲ್ಲಿ ಹರಿಹರನ ದಟ್ಟ ಪ್ರಭಾವ ಕಂಡುಬರುತ್ತದೆ.

"ಹರಿಹರನ ಆದಯ್ಯನ ರಗಳೆ ಮತ್ತು ದಕ್ಷಾಧ್ವರ ರಗಳೆಯನ್ನು ರಾಘವಾಂಕನ ಸೋಮನಾಥ ಚರಿತೆ ಮತ್ತು ವೀರೇಶ ಚರಿತೆಗಳೊಡನೆ ಅನುಕ್ರಮವಾಗಿ ಹೋಲಿಸಿ ನೋಡಬಹುದು. ಪುಲಿಗೆರೆಯಲ್ಲಿ ಸೌರಾಷ್ಟ್ರ ಸೋಮೇಶ್ವರನನ್ನು ಸ್ಥಾಪಿಸಿ ಜೈನರನ್ನು ಶಿವಭಕ್ತರನ್ನಾಗಿ ಮಾಡಿದ ಕಥೆಯು ಆದಯ್ಯನ ರಗಳೆಯಲ್ಲಿಯೂ ವೀರಭದ್ರನು ಶಿವನ ಬೆಸನದಂತೆ ದಕ್ಷನ ಯಾಗವನ್ನು ಹಾಳುಗೆಯ್ದ ಕಥೆಯು ದಕ್ಷಾಧ್ವರ ರಗಳೆಯಲ್ಲಿಯೂ ಬಂದಿರುತ್ತವೆ. ರಾಘವಾಂಕನು ಈ ಕೃತಿ ರಚನೆಗೆ ಸ್ಫೂರ್ತಿಯನ್ನೂ ಕಥಾ ಮೂಲವನ್ನು ಹರಿಹರನಿಂದ ಪಡೆದುಕೊಂಡಿರಬೇಕೆಂಬ ಸಂಗತಿ, ರಗಳೆ ಹಾಗೂ ಷಟ್ಪದಿ ಕಾವ್ಯದ ಹೋಲಿಕೆಯಿಂದ ಸ್ಪಷ್ಟವಾಗುತ್ತದೆ. ವೀರೇಶ ಚರಿತೆಯನ್ನು ಪುರಾಣ ಕೃತಿಗಳ ಸಾಲಿನಲ್ಲಿ ಇರಿಸಬೇಕೆಂಬ ಆಸೆಯಿಂದ ಕವಿ ಅದನ್ನು ಮಹಾಕಾವ್ಯದ ಧಾಟಿಯಲ್ಲಿ ರಚಿಸಿರುವನು. ಅದರಲ್ಲಿ ಅಷ್ಟಾದಶ ವರ್ಣನೆಗಳಿಗೆ ಇಂಬುಗೊಟ್ಟಿರುವನು. ರಾಘವಾಂಕನು ಹರಿಹರನ ರಗಳೆಗಳಿಂದ ಈ ಕೃತಿಗೆ ಆಧಾರವನ್ನು ಪಡೆದುಕೊಂಡಿದ್ದರೂ, ಹರಿಹರನಿಂದ ಕೆಲವು ಕಡೆ ದೂರ ಸರಿದು ತನಗೆ ಉಚಿತವೆನಿಸಿದಂತೆ ಸನ್ನಿವೇಶಗಳನ್ನು ರಚಿಸಿಕೊಂಡಿದ್ದಾನೆ. ಆದರೂ ಇಬ್ಬರ ಕೃತಿಗಳಲ್ಲಿ ಗಮನಾರ್ಹ ಸಾದೃಶ್ಯಗಳು ಕಂಡುಬರುತ್ತವೆ. ದೃಷ್ಟಾಂತಕ್ಕೆಂದು ಆದಯ್ಯನು ಪುಲಿಗೆರೆಯಲ್ಲಿ ಹೋಜೇಶ್ವರ ದೇವಾಲಯವನ್ನು ಕಂಡ ಬಗೆಯೂ ಸೌರಾಷ್ಟ್ರ ಸೋಮೇಶ್ವರನನ್ನು ತಂದಲ್ಲದೆ ಊಟವಿಲ್ಲವೆಂಬ ಆತನ ದೃಢಪ್ರತಿಜ್ಞೆಯ ವರ್ಣನೆಯೂ ಎರಡೂ ಕಡೆಯಲ್ಲಿ ಒಂದೇ

ಬಗೆಯಾಗಿ ಬಂದಿರುವುದನ್ನು ಗಮನಿಸಬಹುದಾಗಿದೆ. ಆದಯ್ಯನ ರಗಳೆ ಮತ್ತು ಸೋಮನಾಥ ಚರಿತೆಗಿಂತಲೂ ಹೆಚ್ಚಿನ ಸ್ವಾಮ್ಯ ಪಕ್ಷಾದ್ವರ ಮತ್ತು ವೀರೇಶ ಚರಿತೆಯಲ್ಲಿ ಕಂಡುಬರುತ್ತದೆ."[14]

ಸೋಮನಾಥ ಚರಿತೆ ಮತ್ತು ವೀರೇಶ ಚರಿತೆಗಳಿಗೆ ರಾಘವಾಂಕ ಹರಿಹರನ ರಗಳೆಯಿಂದ ಹೇಗೆ ವಸ್ತುವನ್ನು ಪಡೆದುಕೊಂಡನೋ ಹಾಗೆಯೇ ಸಿದ್ಧರಾಮ ಚರಿತೆಯ ವಸ್ತುವನ್ನು ಹರಿಹರನಿಂದಲೇ ಪಡೆದುಕೊಂಡಿರುವಂತೆ ಕಂಡುಬರುತ್ತದೆ. ಹರಿಹರನ ರೇವಣಸಿದ್ಧೇಶನ ರಗಳೆ, ಪ್ರಭುದೇವರ ರಗಳೆ, ಹಾವಿನಹಾಳ ಕಲ್ಲಯ್ಯನ ರಗಳೆ, ಲಿಂಗಾರ್ಚನೆಯ ರಗಳೆ, ಏಕಾಂತರಾಮಯ್ಯನ ರಗಳೆಗಳಲ್ಲಿ ಸಿದ್ಧರಾಮನ ಪ್ರಸ್ತಾಪ ಬರುತ್ತದೆ. ರಾಘವಾಂಕ ಇವುಗಳಿಂದ ನಿಸ್ಸಂದೇಹವಾಗಿ ಸ್ಫೂರ್ತಿಗೊಂಡಿದ್ದಾನೆ ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು.

ಹರುಷದಿಂದಲಗಸ್ತ್ಯಾಹುತಿಗೊಂಡು ದೇವ್ಯರೆ
ಲ್ಲರ ನಾಳಿಸುತ್ತ ಧ್ಯಾನದೊಳಿರ್ದು ನೆಱತಿಕೇಳ್ವು
ಹರಿತಂದು ನದಿಯ ನಡುವಣ ಸುರಿಗೆವಿಡಿದು ತೆಗೆದಾ ಮಾಸನೂರ ನೆರೆದ
ತರುಣಿಯರ ಹರಣಮಂ ಕಾಯ್ದೊಂದು ಭಿಕ್ಷದಿಂ
ಧರಣಿಪನ ಕಟಕವೆಲ್ಲವನೂಡಿದಪ್ರತಿಮ
ಗುರು ರೇವಣಾಚಾರ್ಯನಾಪೂರ ಸೀಮೆಯೊಳು ದಂಡಿಗೆಯನೊಲಿದಿಳಿದನು[15]

ಸಿದ್ಧರಾಮ ಚಾರಿತ್ರ್ಯದಲ್ಲಿ ಬರುವ ಈ ಪದ್ಯದಲ್ಲಿ ಹರಿಹರ ಕವಿಯ ರೇವಣಸಿದ್ಧೇಶ್ವರನ ರಗಳೆಯನ್ನು ರಾಘವಾಂಕ ಅನುಸರಿಸಿದಂತೆ ಕಾಣುತ್ತದೆ. ಹರಿಹರನು ರೇವಣಸಿದ್ಧೇಶ್ವರನ ರಗಳೆಯಲ್ಲಿ ರೇವಾಣಾಚಾರ್ಯರ ಮಹಿಮೆಯನ್ನು ನಿರೂಪಿಸುವ ಸಲುವಾಗಿ ವಿಸ್ತಾರವಾಗಿ ಹೇಳಿರುವ ವಿಷಯವನ್ನು ರಾಘವಾಂಕ ಸಂಕ್ಷಿಪ್ತವಾಗಿ ಚಿತ್ರಿಸಿದ್ದಾನೆ. ಹಾಗೆಯೆ "ಧರೆಯನುದ್ಧರಿಸಲುದಯಿಸಿದ ದಿವ್ಯಲಿಂಗಂ ಧರೆಯ ಪುತ್ರನೇ ಘೋರತಪದಿಂದೊಲಿಸಿದ ಸುದತಿ ಸುಗ್ಗವ್ವೆ ಮುದ್ದಯ್ಯನಂ ಮೆಚಿದು ಲೋಕದ ಪಾಪಮಂ ಕಳೆಯಲುದಯಿಸಿದ ರುದ್ರನೆನ್ನದೆ ಸಿದ್ಧರಾಮಯೋನಿಜನೆಂದವಂಗಾಗದಿಹುದೆ ನಾಯಕ ನರಕವು"[16] ಅನ್ನುವಲ್ಲಿ, ರಾಘವಾಂಕನು ಹರಿಹರನ ಬಸವರಾಜದೇವರ ರಗಳೆಯ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಹರಿಹರ 'ಬಸವರಾಜ ದೇವರ ರಗಳೆ'ಯಲ್ಲಿ ಬಸವಣ್ಣನ ಹುಟ್ಟಿನ ಬಗ್ಗೆಯೂ ಇಂಥದೇ ಮಾತುಗಳನ್ನು ಹೇಳುತ್ತಾನೆ - "ನೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ ಹರನ ಬೆಸನಂ ಹೊತ್ತು ಪಲವು ಕಾರಣದಿಂ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವರಾಜಂಗೆ ತಾಯ್ತಂದೆಗಳಿಲ್ಲೆಂಬುದನಱಿಪುವಂತೆ ಶಿವಭಕ್ತನುಮಂ ಶಿವ ಭಕ್ತಿಯುಮಂ ಶಿವನಾಜ್ಞೆಯಿಂ ಕೈಲಾಸಕ್ಕೆ ಕೊಂಡೊಯ್ಯೆ"[17] ಇಂಥ ಇನ್ನೂ ಹಲವು ಉದಾಹರಣೆಗಳು ಸಿದ್ಧರಾಮ ಚಾರಿತ್ರದಲ್ಲಿ ದೊರೆಯುತ್ತವೆ.

## 10.7.2 ಹರಿಹರ - ಕೆರೆಯ ಪದ್ಮರಸ

ಕೆರೆಯ ಪದ್ಮರಸ ಹರಿಹರನ ಸಮಕಾಲೀನ. ಪದ್ಮಣಾಂಕನ 'ಪದ್ಮರಾಜ ಪುರಾಣ'ದಿಂದ ಕೆರೆಯ ಪದ್ಮರಸ ಮತ್ತು ಹರಿಹರರು ಒಂದೇ ಆಸ್ಥಾನದಲ್ಲಿದ್ದರು ಎಂದು ತಿಳಿದುಬರುತ್ತದೆ. ಇವನು 'ದೀಕ್ಷಾ ಬೋಧೆ' ಕನ್ನಡ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯಲ್ಲಿ ಆತ ತಾನು ಹರಿಹರನಿಂದ ಪ್ರಭಾವಿತನಾದ ವಿಚಾರವನ್ನೇನು ಹೇಳಿಕೊಂಡಿಲ್ಲ. ಆದರೆ ಕೃತಿ ರಚನೆಯನ್ನು ನೋಡಿದಾಗ,ಅಲ್ಲದೆ ಆತ ಹರಿಹರನ ಸಮಕಾಲೀನ ಎಂಬುದನ್ನು ಗಮನದಲ್ಲಿಟ್ಟು ನೋಡಿದಾಗ ಅವನು ಹರಿಹರನಿಂದ ಪ್ರಭಾವಿತನಾಗಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ.

ಇವನ ಕೃತಿ "ಮೂರು ಸ್ಥಲಗಳಲ್ಲಿ, ಪ್ರಧಾನವಾಗಿ ರಗಳೆರೂಪದಲ್ಲಿ ನಿರ್ವಹಿತವಾಗಿರುವ ಕೃತಿ. ಪ್ರತಿಯೊಂದು ಸ್ಥಲವೂ ಕಂದ. ವೃತ್ತಗಳಿಂದ ಆರಂಭವಾಗಿ ಕಂದದ ಮೂಲಕ ಮುಕ್ತಾಯವಾಗುವುದು ಕಂಡುಬರುತ್ತದೆ. ಒಂದು ಮತ್ತು ಮೂರನೆ ಸ್ಥಲಗಳು ಲಲಿತರಗಳೆಯಲ್ಲಿಯೂ ಎರಡನೆ ಸ್ಥಲ ಮಂದಾನಿಲ ರಗಳೆಯಲ್ಲಿಯೂ ಇವೆ."[18] ಅಲ್ಲದೆ ಹರಿಹರನ ರಗಳೆಗೂ ಇದಕ್ಕೂ ಸಾಕಷ್ಟು ಹೋಲಿಕೆ ಇದೆ. ಹರಿಹರನ ರಗಳೆಗಳಲ್ಲಿ ಬರುವ 'ಭಾಪುರೇ' 'ಜೋಳ್ಳೈಸು' ಮುಂತಾದ ಪದಗಳು (ದೀ. ಬೋ. ಪುಟ 139) ದೀಕ್ಷಾಬೋಧೆಯಲ್ಲೂ ಕಂಡುಬರುತ್ತವೆ.

ಶ್ರೀ ಶಿವ ಮಹೇಶ ವಿಶ್ವೇಶ್ವರನೆ ಕರುಣಿಪುದು
ಈಶ ಸರ್ವೇಶ ಪ್ರಾಣೇಶ ನೀಂ ರಕ್ಷಿಪುದು
ಹಿಂದೆ ದಂದುಗದಿಂದ ಹೆಂದದ ಭವಂಗಳೊಳು
ಬಂದೆ ನಾನಾ ಯೋನಿಯೊಳಗಖಿಳ ಘೋರದೊಳು[19]

ಆವ ಪರಿಯರ್ಚಿಪೆಂ ದೇವ ನಿಮ್ಮಯ ಪದವ
ಆವ ಪರಿ ಭಜಿಸುವೆಂ ದೇವ ನಿಮ್ಮಯ ಘನವ[20]

ಅಕಟಜಾಟಳದಂತೆ ಸಕಲಯೋನಿಯ ತಿರುಗಿ
ಸುಖ ದು:ಖ ತಾಪತ್ರಯ ಜ್ವಾಲೆಯೊಳ್ಮುಳುಗಿ[21]

ಇಂತಪ್ಪ ಜನುಮಮಂ ಎಂತು ನೀಗುವೆನೆಂದು
ಹುಟ್ಟಲಾಜಿದೆ ಹಸುಳೆ ಕಷ್ಟ ಗರ್ಭಂಗಳೊಳು[22]
ಬಂದಲ್ಲಿ ಸ್ತನ ಹಲವನುಂಡು ಹೊಂದದೆ ಮುನ್ನಾ
ಹಲವು ಜನನಕ್ಕೆ ತಕ್ಕ ಹಲವಾಹರನುಂಡು[23]

ದೀಕ್ಷಾ ಬೋಧೆಯ ಪ್ರಥಮ ಸ್ಥಲದಲ್ಲಿ ಬರುವ ಈ ಪದ್ಯದ ಸಾಲುಗಳನ್ನು ನೋಡಿದಾಗ, ಕೆರೆಯ ಪದ್ಮರಸ ಹರಿಹರನ 'ಸಂಸಾರ ವ್ಯಾಮೋಹ ನಿರಸನ ರಗಳೆ' ಯನ್ನು ಅನುಕರಿಸಿದ್ದಾನೆ ಎಂದು ತಿಳಿದುಬರುತ್ತದೆ. ಅಲ್ಲೆಲ್ಲ ಸಂಸಾರ ವ್ಯಾಮೋಹ ನಿರಸನ ರಗಳೆಯ ಛಾಯೆಯೇ ಆವರಿಸಿದೆ. ಅದು ಮತ್ತೊಂದು 'ಸಂಸಾರ ವ್ಯಾಮೋಹ ನಿರಸನ ರಗಳೆ' ಎಂಬಂತಿದೆ. ಕೆರೆಯ

ಪದ್ಮರಸ ಹರಿಹರನಿಂದ ಪ್ರಭಾವಿತನಾಗಿದ್ದಾನೆ ಎಂಬುದಕ್ಕೆ ಇದಕ್ಕಿಂತ ಬೇರೊಂದು ನಿದರ್ಶನ ಬೇಕಿಲ್ಲ.

### 10.7.3 ಹರಿಹರ - ಲಕ್ಕಣ್ಣದಂಡೇಶ

ಲಕ್ಕಣ್ಣದಂಡೇಶನ ಕಾಲ ಕ್ರಿ.ಶ. 1419 - ಕ್ರಿ.ಶ. 1446. ಇವನು 'ಶಿವತತ್ತ್ವ ಚಿಂತಾಮಣಿ' ಗ್ರಂಥವನ್ನು ಬರೆದಿದ್ದಾನೆ. ಲಕ್ಕಣ್ಣನು ಈ ಗ್ರಂಥದಲ್ಲಿ ಅರವತ್ತೂರು ಪುರಾತನರ ಕಥೆಯನ್ನು ಹೇಳುತ್ತಾನೆ. ಈ ಕಥೆಗಳನ್ನು ಕವಿ ಹರಿಹರನಿಂದ ಪ್ರಭಾವಿತನಾಗಿ ಬರೆದಿದ್ದಾನೆ ಎಂಬುದು ಹರಿಹರನ ಕಥೆಗಳೊಡನೆ ಆ ಕಥೆಗಳನ್ನು ಹೋಲಿಸಿನೋಡುವುದರಿಂದ ವ್ಯಕ್ತವಾಗುತ್ತದೆ. ಆದರೂ ಶಿವತತ್ತ್ವ ಚಿಂತಾಮಣಿಯ ಕರ್ತೃವು ಈ ಎರವಲನ್ನಾಗಲಿ, ಹರಿಹರನ ಹೆಸರನ್ನಾಗಲಿ ಹೇಳಿಕೊಳ್ಳದೆ ಇರುವುದು ಅಚ್ಚರಿಯ ಸಂಗತಿ. ದೃಷ್ಟಾಂತಕ್ಕೆ ಈ ಕೆಳಗಿನ ಪದ್ಯ ಭಾಗವನ್ನು ನೋಡಬಹುದು :

ಮತ್ತಂ ಮಹಾನದೀಶ್ವರೀ ತುಂಗಭದ್ರೆಯೊಳು
ಉತ್ತಮ ವಶಿಷ್ಠನಾಶ್ರಮವಿಪ್ಪುದೊಲುಮೆಯೊಳು
ಅಲ್ಲಿ ಪಾಪವಿನಾಶಿ ಎಂಬ ನಾಮದ ತೀರ್ಥ
ಅಲ್ಲಿ ದಶಾಶ್ವ ಮೇಧಾವಿಧಾನದ ತೀರ್ಥ
ಅದರೊಳಗೆ ಬದರಿಕಾಶ್ರಮವುಂ ಕೋಟಿ ತೀರ್ಥ[24] (ಪಂಪಾಕ್ಷೇತ್ರ ರಗಳೆ)

ಮತ್ತಂ ಮಹಾನದೀಶ್ವರಿ ತುಂಗ ಭದ್ರೆಯೊಳ
ಗುತ್ತಮ ವಶಿಷ್ಠಾಶ್ರಮಂ ವಿರಾಜಿಪುದಲ್ಲಿ
ಯುತ್ತಮಲ ಮೂರ್ತಿ ಪಾಪವಿನಾಶಿಯೆಂಬ ನಾಮದ ತೀರ್ಥವೆಸೆದಿರ್ಪುದು
ಉತ್ತಮ ದಶಾಶ್ವಮೇಧ ವಿಧಾನದ ತೀರ್ಥ
ಬಿತ್ತರದ ಬದರಿಕಾಶ್ರಮದಲ್ಲಿ ಸತ್ಕೀರ್ತಿ[25] (ಲ. ವಿ. ಶಿ. ಚಿಂ. ಸಂಧಿ [38] ಪದ್ಯ [237])

ಈ ಎರಡೂ ಪದ್ಯಗಳಲ್ಲಿರುವ ಸಾಮ್ಯತೆಗಳನ್ನು ಗಮನಿಸಿದಾಗ ಲಕ್ಕಣ್ಣ ದಂಡೇಶ ಹೇಗೆ ಹರಿಹರನ ಇಡಿಯ ರಗಳೆಯನ್ನೇ ತೆಗೆದುಕೊಂಡು ಷಟ್ಪದಿಯಾಗಿ ಪರಿವರ್ತಿಸಿದ್ದಾನೆ ಎಂಬುದು ತಿಳಿಯುತ್ತದೆ.

### 10.7.4 ಹರಿಹರ - ಸುರಂಗ

ಸುರಂಗ ಕವಿ 'ತ್ರಿಷಷ್ಟಿ ಪುರಾತನ ಚರಿತ್ರೆ' ಚಂಪೂ ಕಾವ್ಯವೊಂದನ್ನು ಅರುವತ್ತೂರು ಪುರಾತನರನ್ನು ಕುರಿತಂತೆ ಕನ್ನಡದಲ್ಲಿ ಬರೆದಿದ್ದಾನೆ. ಇವನ ಕಾಲ ಸುಮಾರು ಕ್ರಿ.ಶ. 1500. ಈತನ ಮೇಲೆ ಹರಿಹರನ ಪ್ರಭಾವ ಸಾಕಷ್ಟಾಗಿದೆ. ಆದರೆ ಸುರಂಗ ಕವಿ ಎಲ್ಲಿಯೂ ಹರಿಹರನ ಹೆಸರನ್ನು ಹೇಳಿಕೊಂಡಿಲ್ಲ. ಬದಲಾಗಿ ಲೈಂಗ್ಯ ಪುರಾಣದಿಂದ ತನ್ನ ಕಥೆಗಳಿಗೆ ಆಧಾರವನ್ನು ಪಡೆದುಕೊಂಡಿರುವುದಾಗಿ ಹೇಳಿಕೊಂಡಿದ್ದಾನೆ. ಆದರೆ ಕೆಲವೊಂದು ಹೋಲಿಕೆಗಳು ಆತ

ಹರಿಹರನಿಂದಲೇ ಕಾವ್ಯವಸ್ತುವನ್ನು ಪಡೆದುಕೊಂಡಿದ್ದಾನೆ ಎಂಬುದನ್ನು ದೃಢಪಡಿಸುತ್ತವೆ.

'ತಿರುನಾಳ್ಪೋವ'ನ ರಗಳೆಯಲ್ಲಿ ಭಕ್ತ ತಿರುನಾಳ್ಪೋವನು ಪೊನ್ನಾಂಬಲನಾಥನನ್ನು ಕಂಡಾಗ ಅವನ ಬಾಯಿಂದ ಹೊರಹೊಮ್ಮಿದ ಮಾತುಗಳನ್ನು ಹರಿಹರ -

ಆಹಾಹಾಹಾ ಪೊನ್ನಾಂಬಲಕೆ
ಓಹೋಹೋಹೋ ಪೊನ್ನಾಂಬಲಕೆ
ಎನುತಂ ತೊನೆವುತ್ತಂ ತೂಗುತ್ತಂ[26]

ಎಂದು ಚಿತ್ರಿಸುತ್ತಾನೆ. ಹಾಗೆಯೇ ಇನ್ನೊಂದು ಸಂದರ್ಭದಲ್ಲಿ, ಅದೇ ರಗಳೆಯಲ್ಲಿ ಪೊನ್ನಾಂಬಲದ ಉತ್ಸವದಲ್ಲಿ ವ್ಯಕ್ತವಾಗುತ್ತಿದ್ದ ಸಂಗೀತ ಧ್ವನಿಯನ್ನು -

ನಿಸ್ಸಾಳ ಧ್ವನಿ ಧಳಂಧಳಮೆನೆ
ನಿಶ್ಶೇಷ ಧ್ವನಿ ಭರದಿಂ ಬೋರೆನೆ
ವಾದ್ಯಧ್ವನಿ ಸೋಜಿಗಮೆನೆ ನೆಗೆದವು
ಚೋದ್ಯಂ ಪುಟ್ಟಲ್ತರದಿಂ ನೆಗೆದವು
ತಂದೋಂ ಧಿತ್ಥೋಂ ತಂಧೊಂಯೆನುತಂ
ದಿಂಧಿಮಿ ದಿಂಧಿಮಿ ದಿಂಧಿಮಿಯೆನುತಂ [27]

ಎಂದು ವರ್ಣಿಸುತ್ತಾನೆ. ಈ ಎರಡೂ ಪದ್ಯಭಾಗಗಳನ್ನು ತ್ರಿಷಷ್ಟಿ ಪುರಾತನ ಚರಿತ್ರೆಯೊಂದಿಗೆ ಹೋಲಿಸಿ ನೋಡಬಹುದು. ಮೊದಲನೆ ಪದ್ಯವು ಸುರಂಗ ಕವಿಯಲ್ಲಿ -

ಆಹಾ ಪೊನ್ನಂಬಲಪತಿ
ಯೋಹೋ ಪೊನ್ನಂಬಲೇಶ ಶರಣೆನುತು
ತ್ಸಾಹದಿ ಬರೆಬರೆ ಕಂಡಂ
ಮೋಹನತೆಯ ನೀವು ತಿರ್ಪಾ ಪೊನ್ನಂಬಲಮಂ[28]

ಎಂದು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ರಚನೆಯಾಗಿದೆ. ಆದರೆ ಎರಡನೆ ಪದ್ಯ ಸುರಂಗ ಕವಿಯಲ್ಲಿ ಗದ್ಯ ರೂಪವನ್ನು ಪಡೆದುಕೊಂಡಿದೆ. ಅಲ್ಲಿ ಕವಿ ಈ ಸಂದರ್ಭವನ್ನು "....... ಅಂತಾ ಮಹಿಮೆವಡೆದೆಸೆವ ಪೊನ್ನಾಂಬಲದ ತಿರುನಾಳ್ವಂದಂ xxx ಅನೇಕ ಭೇರಿಗಳ ಧಿಮಿಧಿಮಿಕೆಂಬ ಮುರಜೆಗಳ ಖಿರಖಿರಟೆಂಬ ಕರಡಿಗೆಗಳ ಝಗ ಝಗವೆಂಬ ವಾವುಜೆಗಳ ಚಣಕಕೆಂಬ ಕಹಳೆಗಳ ಭುಂಭುಂಯೆಂಬ ಶಂಖಗಳ ಢಣಂ ಢಣಂ ಎಂಬ ....... "[29] ಎಂದು ಚಿತ್ರಿಸುತ್ತಾನೆ. ಇಂತಹ ದೃಷ್ಟಾಂತಗಳಿಂದ, ಅರುವತ್ಮೂರು ಪುರಾತನರ ಚರಿತ್ರೆಯ ನಿರೂಪಣೆಗೆ ಕೈ ಹಾಕಿದ ಸುರಂಗನು ತನಗಿಂತಲೂ ಪೂರ್ವದಲ್ಲಿ ಪುರಾತನರ ಮೇಲೆ ಪ್ರಕಟವಾಗಿದ್ದ ಹರಿಹರನ

ಕೃತಿಗಳನ್ನು ಪರಾಮರ್ಶಿಸಿದ್ದನು ಮತ್ತು ರಗಳೆಗಳಲ್ಲಿ ಭಕ್ತಿಯ ಪರವಶತೆಯನ್ನು ಬಣ್ಣಿಸುವ ಕಾವ್ಯಸಂದರ್ಭ ಮತ್ತು ವರ್ಣನೆಯನ್ನು ಆತನು ಮೆಚ್ಚಿಕೊಂಡಿದ್ದನು ಎಂಬ ವಿಚಾರ ತಿಳಿಯುತ್ತದೆ. ಇದರಿಂದ ಆತನ ಮೇಲೆ ಹರಿಹರನ ಪ್ರಭಾವವಾಗಿತ್ತೆಂದು ತಿಳಿಯುತ್ತದೆ.

## 10.7.5 ಹರಿಹರ - ವೀರಭದ್ರ ಕವಿ

ಇವನು ಹರಿಹರನಿಂದ ಹೆಚ್ಚು ಪ್ರಭಾವಿತನಾದ ಕವಿ. ಕ್ರಿ.ಶ. 1500ರ ಅವಧಿಯಲ್ಲಿ ಬದುಕಿದ್ದ ವೀರಭದ್ರ ಕವಿ 'ಅರುವತ್ತು ಮೂವರ ಪುರಾತನ ಪೌರಾಣ' ಎಂಬ ಕಾವ್ಯವನ್ನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ. ವೀರಭದ್ರನೇ ತನ್ನ ಕಾವ್ಯದಲ್ಲಿ 'ಹರಿಹರದೇವ ಕೊರೆದ ರಘಟಾಕಾವ್ಯಾಧಾರ''[30] ಎಂದು ಹೇಳಿರುವುದರಿಂದ ಸಮಸ್ಯೆ ಸುಲಭವಾಗಿ ಬಗೆಹರಿಯುತ್ತದೆ. ಯಾವುದಾದರೂ ಒಂದು ರಗಳೆಯ ಮೂಲಕ ಆ ಪ್ರಭಾವವನ್ನು ಗುರುತಿಸಬಹುದು.

**ತಿರುನೀಲಕಂಠನ ಕಥೆ :** ಈ ಕಥೆ ಹರಿಹರ ಮತ್ತು ವೀರಭದ್ರ ಕವಿಗಳಿಬ್ಬರಲ್ಲೂ ಒಂದೇ ತೆರನಾಗಿದೆ. ತಿರುನೀಲಕಂಠನು ಪೂಜೆಯನ್ನು ಮುಗಿಸಿ ಬರುವಾಗ, ವಾರಾಂಗನೆಯೊಬ್ಬಳು ತಳಿಗೆಯನ್ನು ತೊಳೆದು ಎರಚಿದ ನೀರು ತಿರುನೀಲಕಂಠನ ಮೇಲೆ ಚೆಲ್ಲುತ್ತದೆ. ಅದನ್ನು ನೋಡಿದ ವಾರಾಂಗನೆ ಕಳವಳಗೊಂಡು ಭಕ್ತನನ್ನು ಕರೆದು ಉಪಚರಿಸಿದ ಸಂದರ್ಭವನ್ನು ಹರಿಹರ -

ಕರುಣಿಪುದು ಸರ್ವಾಪರಾಧಿ ಮರುಳಾನೆಂದು
ಚರಿತದಿಂ ಮನೆಗೆ ಬಿಜಯಂಗೆಯ್ಸಿ ಕರೆತಂದು
ಪರಿಮಳೋದಕದಿಂದ ಮಹಮಜ್ಜನಕ್ಕೆರೆದು
ಪರದುಕೂಲವನುಡಿಸಿ ಆದರಿಸುತುಂ ನಲಿದು
ದಿವ್ಯಗಂಧಂಗಳಿಂದನುಲೇಪನಂ ಮಾಡಿ
ನವ್ಯ ಕುಸುಮಂಗಳಂ ಸಿರಿಮುಡಿಯೊಳಗೆ ಸೂಡಿ[31]

ಎಂದು ಚಿತ್ರಿಸುತ್ತಾನೆ. ಅದೇ ಸಂದರ್ಭವನ್ನು ವೀರಭದ್ರ ಕವಿ -

ಕರುಣಿಸ್ಸೆ ಪರನೀಲಕಂಠಾರ್ಯ ನೀನೆಂಬು
ದರಿಯದಾದೆನ್ನಯ ಶತಾಪರಾದಂಗಳ
ಮರೆದು ಕಳೆಯೆಂದು ಚರಣಕ್ಕೆರಗಿ ಮುಗುಳೆರಗಿ ದೈನ್ಯೋಕ್ತಿಯಿಂದ ನುತಿಸಿ
ತರಳೆ ತಿರುನೀಲಕಂಠಯ್ಯನಂ ತನ್ನ ಮಂ
ದಿರಕೆ ಬಿಜಯಂಗೆಯ್ಯಿ ಮಜ್ಜನ ಗಂಧಾದಿ
ವರಪುಷ್ಪಮಾಲ್ಯಂಗಳಿಂದೆ ಸತ್ಕರಿಸಿ ತತ್ಚರಣಮಂ ಬೀಳ್ಕೊಟ್ಟಳು[32]

ಎಂದು ಚಿತ್ರಿಸುತ್ತಾನೆ. ಇದು ವೀರಭದ್ರ ಕವಿ ಹರಿಹರನನ್ನು ಯಥಾವತ್ತಾಗಿ ಅನುಕರಿಸಿದ್ದಾನೆ

ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಂಥ ಹಲವು ಉದಾಹರಣೆಗಳು ತಿರುಕುರುಂಪೆತೊಂಡ, ಕಾರಿಕಾಲಮ್ಮೆ, ತಿರುನಾಳ್ಪೋವ ಮುಂತಾದ ಕಥೆಗಳಲ್ಲಿ ಕಂಡುಬರುತ್ತವೆ.

## 10.7.6 ಹರಿಹರ - ಉತ್ತರ ದೇಶದ ಬಸವಲಿಂಗ ದೇಶಿಕ

ಉತ್ತರ ದೇಶದ ಬಸವಲಿಂಗ ದೇಶಿಕ ಕೂಡ ಹರಿಹರನಿಂದ ಪ್ರಭಾವಿತನಾದ ಕವಿಗಳಲ್ಲಿ ಒಬ್ಬ. ಈತನ ಕಾಲ ಸುಮಾರು ಕ್ರಿ.ಶ. 1600. ಇವನು 'ಬಸವ ಪುರಾಣದ ಕಥಾಸಾಗರ' ಕೃತಿಯನ್ನು ರಚಿಸಿದ್ದಾನೆ. ಕಥೆಯಲ್ಲಿ ಕವಿ ತನ್ನ ಕೃತಿ ಬಗೆಗೆ ಹೇಳುವಾಗ "...... ಮತ್ತೆ ವೀರ ಶೈವಾಮೃತ ಪುರಾಣ, ಆರಾಧ್ಯ ಚಾರಿತ್ರ, ಗಣಾಡಂಬರ, ಸಿಂಗಿರಾಜಯ್ಯನ ಕೃತಿ, ಶಿವತತ್ವ ಚಿಂತಾಮಣಿ, ಹರೀಶ್ವರದೇವರು ಮಾಡಿದ ರಗಳೆ, ಸಿದ್ಧರಾಮೇಶ್ವರನ ಚಾರಿತ್ರ, ಶೂನ್ಯ ಸಂಪಾದನೆ ಮೊದಲಾದವರಲ್ಲಿದ್ದ ಕಥೆಗಳನ್ನೆ ಸಂಗ್ರಹಿಸಿದೆವಲ್ಲದೆ ಕಲ್ಪನೆಯ ಕಥೆಗಳ ಹೇಳಲಿಲ್ಲ......." [33] ಎಂದು ಹೇಳುತ್ತಾನೆ. ಇದರಿಂದ ಬಸವಲಿಂಗ ದೇಶಿಕ ಹರಿಹರನಿಂದ ಪ್ರಭಾವಿತಗೊಂಡಿರುವುದು ಸ್ಪಷ್ಟವಾಗುತ್ತದೆ. ಆತ ಹೇಗೆ ಪ್ರಭಾವಿತನಾಗಿದ್ದಾನೆ ಎಂಬುದನ್ನು ದೃಷ್ಟಾಂತದ ಮೂಲಕ ನೋಡಬಹುದು.

**ಏಕಾಂತರಾಮಯ್ಯನ ಕಥೆ :** ಬಸವಲಿಂಗ ದೇಶಿಕನು ಚಿತ್ರಿಸುವ ಈ ಕಥೆಗೆ ಹರಿಹರನ ಏಕಾಂತ ರಾಮಯ್ಯನ ರಗಳೆ ಆಧಾರವಾಗಿದೆ. "ಏಕಾಂತರಾಮಯ್ಯ ಶಿವಪುರದಿಂದ ಅಬ್ಬಲೂರಿಗೆ ಬರುವಾಗ ಬಸ್ತಿಗಳನ್ನು ಕಂಡು ಲಿಂಗದ ಗುಡಿಯೆಂದು ಶರಣಾರ್ಥಿ ಎನಲು, ಜಿನ ಪ್ರತಿಮೆಗಳಂಜಿ ಇವರ ಕಡೆಗೆ ತಲೆವಾಗಿದವು. ಮತ್ತೆ ಕತ್ತಲೆಯ ನಡುವೆ ಜ್ಯೋತಿ, ಬಕದ ನಡುವೆ ಹಂಸೆ, ಕಬ್ಬಿಣದ ನಡುವೆ ಪರುಷ, ತರುಗಳ ನಡುವೆ ಚಂದನವಿರ್ಪಂತೆ ಬಸದಿಗಳ ನಡುವೆ ಬ್ರಹ್ಮೇಶ್ವರ ಗುಡಿಯಿರ್ಪುದು" [34] ಎಂದು ಕಥಾಸಾಗರದಲ್ಲಿ ಬಸವಲಿಂಗ ದೇಶಿಕ ಚಿತ್ರಿಸುತ್ತಾನೆ. ಇದೇ ಸಂದರ್ಭವನ್ನು ಹರಿಹರ -

> ಕತ್ತಲೆಯ ನಡುವೆ ಮಿನುಮಿನುಪ ಜ್ಯೋತಿಯ ತೆರದೆ
> ಸುತ್ತಿರ್ದ ಬಕದ ನಡುವಣ ಮರಾಳನ ತೆರದೆ
> ತರುಗುಲ್ಮಲತೆಗಳೊಳಗಿರ್ಪ ಚಂದನದಂತೆ
> ನೆರೆದ ಕಬ್ಬುನದೊಳಗೆ ಸಿಕ್ಕಿದ ಪರುಷದಂತೆ
> ಬಸದಿಗಳ ನಡುವಿರ್ದುದೊಂದು ದೇವಾಲಯಂ [35]

ಎಂದು ಚಿತ್ರಿಸುತ್ತಾನೆ. ಈ ಎರಡು ಪದ್ಯಗಳಲ್ಲಿ ಪದಗಳ ಜೋಡಣೆ ಬೇರೆ ಬೇರೆ ಯಾಗಿರಬಹುದು, ಆದರೆ ಅರ್ಥ ಮಾತ್ರ ಒಂದೇ. ಹರಿಹರ ಏನನ್ನು ಹೇಳಿದ್ದಾನೋ ಅದನ್ನೇ ಬಸವಲಿಂಗ ದೇಶಿಕ ತನ್ನ ಶೈಲಿಯಲ್ಲಿ ಹೇಳಿದ್ದಾನೆ. ಇದರಿಂದ ಬಸವಲಿಂಗ ದೇಶಿಕ ಹರಿಹರನಿಂದ ಪ್ರಭಾವಿತನಾಗಿದ್ದಾನೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಬಹುದು.

## 10.7.7 ಹರಿಹರ – ತ್ರಿಭುವನ ತಾತ

ತ್ರಿಭುವನ ತಾತನ ಕಾಲ ಸುಮಾರು ಕ್ರಿ.ಶ. 1200. ಇವನು 'ಗುರು ರಗಳೆ' ಎಂಬ ಕೃತಿಯೊಂದನ್ನು ಬರೆದಿದ್ದಾನೆ. ಈ ಕೃತಿಯು ಸಂಪೂರ್ಣವಾಗಿ ಹರಿಹರನ ಶೈಲಿಯಲ್ಲಿದೆ. ಹರಿಹರನಂತೆಯೇ ತನ್ನ ಎಲ್ಲ ರಗಳೆಗಳಲ್ಲಿಯೂ ಭಕ್ತಿಗೆ ಪ್ರಾಧಾನ್ಯತೆ ನೀಡಿದ್ದಾನೆ. ಹರಿಹರನಲ್ಲಿ "ಶಿವಭಕ್ತನೊಬ್ಬ ಭಕ್ತಭಾವದಿಂದ ಶಿವನನ್ನು ಸ್ತುತಿಸುತ್ತಿರುವುದು, ಆತನನ್ನು ಪರೀಕ್ಷಿಸಲೆಂದು ಶಿವ ಪ್ರಯತ್ನಿಸುವುದು, ಅದರಲ್ಲಿ ಭಕ್ತ ಒಂದಲ್ಲ ಒಂದು ರೀತಿಯಲ್ಲಿ ಉತ್ತೀರ್ಣವಾಗುವುದು, ಅಂತಿಮವಾಗಿ ಶಿವ ಆತನನ್ನು ಕೈಲಾಸಕ್ಕೆ ಕರೆದೊಯ್ಯುವುದು"[36] ಈ ಚಿತ್ರಗಳು ಪ್ರತಿಯೊಂದು ರಗಳೆಗಳಲ್ಲಿಯೂ ವಿನ್ಯಾಸಗೊಂಡಿವೆ. ಇದೇ ವಿನ್ಯಾಸವನ್ನು ತ್ರಿಭುವನ ತಾತ ಕೂಡ ಅನುಸರಿಸಿದ್ದಾನೆ. ಇವನನ್ನು ಕುರಿತು ರಂ. ಶ್ರೀ ಮುಗಳಿಯವರು "ಆತನ ರಗಳೆಗಳಲ್ಲಿ ಹರಿಹರನ ರೀತಿಯ ಪುನರುಕ್ತಿಯಿದೆ, ರಚನಾ ಶಕ್ತಿಯಿದೆ"[37] ಎನ್ನುತ್ತಾರೆ. ಇದರಿಂದಾಗಿ ತ್ರಿಭುವನ ತಾತ ಕೂಡ ಹರಿಹರನಿಂದ ಪ್ರಭಾವಿತನಾಗಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ.

## 10.7.8 ಹರಿಹರ – ಭೀಮಕವಿ

ಭೀಮಕವಿ ಹದಿನಾಲ್ಕನೆ ಶತಮಾನದವನು. 'ಬಸವಪುರಾಣ', 'ಭೀಮಕವೀಶ್ವರ ರಗಳೆ', 'ಭೃಂಗಿ ದಂಡಕ' ಕೃತಿಗಳನ್ನು ರಚಿಸಿದ್ದಾನೆ. ಷಟ್ಪದಿ ಕಾವ್ಯದ ಪ್ರಮುಖ ಕವಿಯಾದ ಈತ ಹರಿಹರನನ್ನು ಕುರಿತಂತೆ -

> **ಸರಸ ಮೃದು ಮಧುರೋಪಮೆಗಳಂ**
> **ಕುರಿಸೆ ವಸ್ತುಕವರ್ಣಕಂಗಳ**
> **ನೆರಪಿ ಹರನಂ ಹರಣಂಗಳನ್ನೈದೆ ಕೀರ್ತಿಸಿದ**
> **ಧರೆಗುಭಯ ಕವಿ ಶರಭಭೇರುಂ**
> **ಡರಸು ಕವಿ ಹರಿಹರನ್ ತದ್**
> **ವರಸುತನ ರಾಘವನ ಕೃಪೆಯಿಂ ರಚಿಸುವೆಂ ಕೃತಿಯ**[38]

ಎಂಬ ಸ್ತುತಿ ಪದ್ಯವನ್ನು ಬರೆದಿದ್ದಾನೆ. ಹಾಗೆ ಸ್ತುತಿಸಿದ್ದರೂ ಹರಿಹರ ಕವಿಯಿಂದ ತಾನು ಪ್ರಭಾವಿತನಾದ ಬಗೆಗೆ ಏನನ್ನೂ ಹೇಳುವುದಿಲ್ಲ. ಆದರೆ ಬಸವಪುರಾಣದ ಮೂಲ ಪ್ರೇರಣೆಯನ್ನು ಕುರಿತಂತೆ ಆ ಗ್ರಂಥದ ಪೀಠಿಕಾಸಂಧಿಯಲ್ಲಿ, ಒಮ್ಮೆ ತಾನು ಶಿವಯೋಗ ನಿದ್ರೆಯಲ್ಲಿರುವಾಗ ಪಾಲ್ಕುರಿಕೆ ಸೋಮನಾಥನು ಕನಸಿನಲ್ಲಿ ಬಂದು ಬಸವಚರಿತ್ರೆಯನ್ನು ಬರೆಯಲು ಅಭಯವಿತ್ತ ಬಗೆಗೆ ತಿಳಿಸುವ ಮೂಲಕ ಪಾಲ್ಕುರಿಕೆ ಸೋಮನಾಥನಿಂದ ಪ್ರಭಾವಿತನಾದುದನ್ನು ತಿಳಿಸುತ್ತಾನೆ. ಹಾಗಾಗಿ ಇಲ್ಲಿ ಹರಿಹರನ ಪ್ರಭಾವವನ್ನು ನಿರೀಕ್ಷಿಸುವಂತಿಲ್ಲ.

'ಭೀಮಕವೀಶ್ವರ ರಗಳೆ'ಯನ್ನು ಕವಿ ಹರಿಹರನ ರೀತಿಯಲ್ಲೇ ರಚಿಸಿರುವಂತೆ

ೀರುತ್ತದೆ. ಆದರೆ ಆಧಾರ ಸಹಿತ ಹೇಳಲು ಸಾಧ್ಯವಿಲ್ಲ. ಚಕ್ರಪಾಣಿ ರಂಗನಾಥನ ರಗಳೆಯನ್ನು ನುಸರಿಸಿ ಬರೆದಿದ್ದಾನೆ ಎನ್ನಲೂ ಆಧಾರಗಳಿಲ್ಲ. ಹಾಗಾಗಿ ಇದು ಭೀಮಕವಿಯ ಸ್ವತಂತ್ರ ತನೆಯೇ ಇರಬೇಕೆನಿಸುತ್ತದೆ.

## .7.8 ಹರಿಹರ – ಪಾಲ್ಕುರಿಕೆ ಸೋಮನಾಥ

ಇವನ ಕಾಲ ಸುಮಾರು ಕ್ರಿ.ಶ. 1300. ಇವನು 'ಬಸವ ಪುರಾಣಮು', 'ಸದ್ಗುರು ರಗಳೆ'. ನ್ನಬಸವರ ರಗಳೆ', 'ಗಂಗೋತ್ಪತ್ತಿ ರಗಳೆ', 'ಶೀಲ ಸಂಪಾದನೆ, 'ಗಣಸಹಸ್ರನಾಮ' ಮುಂತಾದ ತಿಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ' ಬಸವ ಪುರಾಣಮು' ಬಿಟ್ಟರೆ ಉಳಿದೆಲ್ಲವೂ ನ್ನಡದಲ್ಲಿಯೇ ಇವೆ. ಇವನ 'ಬಸವ ಪುರಾಣಮು' ಕೃತಿ ಭೀಮಕವಿಯ ಬಸವ ಪುರಾಣಕ್ಕೆ ುಖ್ಯ ಆಕರ ಗ್ರಂಥವಾಗಿದೆ. ಈತನು ತನ್ನ ರಗಳೆ ಕೃತಿಗಳಿಗೆ ಆಕರವನ್ನು ಎಲ್ಲಿಂದ ಗೆದುಕೊಂಡ ಎಂಬುದು ಸ್ಪಷ್ಟವಾಗಿಲ್ಲ. ಹರಿಹರನಿಂದ ತೆಗೆದುಕೊಂಡಿದ್ದಾನೆ ಎಂಬುದಕ್ಕೂ ಷ್ಟ ಆಧಾರಗಳಿಲ್ಲ.

ಎಚ್. ದೇವೀರಪ್ಪ ಅವರಿಗೆ ಪಾಲ್ಕುರಿಕೆ ಸೋಮನಾಥ ಹರಿಹರನಿಂದ ಪ್ರಭಾವಿತ ಗಿಲ್ಲ ಎಂಬ ವಿಚಾರದಲ್ಲಿ ಸಮ್ಮತಿ ಇದ್ದಂತೆ ಕಾಣುವುದಿಲ್ಲ. ಅವರು ಹಲವು ಆಧಾರಗಳನ್ನು ಡುವ ಮೂಲಕ ಪಾಲ್ಕುರಿಕೆ ಸೋಮನಾಥ ಹರಿಹರನಿಂದ ಪ್ರಭಾವಿತನಾಗಿದ್ದಾನೆಂದು ತಿಪಾದಿಸುತ್ತಾರೆ. ಅವರು "ಹರಿಹರನಿಗಿಂತ ಒಂದೆರಡು ತಲೆಮಾರು ಈಚಿನವ ನಾದ ಲ್ಕುರಿಕೆ ಸೋಮನಾಥನು ಬಸವಪುರಾಣ (ತೆಲುಗು)ವನ್ನು ರಚಿಸಲು ಹಲವು ಮೂಲಗಳಿಂದ ಮಗ್ರಿ ಸಂಗ್ರಹ ಮಾಡಿಕೊಂಡಿದ್ದ. ಅವುಗಳಲ್ಲಿ ಬಸವರಾಜದೇವರ ರಗಳೆಯೂ ಒಂದು. ಲ್ಲಿ ಬರುವ 'ಭಂಡಾರದ ಪವಾಡ'ಕ್ಕೂ ಈ ಕಾವ್ಯದ ಪ್ರಸಕ್ತ ಭಾಗಕ್ಕೂ ಬಹುಮಟ್ಟಿನ ೋಲಿಕೆಯುಂಟು. 'ಒಡೆಯರು ತಮ್ಮೊಡವೆಯ ತಾವು ಕೊಂಡರು' ಎಂಬ ವಾದ ಎರಡು ವ್ಯಗಳಲ್ಲಿಯೂ ಉಂಟು. 'ಬದನೆಕಾಯಿಗಳು ಲಿಂಗಗಳಾದ'ಪವಾಡ ಪ್ರಕರಣ ಎರಡು ವ್ಯಗಳಲ್ಲಿಯೂ ಇದ್ದು, ಒಂದೊಂದಕ್ಕೂ ಆಕಸ್ಮಿಕವೆಂದು ತಳ್ಳಿಹಾಕಲಾಗದ ಹೋಲಿಕೆಗಳಿವೆ. ಬೋಳಿನಾಗಿದೇವನ ಕಥೆಯು 'ರಗಳೆ' ಮತ್ತು 'ಪುರಾಣ' ಎರಡರಲ್ಲಿಯೂ ಉಂಟು. ಡರಲ್ಲಿಯೂ ಬಸವಣ್ಣನು ಶಿವಭಕ್ತನಾದ ನಾಗಿದೇವನನ್ನು ದಂಡಿಗೆಯಿಂದಿಳಿಸಿಕೊಂಡು ುತ್ತಾನೆ. ಅಲ್ಲಿ ನಾಗಿಮಯ್ಯನ ಮೈಯಿಂದ ಹಾಲು ಸುರಿಸುವ ಪವಾಡ ಮೆರೆದ ಬಳಿಕ ಆತನನ್ನು ಯ ಮೇಲೆ ಕುಳ್ಳಿರಿಸಿ ಮಹಾಮನೆಗೆ ಕರೆದೊಯ್ದು ಸತ್ಕರಿಸುತ್ತಾನೆ"[39] ಎಂಬ ಅಭಿಪ್ರಾಯವನ್ನು ಕ್ತಪಡಿಸುತ್ತಾರೆ. ದೇವೀರಪ್ಪನವರ ಈ ಅಭಿಪ್ರಾಯವನ್ನು ಒಪ್ಪುವುದಾದರೆ ಪಾಲ್ಕುರಿಕೆ ೋಮನಾಥ ಹರಿಹರನಿಂದ ಪ್ರಭಾವಿತನಾಗಿದ್ದಾನೆ ಎಂಬುದು ಖಚಿತವಾಗುವುದು.

## .7.9 ಹರಿಹರ - ಷಡಕ್ಷರದೇವ

ಇವನ ಕಾಲ ಸುಮಾರು ಕ್ರಿ.ಶ. 1655. 'ರಾಜಶೇಖರ ವಿಳಾಸ', 'ವೃಷಭೇಂದ್ರ ವಿಜಯ', ರ ಶಂಕರ ವಿಳಾಸ' ಎಂಬ ಮೂರು ಕೃತಿಗಳನ್ನು ಈತ ರಚಿಸಿದ್ದಾನೆ. ಈ ಮೂರು ಕೃತಿಗಳಿಗೆ ುವಾಗಿ 'ಭಾವಚಿಂತಾರತ್ನ', 'ಬಸವ ಪುರಾಣ', 'ಕುಮಾರವ್ಯಾಸ ಭಾರತ' - ಇವು ಕಾವ್ಯ

ವಸ್ತುವನ್ನು ಒದಗಿಸಿವೆ. ಹಾಗಾಗಿ ಷಡಕ್ಷರದೇವನ ಮೇಲೆ ಹರಿಹರನ ಪ್ರಭಾವವನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೆ ಷಡಕ್ಷರದೇವನು -

**ಧರೆಯೊಳ್ ಮೇಣ್ಪುಟ್ಟಿ ಪುಟ್ಟುತ್ತುರುಳ್ವ ನರರಮೇಲುರ್ಬಿ ಕರ್ಬಂಗಳಂಬಿ**
**ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟುಪೋದರ್**
**ಹರಿದೇವಂ ದೇವದೇವೋತ್ತಮನ ಶರಣಂ ಪಾಡಿ ಕೈವಲ್ಯ ಲಕ್ಷ್ಮೀ**
**ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್**[40]

ಎಂಬೊಂದು ಪದ್ಯದಲ್ಲಿ ಹರಿಹರದೇವನ ಬಗೆಗೆ ಭಕ್ತಿಯಿಂದ ಬರೆಯುತ್ತಾನೆ. ಇದು ಷಡಕ್ಷರದೇವನಿಗೆ ಹರಿಹರನ ಬಗ್ಗೆ ಇದ್ದ ನಂಬಿಕೆಯನ್ನು ವ್ಯಕ್ತಪಡಿಸುತ್ತದೆ. ಮೇಲಿನ ಈ ಎಲ್ಲಾ ಉದಾಹರಣೆಗಳು ಹರಿಹರ ಕವಿ ತನ್ನ ಆನಂತರದಲ್ಲಿ ಬಂದ ಕನ್ನಡ ಕವಿಗಳ ಮೇಲೆ ಯಾವ ರೀತಿಯ ಪ್ರಭಾವ ಬೀರಿದ್ದಾನೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ವೀರಶೈವ ಕವಿಗಳಂತು ಹರಿಹರನಿಂದ ಯಥೇಚ್ಛವಾಗಿ ಪ್ರಭಾವಿತರಾಗಿದ್ದಾರೆ. ಬಹುಶ: ಹರಿಹರನಷ್ಟು ಪ್ರಭಾವ ಬೀರಿದ ಕವಿ ಕನ್ನಡ ಸಾಹಿತ್ಯದಲ್ಲಿ ಮತ್ತೊಬ್ಬನಿಲ್ಲ ಎಂದು ಕಾಣಿಸುತ್ತದೆ ಎಂದೇ ಹೇಳಬೇಕು.

ಒಟ್ಟಾರೆ ಹೇಳುವುದಾದರೆ ಹರಿಹರನ ಸಾಹಿತ್ಯಕ ಸಾಧನೆ ಅಪೂರ್ವ ಹಾಗೂ ಅಸಾಧಾರಣವಾದದ್ದು. ಯಾರೂ ಅದನ್ನು ಬದಿಗಿಟ್ಟು ನೋಡಲು ಸಾಧ್ಯವಿಲ್ಲ. ಏಕೆಂದರೆ ಈಗಾಗಲೇ ಪ್ರಬಲವಾಗಿ ಬೇರೂರಿದ್ದ ಒಂದು ಸಾಹಿತ್ಯ ಪ್ರಕಾರವನ್ನು ಸಂಪೂರ್ಣವಾಗಿ ಬದಲಾವಣೆ ಮಾಡಿ ಹೊಸ ಕಾವ್ಯವನ್ನು ಬೆಳಕಿಗೆ ತರುವುದು ಎಲ್ಲರಿಂದಲೂ ಆಗುವಂಥ ಕೆಲಸವಲ್ಲ. ಹರಿಹರನಂತಹವರು ಮಾತ್ರ ಅಂಥ ಕಾರ್ಯವನ್ನು ನಿರ್ವಹಿಸಬಲ್ಲರಷ್ಟೆ. ಅದನ್ನು ಹರಿಹರ ಸಾಧಿಸಿ ತೋರಿದ್ದಾನೆ.

* * * * *

## ಅಡಿ ಟಿಪ್ಪಣಿಗಳು

1. ಹರಿಹರ ವಿಚಾರ ಸಂಕಿರಣ : ಕನ್ನಡ ಸಾಹಿತ್ಯ ಪರಿಷತ್ತು : ಪುಟ 147
2. ಹರಿಹರ ವಿಚಾರ ಸಂಕಿರಣ : ಕನ್ನಡ ಸಾಹಿತ್ಯ ಪರಿಷತ್ತು : ಪುಟ 179
3. ಜಿ. ಎಸ್. ಶಿವರುದ್ರಪ್ಪ : ಸಾಹಿತ್ಯ ಸಮೀಕ್ಷೆ : ಪುಟ : 72
4. ಜಿ. ಎಸ್. ಶಿವರುದ್ರಪ್ಪ : ಸಾಹಿತ್ಯ ಸಮೀಕ್ಷೆ : ಪುಟ : 72
5. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 88
6. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 88

6. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 177
7. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 177
8. ಸ. ಸ. ಮಾಳವಾಡ : ಹರಿಹರನ ರಗಳೆಗಳಲ್ಲಿ ಜೀವನ ದರ್ಶನ : ಪುಟ 77
9. ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು : ಪುಟ 32
10. ಬಿ. ಸಿ ಜವಳಿ ಮತ್ತು ಪ್ರಿ. ಶಾಂತರಸ : ರಸಿಕ ಚಕ್ರಿ ಹರಿಹರದೇವ : ಪುಟ 31
11. ಬಿ. ಸಿ ಜವಳಿ ಮತ್ತು ಪ್ರಿ. ಶಾಂತರಸ : ರಸಿಕ ಚಕ್ರಿ ಹರಿಹರದೇವ : ಪುಟ 31
12. ಬಿ. ಸಿ ಜವಳಿ ಮತ್ತು ಪ್ರಿ. ಶಾಂತರಸ : ರಸಿಕ ಚಕ್ರಿ ಹರಿಹರದೇವ : ಪುಟ 31
13. ಬಸವನಾಳ ಶಿವಲಿಂಗಪ್ಪ : ಹಂಪೆಯ ಹರಿಹರ ದೇವ ವಿರಚಿತ ಪಂಪಾಶತಕ ಮತ್ತು ರಕ್ಷಾಶತಕ : ಪದ್ಯ 82 : ಪುಟ 32
14. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು ಒಂದು ಸಂಖ್ಯಾ ನಿರ್ಣಯ : ಪುಟ 507-508
15. ಟಿ. ಎಸ್. ವೆಂಕಣ್ಣಯ್ಯ, ಡಿ. ಎಲ್. ನರಸಿಂಹಾಚಾರ್ : ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯ : ಪುಟ 11 : ಸಂಧಿ 1 : ಪದ್ಯ : 33
16. ಟಿ. ಎಸ್. ವೆಂಕಣ್ಣಯ್ಯ, ಡಿ. ಎಲ್. ನರಸಿಂಹಾಚಾರ್ : ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯ : ಪುಟ 26 : ಸಂಧಿ 2 : ಪದ್ಯ : 22
17. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ಪುಟ 9
18. ಪ್ರ. ಸಂ. : ಹಾ.ಮಾ.ನಾ. : ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 4 : ಪುಟ 1383
19. ಆರ್. ಸಿ. ಹಿರೇಮಠ, ಬಿ. ಬಿ. ಹೆಂಡಿ : ದೀಕ್ಷಾ ಬೋಧೆ : ಪುಟ 3
20. ಆರ್. ಸಿ. ಹಿರೇಮಠ, ಬಿ. ಬಿ. ಹೆಂಡಿ : ದೀಕ್ಷಾ ಬೋಧೆ : ಪುಟ 4
21. ಆರ್. ಸಿ. ಹಿರೇಮಠ, ಬಿ. ಬಿ. ಹೆಂಡಿ : ದೀಕ್ಷಾ ಬೋಧೆ : ಪುಟ 8
22. ಆರ್. ಸಿ. ಹಿರೇಮಠ, ಬಿ. ಬಿ. ಹೆಂಡಿ : ದೀಕ್ಷಾ ಬೋಧೆ : ಪುಟ 8
23. ಆರ್. ಸಿ. ಹಿರೇಮಠ, ಬಿ. ಬಿ. ಹೆಂಡಿ : ದೀಕ್ಷಾ ಬೋಧೆ : ಪುಟ 8
24. ಸಂ : ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಪುಟ 3
25. ಎಸ್. ಬಸಪ್ಪ : ಲಕ್ಕಣ್ಣದಂಡೇಶ ವಿರಚಿತ ಶಿವತತ್ವ ಚಿಂತಾಮಣಿ : ಪುಟ 436-437 : ಸಂಧಿ 38 : ಪದ್ಯ 237

26. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 258
27. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 261
28. ಆರ್. ಸಿ. ಹಿರೇಮಠ : ಕವಿ ಚಕ್ರವರ್ತಿ ಸುರಂಗಕೃತ ತ್ರಿಷಷ್ಠಿ ಪುರಾತನ ಚಾರಿತ್ರಂ : ಪುಟ 708 : ಪದ್ಯ 16
29. ಆರ್. ಸಿ. ಹಿರೇಮಠ : ಕವಿ ಚಕ್ರವರ್ತಿ ಸುರಂಗಕೃತ ತ್ರಿಷಷ್ಠಿ ಪುರಾತನ ಚಾರಿತ್ರಂ : ಪುಟ 708 : ಪದ್ಯ 17
30. ಶಾಂತರಸ : ವೀರಭದ್ರ ಕವಿ ವಿರಚಿತ ಅರುವತ್ತ ಮೂವರು ಪುರಾತನರು : ಪದ್ಯ 17 : ಪುಟ 5
31. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವ ಕೃತ ಪುರಾತನರ ರಗಳೆಗಳು : ಪುಟ 11
32. ಶಾಂತರಸ : ವೀರಭದ್ರ ಕವಿ ವಿರಚಿತ ಅರುವತ್ತ ಮೂವರು ಪುರಾತನರು : ಪದ್ಯ 4 : ಪುಟ 34
33. ಎಸ್. ಉಮಾಪತಿ : ಉತ್ತರ ದೇಶದ ಬಸವಲಿಂಗ ವಿರಚಿತ ಬಸವೇಶ್ವರ ಪುರಾಣ ಕಥಾ ಸಾಗರ : ಪುಟ 245
34. ಎಸ್. ಉಮಾಪತಿ : ಉತ್ತರ ದೇಶದ ಬಸವಲಿಂಗ ವಿರಚಿತ ಬಸವೇಶ್ವರ ಪುರಾಣ ಕಥಾ ಸಾಗರ : ಪುಟ 74
35 ಎಂ. ಎಸ್. ಸುಂಕಾಪುರ : ಮಹಾಕವಿ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಪುಟ 339
36. ಪ್ರ. ಸಂ. : ಹಾ.ಮಾ.ನಾ. : ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 4 : ಪುಟ 1391
37. ಪ್ರ. ಸಂ. : ಹಾ.ಮಾ.ನಾ. : ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 4 : ಪುಟ 1391
38. ಇಷ್ಟಲಿಂಗಪ್ಪ ಸಿದ್ದರಾಮಪ್ಪ ಪಾಪಟಿ, ಕೊಟ್ಟೂರೇಶ ಮಲ್ಲೇಶಪ್ಪ ಬಂದಮ್ಮನವರ, ವೀರಭದ್ರಪ್ಪ ಮಹಾಲಿಂಗಪ್ಪ ಮಲ್ಲಾಬಾದಿ : ಭೀಮ ಕವಿಯ ಬಸವ ಪುರಾಣ ನೂತನ ಜನಪ್ರಿಯ ಆವೃತ್ತಿ : ಪದ್ಯ 11 : ಪುಟ 2
39. ಸಂ. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಪುಟ 97
40. ಆರ್. ಸಿ. ಹಿರೇಮಠ, ಎಂ. ಎಸ್. ಸುಂಕಾಪುರ : ರಾಜಶೇಖರ ವಿಳಾಸಂ : ಪದ್ಯ 19 : ಪುಟ 4

# ಉಪಸಂಹಾರ

ಮೇಲುನೋಟಕ್ಕೆ ನೋಡಿದರೆ ಹರಿಹರನ ರಗಳೆಗಳು ಬಹಳ ಮಹತ್ವವುಳ್ಳವು ಎಂದೇನೂ ಅನಿಸುವುದಿಲ್ಲ. ಭಕ್ತಿಯ ಮಹತ್ವವನ್ನು ತಿಳಿಸುವ ಉದ್ದೇಶದಿಂದ ಕವಿ ಅವುಗಳನ್ನು ಬೇರೆ ಬೇರೆ ರೀತಿಯಲ್ಲಿ ಬರೆದಿದ್ದಾನೆ ಎನಿಸುತ್ತದೆ. ಆದರೆ ಸ್ವಲ್ಪ ಕುತೂಹಲದಿಂದ ಇಲ್ಲವೆ ಆಸಕ್ತಿವಹಿಸಿ ನೋಡಿದಾಗ ಆ ಬಗೆಯ ಅಭಿಪ್ರಾಯ ಯಾರಿಗೂ ಬರಲಾರದು. ಏಕೆಂದರೆ ಸಾಹಿತ್ಯಕವಾಗಿ ಅವುಗಳಿಗೆ ಅವುಗಳದ್ದೇ ಆದ ಮೌಲ್ಯ ಹಾಗೂ ಮಹತ್ವ ಇದೆ. ಅವನು ಕಾವ್ಯಕ್ಕೆ ಆರಿಸಿಕೊಂಡ ವಸ್ತು, ಭಾಷೆ, ಉದ್ದೇಶ ಮತ್ತು ಶೈಲಿ ಹೊಸದು. ಎಲ್ಲವೂ ಅವರೆಗಿನ ಸಾಹಿತ್ಯಕ್ಕಿಂತ ವಿನೂತನವಾದದ್ದು. ಅವನ ರಗಳೆಗಳಿಗೆ ಪ್ರತಿಯೊಬ್ಬರನ್ನು ಸೆಳೆದುಕೊಳ್ಳಬಲ್ಲ ಶಕ್ತಿಯಿದೆ. ಪ್ರಸ್ತುತ ಅಧ್ಯಯನದಲ್ಲಿ ರಗಳೆಗಳ ಸಾಹಿತ್ಯಕ ಮಹತ್ವವನ್ನು ಗುರುತಿಸುವ ಒಂದು ಪ್ರಯತ್ನವಿದೆ.

ಮೊದಲನೆ ಅಧ್ಯಾಯ ನಿಬಂಧದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತಂತಿದೆ. ಪ್ರಸ್ತುತ ಅಧ್ಯಯನಕ್ಕೆ ರಗಳೆಗಳನ್ನು ಆಯ್ಕೆ ಮಾಡಿಕೊಂಡಿದ್ದು ಏಕೆ? ಎಷ್ಟು ರಗಳೆಗಳು ಹರಿಹರನವು? ಅವುಗಳಲ್ಲಿ ಎಷ್ಟು ರಗಳೆಗಳು ಅಧ್ಯಯನದ ವ್ಯಾಪ್ತಿಗೆ ಬರುತ್ತವೆ ಎಂಬ ವಿಚಾರಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

ಹರಿಹರನ ರಗಳೆಗಳಿಗೆ ಅವುಗಳದ್ದೇ ಲಕ್ಷಣಗಳಿವೆ. ಪ್ರತಿ ರಗಳೆಯಲ್ಲೂ ಒಂದು ಸಿದ್ಧಮಾದರಿಯಿದ್ದು ಅದರ ಅಡಿಯಲ್ಲಿಯೇ ಎಲ್ಲಾ ರಗಳೆಗಳನ್ನು ಬರೆದಿದ್ದಾನೆ. ಅಲ್ಲಿ ಅತಿಮಾನುಷ ಚಿತ್ರಗಳ ಬಳಕೆಯಾಗಿದೆ. ಕೈಲಾಸದಷ್ಟೆ ಮಹತ್ವ ಮರ್ತ್ಯಕ್ಕೂ ಇದೆ. ಪ್ರತಿಯೊಬ್ಬ ಭಕ್ತನೂ ಶಿವನಿಂದ ಪರೀಕ್ಷೆಗೆ ಒಳಪಡುತ್ತಾನೆ. ಪ್ರತೀ ರಗಳೆಗಳು ಭಕ್ತಿಯ ವರ್ಣನೆಯೊಂದಿಗೆ ಆರಂಭವಾಗುತ್ತವೆ. ಶಿವನೇ ಕೆಲವು ಸನ್ನಿವೇಶಗಳನ್ನು ಸೃಷ್ಟಿಸಿ ಕಥಾನಾಯಕನ ಮಹಿಮೆಯನ್ನು ಪ್ರದರ್ಶಿಸುತ್ತಾನೆ. ಭಕ್ತನಾದವನು ಕೈಲಾಸದಲ್ಲಿ ತಪ್ಪು ಮಾಡಿ ಪ್ರಾಯಶ್ಚಿತ್ತಕ್ಕಾಗಿ ಭೂಮಿಗೆ ಬರುತ್ತಾನೆ. ಭೂಮಿಯಲ್ಲಿ ಸಾಧನೆಗೈದು ಮತ್ತೆ ಕೈಲಾಸಕ್ಕೆ ಹೊರಡುತ್ತಾನೆ. ಇಲ್ಲವೆ, ಭೂಮಿಯಲ್ಲೇ ನಿರಂತರ ಸಾಧನೆಗೈದು ಕೈಲಾಸಕ್ಕೆ ಹೋಗುತ್ತಾನೆ. ಒಟ್ಟಿನಲ್ಲಿ ಶಿವಶರಣರ ಚರಿತ್ರೆಯನ್ನಲ್ಲದೆ ಅನ್ಯ ಚಿತ್ರಣಕ್ಕೆ ರಗಳೆಗಳಲ್ಲಿ ಮಹತ್ವವಿರುವುದಿಲ್ಲ. ಈ ಬಗೆಯ ಸಾಮಾನ್ಯ ಲಕ್ಷಣಗಳನ್ನು ಇಟ್ಟುಕೊಂಡು ಕವಿ ಪ್ರತಿಯೊಂದು ರಗಳೆಯನ್ನು ಬರೆದಿದ್ದಾನೆ. ಇವು ಕಥೆಯಲ್ಲಿ ಹೇಗೆ ಸಂರಚನೆಗೊಂಡಿವೆ ಎಂಬುದನ್ನು 'ರಗಳೆಗಳ ಸಾಮಾನ್ಯ ಸ್ವರೂಪ' ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

ಮೂರನೆ ಅಧ್ಯಾಯ ರಗಳೆಗಳ ಕಥಾ ವಸ್ತುವಿಗೆ ಸಂಬಂಧಿಸಿದೆ. ಹರಿಹರನಿಗೂ ಹಿಂದೆ ಬಳಕೆಯಲ್ಲಿದ್ದ ಚಂಪೂ ಸಾಹಿತ್ಯದಲ್ಲಿ ಉದಾತ್ತವಾದದ್ದು ಮಾತ್ರವೇ ಕಾವ್ಯವಸ್ತುವಾಗಬಲ್ಲದು ಎಂಬ ಧೋರಣೆ ಕಂಡುಬರುತ್ತದೆ. ಆದರೆ ಹರಿಹರ ಪ್ರಾಚೀನರ ಈ ಧೋರಣೆಗೆ ವಿರುದ್ಧವಾಗಿ

ನಿಂತವನು. ಭಕ್ತಿಗೆ ಹೆಚ್ಚಿನ ಮಹತ್ವವನ್ನು ನೀಡಿ, ಭಕ್ತಿಯುಳ್ಳ ಯಾರೇ ಆಗಲಿ ಕಾವ್ಯಕ್ಕೆ ಯೋಗ್ಯ ಎಂದು ನಂಬಿದವನು. ಹಾಗಾಗಿ ಹಲವು ಶರಣರನ್ನು ಕುರಿತು ಆತ ಕಾವ್ಯ ರಚಿಸಿದ್ದಾನೆ. ಅವುಗಳಲ್ಲದೆ ಇತರ ರಗಳೆಗಳೂ ಇವೆ. ಇವೆಲ್ಲವುಗಳನ್ನು ಪುರಾತನರ, ನೂತನರ ಮತ್ತು ಸಂಕೀರ್ಣ ರಗಳೆಗಳು ಎಂದು ವಿಭಾಗಿಸಿ, ಪ್ರತೀ ವಿಭಾಗದ ಕಥಾವಸ್ತುವಿನ ಬಗೆಗೆ ಆ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅದಕ್ಕೆ ಮೊದಲು ಪಂಪಯುಗದ ಮತ್ತು ವಚನಯುಗದ ಕಥಾವಸ್ತುವಿನ ಬಗೆಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

ನಾಲ್ಕನೆ ಅಧ್ಯಾಯದಲ್ಲಿ ಹರಿಹರನ ಕಥೆಗಾರಿಕೆಯನ್ನು ಗಮನಿಸಲಾಗಿದೆ. ಪ್ರಾಚೀನರಿಗೆ ಹೋಲಿಸಿದರೆ ಹರಿಹರನ ಕಥೆಗಾರಿಕೆ ವಿಶಿಷ್ಟವಾದದ್ದು. ಆತ ಹಿಂದಿದ್ದ ಸಾಹಿತ್ಯವನ್ನೇ ಬೇರೆ ರೀತಿಯಲ್ಲಿ ಬಳಸಿಕೊಳ್ಳುತ್ತಾನೆ. ಚಂಪೂವಿನಲ್ಲಿದ್ದ ಕಂದವೃತ್ತಗಳನ್ನು ರಗಳೆಯಲ್ಲಿ ಬಳಸಿಕೊಂಡಿದ್ದಾನೆ. ಆದರೆ ಹಾಗೆ ಬಳಸಿಕೊಳ್ಳುವಾಗ ಒಂದು ಮಿತಿಯನ್ನು ಹಾಕಿಕೊಂಡಿದ್ದಾನೆ. ಚಂಪೂವಿನಲ್ಲಿ ಬರುವಂತೆಯೇ ಗದ್ಯವನ್ನು ಬಳಸಿಕೊಂಡಿದ್ದಾನೆ. ಆದರೆ ಆ ಗದ್ಯದಲ್ಲೂ ವಿಶಿಷ್ಟತೆಯನ್ನು ಮೆರೆದಿದ್ದಾನೆ. ಕಾವ್ಯದ ಸರಳತೆ ಹಾಗೂ ನಿರರ್ಗಳತೆಗೆ ಹೆಚ್ಚು ಒತ್ತು ಕೊಟ್ಟಿದ್ದಾನೆ. ಯಾವುದೇ ಸನ್ನಿವೇಶ ಅಥವಾ ಘಟನೆಯನ್ನಾಗಲಿ ಕಲಾತ್ಮಕವಾಗಿ ಕಟ್ಟಿಕೊಡುತ್ತಾನೆ. ಕಾವ್ಯದ ಸಹಜ ಸೌಂದರ್ಯಕ್ಕೆ ಪ್ರಾಮುಖ್ಯತೆ ನೀಡಿ ಅನಗತ್ಯವಾದದ್ದನ್ನು ಕಾವ್ಯದಲ್ಲಿ ತರದೆ ಭಕ್ತಿ ಹಾಗೂ ತನ್ಮಯತೆಗೆ ಹೆಚ್ಚು ಆದ್ಯತೆ ನೀಡಿದ್ದಾನೆ. ಏಕಾಗ್ರತೆಯನ್ನು ಕಾಪಾಡಿಕೊಂಡಿದ್ದಾನೆ. ಈ ಕಥೆಗಾರಿಕೆ ಹರಿಹರನ ರಗಳೆಗಳಲ್ಲಿ ವಿಶಿಷ್ಟವಾಗಿದ್ದು. ಇವು ಕಥೆಯೊಳಗೆ ಹೇಗೆ ಸೇರಿಕೊಂಡಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಐದನೆ ಅಧ್ಯಾಯ ಪುರಾತನರ ರಗಳೆಗಳನ್ನು ಕುರಿತಂತೆ ಇದೆ. ಈ ರಗಳೆಗಳ ಸಾಲಿನಲ್ಲಿ ಸುಮಾರು ಅರುವತ್ತಮೂರುಪುರಾತನರ ಶರಣರು ಬರುತ್ತಾರೆ. ಇವುಗಳಲ್ಲಿ ಬಹಳ ಮುಖ್ಯವಾದದ್ದು 'ನಂಬಿಯಣ್ಣನ ರಗಳೆ'. ಇದನ್ನು ಕುರಿತಂತೆ ವಿಸ್ತಾರವಾಗಿ, ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿದೆ. ಇದನ್ನು ಬಿಟ್ಟರೆ ಇನ್ನುಳಿದ ರಗಳೆಗಳಲ್ಲಿ ಕೆಲವನ್ನು ಮಾತ್ರ ಆಯ್ಕೆ ಮಾಡಿಕೊಂಡು ಅವುಗಳ ವಸ್ತು, ಶೈಲಿ ಹಾಗೂ ಉದ್ದೇಶದ ದೃಷ್ಟಿಯಿಂದ, ಅವು ಹೇಗೆ ಮಹತ್ವವುಳ್ಳವುಗಳಾಗಿವೆ ಎಂಬುದನ್ನು ಗಮನಿಸಲಾಗಿದೆ. ಕೊನೆಯಲ್ಲಿ ಇಡೀ ರಗಳೆಗಳಲ್ಲಿನ ಭಕ್ತಿಯ ಸ್ಥಾನವನ್ನು ಕುರಿತಂತೆ ತಿಳಿಸಲಾಗಿದೆ.

ಆರನೆ ಅಧ್ಯಾಯದಲ್ಲಿ ನೂತನರ ರಗಳೆಗಳನ್ನು ಅಭ್ಯಾಸ ಮಾಡಲಾಗಿದೆ. ಈ ರಗಳೆಗಳ ಸಾಲಿನಲ್ಲಿ ಸುಮಾರು ಇಪ್ಪತ್ತೆಂಟು ಶರಣರ ಚರಿತ್ರೆಗಳಿವೆ. ಇವುಗಳಲ್ಲಿ ಬಹಳ ಮುಖ್ಯವಾದವು 'ಬಸವರಾಜದೇವರ ರಗಳೆ' ಮತ್ತು 'ಮಹಾದೇವಿಯಕ್ಕನ ರಗಳೆ'. ಈ ಎರಡು ರಗಳೆಗಳ ಅಧ್ಯಯನಕ್ಕೆ ವಿಶೇಷ ಮಹತ್ವ ಕೊಡಲಾಗಿದೆ. ಇವುಗಳನ್ನು ಬಿಟ್ಟರೆ ಉಳಿದ ರಗಳೆಗಳಲ್ಲಿ ಕೆಲವನ್ನು ಮಾತ್ರ ಆರಿಸಿಕೊಂಡು, ಅವುಗಳಲ್ಲಿನ ಸಾಹಿತ್ಯಕ ಅಂಶವನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಅಧ್ಯಾಯದ ಕೊನೆಯಲ್ಲಿ ಕಥೆಯಲ್ಲಿ ಬರುವ ಅವತಾರದ ಕಲ್ಪನೆ ಹಾಗೂ ಯೋಗ - ಭೋಗಗಳ ಸಮನ್ವಯದ ಬಗೆಗಿನ ವಿಚಾರ ಇದೆ.

ಏಳನೆ ಅಧ್ಯಾಯದಲ್ಲಿ ಸಂಕೀರ್ಣ ರಗಳೆಗಳನ್ನು ಅಧ್ಯಯನಕ್ಕೆ ಒಳಪಡಿಸಿದೆ. ಇವುಗಳಲ್ಲಿ

ಬಹಳ ಮುಖ್ಯವಾದವು ಸಂಸಾರ ವ್ಯಾಮೋಹ ನಿರಸನ ರಗಳೆ ಮತ್ತು ಪುಷ್ಪರಗಳೆ. ಆದ್ದರಿಂದ ಇವುಗಳ ಅಧ್ಯಯನಕ್ಕೆ ವಿಶೇಷ ಆದ್ಯತೆ ನೀಡಲಾಗಿದೆ. ಇವುಗಳನ್ನು ಬಿಟ್ಟರೆ ಉಳಿದೆಲ್ಲ ರಗಳೆಗಳೂ ಬಹಳ ಚಿಕ್ಕವು. ಅವುಗಳಲ್ಲಿ ಮುಖ್ಯವಾದವನ್ನು ಆರಿಸಿಕೊಂಡು ಸಂಕ್ಷಿಪ್ತವಾಗಿ ವಿಚಾರ ಮಾಡಲಾಗಿದೆ. ಕೊನೆಯಲ್ಲಿ ಇವುಗಳಲ್ಲಿನ ಭಾವಗೀತಾಂಶದ ಬಗೆಗೆ ಚರ್ಚಿಸಲಾಗಿದೆ.

ಎಂಟನೆ ಅಧ್ಯಾಯದಲ್ಲಿ ಹರಿಹರನ ರಗಳೆಗಳ ಪಾತ್ರಗಳನ್ನು ಚರ್ಚಿಸಲಾಗಿದೆ. ಇಲ್ಲಿ ಪ್ರತೀ ಪಾತ್ರಗಳನ್ನು ಹರಿಹರ ಹೇಗೆ ತಂದಿದ್ದಾನೆ, ಅವುಗಳ ಮಹತ್ವವೇನು ಎಂಬುದಕ್ಕೆ ಆದ್ಯತೆ ನೀಡಿಲ್ಲ. ಬದಲಾಗಿ ಪಾತ್ರಗಳಲ್ಲಿ ಬರುವ ಶೃಂಗಾರ, ಧರ್ಮ, ಅಧ್ಯಾತ್ಮ, ಪವಾಡ ಮತ್ತು ಇತಿಹಾಸದ ವಿಚಾರಗಳನ್ನು ಅಧ್ಯಯನ ಮಾಡಲಾಗಿದೆ. ಪ್ರಾರಂಭದಲ್ಲಿ ಭಕ್ತಿ ಆಂದೋಲನದ ಬಗೆಗೆ ತಿಳಿಸಲಾಗಿದೆ. ಸ್ತ್ರೀ ಪಾತ್ರಗಳನ್ನು ಮಾತ್ರ ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಕೊನೆಯಲ್ಲಿ ಪಾತ್ರಗಳ ಸೃಷ್ಟಿಯಲ್ಲಿರುವ ಹರಿಹರನ ಜೀವನ ದೃಷ್ಟಿಯನ್ನು ಗುರುತಿಸುವ ಪ್ರಯತ್ನವಿದೆ.

ಒಂಭತ್ತನೆ ಅಧ್ಯಾಯದಲ್ಲಿ ಹರಿಹರನ ಶೈಲಿ ಅಥವಾ ಅಭಿವ್ಯಕ್ತಿಯನ್ನು ತಿಳಿಸಿದೆ. ಇದು ಹರಿಹರನ ಒಟ್ಟು ರಗಳೆಗಳ ದೃಷ್ಟಿಯಿಂದ ಬಹಳ ಮುಖ್ಯ ಭಾಗ. ಇಲ್ಲಿ ಹರಿಹರನ ರಗಳೆಗಳಲ್ಲಿ ಕಂಡುಬರುವ ಭಾವಗೀತಾಂಶ, ಗದ್ಯದ ಸ್ವೋಪಜ್ಞತೆ, ನಾಟಕೀಯತೆ, ಅಲಂಕಾರ, ವರ್ಣನೆ, ಸಂಭಾಷಣೆ, ಸಂಸ್ಕೃತ ಪದ, ತಮಿಳು ಪದ ಹೇಗೆ ಬಳಕೆಯಾಗಿವೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಹತ್ತನೆ ಅಧ್ಯಾಯದಲ್ಲಿ ಹರಿಹರನ ಸಾಹಿತ್ಯಕ ಸಾಧನೆಯನ್ನು ತಿಳಿಸಿದೆ. ಸಾಹಿತ್ಯಕವಾಗಿ ಹರಿಹರನ ಸಾಧನೆ ಮಹತ್ವದ್ದು. ಆತ ಲಿಂಗಭೇದವಿಲ್ಲದೆ ಕಾವ್ಯ ನಾಯಕರನ್ನು ಆರಿಸಿದ. ಕೆಳಸ್ತರದವರನ್ನು ಕಥಾನಾಯಕರನ್ನಾಗಿ ಮಾಡಿಕೊಂಡ. ಸಾಮಾನ್ಯರ ಚರಿತ್ರೆಗಳನ್ನು ಕನ್ನಡ ಸಾಹಿತ್ಯದಲ್ಲಿ ಮೊದಲ ಬಾರಿಗೆ ಸೇರಿಸಿದ. ಸಾಮಾಜಿಕ ಸಮಸ್ಯೆಗಳ ಚಿತ್ರಣಕ್ಕೆ ಆದ್ಯತೆ ನೀಡಿದ. ವೃತ್ತಿ - ಪ್ರವೃತ್ತಿಗಳ ನಡುವೆ ಸಾಮರಸ್ಯ ಸ್ಥಾಪಿಸಿದ. ಅಲ್ಲದೆ ಹಲವು ಕವಿಗಳ ಮೇಲೆ ಪ್ರಭಾವವನ್ನು ಬೀರಿದ. ಈ ಸಾಧನೆಗಳನ್ನು ಕುರಿತು ಇಲ್ಲಿ ವಿವರ ಅಧ್ಯಯನ ಮಾಡಲಾಗಿದೆ.

ಒಟ್ಟಾರೆ ಇಡೀ ಕನ್ನಡ ಸಾಹಿತ್ಯದಲ್ಲಿ ಹರಿಹರನ ಸಾಹಿತ್ಯಕ ಸಾಧನೆ ಏನು ಎಂಬುದನ್ನು ಪ್ರತಿಯೊಂದು ಅಧ್ಯಾಯದಲ್ಲಿ ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

* * * * *

## ಮೂಲ ಆಕರಗಳು 1


1. ಎಸ್. ಜಿ. ಘಿವಾರಿ, ರಾಮಕೃಷ್ಣಮರಾಠೆ : ರಸಿಕ ಚಕ್ರಿ ಹರಿಹರ ದೇವನ ಶಿವಶರಣರ ನಾಲ್ಕು ರಗಳೆಗಳು : ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಬಳ್ಳಾರಿ : 1983
2. ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಎಂಟು ರಗಳೆಗಳು : ಶಿವಕುಮಾರ ಪ್ರಕಾಶನ, ಬೆಂಗಳೂರು : 1971
3. ಎಚ್. ದೇವೀರಪ್ಪ : ಮಹಾಕವಿ ಹರಿಹರ ದೇವನ ಐದು ರಗಳೆಗಳು : ಶ್ರೀ ಗೌರಿ ಶಂಕರ ಬುಕ್ ಡಿಪ್ಪೋ, ಮೈಸೂರು : 1964
4. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ : ಶಿವ ಕುಮಾರ ಪ್ರಕಾಶನ, ವಿಜಯನಗರ, ಬೆಂಗಳೂರು : 1979
5. ಎಚ್. ದೇವೀರಪ್ಪ : ಶಿವಶರಣ ಸಂಪುಟ : ಬೆಂಗಳೂರು ವಿ.ವಿ. : 1973
6. ಎಚ್. ದೇವೀರಪ್ಪ : ಹಂಪೆಯ ಹರಿಹರ ವಿರಚಿತ ಬಸವರಾಜ ದೇವರ ರಗಳೆ : ಬಸವ ಸಮಿತಿ, ಬಸವ ಭವನ, ಬೆಂಗಳೂರು : 1988
7. ಎಚ್. ದೇವೀರಪ್ಪ : ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ : ಗೌರಿಶಂಕರ ಬುಕ್ ಡಿಪ್ಪೋ, ಮೈಸೂರು : 1968
8. ಬಸವರಾಜ ಮಲಶೆಟ್ಟಿ : ಹರಿಹರನ ಹನ್ನೊಂದು ರಗಳೆಗಳು : ಜಗದ್ಗುರು ಕೊಟ್ಟೂರು ಸ್ವಾಮಿಮಠ, ಹೊಸಪೇಟೆ : 1984
9. ಬಸವರಾಜ ಟಿ. ಜವಳಿ, ದೇವೇಂದ್ರ ಕುಮಾರ ಸಿ. ಹಕಾರಿ : ರಸಿಕ ಚಕ್ರಿ ಹರಿಹರ ದೇವನ ಬಸವರಾಜ ದೇವರ ರಗಳೆ : ಜಗದ್ಗುರು ಕೊಟ್ಟೂರು ಸ್ವಾಮಿಮಠ, ಬಳ್ಳಾರಿ : 1980
10. ಬಸವರಾಜ ಟಿ. ಜವಳಿ, ದೇವೇಂದ್ರ ಕುಮಾರ ಸಿ. ಹಕಾರಿ : ರಸಿಕ ಚಕ್ರಿ ಹರಿಹರ ದೇವನ ಕಾಯಕದ ಐದು ರಗಳೆಗಳು : ಜಗದ್ಗುರು ಕೊಟ್ಟೂರು ಸ್ವಾಮಿಮಠ, ಬಳ್ಳಾರಿ : 1981
11. ಬಿ. ವ್ಹಿ. ಮಲ್ಲಾಪುರ, ಜಿ. ಎಸ್. ಕಾಪಸೆ : ರಸಿಕ ಚಕ್ರಿ ಹರಿಹರ ದೇವನ ಐದು ರಗಳೆಗಳು : ಜಗದ್ಗುರು ಕೊಟ್ಟೂರು ಸ್ವಾಮಿ ಮಠ : 1981
12. ಎಂ. ಎಸ್. ಲೀಲಾವತಿ : ಹರಿಹರನ ಐದು ರಗಳೆಗಳು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ 1973
13. ಟಿ. ಎಸ್. ವೆಂಕಣ್ಣಯ್ಯ : ಹರಿಹರ ಕವಿಯ ಬಸವರಾಜ ದೇವರ ರಗಳೆ : ತಾ. ವೆಂ. ಸ್ಮಾರಕ ಗ್ರಂಥ ಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು : 1959
14. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವಕೃತ ಶಿವಭಕ್ತಿ ಮಹಿಮಾ ರಗಳೆಗಳು

: ಕನ್ನಡ ಅಧ್ಯಯನ ಪೀಠ. ಕರ್ನಾಟಕ ವಿ.ವಿ, ಧಾರವಾಡ : 1976

15. ಎಂ. ಎಸ್. ಸುಂಕಾಪುರ : ಮಹಾಕವಿ ಹಂಪೆಯ ಹರಿಹರ ದೇವಕೃತ ನೂತನ ಪುರಾತನರ ರಗಳೆಗಳು : ಕರ್ನಾಟಕ ವಿ.ವಿ, ಧಾರವಾಡ : 1976

16. ಫ. ಗು. ಹಳಕಟ್ಟಿ : ಹರಿಹರನ ರಗಳೆಗಳ ಸಮಗ್ರ ಸಂಪುಟ : ಶಿವಾನುಭವ ಗ್ರಂಥಮಾಲೆ, ಬಿಜಾಪುರ : 1968

17. ಆರ್. ಸಿ. ಹಿರೇಮಠ : ಮಹಾಕವಿ ಹಂಪೆಯ ಹರಿಹರ ದೇವಕೃತ ಪುರಾತನರ ರಗಳೆಗಳು : ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ., ಧಾರವಾಡ : 1973

## ಮೂಲ ಆಕರಗಳು 2

1. ಇಷ್ಟಲಿಂಗಪ್ಪ ಸಿದ್ದರಾಮಪ್ಪ ಪಾವಟೆ, ಕೊಟ್ಟೂರೇಶ ಮಲ್ಲೇಶಪ್ಪ ಬಂದಮ್ಮನವರ, ವೀರಭದ್ರಪ್ಪ ಮಹಾಲಿಂಗಪ್ಪ ಮಲ್ಲಾಬಾದಿ : ಭೀಮ ಕವಿಯ ಬಸವ ಪುರಾಣ : 1969

2. ಎಸ್. ಉಮಾಪತಿ : ಉತ್ತರ ದೇಶದ ಬಸವಲಿಂಗ ವಿರಚಿತ ಬಸವೇಶ್ವರ ಪುರಾಣ ಕಥಾ ಸಾಗರ : 1976

3. ಎಲ್. ಗುಂಡಪ್ಪ : ಪೆರಿಯ ಪುರಾಣ : ಬೆಂಗಳೂರು ವಿಶ್ವವಿದ್ಯಾನಿಲಯ : 1974

4. ಎಸ್. ಬಸಪ್ಪ : ಲಕ್ಕಣ್ಣದಂಡೇಶ ವಿರಚಿತ ಶಿವತತ್ವ ಚಿಂತಾಮಣಿ : ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು ವಿ.ವಿ. : 1960

5. ಎ. ಶಂಕರ ಕೆದಿಲಾಯ : ಪೆರಿಯ ಪುರಾಣಂ (ಭಾಗ -1), ಮದ್ರಾಸು ವಿ.ವಿ. : 1974

6. ಎ. ಶಂಕರ ಕೆದಿಲಾಯ : ಪೆರಿಯ ಪುರಾಣಂ (ಭಾಗ -2), ಮದ್ರಾಸು ವಿ.ವಿ. : 1980

7. ಶಾಂತರಸ : ವೀರಭದ್ರ ಕವಿ ವಿರಚಿತ ಅರವತ್ತು ಮೂವರು ಪುರಾತನರು : ಭಾರತೀ ಪ್ರಕಾಶನ, ರಾಯಚೂರು : 1977

8. ಹಿರೇಮಠ ಆರ್. ಸಿ., ಬಿ.ಬಿ ಹೆಂಡಿ : ದೀಕ್ಷಾಬೋಧೆ : 1973

9. ಹಿರೇಮಠ ಆರ್. ಸಿ. : ಕವಿಚಕ್ರವರ್ತಿ ಸುರಂಗ ಕೃತ ತ್ರಿಷಷ್ಠಿ ಪುರಾತನ ಚಾರಿತ್ರಂ : ಪ್ರಕಾಶಕರು, ಎಸ್. ಎಸ್. ಒಡೆಯರ, ರಿಜಿಸ್ಟ್ರಾರ್, ಕರ್ನಾಟಕ ವಿ.ವಿ., ಧಾರವಾಡ : 1966

10. ಹಿರೇಮಠ ಆರ್. ಸಿ., ಸುಂಕಾಪುರ ಎಂ. ಎಸ್. : ರಾಜಶೇಖರವಿಳಾಸಂ : ಕರ್ನಾಟಕ ವಿ.ವಿ., ಧಾರವಾಡ : 1962

11. ಹಿರೇಮಠ ಆರ್. ಸಿ. : ಭೀಮಕವಿ ಕೃತ ಬಸವ ಪುರಾಣ : ಸಂಪುಟ 2 : ಸಾಹಿತ್ಯ ಸಮಿತಿ, ಲಿಂಗಾಯಿತ ಅಭಿವೃದ್ಧಿ ಸಂಸ್ಥೆ, ಧಾರವಾಡ : 1966

# ಪರಾಮರ್ಶನ ಗ್ರಂಥಗಳು


1. ಕಲಬುರ್ಗಿ ಎಂ. ಎಂ. : ಕವಿರಾಜ ಮಾರ್ಗಪರಿಸರದ ಕನ್ನಡ ಸಾಹಿತ್ಯ : ಕರ್ನಾಟಕ ವಿ.ವಿ., ಧಾರವಾಡ : 1973
2. ಕಲಬುರ್ಗಿ ಎಂ. ಎಂ. : ಮಾರ್ಗ 1 : ನರೇಶ್ ಅಂಡ್ ಕಂಪನಿ : 1988
3. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ 4 :ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ. ವಿ. : 1977
4. ಕರ್ನಾಟಕದ ಪರಂಪರೆ : ಸಂಪುಟ 1 : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು : 1992
5. ಕರ್ನಾಟಕದ ಪರಂಪರೆ : ಸಂಪುಟ 2 : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು : 1992
6. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ :ಸಂಪುಟ 5 : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ. ವಿ. : 1981
7. ಕನ್ನಡ ಸಾಹಿತ್ಯ ಪುನರ್ ಮೌಲ್ಯೀಕರಣ -2ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ : ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು
8. ಕೃಷ್ಣಕುಮಾರ ಸಿ. ಪಿ. : ಕಾವ್ಯ ಗೌರವ : ವಾಗ್ದೇವಿ ಪುಸ್ತಕಗಳು : ಮೈಸೂರು : 1989
9. ಕಾವ್ಯ ಸೌಂದರ್ಯ : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು : 1978
10. ಗಣಾಚಾರಿ ಬಿ. ಎಸ್. , ಸಂಗಮನಾಥ ಜಿ. ಹಂಡಿ : ವಚನ ಪಿತಾಮಹ : ಬಿಜಾಪುರ ಸಂಗನ ಬಸವೇಶ್ವರ ಆರ್ಟ್ಸ್ ಕಾಲೇಜು : 1968
11. ಗದುಗಿನ ಶ್ರೀ ಗಿರಿಜಾಶಂಕರ : ಅರವತ್ತು ಮೂರು ಪುರಾತನರ ಚರಿತ್ರೆ : ಬಿ. ಜಿ. ಸಂಕೇಶ್ವರ, ಗದಗ: 1987
12. ಗೋಪಾಲಕೃಷ್ಣಯ್ಯ ಕೆ. ಎಲ್. : ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ : ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು : 1987
13. ಚಿದಾನಂದಾ ಮೂರ್ತಿ ಎಂ. : ವಚನ ಸಾಹಿತ್ಯ ( ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ) : ಬೆಂಗಳೂರು ವಿ.ವಿ., ಬೆಂಗಳೂರು
14. ಚಿದಾನಂದಾ ಮೂರ್ತಿ ಎಂ. : ಲಿಂಗಾಯತ ಅಧ್ಯಯನಗಳು : ವಾಗ್ದೇವಿ ಪುಸ್ತಕಗಳು, ಮೈಸೂರು : 1986
15. ಚಿದಾನಂದಾ ಮೂರ್ತಿ ಎಂ. : ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ : ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ : 1985

16. ಚಿದಾನಂದ ಮೂರ್ತಿ ಎಂ. : ಬಸವಣ್ಣನವರು ಒಂದು ಜೀವನ ಚಿತ್ರ : 1967
17. ಜವರಯ್ಯ. ಮ. ನ : ಪ್ರತಿಪಾದನೆ : ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು: 1983
18. ಜವರಯ್ಯ. ಮ. ನ. : ದಲಿತ ವರ್ಗದ ಶರಣರು, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು : 1990
19. ಜೋಶಿ ಡಿ. ಟಿ. : ಮಧ್ಯಯುಗೀನ ಭಾರತದ ಇತಿಹಾಸ : ವಿದ್ಯಾ ನಿಧಿ ಪ್ರಕಾಶನ, ಗದಗ : 1982
20. ತಾಳ್ತಜೆ ವಸಂತ ಕುಮಾರ: ಸಾರಸ : ಚಿರ ಸಾಹಿತ್ಯ ಪ್ರಕಾಶನ, ಬೆಂಗಳೂರು : 1985
21. ದೇವೀರಪ್ಪ ಎಚ್. : ಸಂಶೋಧನ ಸಂಪುಟ : ಶಿವಕುಮಾರ ಪ್ರಕಾಶನ, ಬೆಂಗಳೂರು : 1984
22. ದೊಡ್ಡ ಸ್ವಾಮಿ ಎಂ. ಎ.: ಶರಣ ಸಾಹಿತ್ಯ ಸಮೀಕ್ಷೆ : 1972
23. ನರಸಿಂಹಾಚಾರ್ ಡಿ. ಎಲ್. : ಹಂಪೆಯ ಹರಿಹರ : ಪ್ರಸಾರಂಗ, ಮೈಸೂರು ವಿ.ವಿ., ಮೈಸೂರು : 1983
24. ನರಸಿಂಹಾಚಾರ್ ಡಿ. ಎಲ್ : ಪೀಠಿಕೆಗಳು ಲೇಖನಗಳು
25. ನಾರಾಯಣ ಪಿ. ವಿ. : ವಚನ ಪರಿಸರ : ತಂಗಾಳಿ ಪ್ರಕಾಶನ, ಬೆಂಗಳೂರು 1994
26. ನಾಗರತ್ನ ಟಿ. ಎಸ್. : ಹರಿದಾಸರ ಭಕ್ತಿ ಸ್ವರೂಪ : ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು : 1986
27. ಪಾಟೀಲ ಪಿ. ಎಸ್ : ಬಸವಾದಿ ಪ್ರಮಥರ ಭಕ್ತಿ ಚಳುವಳಿಯ ಭೌತಿಕವಾದೀ ಅಧ್ಯಯನಗಳು : ಬಿ. ಬಂಥನಾಳ ಶ್ರೀವೃಷಭಲಿಂಗೇಶ್ವರ ವಿದ್ಯಾವರ್ಧಕ ಟ್ರಸ್ಟ್, ವಿಜಾಪುರ : 1990
28. ಫಾಲಾಕ್ಷ : ಕರ್ನಾಟಕದ ಇತಿಹಾಸ ಪರಿಚಯ : ತಿಪಟೂರು
29. ಬಸವರಾಜ ಸಿ. ಜವಳಿ : ಹರಿಹರ ಮಹಾ ಕವಿಯ ಶ್ರೀಬಸವೇಶ್ವರ ದೇವರ ಚರಿತ್ರೆ : ಪಂಪಾ ಸಾಹಿತ್ಯ ಪ್ರಕಟನಾಲಯ, ಧಾರವಾಡ : 1966
30. ಬಸವರಾಜ ಸಿ. ಜವಳಿ : ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ : ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ : 1983
31. ಬಸವಾರಾಧ್ಯ ಎಸ್., ವಿದ್ವಾನ್ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಎಲ್. ಗುಂಡಪ್ಪ : ಹರಿಹರ ದೇವ : ಐ. ಬಿ. ಎಚ್. ಪ್ರಕಾಶನ, ಬೆಂಗಳೂರು : 1974
32. ಬಸವರಾಜ ಕಲ್ಗುಡಿ : ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು : 1988
33. ಬಸವಣ್ಣನವರ ವಚನ ಸಂಪುಟ : 1, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು : 1993
34. ಬಸವರಾಜ ಸಿ. ಜವಳಿ, ಪ್ರಿ. ಶಾಂತರಸ : ರಸಿಕ ಚಕ್ರಿ ಹರಿಹರ ದೇವ : ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ : 1979
35. ಭೀಮರಾಯ ಕುಂಬಾರ : ಕವಿ ಕೊಂಡಗುಳಿ ಕೇಶಿರಾಜ : ಜೆ. ಜಿ. ಮಂಡಲ, ಹುಬ್ಬಳ್ಳಿ : 1982
36. ಮಠ ಕೆ. ಎಸ್ : ಶರಣರು ಕಂಡ ಅನುಭಾವ : ಜೆ. ಜಿ. ಮಂಡಲ, ಹುಬ್ಬಳ್ಳಿ : 1989
37. ಮಲ್ಲಾಪುರ ಬಿ. ವ್ಹಿ. : ಶರಣ ಸರೋಜ : ಕುಮಾರ ವೀರೇಶ ಪ್ರಕಾಶನ : 1976

39. ಮಾಳವಾಡ ಸ. ಸ. : ಹರಿಹರನ ರಗಳೆಯಲ್ಲಿ ಜೀವನ ದರ್ಶನ : ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು : 1969

40. ರಮಾಕುಮಾರಿ ಬಾ. ಹ. : ಅಕ್ಕಮಹಾದೇವಿ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು : 1994

41. ರಾಮಲಿಂಗಪ್ಪ ಎಚ್. : ಭಾರತದ ಸಮಗ್ರ ಇತಿಹಾಸ : ಸುನೀಲ್ ಪ್ರಕಾಶನ, ಬೆಂಗಳೂರು : 1995

42. ರಾಮೇಗೌಡ (ಡಾ. ರಾಗೌ) : ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು : ಚಿತ್ರಕೂಟ ಪ್ರಕಾಶನ, ಮೈಸೂರು : 1992

43. ಲಕ್ಷ್ಮಣ ತೆಲಗಾವಿ, ಎಂ. ವಿ. ಶ್ರೀನಿವಾಸ್ : ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನ ಲೇಖನಗಳು : ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ : 1995

44. ಲಕ್ಷ್ಮೀನಾರಾಯಣ ಭಟ್ಟ, ಎನ್. ಎಸ್. : ವಿವೇಚನ : ಅಪರ್ಣ ಪ್ರಕಾಶನ, ಮೈಸೂರು : 1978

45. ವಿದ್ಯಾಶಂಕರ ಎಸ್. : ನಂಬಿಯಣ್ಣ ಒಂದು ಅಧ್ಯಯನ : ಸ್ನೇಹ ಪ್ರಕಾಶನ, ಬೆಂಗಳೂರು : 1985

46. ವಿಜಯಕುಮಾರ್ ಹಾ. ನಂ. : ಚಿಂತನ : ಬಸವೇಶ್ವರ ಗ್ರಂಥ ಮಾಲೆ, ತುಮಕೂರು : 1975

47. ವೆಂಕಣ್ಣಯ್ಯ ಟಿ. ಎಸ್., ಡಿ. ಎಲ್. ನರಸಿಂಹಾಚಾರ್ : ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯ : ಕರ್ನಾಟಕ ಸಂಘ, ಶಿವಮೊಗ್ಗ : 1941

48. ಶಾಮರಾಯ ತ. ಸು. ಅಭಿನಂದನಾ ಗ್ರಂಥ : ನಂದನವನ : 1978

49. ಶಾಮರಾಯ ತ. ಸು. : ಕನ್ನಡ ಸಾಹಿತ್ಯ ಚರಿತ್ರೆ : ಪುಸ್ತಕಾಲಯ, ಮೈಸೂರು : 1988

50. ಶಿವರುದ್ರಪ್ಪ ಜಿ. ಎಸ್. : ಸಾಹಿತ್ಯ ಸಮೀಕ್ಷೆ : ಬೆಂಗಳೂರು ವಿ.ವಿ., ಬೆಂಗಳೂರು

51. ಶಾಂತಾದೇವಿ ಮಾಳವಾಡ : ಪುರಾತನ ಶರಣರು (ಶರಣಾಚರಿತಾಮೃತ ಧಾರೆ) : ಪ್ರತಿಭಾ ಗ್ರಂಥ ಮಾಲೆ, ಧಾರವಾಡ : 1991

52. ಶ್ರೀನಿವಾಸಮೂರ್ತಿ ಎಂ. ಆರ್. : ವಚನಧರ್ಮಸಾರ : ಪ್ರಸಾರಾಂಗ, ಮೈಸೂರು ವಿ. ವಿ., ಮೈಸೂರು : 1977

53. ಶ್ರೀನಿವಾಸಮೂರ್ತಿ ಎಂ. ಆರ್. : ಭಕ್ತಿ ಭಂಡಾರಿ ಬಸವಣ್ಣನವರು : ಗೀತಾ ಬುಕ್ ಹೌಸ್, ಮೈಸೂರು : 1931

54. ಸರೋಜಿನಿ ಚವಲಾರ : ಕ್ರಿಯಾ ಶೀಲ ಶಿವಶರಣೆಯರು : ಜೆ. ಜಿ. ಮಂಡಲ, ಹುಬ್ಬಳ್ಳಿ : 1983

55. ಶಿವಶರಣೆಯರ ವಚನ ಸಂಪುಟ : ನಂ. 5 : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು : 1993

56. ಸೂರ್ಯನಾರಾಯಣರಾವ್ ಎಲ್. ಎ. : ರಾಘವಾಂಕ ಒಂದು ಅಧ್ಯಯನ : ಕನ ಡ ಸಾಹಿತ್ಯ ಪರಿ ಷತ್ತು, ಬೆಂಗಳೂರು 1988

57. ಹರಿಹರದೇವ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು : 1979

58. ಹರಿಹರ ವಿಚಾರ ಸಂಕಿರಣ : ಕನ್ನಡ ಸಾಹಿತ್ಯ ಪರಿಶತ್ತು, ಬೆಂಗಳೂರು : 1980

59. ಹಿರೇಮಲ್ಲೂರ ಈಶ್ವರನ್ : ಹರಿಹರನ ಕೃತಿಗಳು ಒಂದು ಸಂಖ್ಯಾ ನಿರ್ಣಯ : ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು : 1971

60. ಹೆಗಡೆ ಎಲ್. ಆರ್. : ಕಾವ್ಯ ವ್ಯಾಸಂಗ : ಸಮಾಜ ಬುಕ್ ಡಿಪೋ, ಧಾರವಾಡ